# ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ವಾಣಿಜ್ಯಶಾಸ್ತ್ರದಲ್ಲಿ ಪಿಎಚ್.ಡಿ.ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಮೆಘಾವತ್ ಗೋವಿಂದನಾಯ್ಕ
(ಯುಜಿಸಿ ೧೧ನೇ ಯೋಜನೆಯಡಿಯಲ್ಲಿ ಎಫ್.ಐ.ಪಿ.ವಿದ್ಯಾರ್ಥಿ)

ಮಾರ್ಗದರ್ಶಕರು
ಡಾ. ಹೆಬ್ಬಾಳೆ ಕೆ. ನಾಗೇಶ್
ಸಹ ಪ್ರಾಧ್ಯಾಪಕರು







ಜಾನಪದ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೨

# ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ವಾಣಿಜ್ಯಶಾಸ್ತ್ರದಲ್ಲಿ ಪಿಎಚ್.ಡಿ.ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

**ಮೆಘಾವತ್ ಗೋವಿಂದನಾಯ್ಕ**

(ಯುಜಿಸಿ ೧೧ನೇ ಯೋಜನೆಯಡಿಯಲ್ಲಿ ಎಫ್.ಐ.ಪಿ.ವಿದ್ಯಾರ್ಥಿ)

ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ. ನಾಗೇಶ್**

ಸಹ ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೨

## ಸಂಶೋಧಕರ ಪ್ರಮಾಣ ಪತ್ರ

ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು **ಡಾ.ಹೆಬ್ಬಾಲೆ ಕೆ.ನಾಗೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸಿರುತ್ತೇನೆ. ಈ ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

M Govinda Naik

ಮೆಘಾವತ್ ಗೋವಿಂದನಾಯ್ಕ
ಸಂಶೋಧಕ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 2nd July, 2012.

# ಮಾರ್ಗದರ್ಶಕರ ದೃಢೀಕರಣ ಪತ್ರ

ಮೆಘಾವತ್ ಗೋವಿಂದನಾಯ್ಕ ಅವರು ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ.ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

2/7/12

ಡಾ. ಹೆಬ್ಬಾಲೆ ಕೆ.ನಾಗೇಶ್
ಮಾರ್ಗದರ್ಶಕರು ಮತ್ತು
ಸಹ ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 2nd July, 2012.

# ಕೃತಜ್ಞತೆಗಳು

ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತದೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ.ಅಧ್ಯಯನ ಮಾಡಲು ಅವಕಾಶ ನೀಡಿದ ಹಿಂದಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಹಾಗೂ ಪ್ರಭಾರ ಕುಲಪತಿಗಳಾದ ಡಾ.ಹಿ.ಚಿ.ಬೋರಲಿಂಗಯ್ಯ ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಎಫ್.ಟಿ.ಹಳ್ಳೀಕೆರಿ ಅವರ ಸಹಕಾರಕ್ಕೆ ಕೃತಜ್ಞತೆ ಸಲ್ಲುತ್ತವೆ.

ಈ ಮಹಾಪ್ರಬಂಧದ ರಚನೆಯ ಪ್ರತಿಹಂತದಲ್ಲೂ ನನ್ನನ್ನು ಪ್ರೋತ್ಸಾಹಿಸಿ ಸೂಕ್ತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ಡಾ.ಹೆಬ್ಬಾಲೆ ಕೆ.ನಾಗೇಶ್ ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಅಧ್ಯಯನಕ್ಕೆ ಸಹಕರಿಸಿದ ಜಾನಪದ ಅಧ್ಯಯನ ವಿಭಾಗದ ಹಿಂದಿನ ಮುಖ್ಯರಾದ ಡಾ.ಸ.ಚಿ.ರಮೇಶ್, ಇಂದಿನ ಮುಖ್ಯಸ್ಥರಾದ ಡಾ.ಮೊಗಳ್ಳಿ ಗಣೇಶ್, ಸಿ.ಟಿ.ಗುರುಪ್ರಸಾದ್ ಮತ್ತು ವಿಭಾಗದ ಆಡಳಿತ ಸಿಬ್ಬಂದಿಗಳಾದ ಜಿ.ನಾಗರಾಜ್, ಹಳ್ಳಿಮಾರಣ್ಣ ಅವರುಗಳ ಸಹಕಾರಕ್ಕೆ ಕೃತಜ್ಞತೆಗಳು ಸಲ್ಲುತ್ತವೆ.

ನನ್ನನ್ನು ಸಂಶೋಧನೆಗೆ ತೊಡಗುವಂತೆ ಮಾಡಿ, ಅಧ್ಯಯನದ ಅವಧಿಯಲ್ಲಿ ತುಂಬ ಸಹಕಾರ ನೀಡಿದ ಸ್ನೇಹಿತರಾದ ಡಾ.ವೈಸ್.ತಿಮ್ಮಾರೆಡ್ಡಿ, ಕೆ.ಸಿ.ಸುರೇಶ್, ಹೊನ್ನಂಗಧರ ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಅಪಾರ ಬಂಧುಗಳು, ಮೆಘಾವತ್ ಕುಟುಂಬದವರು, ಬಂಜಾರ ನೌಕರರ ಸಮೂಹ ಒಕ್ಕೂಟ, ಹೊಸಪೇಟೆ ಹಾಗೂ ಲಂಬಾಣಿ ಸಂಘದ ಎಲ್ಲಾ ಮಿತ್ರರಿಗೂ ಕೃತಜ್ಞತೆಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸರ್ವರೀತಿಯಿಂದಲೂ ಆತ್ಮೀಯತೆಯಿಂದ ನನ್ನ ಜೊತೆ ಸಹಕರಿಸಿದ ಮಿಟ್ಯಾನಾಯ್ಕ, ಡಾ.ಕುಮಾರ್‌ನಾಯ್ಕ, ಶಿವರಾಮ್‌ನಾಯ್ಕ, ಎಂ.ಗೌಡನಾಯ್ಕ, ಎಂ.ಮಲ್ಲಿಕಾರ್ಜುನ ಅವರಿಗೆ ಕೃತಜ್ಞತೆಯಿಂದ ನೆನೆಯುತ್ತೇನೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸರ್ವರೀತಿಯಿಂದಲೂ ಆತ್ಮೀಯತೆಯಿಂದ ಮಾಹಿತಿಗಳನ್ನು ನೀಡಿ ಸಹಕರಿಸಿದ ಎಲ್ಲಾ ಲಂಬಾಣಿ ಸಮುದಾಯದವರಿಗೆ ಅಭಾರಿಯಾಗಿದ್ದೇನೆ.

ಈ ಮಹಾಪ್ರಬಂಧದ ರಚನೆಯ ಸಂದರ್ಭದಲ್ಲಿ ಗ್ರಂಥಾಲಯದಲ್ಲಿ ಸಹಕರಿಸಿದ ಡಾ.ಎಚ್.ನಾಗವೇಣಿ, ಶ್ರೀ ಗುಡಿಮನಿ ಎಂ.ಸಿ., ಡಾ.ಮಲ್ಲಿಕಾರ್ಜುನ ಮತ್ತು ಇತರ ಸಹದ್ಯೋಗಿಗಳಿಗೂ ಹಾಗೂ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಶ್ರೀ ಜೈನುಲ್ಲಾ ಬಳ್ಳಾರಿ ಅವರನ್ನು ಸಹ ಕೃತಜ್ಞತೆಯಿಂದ ನೆನೆಯುತ್ತೇನೆ.

ಸಂಶೋಧನೆಗೆ ನೆರವಾದ ವಿಜಯನಗರಮಹಾವಿದ್ಯಾಲಯದ ಹಿಂದಿನ ಪ್ರಾಚಾರ್ಯರಾದ ಡಾ.ಆರ್. ಮರೇಗೌಡ, ಇಂದಿನ ಪ್ರಾಚಾರ್ಯರಾದ ಎಸ್.ಎಸ್.ಪೋಲಿಸ್ ಪಾಟೀಲ ಹಾಗೂ ಸಹೋದ್ಯೋಗಿ ಮಿತ್ರರಾದ ಡಾ.ಎಂ.ಜಿ.ಬವಸಾರಜ್, ಪಿ.ಬಸವರಾಜ್, ಡಾ.ಕೆಂ.ಮಂಜುನಾಥ್, ಶ್ರೀ ಕೆ.ಪ್ರಕಾಶ್, ಡಾ.ಎಸ್.ವೈ. ತಿಮ್ಮಾರೆಡ್ಡಿ, ಶ್ರೀ ಶರಣಪ್ಪ, ಶ್ರೀ ಬಿ.ನಾಗರಾಜ್, ಡಾ.ಕೆ.ಸಿ.ತಿಪ್ಪೇಸ್ವಾಮಿ ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನ ಸಂಶೋಧನೆಯ ಸಂದರ್ಭದಲ್ಲಿ ನನಗೆ ಸಂಪೂರ್ಣವಾಗಿ ಪ್ರೋತ್ಸಾಹ ನೀಡಿರುವ ಬಾಳಸಂಗಾತಿ ವಿ.ಪರಿಮಳ ಅವರನ್ನು ಅಂತರಾಳದಿಂದ ನೆನೆಯುತ್ತೇನೆ. ಅಲ್ಲದೆ ನನ್ನ ಎರಡು ಮಕ್ಕಳಾದ ಎಂ.ಜಿ.ಮಂಜುಶ್ರೀ, ಎಂ.ಜಿ.ಬಿಂದಿಯಾ ಅವರನ್ನು ಹೃದಯದಿಂದ ನೆನೆಯುತ್ತೇನೆ.

ಈ ಮಹಾಪ್ರಬಂಧವನ್ನು ಅಕ್ಷರ ಸಂಯೋಜನೆ ಮಾಡಿಕೊಟ್ಟಿರುವ ಶ್ರೀಮತಿ ರಶ್ಮಿಕೃಪಾಶಂಕರ್ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು.

**ಮೇಘಾವತ್ ಗೋವಿಂದ್‌ನಾಯ್ಕ**

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧. ಅಧ್ಯಯನ ಉದ್ದೇಶ

೧.೨. ಅಧ್ಯಯನ ವ್ಯಾಪ್ತಿ

೧.೩. ಅಧ್ಯಯನ ವಿಧಾನ

೧.೪. ಅಧ್ಯಯನ ಮಹತ್ವ

೧.೫. ಅಧ್ಯಯನ ವಿನ್ಯಾಸ

೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಹಿನ್ನೆಲೆ ಹಾಗೂ ಮಹತ್ವವಿದೆ. ಈ ಸಂಸ್ಕೃತಿಯ ಉಗಮದ ಬಗ್ಗೆ ಏಕಾಭಿಪ್ರಾಯವಿಲ್ಲ. ಬೇರೆ ಬೇರೆ ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿದ್ದಾರೆ. ವಿವಿಧತೆಯಲ್ಲಿ ಏಕತೆ ಸಾರುವ ನಮ್ಮ ಸಂಸ್ಕೃತಿಯಲ್ಲಿ ಹಲವಾರು ಧರ್ಮಗಳ ಸಮ್ಮಿಲನ ಕಾಣಸಿಗುತ್ತವೆ. ಹಲವು ಧರ್ಮಗಳ ನೆಲೆವೀಡಾದ ಸಂಸ್ಕೃತಿಗೆ ತನ್ನದೇ ಆದ ಮಹತ್ವದ ಪರಂಪರೆಯಿದೆ. ಈ ಪರಂಪರೆಯೊಂದಿಗೆ ವಿಶಿಷ್ಟವಾದ ಚರಿತ್ರೆಯನ್ನು ಸಹ ಒಳಗೊಂಡಿದೆ. ಭಾರತೀಯ ಸಂಸ್ಕೃತಿಯಲ್ಲಿ ಬೆಳೆದು ಬಂದ ಧರ್ಮಗಳಲ್ಲಿ ಹಿಂದೂ ಧರ್ಮವೂ ಒಂದು. ಇದನ್ನು ಸನಾತನ ಧರ್ಮ ಎಂತಲೂ ಕರೆಯಲಾಗುತ್ತದೆ. ಹಲವು ಧರ್ಮದ ಏಳುಬೀಳುಗಳಲ್ಲಿ ಸಾಗಿಬಂದ ನಮ್ಮ ಧರ್ಮದ ತಿರುಳು ತುಂಬಾ ಉದಾತ್ತ ನೆಲೆಯನ್ನು ಹೊಂದಿದೆ.

ಭಾರತೀಯ ಸಂಸ್ಕೃತಿಯು ತತ್‌ಕ್ಷಣವೇ ಬೆಳೆದುಬಂದ ಸಂಸ್ಕೃತಿಯಲ್ಲ. ಇದಕ್ಕೆ ತನ್ನದೇ ಆದ ಐತಿಹಾಸಿಕ ಹಿನ್ನೆಲೆ ಇರುವುದು ಸಂಶೋಧನೆಯಿಂದ ತಿಳಿದುಬಂದ ಅಂಶವಾಗಿದೆ. ಹೀಗೆ ಐತಿಹಾಸಿಕ ಮಹತ್ವ ಹೊಂದಿದ ಭಾರತೀಯ ಸಂಸ್ಕೃತಿಯ ಬಗ್ಗೆ ಹಲವು ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿದ್ದಾರೆ. ಈ ಕಾರಣಕ್ಕಾಗಿ "ಇತಿಹಾಸ ತಿಳಿಯದವನು ಎಂದಿಗೂ ಇತಿಹಾಸ ನಿರ್ಮಿಸಲಾರ" ಎಂದು ಹೇಳಿದ ಅಂಬೇಡ್ಕರ್‌ರವರ ಮಾತು ಸೂಕ್ತ ಎನಿಸುತ್ತದೆ. ಅಂತೆಯೇ ಖ್ಯಾತ ಸಂಶೋಧಕರಾದ ಎಂ.ಎಂ.ಕಲಬುರ್ಗಿ ಅವರು "ಇತಿಹಾಸವು ಕೇವಲ ಗತಕಾಲಕ್ಕೆ ಸೀಮಿತವಾದ ಘಟನೆಯಲ್ಲ" ಎಂದಿದ್ದಾರೆ. ಗತಕಾಲದ ಘಟನೆಗಳನ್ನು ಇತಿಹಾಸ ತಿಳಿಸಿದರೂ ವಾಸ್ತವಿಕವಾಗಿ ವರ್ತಮಾನಕ್ಕೆ ಮತ್ತು ಭವಿಷತ್ತಿಗೆ ಪೂರಕ ಮತ್ತು ಪ್ರೇರಕವಾಗಿ ಅದು ನಿಲ್ಲುತ್ತದೆ.

ಈ ಹಿಂದೆ ಗತಿಸಿಹೋದ ಘಟನೆಯಾದ ಆದಿಮ ಸಂಸ್ಕೃತಿಯ ಮೆಲುಕನ್ನು ಹಾಕಿದಾಗ ಇಡೀ ಮಾನವನ ವಿಕಾಸದ ವಿವಿಧ ಮಗ್ಗಲುಗಳ ಮಹತ್ವವೇನೆಂದು ಅರಿವಾಗುತ್ತದೆ. ಆದಿಮದಲ್ಲಿ ಜೀವಸಿದ್ದನೆಂದು

ಹೇಳಲಾಗುವ ಆದಿಮಾನವನು ತನ್ನ ಜೀವಿತದ ಅವಧಿಯಲ್ಲಿ ಹಸಿವು ನೀಗಿಸಲು ತಾನು ವಾಸವಾಗಿದ್ದ ಕಾಡಿನಲ್ಲಿರುವ ಗೆಡ್ಡೆ-ಗೆಣಸುಗಳನ್ನು ತಿಂದು ಪ್ರಕೃತಿಯನ್ನೇ ತನ್ನ ವಾಸ ಸ್ಥಳವಾಗಿಸಿಕೊಂಡನು. ಮರ-ಪೊಟರೆ-ಗುಹೆಗಳಲ್ಲಿ ಜೀವಿಸಿದ ಆದಿಮಾನವನು ವಿಕಾಸ ಹೊಂದಿದಂತೆಲ್ಲ ತನ್ನ ಜೊತೆಗೆ ಇರುವ ಪ್ರಾಣಿ ಪಕ್ಷಿಗಳನ್ನೂ ಬೇಟೆಯಾಡಿ ಅವುಗಳನ್ನೇ ತನ್ನ ಆಹಾರಕ್ಕಾಗಿ ಬಳಸಿಕೊಂಡ ಅಂಶ ಚರಿತ್ರೆಯಿಂದ ತಿಳಿದುಬರುತ್ತದೆ.

ಪ್ರಕೃತಿಯಲ್ಲಿ ಗೋಚರಿಸುತ್ತಿದ್ದ ವಿಸ್ಮಯಕಾರಿ ವಸ್ತುಗಳಿಗೆ ದೈವತ್ವವನ್ನು ಕಲ್ಪಿಸಿ ಅವುಗಳ ಆರಾಧನೆಯಲ್ಲಿ ತೊಡಗಿದನು. ಅವುಗಳೇ ಪಂಚಭೂತಗಳಾಗಿ ಪರಿಣಮಿಸಿದವು. ಇವುಗಳಿಲ್ಲದೇ ತನ್ನ ಬಾಳು ಇಲ್ಲ ಎಂಬ ಮಹತ್ವದ ಅಂಶವನ್ನು ನಿಧಾನವಾಗಿ ಅರಿತನು. ಆಕಸ್ಮಿಕವಾಗಿ ಹಠಾತ್ತನೆ ಕಾಡಿಗೆ ಕಾಡ್ಗಿಚ್ಚು ಆಗಿ ಇಡೀ ಕಾಡೇ ನಾಶವಾದಾಗ ಮರುಕಪಟ್ಟದ್ದುಂಟು. ಕಾಡಿನ ಕಿಚ್ಚಿಗೆ ಬೆಂದು ಹೋದ ಪ್ರಾಣಿಗಳ ಮಾಂಸದ ರುಚಿ ಬಾಯಿಗೆ ರುಚಿಸಿತು. ಅಂದಿನಿಂದ ಬೆಂಕಿಗೆ ದೈವತ್ವ ಸ್ಥಾನ ಕಲ್ಪಿಸಿ ತಾನು ಸ್ವೀಕರಿಸುವ ಆಹಾರ ವಸ್ತುಗಳನ್ನು ಬೇಯಿಸಿ ತಿನ್ನಲು ತೊಡಗಿದನು. ಆ ಬಳಿಕವೇ ಭೂಮಿ, ಆಕಾಶ, ನೀರು, ಗಾಳಿಯೂ ಸಹ ದೈವತ್ವ ಕಲ್ಪನೆ ಪಡೆದುಕೊಂಡಿತ್ತು. ಇವುಗಳನ್ನು ತನಗೆ ತೋಚಿದ ವಸ್ತುಗಳಿಂದಲೇ ಆಕಾರ ನೀಡಿ ಆರಾಧನೆ ಮಾಡುತ್ತಾ ಬಂದನು. ಇದರೊಂದಿಗೆ ತನಗೆ ನಿತ್ಯ ಗೋಚರಿಸುವ ಸೂರ್ಯಚಂದ್ರರು ಸಹ ಇಷ್ಟ ದೈವಗಳಾದರು. ಹೀಗೆ ಮಾನವನ ಅರಿವು ಬೆಳೆದಂತೆಲ್ಲಾ ಆತನು ಪರಿವರ್ತನೆ ಹೊಂದುತ್ತಾ ಸಾಗಿ ಬಂದದ್ದು ಚರಿತ್ರೆಯಿಂದ ತಿಳಿಯಬಹುದಾಗಿದೆ.

ಹೀಗೆ ಆದಿ ಮಾನವ ಬದುಕಿನಲ್ಲಿ ಬದಲಾವಣೆಯಾಗುತ್ತಾ ಹೋದಂತೆ ವಿಕಸನ ಹೊಂದಿದಂತೆಲ್ಲಾ ಪುರುಷನು ಬೇಟೆ ಸಂಸ್ಕೃತಿಗೆ ಹೊಂದಿಕೊಂಡರೆ, ಮಹಿಳೆಯರು ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡದ್ದು ಕಂಡುಬರುತ್ತದೆ. ಕಾಡಿನಲ್ಲಿ ತನ್ನದೇ ಆದ ನೆಲೆಯಲ್ಲಿ ಜೀವಿಸುತ್ತಾಬಂದ ಮಾನವನನ್ನು "ಬುಡಕಟ್ಟು" ಜನಸಮೂಹ ಎಂತಲೂ ಕರೆಯಲಾಯಿತು. ಹೀಗೆ ಬೆಳೆದು ಬಂದ ಮಾನವನು ಕಾಡಿನ ವಾಸ ಬಿಟ್ಟು ತನ್ನ ಅಗತ್ಯ ವಸ್ತುಗಳನ್ನು ಬಳಸಿ ಹೊಸ ಹೊಸ ವಸ್ತುಗಳ ಶೋಧನೆಗೊಳಗಾಗಿ ಭಿನ್ನತೆಯಲ್ಲಿ ಬಾಳಲು ತೊಡಗಿದನು. ಈ ಕಾಲ ಘಟ್ಟವನ್ನು ನಾಗರೀಕತೆಯ ನೆಲೆಯಲ್ಲಿ ಗುರುತಿಸಿದ್ದು ಕಾಣಬಹುದಾಗಿದೆ. ಆದರೆ ನಗರೀಕರಣದ ತೆಕ್ಕೆಗೆ ಒಳಗಾದರೂ ಕಾಡಿನ ಸಂಸ್ಕೃತಿಯನ್ನೇ ಮೈಗೂಡಿಸಿಕೊಂಡು ಜೀವನ ಸಾಗಿಸುವವರನ್ನು 'ಬುಡಕಟ್ಟು' ಜನರು ಎಂದು ಕರೆಯಲಾಗುತ್ತಿತ್ತು. ಹೀಗೆ ಅನಾದಿ ಕಾಲದಿಂದಲೂ ಸಾಗಿ ಬಂದ ಮಾನವನು ಬದಲಾವಣೆ ಹೊಂದುವುದರ ಜೊತೆಗೆ ಎರಡು ಸ್ತರದ ಜೀವನ ವಿಧಾನದಲ್ಲಿ ಬುಡಕಟ್ಟು ಜನರ ಬದುಕು ತುಂಬಾ ವಿಭಿನ್ನವಾಗಿ ಕಂಡುಬಂದಿದ್ದು ಅಧ್ಯಯನದಿಂದ ಬೆಳಕಿಗೆ ಬಂದ ಅಂಶವಾಗಿದೆ. ಇವರ ಆಚಾರ-ವಿಚಾರ, ಸಂಪ್ರದಾಯ, ನಡೆ-ನುಡಿಗಳು ಹಾಗೂ ಪ್ರತ್ಯೇಕ ಭಾಷೆಯನ್ನು ಸಹ ರೂಢಿಸಿಕೊಂಡಿದ್ದು ಕಾಣಸಿಗುತ್ತದೆ. ನಗರೀಕರಣದಿಂದ ದೂರವಿದ್ದರೂ ಸಹ ವಿಭಿನ್ನವಾದ ಬದುಕನ್ನು ಕಟ್ಟಿಕೊಂಡ ಹಲವಾರು ಬುಡಕಟ್ಟು ಜನರಲ್ಲಿ 'ಲಂಬಾಣಿಗಳು' ಸಹ ಪ್ರಮುಖರು.

ಮಾನವ ಬೆಳೆದು ಬಂದ ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಗು ಮಾಡುವುದೆಂದರೆ ಆತನ ಸರ್ವಾಂಗೀಣ ಬದುಕನ್ನೇ ಅಧ್ಯಯನ ಮಾಡಿದಂತೆಯೇ ಸರಿ. ಆತನ ಜೀವನ ವಿಧಾನ, ಅರಿತುಕೊಳ್ಳುವ ಮುನ್ನ ಭಾರತೀಯ ಸಂಸ್ಕೃತಿಯ ಮಹತ್ವವೇನೆಂಬುದರ ಬಗ್ಗೆ ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸುವುದು ಸೂಕ್ತ. ಹೀಗೆ ನೋಡುವುದರಿಂದ ನನ್ನ ಅಧ್ಯಯನ ವಸ್ತುವಿಗೆ ಪೂರಕವಾಗಿರುವ ಮಾಹಿತಿ ದೊರೆತಂತೆ ಆಗುತ್ತದೆ ಎನಿಸುತ್ತದೆ.

'ಸಂಸ್ಕೃತಿ' ಎಂಬ ಪದದ ಬಗ್ಗೆ ಹಲವಾರು ವಿದ್ವಾಂಸರು ಅದರಲ್ಲೂ ಮಾನವಶಾಸ್ತ್ರಜ್ಞರು ಭಿನ್ನ ಭಿನ್ನ ಹೇಳಿಕೆಗಳನ್ನು ನೀಡಿದ್ದಾರೆ. ಮಾನವನ ಸಂಸ್ಕೃತಿಯ ಮಹತ್ವ ಏನೆಂಬುದರ ಬಗ್ಗೆ ಏಕಾಭಿಪ್ರಾಯವಿಲ್ಲ. ಅವರ ಅಭಿಪ್ರಾಯಗಳನ್ನು ಗಮನಿಸುವ ಪೂರ್ವದಲ್ಲಿ 'ಸಂಸ್ಕೃತಿ' ಎಂಬ ಪದದ ವಿಶ್ಲೇಷಣೆ ಅಗತ್ಯ. 'ಸಂಸ್ಕೃತಿ' ಎಂಬ ಪದವನ್ನು Culture ಎಂಬ ಇಂಗ್ಲೀಷ್ ಪದದ ಸಂವಾದಿಯಾಗಿ ಬಳಸಲಾಗುತ್ತಿದೆ. ಈ Culture ಎಂಬ ಪದದ ಮೂಲವು ಲ್ಯಾಟಿನ್ ಪದದಿಂದ ಬಂದಿದೆ ಎಂಬುದು ತಜ್ಞರ ವಾದವಾಗಿದೆ. ಲ್ಯಾಟಿನ್‌ನ Culture ಪದವನ್ನೇ ಇಂಗ್ಲೀಷ್‌ನಲ್ಲಿ ಸಂಸ್ಕೃತಿಗೆ ಪರ್ಯಾಯವಾಗಿ ಬಳಸಲ್ಪಟ್ಟಿದೆ. ಈ Culture ಎಂಬುದೇ ಈಚೆಗೆ Cultivation ಅಥವಾ Training ಎಂಬ ಅರ್ಥೈಸುವಿಕೆಯತ್ತ ಗಮನಹರಿಸಿದೆ.

ಹೀಗೆ ಬೆಳೆದು ಬಂದ ಸಂಸ್ಕೃತಿಯಲ್ಲಿ ಆದಿಮ ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಿದವರಲ್ಲಿ ಪ್ರಸಿದ್ಧ ಆಂಗ್ಲ ವಿದ್ವಾಂಸರಲ್ಲಿ E.B.Tailorರವರು ಒಬ್ಬರು. ಇವರು ಸಂಸ್ಕೃತಿ ಬಗ್ಗೆ ಸಂಕೀರ್ಣವಾದ ವ್ಯಾಖ್ಯಾನವನ್ನು ನೀಡುವಲ್ಲಿ ಸಫಲರಾಗಿದ್ದಾರೆ. ''ಸಂಸ್ಕೃತಿ ಅಥವಾ ನಾಗರೀಕತೆ ವ್ಯಾಪಕವಾದ ಜನಾಂಗಿಕ ದೃಷ್ಟಿಯಿಂದ ಪರಿಶೀಲಿಸಲು ಸಮಾಜದ ಒಬ್ಬ ಸದಸ್ಯನಾಗಿ ಮಾನವ ಗಳಿಸಿಕೊಂಡ ಧ್ಯಾನ, ಜ್ಞಾನ, ನಂಬಿಕೆ, ಕಲೆ, ನೀತಿ, ಕಾನೂನು ಸಂಪ್ರದಾಯ ಮತ್ತು ಅಭ್ಯಾಸಗಳ ಒಂದು ಸಂಕೀರ್ಣ ಮೊತ್ತವಾಗಿದೆ'' ಎಂದು ತಿಳಿಸಿದ್ದಾರೆ. ಹೀಗೆ ಬೆಳೆದು ಬಂದ ರೀತಿಯನ್ನೇ ಬುಡಕಟ್ಟು ಸಂಸ್ಕೃತಿ ಎಂದು ಗುರುತಿಸಿದರು. ಬುಡಕಟ್ಟು ವಾಸಿಗಳ ವಿಶಿಷ್ಟ ಸಂಸ್ಕೃತಿಯ ಮಹತ್ವವನ್ನು ಗುರುತಿಸಿ ಅವರ ಬಗ್ಗೆ ಹೆಚ್ಚಿನ ರೀತಿಯ ಅಧ್ಯಯನ ಮಾಡಿದವರು ಪಾಶ್ಚಾತ್ಯ ವಿದ್ವಾಂಸರೆಂದರೆ ತಪ್ಪಾಗಲಿಕ್ಕಿಲ್ಲ.

ಈ ಕಾರಣಕ್ಕಾಗಿಯೇ ಭಾರತೀಯ ಸಂಸ್ಕೃತಿಯಲ್ಲಿ ಅನೇಕ ಜಾತಿಯ ಬುಡಕಟ್ಟು ಸಮುದಾಯಗಳೇ ಮೂಲವಾಗಿ ಪರಿಣಮಿಸಿವೆ. ಈ ರೀತಿಯ ಬುಡಕಟ್ಟು ಸಮುದಾಯದ ಬೆಳವಣಿಗೆಯ ಬಳಿಕವೇ ಅನೇಕ ಜಾತಿಗಳು ತಲೆದೋರಿದವು ಎನ್ನಬಹುದು. ಭಾರತದಲ್ಲಿ ಉದ್ಭವಿಸಿದ್ದ ಜಾತಿ ಸಮಸ್ಯೆ ಬೇರಾವ ಕಡೆ ಕಾಣಸಿಗಲಾರದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿಯ ಕಟ್ಟುಪಾಡುಗಳೊಂದಿಗೆ ಐನೆಯ ಜಾತಿಯಾದ ಪಂಚಮ ಜಾತಿಯೂ ಇತ್ತೆಂದು ತಿಳಿದುಬರುತ್ತದೆ. ಈ ಜಾತಿಯವರು ಮೇಲಿನ ನಾಲ್ಕು ಜಾತಿಯವರ ಸೇವೆ ಮಾಡಿಕೊಂಡು ಸಾಗುವ ಅನಿವಾರ್ಯ ಪರಿಸ್ಥಿತಿ ಉಂಟಾಗಿತ್ತು ಎಂಬುದು ಚರಿತ್ರೆಯಿಂದ ತಿಳಿದುಬಂದ ಸಂಗತಿಯಾಗಿದೆ.

ಮೊದಮೊದಲು ಕೇವಲ ವೃತ್ತಿಯಾಗಿಸಿಕೊಂಡು ಬಂದ ಜನವರ್ಗಗಳು ಜಾತಿಯ ಹಣೆಯ ಪಟ್ಟಿಯಿಂದ ಹಲವಾರು ಜಾತಿ ವರ್ಗಗಳಾಗಿ ಬೆಳೆದು ಬಂದ ಸಂಗತಿ ವಿಸ್ಮಯಕರವಾಗಿದೆ. ಹೀಗೆ ಪುರೋಹಿತ ಶಾಹಿಗಳ ದಬ್ಬಾಳಿಕೆಗೆ ಒಳಗಾದ ಕೆಳಸ್ತರದವರ ಬದುಕು ಅತ್ಯಂತ ಶೋಚನಿಯವಾಗಿತ್ತು. ಈ ಪಂಚಮ ಜಾತಿಗಳೊಂದಿಗೆ ಬುಡಕಟ್ಟುವಾಸಿಗಳೆಂಬ ಮತ್ತೊಂದು ಗುಂಪು ಮೇಲಿನ ಐದು ಜಾತಿಗಳೊಂದಿಗೆ ಬೇರೆಯದೇ ತಮ್ಮದೇ ಆದ ವಿಶಿಷ್ಟ ಪರಂಪರೆ ರೀತಿ ನೀತಿಯನ್ನು ಒಳಗಾಗಿಸಿಕೊಂಡು ಸಾಗಿಬಂದ ಸಂಸ್ಕೃತಿಯೇ ಬುಡಕಟ್ಟು ಸಂಸ್ಕೃತಿಯಾಗಿದೆ.

ಈಗಲೂ ಬುಡಕಟ್ಟು ವಾಸಿಗಳಲ್ಲಿ ಮೂಲ ಸಂಸ್ಕೃತಿಯ ಅಂಶಗಳು ಅಚ್ಚಳಿಯದೇ ಉಳಿದುಕೊಂಡಿವೆ. ಇದಕ್ಕೆ ಕಾರಣ ಜನಸಂಪರ್ಕದಿಂದ ದೂರಾಗಿ ಬೆಟ್ಟಗುಡ್ಡ-ಪರ್ವತದ ತಪ್ಪಲು ಪ್ರದೇಶದಲ್ಲಿ ವಾಸಿಸುತ್ತಿರುವುದಾಗಿದೆ. ಈ ಬುಡಕಟ್ಟು ವಾಸಿಗಳು ತಮ್ಮದೇ ಆದ ರೀತಿಯಲ್ಲಿ ಬಾಳುತ್ತಾ ಬಂದರೂ ಸಹ ಮುಸಲ್ಮಾನರ ಕಾಲಾವಧಿಯವರೆಗೆ ನೆಮ್ಮದಿಯ ಬದುಕನ್ನ ಸಾಗಿಸಿದರೆಂದು ತಿಳಿದುಬರುತ್ತದೆ. ಆ ನಂತರದಲ್ಲಿ ಇವರ ಬದುಕಿನಲ್ಲಿ ದೊಡ್ಡ ಕಂದರ ಹಾಗೂ ಇವರ ಮೇಲೆ ಗುಮಾನಿಗಳು ಶುರುವಾದದ್ದು ಇಂಗ್ಲೀಷರ ಆಡಳಿತದ ಕಾಲಾವಧಿಯಲ್ಲಿ.

ಇಂಗ್ಲೀಷರು ಭಾರತಕ್ಕೆ ಬಂದ ಬಳಿಕ ಬುಡಕಟ್ಟು ಸಂಸ್ಕೃತಿಯವರ ಮೇಲೆ ಹಲವು ರೀತಿಯ ಕಾನೂನುಗಳು ಜಾರಿಗೆ ತಂದರು. ಈ ನಿಟ್ಟಿನಲ್ಲಿ ಬುಡಕಟ್ಟುವಾಸಿಗಳು ಜಾರಿಯಾದ ಕಾನೂನಿನಿಂದ ತಲ್ಲಣಗೊಂಡು ಅವರ ನೆಮ್ಮದಿಯ ಬದುಕಿಗೆ ಭಂಗ ಬಂದಿತು. ಅವರುಗಳ ಏಕಾಂತ ಬದುಕಿಗೆ ಕುತ್ತು ಒದಗಿಬಂತು ಎನ್ನಬಹುದು. ಹೇಗೆಂದರೆ ಬ್ರಿಟೀಷರು ಜಾರಿಗೆ ತಂದ ಕೈಗಾರಿಕಾ ಕ್ರಾಂತಿ ಮತ್ತು ನಗರೀಕರಣ ಅಭಿವೃದ್ಧಿಯಿಂದ ಕಾಡುನಾಶ ಮಾಡಲು ತೊಡಗಿದ ಅಂಶವೇ ಬುಡಕಟ್ಟು ಜನರಿಗೆ ತೊಡಕಾಗಿ ಪರಿಣಮಿಸಿತೆನ್ನಬಹುದು. ಈ ಕಾರಣಕ್ಕಾಗಿಯೇ ಬುಡಕಟ್ಟುವಾಸಿಗಳು ಇಂಗ್ಲಿಷ್‌ರೊಂದಿಗೆ ಸಂಘರ್ಷಕ್ಕೆ ಇಳಿದದ್ದು ಕಂಡುಬರುತ್ತದೆ. ಜೊತೆಗೆ ಬುಡಕಟ್ಟುವಾಸಿಗಳು ದರೋಡೆ ಕಾರ್ಯದಲ್ಲಿ ತೊಡಗಿಸಿಕೊಂಡರು. ಈ ನಿಟ್ಟಿನಲ್ಲಿ ಇಂಗ್ಲೀಷರು ಬುಡಕಟ್ಟು ಜನರನ್ನು ಅಪರಾಧಿ ಬುಡಕಟ್ಟುಗಳೆಂದು(Criminals tribes) ಗುರುತಿಸಿ ಅವರನ್ನು ಅವಮಾನಗೊಳಿಸಿದ್ದು ತಿಳಿದುಬರುತ್ತದೆ. ಇದೇ ವೇಳೆಯಲ್ಲಿ ಹಲವು ಪಾಶ್ಚಾತ್ಯ ವಿದ್ವಾಂಸರು ಕಟ್ಟಕಡೆಯ ಬದುಕನ್ನು ಸಾಗಿಸುತ್ತಿದ್ದ ಈ ಜನರ ಜೀವನವಿಧಾನವನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡರು. ಅವರಲ್ಲಿ ಕ್ರೈಸ್ತ ಮಿಶನರಿಗಳು ಕ್ರೈಸ್ತಧರ್ಮ ಪ್ರಸಾರದೊಂದಿಗೆ ಅವರ ಬದುಕಿನ ಸ್ತರಗಳ ಬಗ್ಗೆ ವಿಶೇಷ ಅಧ್ಯಯನ ಮಾಡಿ ಕೃತಿರಚನೆಯನ್ನು ಕೈಗೊಂಡು ಮಾನವ ವಿಜ್ಞಾನಿಗಳಾದರು. ಹೀಗೆ ಬುಡಕಟ್ಟು ಜನರ ಜೀವನವಿಧಾನದ ಅಧ್ಯಯನದೊಂದಿಗೆ ಜಾತಿಗಳ ಕುರಿತಾದ ವಿಶೇಷವಾದ ಅಧ್ಯಯನಗಳು ನಡೆದವು ಎನ್ನಬಹುದು.

ಮಾನವ ವಿಜ್ಞಾನಿಗಳ ಹೇಳಿಕೆ ಪ್ರಕಾರ ಬುಡಕಟ್ಟು ಎಂದರೆ ನಗರ ಮತ್ತು ಗ್ರಾಮಗಳಲ್ಲಿ ವಾಸವಾಗಿರುವವರನ್ನು ಬಿಟ್ಟು ಬೆಟ್ಟ-ಗುಡ್ಡ-ಕಾಡು-ಮೇಡುಗಳಲ್ಲಿ ವಾಸಿಸಿ; ಪ್ರತ್ಯೇಕವಾದ ಸಂಸ್ಕೃತಿಯನ್ನು ಉಳಿಸಿಕೊಂಡವರು.

ಈ ಬುಡಕಟ್ಟುವಾಸಿಗಳ ಪ್ರಮುಖ ಲಕ್ಷಣವೆಂದರೆ ರಕ್ತ ಸಂಬಂಧಕ್ಕೆ ಪ್ರಥಮ ಆದ್ಯತೆ ನೀಡುವುದು. ಇವರು ತಮ್ಮ ಬದುಕಿನ ಸ್ಥಿತಿಗಿಂತ ಹೊರಗಿರುವವರನ್ನು ಅನುಮಾನದಿಂದಲೇ ಗುರುತಿಸುವುದು ವಿಶೇಷ. ಇವರಲ್ಲಿ ಅನಾಗರಿಕತೆ ತಾಂಡವವಾಡುತ್ತಿದ್ದರೂ ಸಹ ಅವರದೇ ಆದ ಭಾಷೆಯನ್ನು ಪ್ರತ್ಯೇಕವಾದ ಜೀವನ ವಿಧಾನವನ್ನು ರೂಢಿಸಿಕೊಂಡಿರುತ್ತಾರೆ ಎಂದು ತಿ.ನಾ.ಶಂಕರನಾರಾಯಣರವರು ತುಂಬಾ ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಈ ಲಕ್ಷಣಗಳನ್ನು ಒಳಗೊಂಡ ಬುಡಕಟ್ಟುಗಳು ಹೆಚ್ಚಾಗಿ ಭಾರತದಲ್ಲಿ ಕಾಣಸಿಗುತ್ತಾರೆ.

ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಸರಕಾರವು ಹಲವು ಕಾಯ್ದೆಗಳನ್ನು ಜಾರಿಗೆಗೊಳಿಸಿದೆ. ಈ ಕುರಿತಾಗಿ ಸಂವಿಧಾನದಲ್ಲಿಯೂ ಸಹ ಬುಡಕಟ್ಟು ಸಮಾಜದ ವರ್ಗ ಸಮೂಹಕ್ಕೆ ಇತರೆ ವರ್ಗಗಳೊಂದಿಗೆ ಸಮಾನವಾಗಿ ಜೀವಿಸಲು ಕಾಯ್ದೆಗಳನ್ನು ರೂಪಿಸಿದೆ. ಸಂವಿಧಾನದ ೩೪೧, ೩೪೨ ಅನುಚ್ಛೇದಗಳ ಪ್ರಕಾರ ಅನೇಕ ಬುಡಕಟ್ಟುಗಳನ್ನು ಗುರುತಿಸಿ ಅವುಗಳ ಪಟ್ಟಿಯನ್ನು ನೀಡಲಾಗಿದೆ(ಕನ್ನಡ ವಿಶ್ವಕೋಶ). ಹೀಗೆ ಸೇರ್ಪಡೆಯಾದ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ರೀತಿಯಲ್ಲಿ ಅಭಿವೃದ್ಧಿ ಹೊಂದಲು ತೊಡಗಿವೆ.

ಈ ಜನಾಂಗದವರನ್ನು ಪರಿಶಿಷ್ಟಪಟ್ಟಿಯಲ್ಲಿ ಸೇರಿಸಿದೆ. ಭಾರತದಲ್ಲಿ ಕ್ರಿ.ಶ.೧೯೮೧ರಲ್ಲಿ ಬುಡಕಟ್ಟು ಜನಸಂಖ್ಯೆಯು ೫೬ ಲಕ್ಷದ ೨೮ ಸಾವಿರದ ೬೩೪೮ರಷ್ಟು ಇತ್ತೆಂದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಈ ರೀತಿಯ ಕಾಡುಮೇಡುಗಳಲ್ಲಿ ಪ್ರತ್ಯೇಕವಾದ ಗುಂಪನ್ನು ರಚಿಸಿಕೊಂಡು ವಾಸವಾಗಿರುವ ಆದಿವಾಸಿಗಳನ್ನೇ 'ಬುಡಕಟ್ಟು'ಗಳೆಂದು ಹಲವಾರು ವಿದ್ವಾಂಸರುಗಳ ಅಭಿಪ್ರಾಯವಾಗಿದೆ. ಬುಡಕಟ್ಟು ಜನರು ವಾಸಿಸಿರುವ ಮೂಲನೆಲೆಗಳನ್ನು ಪ್ರಸಿದ್ಧ ಮಾನವಶಾಸ್ತ್ರಜ್ಞರು ಅವರ ಜೀವನವಿಧಾನದ ಮಹತ್ವವನ್ನು ಮಾನವಿಕ ನೆಲೆಯಲ್ಲಿ ಗುರುತಿಸಿದ್ದಾರೆ. ಹೀಗೆ ಅಧ್ಯಯನ ಕೈಗೊಂಡ ಕೆಲವರಲ್ಲ ಬಿ.ಎಸ್.ಗುಹಾ, ಥರ್ಸ್ಟನ್, ಬ್ರೂಹಿಸ್, ಎ.ಕೆ. ಅಯ್ಯರ್, ನಂಜುಂಡಯ್ಯ, ಎಲ್ವಿಸ್, ಎಂಥೊವೆನ್ ಅವರು ಪ್ರಮುಖರೆಂದು ತಿಳಿದು ಬಂದಿದೆ. ಬಹುತೇಕ ವಿದ್ವಾಂಸರು ತಿಳಿಸಿದ ಹೇಳಿಕೆಗಳು ಭಿನ್ನವಾಗಿದ್ದರೂ 'ಬುಡಕಟ್ಟು' ಎಂಬ ಪದವನ್ನು ಈ ರೀತಿಯಾಗಿ ವಿಶ್ಲೇಷಿಸಿದ್ದಾರೆ. ಸಮಕಾಲೀನ ಸಮಾಜದ ನಡುವೆ ಇದ್ದು ಪ್ರತ್ಯೇಕವಾದ ಜೀವನ ವಿಧಾನವನ್ನು ರೂಢಿಸಿಕೊಂಡು ತಮ್ಮದೇ ಆದ ಮೌಲ್ಯ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿರುವ ಒಂದು ಸಾಮಾಜಿಕ ಗುಂಪನ್ನೇ ಬುಡಕಟ್ಟು ಜನರು ಎಂದು ಗುರುತಿಸಿದ್ದಾರೆ. ನಿರ್ದಿಷ್ಟ ಪ್ರದೇಶದಲ್ಲಿ ವಾಸವಾದ ಬುಡಕಟ್ಟು ಜನರು ಉಪಭಾಷೆ ಬಳಕೆ ಮಾಡುವರು. ಇವರ ಗುಂಪಿಗೆ ಒಬ್ಬ ನಾಯಕನಿರುತ್ತಾನೆ. ಉಳಿದ ಜನರು ಅವರ ನಾಯಕನ ಮಾತನ್ನು ನಿರಾಕರಣೆ ಮಾಡುವುದಿಲ್ಲ. ಬುಡಕಟ್ಟುವಾಸಿಗಳ ವಿಶಿಷ್ಟತೆಯನ್ನು ಅವರ ಜೀವನವಿಧಾನ, ಮದುವೆ-ಹಬ್ಬ-ಹರಿದಿನ ಇತರೆ ಶುಭಕಾರ್ಯಗಳನ್ನು ಗಮನಿಸಿದರೆ ಇವರ ಸಾಂಸ್ಕೃತಿಕ ಚಹರೆಗಳು ಭಿನ್ನ ಸ್ವರೂಪವಾಗಿವೆ. ಯಾವುದೇ ಶುಭಕಾರ್ಯಗಳಿಗೆ ಪುರೋಹಿತ ಇಲ್ಲವೆ ಬ್ರಾಹ್ಮಣರನ್ನು ಕರೆಯಿಸುವುದಿಲ್ಲ. ಏಕೆಂದರೆ ಬೇರೆ ಸಂಸ್ಕೃತಿಗೆ ದಾಸರಾಗುವುದು ಇವರಲ್ಲಿ ಕಾಣಸಿಗುವುದಿಲ್ಲ.

ಬುಡಕಟ್ಟು ಜನರು ಹೆಚ್ಚಾಗಿ ಮಾಂಸಹಾರಿಗಳಾಗಿದ್ದರೆಂದು ಸಂಶೋಧನೆಯಿಂದ ತಿಳಿದು ಬಂದ ಸಂಗತಿಯಾಗಿದೆ. ಕಾಡಿನಲ್ಲಿ ದೊರಕುವ ಉತ್ಪನ್ನಗಳನ್ನೇ ಹೆಚ್ಚು ಅವಲಂಬಿಸಿ ಬದುಕು ಸಾಗಿಸುತ್ತಿರುವರು. ನಾಗರಿಕ ಸಮಾಜದಲ್ಲಿ ಮಹಿಳೆ ಭಾರವಾಗಿರುವಂತೆ ಬುಡಕಟ್ಟು ಜನರಿಗೆ ಭಾರವಾಗಿಲ್ಲ. ಅವಳು ಸಹ ಪುರುಷನಂತೆ ಒಂದಲ್ಲ ಒಂದು ರೀತಿಯಲ್ಲಿ ದುಡಿಮೆಯಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾಳೆ. ಕೆಲವು ಕಡೆ ಪುರುಷನಿಂದ ಪ್ರತ್ಯೇಕವಾಗಿ ಬದುಕುವ ಜಾಯಮಾನ ರೂಢಿಸಿಕೊಂಡಿದ್ದಾಳೆ. ಆದ್ದರಿಂದ ಬುಡಕಟ್ಟು ಜನರಲ್ಲಿ ಲಿಂಗ ಅಸಮಾನತೆ ಇಲ್ಲ. ಲಿಂಗ ಸಮಾನತೆಯು ಅವರಲ್ಲಿ ವ್ಯಕ್ತವಾಗಿರುವುದು ಗಮನಾರ್ಹ ಸಂಗತಿಯಾಗಿದೆ.

ಮಾನವ ಸಂಸ್ಕೃತಿಯ ಸ್ವರೂಪವನ್ನು ತಿಳಿಯಬೇಕಾದರೆ ಮೊದಲು ಬುಡಕಟ್ಟು ವಾಸಿಗಳ ಸಂಸ್ಕೃತಿಯನ್ನು ತಿಳಿಯಬೇಕೆಂಬ ವಿದ್ವಾಂಸರ ಮಾತು ಒಪ್ಪತಕ್ಕದಾಗಿದೆ. ಭೌಗೋಳಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಭಾರತದ ಬುಡಕಟ್ಟುವಾಸಿಗಳನ್ನು ಮೂರು ವಲಯಗಳಲ್ಲಿ ಗುರುತಿಸಿದೆ. ಅವುಗಳೆಂದರೆ

೧. ದಕ್ಷಿಣ ವಲಯ
೨. ಮಧ್ಯ ವಲಯ
೩. ಈಶಾನ್ಯವಲಯ

ಹೀಗೆ ಕಾಣಸಿಗುವ ಬುಡಕಟ್ಟು ಸಮುದಾಯಗಳ ವಿಶೇಷ ಅಧ್ಯಯನ ಕೈಗೊಂಡವರಲ್ಲಿ ಪಾಶ್ಚಾತ್ಯರೇ ಹೆಚ್ಚಾಗಿ ಕಾಣಸಿಗುತ್ತಾರೆ. ವಿದೇಶದಿಂದ ಬಂದ ಆಂಗ್ಲರು ತಮ್ಮ ನೆಲೆಗಾಗಿ ಭಾರತಕ್ಕೆ ಬಂದಾಗ ಕ್ರೈಸ್ತ ಮಿಶನರಿ ಮೂಲಕ ಧರ್ಮಪ್ರಸಾರ ಮಾಡಲು ತೊಡಗಿದರು. ಆ ಬಳಿಕ ಬುಡಕಟ್ಟು ಜನರನ್ನು ಮತಾಂತರಗೊಳಿಸಿ ಅವರೊಂದಿಗೆ ಹಲವು ವರುಷಗಳವರೆಗೂ ವಾಸವಾಗಿ, ಅವರು ಮಾತಾಡುವ ಭಾಷೆ, ವೇಷಭೂಷಣ, ಆಚಾರ-ವಿಚಾರ, ಧಾರ್ಮಿಕ ಭಾವನೆ ಮುಂತಾದ ಬದುಕಿನ ವಿವಿಧ ಮುಖಗಳ ಸರ್ವಾಂಗೀಣ ವಲಯಗಳ ಅಧ್ಯಯನ ಮಾಡಿದರು. ಆಂಗ್ಲರ ಸಂಶೋಧನಾತ್ಮಕ ಅಧ್ಯಯನದಿಂದ ಬುಡಕಟ್ಟುವಾಸಿಗಳು ನಗರವಾಸಿಗಳಿಗಿಂತಲೂ ಹೇಗೆ ಭಿನ್ನ ಎಂಬ ವಿಚಾರವನ್ನು ಸಾದರಪಡಿಸಿದರು.

ಪ್ರಸ್ತುತ ಸಂದರ್ಭದಲ್ಲಿ ನಗರೀಕರಣ ಸಂಸ್ಕೃತಿ ಬೆಳೆದು ಬಂದರೂ ಸಹ ಕೆಳಸ್ತರದ ದುರ್ಬಲರು ಗ್ರಾಮೀಣ ಮತ್ತು ನಗರ ಜೀವನ ವಿಧಾನದಿಂದ ದೂರವಾಗಿ ತಮ್ಮದೇ ಆದ ಮಹತ್ವದ ಸಂಸ್ಕೃತಿಯಲ್ಲಿ ಬದುಕುತ್ತಿರುವ ಬುಡಕಟ್ಟು ವಾಸಿಗಳನ್ನು ರೈಸ್ಲೇ ಮತ್ತು ಗ್ರೇಟ್ ಎಂಬ ವಿದ್ವಾಂಸರು ಇವರನ್ನು ಬುಡಕಟ್ಟು ಜಾತಿ(Tribel cast) ಎಂದು ಕರೆದಿದ್ದಾರೆ. ಕೇವಲ ಆದಿವಾಸಿಗಳಿಗೆ ಬುಡಕಟ್ಟು ಎಂಬ ಪದ ಬಳಸುವುದು ತರವಲ್ಲ. ಕೈಗಾರೀಕರಣ ಮತ್ತು ನಗರೀಕರಣ ಪ್ರಭಾವದಿಂದ ಬುಡಕಟ್ಟು ಸಮುದಾಯಗಳು ಜಾತಿಗಳಾಗಿ ಮಾರ್ಪಾಡಾಗಿವೆ. ನಗರ ಸಂಸ್ಕೃತಿಯಿಂದ ದೂರವಿದ್ದು, ಸರಳ ಸಮಾಜಜೀವನ ಶೈಲಿಯನ್ನು ರೂಢಿಸಿಕೊಂಡಿರುವ ಬುಡಕಟ್ಟುಗಳು ಭಾರತದಲ್ಲಿ ವಾಸವಾಗಿದ್ದಾರೆ. ಈ ರೀತಿಯ ಸಮುದಾಯಗಳ ಸರ್ವಾಂಗೀಣ ಅಭಿವೃದ್ಧಿಯಾಗ ಬೇಕಾದರೆ ಬುಡಕಟ್ಟು ವಾಸಿಗಳ ಸಮಸ್ಯೆ ಮತ್ತು ಆಶಯವನ್ನು ಅಧ್ಯಯನ ಮಾಡಿ ಉತ್ತಮ ಯೋಜನೆಗಳನ್ನು

ರೂಪಿಸಿದಾಗ ಮಾತ್ರ ಇವರು ಮುಖ್ಯ ವಾಹಿನಿಗೆ ಬರಲು ಸಾಧ್ಯ. ಈಗಾಗಲೇ ಬುಡಕಟ್ಟು ವಾಸಿಗಳನ್ನು ನಗರಕ್ಕೆ ಕರೆತರುವ ಇಲ್ಲವೆ ನಗರದ ವಾಸಿಗಳು ಬುಡಕಟ್ಟು ಜನರೊಡನೆ ಇದ್ದು ತಮ್ಮ ಸಂಸ್ಕೃತಿಯ ಬಗ್ಗೆ ಇಲ್ಲವೇ ಅವರ ಸಂಸ್ಕೃತಿಯ ಮಹತ್ವವನ್ನು ಆಕಾಶವಾಣಿಯು ರಿಯಾಲಿಟಿಶೋಗಳನ್ನು ನಡೆಸುತ್ತಿರುವುದು ಉತ್ತಮ ಕಾರ್ಯವಾಗಿದೆ. ಇದರೊಂದಿಗೆ ಭಾರತದ ಸರ್ಕಾರವು ಪಂಚವಾರ್ಷಿಕ ಯೋಜನೆಗಳಲ್ಲಿ ಬುಡಕಟ್ಟು ವಾಸಿಗಳ ಅಭಿವೃದ್ಧಿಗಾಗಿ ಆರ್ಥಿಕ ನೆರವು ನೀಡಿ ಅವರ ಅಭಿವೃದ್ಧಿಗೆ ಸಹಕರಿಸುತ್ತಿದೆ.

ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಬುಡಕಟ್ಟು ಸಮುದಾಯದ ಜನರ ಮಕ್ಕಳಲ್ಲಿ ಶಿಕ್ಷಣ ಅರಿವು ಮೂಡಿಸಲು ವಿದ್ಯೆ, ಆರೋಗ್ಯ, ವಾಸಕ್ಕೆ ವಸತಿಗೃಹಗಳು, ಸಾರಿಗೆ ಸಂಪರ್ಕ ಸಾಧನೆ ಹಾಗೂ ಆರ್ಥಿಕ ಅಭಿವೃದ್ಧಿಗಾಗಿ ೧೯.೮೩ ಕೋಟಿ ರೂಪಾಯಿಗಳನ್ನು ಬಿಡುಗಡೆಗೊಳಿಸಿದೆ. ಅಂತೆಯೇ ನಾಲ್ಕನೆಯ ಯೋಜನೆಯಲ್ಲಿ ೩೫.೫೨ ಕೋಟಿ ರೂಪಾಯಿಗಳನ್ನು, ಐದನೆಯ ಮತ್ತು ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇನ್ನೂ ಹೆಚ್ಚಿನ ಪ್ರಮಾಣದ ಹಣಬಿಡುಗಡೆ ಮಾಡಲಾಗಿದೆ.

ಹೀಗೆ ಸರ್ಕಾರವು ಹತ್ತಾರು ಯೋಜನೆಗಳ ಮೂಲಕ ಹಣವಿನಿಯೋಗಿಸಿದರೂ ಕೆಲವು ಕಡೆ ಬುಡಕಟ್ಟುಗಳು ತಮ್ಮ ಮೂಲ ಸಂಸ್ಕೃತಿಯನ್ನು ಮರೆತಿಲ್ಲ. ಕೆಲವರು ನಗರೀಕರಣಕ್ಕೆ ದಾಸರಾಗಿ ತಮ್ಮ ಸಂಸ್ಕೃತಿ ಆಚಾರ-ವಿಚಾರಗಳನ್ನು ಮರೆತು ಜೀವನಸಾಗಿಸುತ್ತಿದ್ದಾರೆ. ಆದರೆ ನಗರ ಸಂಸ್ಕೃತಿ ಮತ್ತು ಗ್ರಾಮೀಣ ಸಂಸ್ಕೃತಿಗೂ ಭಿನ್ನರಾಗಿ ತಮ್ಮದೇ ಆದ ರೀತಿಯಲ್ಲಿ ಜೀವನಸಾಗಿಸುತ್ತಿರುವ ಬುಡಕಟ್ಟುವಾಸಿಗಳ ಚಿತ್ರಣದಂತೆ ಕಂಡುಬಂದವರೆಂದರೆ ಲಂಬಾಣಿಗರು. ಕೆಲವರು ತಾಂಡಾಗಳಲ್ಲಿದ್ದರೂ ನಗರ ಸಂಸ್ಕೃತಿಯ ಶೈಲಿಗೆ ಮಾರು ಹೋಗಿದ್ದಾರೆ. ಇವರ ಜೀವನವಿಧಾನ ಆಚಾರ-ವಿಚಾರಗಳಲ್ಲದೆ ಇತರೆ ಸಮುದಾಯಗಳಿಗಿಂತಲೂ ಹೇಗೆ ಭಿನ್ನ ಎಂದು ತೋರಿಸುವುದೇ ನನ್ನ ಅಧ್ಯಯನದ ಗುರಿಯಾಗಿದೆ. ಈ ದೃಷ್ಟಿಯಿಂದ ಲಂಬಾಣಿ ಸಮುದಾಯವು ಈಗಲೂ ಆ ಕಡೆ ನಗರದ ಸೋಗಿಗೆ ಒಳಗಾದರೂ ಸಹ ಪ್ರತ್ಯೇಕವಾದ ತಾಂಡಾಗಳನ್ನು ರಚನೆ ಮಾಡಿಕೊಂಡು ಜೀವಿಸುತ್ತಿದ್ದಾರೆ. ಅದರಲ್ಲೂ 'ಲಂಬಾಣಿ'ಗರ ಬಗ್ಗೆ ಈಗಾಗಲೇ ಹಲವು ವಿದ್ವಾಂಸರು ವಿವಿಧ ನೆಲೆಗಟ್ಟಿನ ಅಡಿಯಲ್ಲಿ ಅಧ್ಯಯನ ಮಾಡಿದ್ದಾರೆ. ಆದರೆ, ನಾನು ಬಳ್ಳಾರಿ ಜಿಲ್ಲೆಗೆ ಸೀಮಿತವಾಗಿ ಅವರ ಸಮಾಜೋ ಆರ್ಥಿಕ ಜೀವನ ವಿಧಾನವು ಹೇಗೆ ಇತರೆ ಸಮುದಾಯದವರಿಗಿಂತಲೂ ಭಿನ್ನ ಎಂದು ತಿಳಿಸುವ ಉದ್ದೇಶವನ್ನು ಹೊಂದಿದ್ದೇನೆ. ಈ ಕಾರಣಕ್ಕಾಗಿ ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ ಅವರ ಬದುಕನ್ನು ಕಟ್ಟಿಕೊಡುವುದೇ ನನ್ನ ಅಧ್ಯಯನದ ಮುಖ್ಯ ವಿಷಯವಾಗಿದೆ.

## ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಕೊಡುಗೆ

ಬಳ್ಳಾರಿ ಜಿಲ್ಲೆಯು ಅನಾದಿ ಕಾಲದಿಂದಲೂ ತನ್ನದೇ ಆದ ಪುರಾತನ ದಾಖಲೆಗಳನ್ನು ಒಳಗೊಂಡಿದೆ. ಈ ಭಾಗದ ನಿಟ್ಟೂರು, ಸಂಗನಕಲ್ಲು ಹಾಗೂ ಐತಿಹಾಸಿಕ ಸ್ಥಳವಾದ ಹಂಪಿಯಲ್ಲೂ ಆದಿಮಾನವನ ಕುರುಹುಗಳು ಪತ್ತೆಯಾಗಿವೆ. ಜಿಲ್ಲೆಯ ಸಂಗನಕಲ್ಲು ಗ್ರಾಮದಲ್ಲಿ ಆದಿಮಾನವನು ಬಳಸುತ್ತಿದ್ದ ಎನ್ನಲಾಗುವ

ಕಲ್ಲುಗೊಡಲಿಗಳ ಬೆಟ್ಟದ ಸಮೂಹವೇ ಇತ್ತೆಂಬುದು ತಿಳಿದುಬಂದಿದೆ. ಇಷ್ಟೆ ಅಲ್ಲದೆ ಹೊಸಪೇಟೆ ತಾಲೂಕಿನ ಧರ್ಮದಗುಡ್ಡ, ದರೋಜಿ ಕರಡಿಧಾಮಗಳು ಆದಿಮಾನವನು ವಾಸಿಸುತ್ತಿದ್ದ ಗುಹೆಗಳಾಗಿರಬಹುದು. ಈ ಕುರಿತಾಗಿ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಾಗಿದೆ. ಇದೇ ತಾಲೂಕಿನ ಪಾಪಿನಾಯಕನಹಳ್ಳಿ, ಧರ್ಮದಗುಡ್ಡ, ಧರ್ಮಸಾಗರ, ಕಾಕುಬಾಳು ಹಾಗೂ ಇನ್ನಿತರ ಗ್ರಾಮಗಳಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಬಳಸಿದ ವಸ್ತುಗಳು ನಾನು ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತಿವೆ. ಈ ಕುರಿತಾಗಿ ಇನ್ನೂ ಹೆಚ್ಚಿನ ರೀತಿಯ ಶೋಧನೆ ಮಾಡಬೇಕಾದ ಅಗತ್ಯವಿದೆ. ಈ ಭಾಗದಲ್ಲಿರುವ ಸಂಶೋಧಕರು ಇದರ ಬಗ್ಗೆ ಹೆಚ್ಚಿನ ಅಧ್ಯಯನ ಕೈಗೊಂಡು ಆಳವಾದ ಶೋಧನಾ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರೆ ಇನ್ನೂ ಹೆಚ್ಚಿನ ರೀತಿಯ ಮಹತ್ವದ ಅಂಶಗಳು ದೊರಕುವುದರಲ್ಲಿ ಸಂಶಯವಿಲ್ಲ.

## ೧.೧. ಅಧ್ಯಯನದ ಉದ್ದೇಶ

ಲಂಬಾಣಿ ಸಮುದಾಯದಲ್ಲಿ ಉಂಟಾಗಿರುವ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಚರ್ಚಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಆರ್ಥಿಕ ಬದಲಾವಣೆಯಿಂದ ಇವರ ಸಾಂಪ್ರದಾಯಿಕ ಸಂಸ್ಥೆ, ಸಾಂಸ್ಕೃತಿಕ ಆಚರಣೆ, ಮೌಲ್ಯಗಳು, ನಂಬಿಕೆ, ಆಚಾರ-ವಿಚಾರ ಇನ್ನು ಮುಂತಾದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಗೋಚ್(೧೯೫೨) ಶಾರ್ಪ(೧೯೫೨) ಜೈಲಿ(೧೯೫೮) ಮತ್ತು ಎಫಿಸ್ಟನ್ (೧೯೬೨) ಇವರು ಗುರುತಿಸಿರುವ ಮಾದರಿಯಲ್ಲಿ ಅಭ್ಯಸಿಸಲು ಉದ್ದೇಶಿಸಲಾಗಿದೆ. ಯಾವುದೇ ಸಮಾಜದಲ್ಲಿ ಆರ್ಥಿಕ ಅಂಶ ಹಾಗೂ ಆರ್ಥಿಕೇತರ ಅಂಶಗಳ ಮಧ್ಯ ಇರುವ ಸಂಬಂಧ ತುಂಬಾ ಸಂಕೀರ್ಣವಾದುದ್ದು. ಅದನ್ನು ಒಂದು ರೀತಿಯಲ್ಲಿ ಆರ್ಥಿಕ ಚಲನೆಯ ರಚನಾಕ್ರಮದ ಚೌಕಟ್ಟಿನಲ್ಲಿ ಚರ್ಚಿಸಿದರೆ, ಮತ್ತೊಂದು ರೀತಿಯಲ್ಲಿ ಲಂಬಾಣಿಗರ ಜೀವನ ಶೈಲಿಯನ್ನು, ಅವರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸಂಬಂಧದ ಹಿನ್ನೆಲೆಯಲ್ಲಿ ಚರ್ಚಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಲಂಬಾಣಿಗರ ಸಾಮಾಜಿಕ, ಸಾಂಸ್ಕೃತಿಕ ರಚನಾಕ್ರಮವನ್ನು ಮತ್ತು ಆರ್ಥಿಕ ಅಭಿವೃದ್ಧಿ ಸ್ಥಿತಿಗತಿಗಳನ್ನು ಸಮಾಜಶಾಸ್ತ್ರದ ದೃಷ್ಟಿಕೋನದಿಂದ ಮತ್ತು ಜಾನಪದಶಾಸ್ತ್ರದ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗಿದೆ. ಅಲ್ಲದೆ ಈ ಅಧ್ಯಯನವು ಕೇವಲ ಸಮಾಜಶಾಸ್ತ್ರ ದೃಷ್ಟಿಕೋನಕಷ್ಟೇ ಸೀಮಿತವಾಗಿದೆ. ಅಂತರ ಶಿಸ್ತೀಯ ಅಧ್ಯಯನ ಕ್ರಮಗಳಾದ ಅರ್ಥಶಾಸ್ತ್ರ, ರಾಜಕೀಯ, ಧಾರ್ಮಿಕಶಾಸ್ತ್ರ, ಸಮಾಜಶಾಸ್ತ್ರ, ಮಾನವಶಾಸ್ತ್ರ ಶಿಸ್ತುಗಳಿಗೂ ಬದ್ಧವಾಗಿವೆ. ಮೇಲಿನೊಸ್ಕಿ(೧೯೨೨, ೧೯೪೪); ಪೋರ್ಡ್(೧೯೩೪), ಟಕ್ಸ್(೧೯೫೩), ರೆಡ್ ಕ್ಲಿಫ್‌ಟ್ರೆನ್(೧೯೬೪ ಮತ್ತು ಫಿರ್ತ;೧೯೬೫) ನಮ್ಮ ಅಧ್ಯಯನದ ಮುಖ್ಯ ಗುರಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಅಂಶಗಳ ಪರಸ್ಪರ ಸಂಬಂಧಗಳ ಬಗ್ಗೆ ಸೂಕ್ಷ್ಮವಾಗಿ ಜ್ಞಾನವನ್ನು ಪಡೆದುಕೊಳ್ಳುವುದು. ಇದು ಸ್ಥಿರರೂಪದ ಅಭಿವೃದ್ಧಿ ಕಾರ್ಯಕ್ರಮಗಳಿಂದ ಸಮರೂಪದ ಸಮುದಾಯಗಳಲ್ಲಿ ಉಂಟಾಗಬಹುದಾದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಗುರುತಿಸಲು ಉಪಯುಕ್ತವಾಗು

ವುದು. ಪ್ರಸಕ್ತ ಅಧ್ಯಯನದ ಮಾಹಿತಿ ಸರಕಾರಗಳಿಗೆ ಆರ್ಥಿಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲು ಸಹಕಾರಿಯಾಗುತ್ತದೆ ಎಂದು ಆಶಿಸಲಾಗಿದೆ.

ಸುಮಾರು ಒಂದು ಶತಮಾನದ ಹಿಂದೆ ಲಂಬಾಣಿಗರು ಸಣ್ಣಪುಟ್ಟ ವ್ಯಾಪಾರ ಮಾಡುತ್ತಾ ಅಲೆಮಾರಿಗಳಾಗಿದ್ದರು. ಆದರೆ ಈಗ ಅವರ ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಯಲ್ಲಿ ಉಂಟಾಗಿರುವ ಬದಲಾವಣೆಯಿಂದ ಶಾಶ್ವತವಾಗಿ ನೆಲೆಗೊಳ್ಳುತ್ತಿದ್ದಾರೆ. ಇದರ ಪರಿಣಾಮವಾಗಿ ಇವರಲ್ಲಿ ಆರ್ಥಿಕ ಬದಲಾವಣೆಯಿಂದ ಸಾಮಾಜಿಕ ಜೀವನಶೈಲಿಯು ಸ್ಥಿತ್ಯಂತರಕ್ಕೆ ಒಳಪಡುತ್ತದೆ. ಲಂಬಾಣಿಗರು ಅಲೆಮಾರಿ ಬದುಕಿನಿಂದ ಶಾಶ್ವತನೆಲೆಗೆ ಸ್ಥಿತ್ಯಂತರಗೊಳ್ಳುವ ಸಂಕ್ರಮಣ ಕಾಲಕ್ಕೆ ಹೊಂದಾಣಿಕೆ ಮಾಡಿಕೊಳ್ಳುವಾಗ ಎದುರಿಸಿದ ಸಮಸ್ಯೆಗಳನ್ನು, ಅವರು ಅನುಭವಿಸಿದ ಹಾಗೂ ಅನುಭವಿಸುತ್ತಿರುವ ಸಾಮಾಜಿಕ ಪ್ರಕ್ರಿಯೆಯ ಮಾರ್ಪಾಡುಗಳನ್ನು ಚರ್ಚಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ಲಂಬಾಣಿಗರು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆನಿಂತ ಸಮುದಾಯಗಳ ಜೊತೆ ನಿರಂತರವಾಗಿ ನಿಕಟ ಸಂಪರ್ಕವನ್ನು ಹೊಂದಿದ್ದಾರೆ. ಆದರೂ ಸಹ ತಮ್ಮದೇ ಆದ ಪ್ರತ್ಯೇಕ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ನಿರಂತರತೆಯನ್ನು ಉಳಿಸಿಕೊಳ್ಳುವಾಗ, ಎದುರಾಗುತ್ತಿದ್ದ ಸಮಸ್ಯೆಗಳನ್ನು ಚರ್ಚಿಸುವುದು ಈ ಅಧ್ಯಯದ ಉದ್ದೇಶಗಳಲ್ಲಿ ಒಂದು. ಲಂಬಾಣಿಗರು ಮೂಲತಃ ಉತ್ತರ-ಮಧ್ಯ ಭಾರತದ ಮೇವಾರದ ಪ್ರದೇಶದದಿಂದ ಬಂದವರು. ಇದು ಇಂದಿನ ರಾಜಸ್ಥಾನದ ಒಂದು ಪ್ರದೇಶ. ಇವರು ಕರ್ನಾಟಕಕ್ಕೆ ವಲಸೆ ಬಂದಾಗ 'ಮೇವಾರಿ' ಸಂಸ್ಕೃತಿಯನ್ನು ತಮ್ಮ ಜೊತೆಗೆ ತಂದಿದ್ದಾರೆ. ಲಂಬಾಣಿಗರು ಬೇರೆ-ಬೇರೆ ಜಾತಿ ಗುಂಪುಗಳ ವಿವಿಧ ಪ್ರಾದೇಶಿಕ ಸಂಸ್ಕೃತಿಗೆ ತೆರೆದುಕೊಂಡಿದ್ದಾರೆ. ಕೆಲವು ಪ್ರಾದೇಶಿಕ ಸಾಂಸ್ಕೃತಿಕ ಗುಣಲಕ್ಷಣಗಳನ್ನು ರೂಢಿಸಿಕೊಂಡಿದ್ದರೂ, ತಮ್ಮದೇ ಆದ ಸಾಂಸ್ಕೃತಿಕ ಹಾಗೂ ಭಿನ್ನವಾದ ಅನನ್ಯತೆಯನ್ನು ಬಹುಸಂಸ್ಕೃತಿಯ ಪರಿಸರದ ಮಧ್ಯದಲ್ಲಿ ವಾಸಿಸುತ್ತಿದ್ದರೂ ಉಳಿಸಿಕೊಂಡಿದ್ದಾರೆ. ಇಂದು ಲಂಬಾಣಿಗರು ಅನೇಕ ಬದಲಾವಣೆಗಳನ್ನು ಅನುಭವಿಸುತ್ತಿದ್ದಾರೆ. ಅವರ ಸಾಂಪ್ರದಾಯಿಕ, ಸಾಂಸ್ಕೃತಿಕಸಂಸ್ಥೆಗಳು ಗಣನೀಯವಾಗಿ ರೂಪಾಂತರಗೊಂಡಿವೆ. ಇಷ್ಟಾದರೂ ಲಂಬಾಣಿ ಜನರು ತಮ್ಮ ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಅಭ್ಯಸಿಸುವುದು ಕೂಡ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಲಂಬಾಣಿಗರನ್ನು ಅಧ್ಯಯನ ವಿಷಯವನ್ನಾಗಿ ಆಯ್ಕೆ ಮಾಡಲು ಪ್ರೇರೇಪಿಸಿದ ಹಿನ್ನೆಲೆಯನ್ನು ಇಲ್ಲಿ ನೀಡಲಾಗಿದೆ ಮತ್ತು ಅಧ್ಯಯನದ ನಿರ್ದಿಷ್ಟ ಉದ್ದೇಶಗಳನ್ನು ನಿರೂಪಿಸಲಾಗಿದೆ.

ಪ್ರಸಕ್ತ ಅಧ್ಯಯನದ ನಿರ್ದಿಷ್ಟ ಉದ್ದೇಶಗಳನ್ನು ಈ ಕೆಳಗಿನಂತೆ ಸೂಚಿಸಲಾಗಿದೆ;

೧. ಲಂಬಾಣಿಗರ ಅಥವಾ ಲಂಬಾಣಿ ಸಮುದಾಯದವರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸಂಸ್ಥೆಗಳ ನಡುವಿನ ಸಂಬಂಧವನ್ನು ಗುರುತಿಸುವುದು.

೨. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯಿಂದ ಲಂಬಾಣಿಗರ ಅಥವಾ ಲಂಬಾಣಿ ಸಮುದಾಯದವರ ಸಾಂಪ್ರದಾಯಿಕ, ಸಾಮಾಜಿಕ ಸಂಸ್ಥೆಗಳಲ್ಲಿ ಮತ್ತು ವ್ಯವಸ್ಥೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಅಭ್ಯಸಿಸುವುದು.

೩. ಲಂಬಾಣಿಗರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಸುಧಾರಿಸಲು ಸರಕಾರದ ಕಾರ್ಯಕ್ರಮಗಳನ್ನು ಪರಿಶೀಲಿಸುವುದು.

೪. ಆರ್ಥಿಕ ಸಂಬಂಧದಿಂದ ಸಾಮಾಜಿಕ ಸಂಘಟನೆ, ಸಾಮಾಜಿಕ ನಿಯಂತ್ರಣ ಮತ್ತು ಧರ್ಮ-ಇವುಗಳಲ್ಲಿ ಉಂಟಾಗಿರುವ ಬದಲಾವಣೆಯನ್ನು ಅಧ್ಯಯನ ಮಾಡುವುದು.

೫. ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳನ್ನು ಅಧ್ಯಯನ ಮಾಡುವುದು.

೬. ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಬದಲಾವಣೆಯಿಂದ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಎದುರಾಗುವ ಸಮಸ್ಯೆಗಳನ್ನು ಗುರುತಿಸುವುದು.

೭. ಲಂಬಾಣಿಗರು ತಮ್ಮ ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಅಧ್ಯಯನ ಮಾಡುವುದು.

೮. ಲಂಬಾಣಿ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಜೀವನ ಕ್ರಮಗಳನ್ನು ಅಧ್ಯಯ ಮಾಡುವುದು.

೯. ಲಂಬಾಣಿ ಜನಾಂಗದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಅರಿಯಲು ಮೂಲ ಮಾಹಿತಿಗಳನ್ನು ಸಂಗ್ರಹಿಸುವುದು.

೧೦. ಸಮಕಾಲೀನ ಸಮಸ್ಯೆ, ಸವಾಲುಗಳು ಮತ್ತು ಸರ್ಕಾರದ ಮೀಸಲಾತಿಯನ್ನು ಹಾಗೂ ಸರಕಾರದ ಪ್ರಮುಖ ಪಾತ್ರಗಳನ್ನು ತಿಳಿಯುವುದು.

## ೧.೨. ಅಧ್ಯಯನದ ವ್ಯಾಪ್ತಿ

ಲಂಬಾಣಿ ಸಮುದಾಯವನ್ನು ಕುರಿತ ಈ ಅಧ್ಯಯನವನ್ನು ಭೌಗೋಳಿಕ ವ್ಯಾಪ್ತಿಯಲ್ಲಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಕಂಡುಬರುವ ಲಂಬಾಣಿಗರಿಗೆ ಸೀಮಿತಗೊಳಿಸಲಾಗಿದೆ. ಅಗತ್ಯಕ್ಕನುಗುಣವಾಗಿ ಬಳ್ಳಾರಿ ಜಿಲ್ಲೆಯಾಚೆಯ ಗಡಿಭಾಗಗಳಲ್ಲಿ ನೆಲೆಯೂರಿರುವ ಲಂಬಾಣಿಗರ ಸಮುದಾಯದ ಕೆಲವು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಅಂಶಗಳನ್ನು ಗ್ರಹಿಸಲಾಗಿದೆ. ಲಂಬಾಣಿಗಳ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಕರ್ನಾಟಕದ ಲಂಬಾಣಿಗರಿಗೂ, ನೆರೆಯ ಆಂಧ್ರದ ತೆಲುಗು ಲಂಬಾಣಿಗರಿಗೂ, ಮಹಾರಾಷ್ಟ್ರದ ಲಂಬಾಣಿಗರೊಂದಿಗೆ ಆಚರಣೆಯಲ್ಲಿ ಕೆಲವು ಭಿನ್ನತೆಗಳಿರುವುದು ಸಹಜವೆನಿಸಿದರೂ, ಕರ್ನಾಟಕದ ಲಂಬಾಣಿಗರು

ತೆಲುಗು ಹಾಗೂ ಮಹಾರಾಷ್ಟ್ರದ ಲಂಬಾಣಿಗರೊಂದಿಗೂ, ವೈವಾಹಿಕ ಸಂಬಂಧವನ್ನು ಹೊಂದುತ್ತಿರುವುದು ವ್ಯಾಪಕವಾಗುತ್ತಿದೆ ಅಥವಾ ಕೆಲವು ಬಂಧನಗಳನ್ನು ಏರ್ಪಡಿಸಿಕೊಂಡಿರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯು ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಹಾಗೂ ಹೂವಿನ ಹಡಗಲಿ ತಾಲೂಕುಗಳಲ್ಲಿರುವ ಲಂಬಾಣಿ ಸಮುದಾಯದವರ ಅಭಿಪ್ರಾಯದಂತೆ, ಅವರ ನಂಬಿಕೆಯಂತೆ, ಕುಲಾಚಾರದನ್ವಯ ಕುಲ, ಬಳ್ಳಿ, ಪೆಡಗಿನ ಆಧಾರದ ಮೇಲೆ ವಿವಾಹಗಳು ಏರ್ಪಡುತ್ತವೆ. ಅವರವರ ಪ್ರಾದೇಶಿಕ ಆಚರಣೆಗಳಲ್ಲಿ ವ್ಯತ್ಯಾಸವಿರುವುದಾದರೂ ವೃತ್ತಿ ಕುಲಕಸುಬು, ಜೀವನಕ್ರಮ, ಆಚಾರ-ವಿಚಾರ, ಕುಲದೇವರು, ಸೇವಾಭಾಯಾ, ಮೀಟುಭುಕ್ಯ, ಮರಿಯಮ್ಮ, ಸಾತಿಯಾಡಿ(ಏಳು ಮಕ್ಕಳ ತಾಯಿ), ದಂಡ-ಪುರಾಣಗಳು, ಐತಿಹ್ಯಗಳು, ಪವಾಡಗಳು, ಸಾಂಸ್ಕೃತಿಕ ವೀರರು, ಎಲ್ಲವೂ ಒಂದೇಯಾಗಿ ಕಂಡುಬರುವುದರಿಂದ ಎಲ್ಲಾ ತಾಲೂಕುಗಳ ಲಂಬಾಣಿಗರ ನಡುವೆ ಸಾಮ್ಯತೆ ಇದೆ ಎನ್ನುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರು ಹೂವಿನ ಹಡಗಲಿ, ಹಗರಿಬೊಮ್ಮನ ಹಳ್ಳಿ, ಕೂಡ್ಲಿಗಿ, ಸಂಡೂರು, ಹೊಸಪೇಟೆ, ಸಿರಗುಪ್ಪ ಮತ್ತು ಬಳ್ಳಾರಿ ಹೀಗೆ ಬಳ್ಳಾರಿ ಜಿಲ್ಲೆಯಾದ್ಯಂತ ಲಂಬಾಣಿ ಸಮುದಾಯಗಳ ನೆಲೆಗಳಿವೆ ಎಂಬುದು ನನ್ನ ಅಧ್ಯಯನದಿಂದ ತಿಳಿದುಬರುತ್ತದೆ. ಸಿರುಗುಪ್ಪ ಮತ್ತು ಬಳ್ಳಾರಿಗಳಲ್ಲಿ ಲಂಬಾಣಿ ಸಮುದಾಯದವರ ಸಂಖ್ಯೆ ಅತ್ಯಂತ ಕಡಿಮೆಯಾಗಿದೆ ಎಂಬುದು ಈ ಸಂಶೋಧನಾ ಅಧ್ಯಯನದ ಸಂದರ್ಭದಲ್ಲಿ ತಿಳಿದುಬಂದಿದೆ.

ಲಂಬಾಣಿಗರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ರಾಜಕೀಯ, ಜನಸಂಖ್ಯೆ, ಲಂಬಾಣಿಗರ ವೃತ್ತಿ, ಕಸುಬು, ಇದಕ್ಕೆ ಸಂಬಂಧಿಸಿದ ಸವಾಲುಗಳು ಮತ್ತು ಸೌಲಭ್ಯಗಳನ್ನು ಕುರಿತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಗೆ ಮಾತ್ರ ಸೀಮಿತಗೊಳಿಸಲಾಗಿದೆ. ಇತ್ತೀಚಿನವರೆಗೆ ವ್ಯಾಪಕ ಅಲೆಮಾರಿಗಳಾಗಿದ್ದ ಲಂಬಾಣಿಗರಲ್ಲಿ ಇಂದು ಸ್ವಲ್ಪಮಟ್ಟಿಗೆ ಅಲೆಮಾರಿತನ ಕಾಣಬಹುದು. ಇದಕ್ಕೆ ಕಾರಣ ಲಂಬಾಣಿ ಸಮುದಾಯ ದವರು ನೈಸರ್ಗಿಕವಾಗಿ ಮಳೆಯನ್ನೇ ನಂಬಿರುವುದರಿಂದ. ಆದರೆ ಸರಿಯಾದ ಸಮಯಕ್ಕೆ ಮಳೆಯೂ ಬರದೇ ಇರುವುದು. ಈ ಕಾರಣದಿಂದ ಲಂಬಾಣಿಗರು ಬರಗಾಲದ ಛಾಯೆಯಲ್ಲಿರುವುದು ನನ್ನ ಅಧ್ಯಯನ ಸಮೀಕ್ಷೆಯಿಂದ ಕಂಡುಬರುತ್ತದೆ. ತಮ್ಮ ಜೀವನಕ್ಕಾಗಿ ಬ್ಯಾಂಕುಗಳಲ್ಲಿ ಸಾಲ ಮಾಡುವುದರಿಂದ ಅದನ್ನು ತೀರಿಸುವುದು ಹೇಗೆ ಎಂಬುದನ್ನು ಚಿಂತಿಸುತ್ತಾ ಇತ್ತೀಚಿನ ದಿನಗಳಲ್ಲಿ ಲಂಬಾಣಿಗರು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಕೂಲಿಗಾಗಿ ವಲಸೆ ಹೋಗುತ್ತಿರುವುದನ್ನು ನನ್ನ ಕ್ಷೇತ್ರಕಾರ್ಯದಿಂದ ತಿಳಿದುಕೊಂಡಿರು ತ್ತೇನೆ. ಹಳ್ಳಿ ಅಂಚಿನಲ್ಲಿರುವ ಲಂಬಾಣಿ ಜನಾಂಗದವರ ನೆಲೆಗಳು ಗುಡ್ಡದ ಪಕ್ಕದಲ್ಲಿ ಅಥವಾ ಗುಡ್ಡಗಳ ಇಳಿಜಾರುಗಳಲ್ಲಿ ತಮ್ಮ ತಾಂಡಾಗಳನ್ನು ಕಟ್ಟಿಕೊಂಡು ನೆಲೆಸಿದ್ದಾರೆ. ಅವರ ಕುಲಕಸುಬು, ವೃತ್ತಿ ಆಧಾರಿತ ಕೃಷಿ, ಕೂಲಿ, ಕಸೂತಿ ಕಲೆ, ಬಡತನ, ಸುಣ್ಣಸುಡುವುದು, ಸೌದೆ ಮಾರುವುದು, ಸಣ್ಣ ವ್ಯಾಪಾರ ಇನ್ನು ಮುಂತಾದ ವೃತ್ತಿಗಳಲ್ಲಿ ಲಂಬಾಣಿಗರು ಜೀವನ ಮಾಡುತ್ತಿದ್ದಾರೆ. ಆದರೂ ಸಹ ಅವರಿಗೆ ತಾತ್ಕಾಲಿಕವಾಗಿ ವಲಸೆ ಹೋಗುವ ಪರಿಪಾಠವಿದೆ.

ಕೆಲವು ಕುಟುಂಬಗಳು ಬಳ್ಳಾರಿ ಜಿಲ್ಲೆಯ ಕೆಲವು ತಾಂಡಾಗಳಿಂದ ಗೋವಾ, ಮುಂಬಯಿ, ಮೈಸೂರು, ಮಂಡ್ಯ, ಬೆಂಗಳೂರು ಇನ್ನು ಮುಂತಾದ ಸ್ಥಳಗಳಿಗೆ ಹೋಗಿ ಲಂಬಾಣಿಗರು ತಯಾರಿಸುವ ಉಡುಪುಗಳನ್ನು ಮಾರಾಟ ಮಾಡುತ್ತಾರೆ. ಇವತ್ತಿಗೂ ಹಂಪೆಯಲ್ಲಿ ಇವರ ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ಮಾರಾಟ ಮಾಡುವ ರೂಢಿಯಿದೆ ಎಂಬುದನ್ನು ಈ ಸಂಶೋಧನೆಯ ಮೂಲಕ ಕಂಡುಕೊಳ್ಳಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿಗರು ತಮ್ಮ ಭಾಷೆಯನ್ನಷ್ಟೇ ಅಲ್ಲದೆ ಇತರೆ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಹಿಂದಿ ಹಾಗೂ ಇತರೆ ಭಾಷೆಗಳನ್ನು ವ್ಯವಹಾರಿಕವಾಗಿ ಮಾತನಾಡುವುದು ರೂಢಿಯಲ್ಲಿದೆ. ಇವರ ನಡುವೆ ಅನೇಕ ಸಾಮ್ಯತೆ ಹಾಗೂ ಭಿನ್ನತೆಗಳನ್ನು ಕಾಣಬಹುದಾಗಿದೆ. ಅನ್ಯರಾಜ್ಯದವರ ಜೊತೆಯಲ್ಲಿ, ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಲಂಬಾಣಿ ಜನಾಂಗದವರ ಜೊತೆಯಲ್ಲಿ ವೈವಾಹಿಕ ಸಂಬಂಧವನ್ನು ಹೊಸದಾಗಿ ಹೊಂದುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ವಾಸವಿರುವ ಲಂಬಾಣಿ ನೆಲೆಗಳನ್ನು ಸಮಗ್ರವಾಗಿ ಅಭ್ಯಸಿಸಲಾಗಿ, ಇಡೀ ಬಳ್ಳಾರಿ ಜಿಲ್ಲೆಯ ಲಂಬಾಣಿ ಜನಾಂಗದವರು ಅಧ್ಯಯನಕ್ಕೆ ಅತ್ಯುತ್ತಮ ಮಾದರಿಯೆಂದು ಹಾಗೂ ಲಂಬಾಣಿಗರ ಸೂಕ್ಷ್ಮಾಧ್ಯಯನ(Microstudy) ಸಾಧ್ಯವೆಂದು ಅಭಿಪ್ರಾಯಿಸಿ ಮಾಹಿತಿ ಸಂಗ್ರಹಣೆ ಮಾಡಲಾಗಿದೆ. ಹೆಚ್ಚಿನ ಮಾಹಿತಿ ಸಂಗ್ರಹಣೆಗಾಗಿ ಅಧ್ಯಯನ ವ್ಯಾಪ್ತಿಯ ಭೌಗೋಳಿಕ ಗಡಿದಾಟಿರುವುದು ಇಲ್ಲಿ ಅನಿವಾರ್ಯವಾಗಿದೆ. ಇದರಿಂದ ಅಗತ್ಯವಿದ್ದಲ್ಲಿ ತೌಲನಿಕ ವಿಶ್ಲೇಷಣೆ ಮಾಡಲು ಸಹಕಾರಿಯಾಗಿದೆ.

## ೧.೩. ಅಧ್ಯಯನದ ವಿಧಾನ

ಕರ್ನಾಟಕದ ಲಂಬಾಣಿ ಬುಡಕಟ್ಟಿನ ಅಧ್ಯಯನವನ್ನು ಸಮಾಜಶಾಸ್ತ್ರೀಯ, ಮಾನವಶಾಸ್ತ್ರೀಯ ಮತ್ತು ಅನ್ಯಶಿಸ್ತಿನ ಕ್ರಮಗಳ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಇದು ಲಂಬಾಣಿಗರ ಸಮಗ್ರ ಅಧ್ಯಯನವೆಂದರೂ ತಪ್ಪಾಗಲಾರದು. ಕಾರಣ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಈ ಎಲ್ಲಾ ಅಂಶಗಳು ಒಂದು ಜನಾಂಗದ, ದೇಶದ ಅಮೂಲಾಗ್ರ ಅಂಶಗಳನ್ನು ಒಳಗೊಳ್ಳುತ್ತವೆ. ಹಾಗಾಗಿ ಜನಸಂಖ್ಯೆಯ ದೃಷ್ಟಿಯಿಂದ ಆಯ್ಕೆಗೊಂಡು ಸಂಶೋಧವಾ ವ್ಯಾಪ್ತಿ ಸೀಮಿತವೆನಿಸಬಹುದಾದರೂ, ಸಂಶೋಧನೆಯ ಒಳಹುಗಳಲ್ಲಿ ಸಮಗ್ರ, ಪರಿಮಾಣಾತ್ಮಕ ಅಂಶಗಳು ಒಳಗೊಳ್ಳುತ್ತಿವೆ. ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ತಾಂಡಾಗಳ ಸಮುದಾಯದ ಆಚರಣೆಗಳನ್ನು ಗಮನದಲ್ಲಿಟ್ಟುಕೊಂಡು ವಾರ್ಷಿಕ ಆವರ್ತನೆಗಳಾದ ಜನನದಿಂದ ಸಾವಿನ ಸಂಸ್ಕಾರದವರೆಗಿನ ಎಲ್ಲಾ ಆಚಾರ ಪದ್ಧತಿಗಳನ್ನು ನೇರವಾಗಿ ಆಕರಗಳನ್ನಾಗಿ ಬಳಸಿಕೊಂಡು ಛಾಯಾಚಿತ್ರಗಳ ಸಮೇತ ವಿಪುಲವಾಗಿ ಮಾಹಿತಿಗಳನ್ನು ಸಂಗ್ರಹಿಸಿ, ದಾಖಲಿಸಿದೆ. ಕೌಟುಂಬಿಕ ಮಾಹಿತಿಗಳನ್ನು ಕುಟುಂಬದ ಯಜಮಾನನಿಂದ ಪಡೆದು ದಾಖಲಿಸಿದರೆ, ಸಂಶೋಧನೆಗೆ ಪೂರಕವಾದ ಪರಿಮಾಣಾತ್ಮಕ ಮಾಹಿತಿಗಳನ್ನು ಅನುಭವಿ ಲಂಬಾಣಿ ವಕ್ತೃಗಳಿಂದ ಸಂದರ್ಶನ ಅನುಸೂಚಿ ಮೂಲಕ ಪಡೆದು ದಾಖಲಿಸಿಕೊಳ್ಳಲಾಗಿದೆ. ಲಂಬಾಣಿಗರ ಆಚಾರ-ವಿಚಾರ, ಸಂಪ್ರದಾಯ-ಪರಂಪರೆ, ಋತುಮತಿ ಶಾಸ್ತ್ರ, ವಿವಾಹ-ಜನನ, ಸೀಮಂತೋತ್ಸವ, ನಾಮಕರಣ-ತೊಟ್ಟಿಲುಶಾಸ್ತ್ರ, ನಂಬಿಕೆ-ನಿಷೇಧ, ಕುಲಾಚಾರಗಳು, ಆಚರಣೆಗಳು, ಪದ್ಧತಿಗಳು, ಶಾಸ್ತ್ರಗಳು ಇತ್ಯಾದಿ ಅನೇಕ ಅಂಶಗಳನ್ನು ಪ್ರತ್ಯೇಕವಾಗಿ

ಕಾಯ್ದುಕೊಂಡು ಬಂದಿರುವ ಲಂಬಾಣಿ ಸಂಸ್ಕೃತಿ-ಸಂಸ್ಕಾರಗಳನ್ನು ನೇರವಾಗಿ ಗಮನಿಸಿ ದಾಖಲಿಸಲಾಗಿದೆ. ಅನೇಕ ಸಂದರ್ಭದ ಆಚರಣೆಗಳ ಸಂಪ್ರದಾಯದ ಹಾಡುಗಳನ್ನು ನಂಬಿಕೆ, ನಿಷೇಧ ಮತ್ತು ಚಿಕಿತ್ಸೆಗಳನ್ನು ಅನುಭವಿಗಳಿಂದ ಕೇಳಿ ಧ್ವನಿಸುರಳಿಗಳಲ್ಲಿ ದಾಖಲಿಸಲಾಗಿದೆ. ೭ನೇ ಶತಮಾನದ ಕಾಯಕಯೋಗಿ ಸೇವಾಲಾಲರ ತತ್ವಾದರ್ಶಗಳಿಗೆ ಮಾರುಹೋಗಿ, ಬದುಕಿನ ಶುದ್ಧ ಸಂಸ್ಕಾರಗಳಿಗೆ ಒಳಗಾದ ಲಂಬಾಣಿ ಸಮುದಾಯದ ಮಹಾ ಪುರುಷನಾದ ಶ್ರೀ ಸೇವಾಲಾಲ ಮಹಾರಾಜರ ಕಥನದ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಕ್ಷೇತ್ರಗಳಲ್ಲಿನ ಜೀವನ ಕ್ರಮಗಳನ್ನು ಸಮಗ್ರವಾಗಿ ಪಡೆಯಲಾಗಿದೆ. ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಆದ ಬದಲಾವಣೆಗಳಷ್ಟು ಪ್ರಮಾಣದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಬದಲಾವಣೆಗಳು ಗಮನಾರ್ಹ ವಾಗಿಲ್ಲದಿರುವ ಬಗ್ಗೆ ಗಮನಹರಿಸಲಾಗಿದೆ. ಈ ಕುರಿತಂತೆ ಸಂದರ್ಶನ ಅನುಸೂಚಿಯನ್ನು ಬಳಸಿ ಮಾಹಿತಿ ಗಳನ್ನು ಕ್ರಮಬದ್ಧಗೊಳಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಗುಡಿಕೈಗಾರಿಕೆಗಳಲ್ಲಿ ಪ್ರಮುಖವಾಗಿರುವ ಲಂಬಾಣಿಗಳ ಕುಲಕಸುಬುಗಳ ಸ್ಥಿತಿ-ಗತಿಗಳನ್ನು ಅವಲೋಕಿಸಲಾಗಿದೆ. ಇಡೀ ಪ್ರಪಂಚ 'ಜಾಗೃತಿಕ ಗ್ರಾಮ' ಎಂಬ ಉಕ್ತಿ ಇಂದು ಎಲ್ಲೆಡೆ ಉರಿಯುತ್ತಿರುವಾಗ, ಜಾಗತೀಕರಣದ ಪ್ರಭಾವ ಇಂತಹ ಲಂಬಾಣಿ ಬುಡಕಟ್ಟು ಸಂಸ್ಕೃತಿಯನ್ನು ಹಿಡಿದಿಡುವ ಸಾಂಪ್ರದಾಯಿಕ ವೃತ್ತಿಗಳ ಮೇಲೆ ಹೇಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಪ್ರಭಾವಿಸಿದೆ ಎಂಬುದನ್ನು ಚರ್ಚಿಸಿ ಮಾಹಿತಿಗಳನ್ನು ದಾಖಲಿಸಲಾಗಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ಲಂಬಾಣಿ ಸಮುದಾಯದ ಪ್ರತಿ ಕುಟುಂಬದ ಸಂಪೂರ್ಣ ಮಾಹಿತಿಯನ್ನು ಸಂಗ್ರಹಿಸಿ ಕ್ಷೇತ್ರಕಾರ್ಯ ಮಾಹಿತಿ ಪಟ್ಟಿಯಲ್ಲಿ ದಾಖಲಿಸಿ, ಕೋಷ್ಟಕಗಳ ಮೂಲಕ ಪ್ರಸ್ತುತಪಡಿಸಲಾಗಿದೆ. ಕೋಷ್ಟಕದ ಮಾಹಿತಿಗಳನ್ನು ಅವಶ್ಯವೆನಿಸಿದ ಕಡೆಗಳಲ್ಲಿ ಉಲ್ಲೇಖಿಸಲಾಗಿದೆ. ನನ್ನ ಅಧ್ಯಯನದ ಕ್ಷೇತ್ರಕಾರ್ಯ ದಲ್ಲಿ ಕಂಡುಕೊಂಡ ಪ್ರತ್ಯಕ್ಷ ಅನುಭವಗಳನ್ನು ಇಲ್ಲಿ ಮಂಡಿಸಿದ್ದೇನೆ. ಸಾಧ್ಯವಾದ ಕಡೆ ವಕ್ತೃಗಳು ಹೆಸರು ಗಳನ್ನು ನಮೂದಿಸಿದ್ದೇನೆ. ಮಾಹಿತಿ ಸಂಗ್ರಹಣೆಗೆ ಪ್ರಾಥಮಿಕ ಮಾಹಿತಿ ಸಂಗ್ರಹಣೆಯ ವಿಧಾನವನ್ನು ಬಳಸಿರುವೆನು. ಈ ಕಾರಣದಿಂದ ಮಹಾಪ್ರಬಂಧದಲ್ಲಿ ಅಡಿಟಿಪ್ಪಣಿಗಳು ವಿರಳವಾಗಿವೆ. ಬಳ್ಳಾರಿ ಜಿಲ್ಲೆಯ ಸಮಗ್ರ ಲಂಬಾಣಿ ಸಮುದಾಯದ ಅಂಕಿ-ಅಂಶಗಳು ನನ್ನ ಅಧ್ಯಯನದಿಂದ ದೊರೆಯುತ್ತವೆ. ಅಗತ್ಯಕ್ಕನುಸಾರ ಕೋಷ್ಟಕಗಳನ್ನು ರಚಿಸಿ, ಸವಿವರಗಳನ್ನು ಬಳಸಿಕೊಂಡು ಪ್ರೌಢಪ್ರಬಂಧದ ಗುಣಾತ್ಮಕತೆ ಹೆಚ್ಚಿಸಲು ಪ್ರಯತ್ನಿಸಿದ್ದೇನೆ. ಕಾಡಿನ ಉತ್ಪನ್ನವಾದ ಕವಳೆಹಣ್ಣು ಕಾರೆಹಕಣ್ಣು, ಅಂಟು(ಗೋಂದು), ಶೇಂಗ ಮಾರುವಲ್ಲಿ, ಕೂಲಿ, ಕೃಷಿ, ಸುಣ್ಣ ಸುಡುವುದು, ಗಾರೆ ಕೆಲಸ ಆಶ್ರಯಿಸಿ ಬದುಕುವ ಲಂಬಾಣಿಗರ ಸಮಸ್ಯೆಗಳು. ಹಲವಾರು. ಗುಡ್ಡ ಬೆಟ್ಟ ಪ್ರದೇಶದಲ್ಲಿ ಹಚ್ಚ ಹಸಿರಿನ ನಿತ್ಯ ಹರಿದ್ವರ್ಣ ಕಾಡನ್ನು ನೆನಪಿಸುವ ಕಾಡಿನ ನಡುವೆ ಬದುಕನ್ನು ಕಟ್ಟಿಕೊಂಡಿರುವ ಲಂಬಾಣಿ ಜನಾಂಗದ ಜೀವನದ ಪ್ರತ್ಯಕ್ಷ ಚಿತ್ರಣವನ್ನು ನನಗೆ ಲಭ್ಯ ಮಾಹಿತಿಗಳ ಆಧಾರದಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ. ಲಂಬಾಣಿಗರು ಸಾಮಾನ್ಯವಾಗಿ ಗುಂಪಾಗಿ ಬದುಕುವ ಸಮುದಾಯವಾಗಿದ್ದು, ಕೆಲವು ತಾಂಡಾಗಳು ಊರ ಕೇರಿ, ಬೀದಿ, ಓಣಿ, ಹಟ್ಟಿಗಳಲ್ಲಿ ವಾಸಿಸುವ ಪ್ರವೃತ್ತಿ ಹೊಂದಿದ್ದಾರೆ. ಇವರ ವೃತ್ತಿ-ಪ್ರವೃತ್ತಿಗಳಲ್ಲಿ ಏಕಸಾಮ್ಯತೆ, ಕಾಣಬಹುದು. ಬಳ್ಳಾರಿ ಜಿಲ್ಲೆಯಲ್ಲಿರುವ ತಾಂಡಾ

ಗಳಲ್ಲಿ ವಾಸಿಸುವ ಲಂಬಾಣಿಗಳರಲ್ಲೂ ಇಂತಹ ಏಕತಾನತೆಯನ್ನು ಕಾಣಬಹುದು. ಸಮತಟ್ಟಾದ ಪ್ರದೇಶ ಕ್ಕಿಂತಲೂ ಗುಡ್ಡ-ಗಾಡು ಪ್ರದೇಶಗಳಲ್ಲಿಯೇ ಇವರು ಹೆಚ್ಚಾಗಿ ನೆಲೆಗಳು ಕಂಡುಬಂದು, ಪ್ರಶ್ನಾವಳಿಗಳು ಪ್ರಯೋಜನಕ್ಕೆ ಬಾರದ್ದರಿಂದ, ಸಂದರ್ಶನ ಅನುಸೂಚಿ, ಸಹಭಾಗಿತ್ವ, ಅವಲೋಕನ ವಿಧಾನ, ಚಾರಿತ್ರಿಕ ವಿಧಾನ, ಸಂಖ್ಯಾಶಾಸ್ತ್ರೀಯ ವಿಧಾನ, ತುಲನಾತ್ಮಕ ವಿಧಾನಗಳ ಮೂಲಕ ಸಮಗ್ರ ಮಾಹಿತಿಗಳನ್ನು ದಾಖಲಿ ಸುವ ಪ್ರಯತ್ನ ಮಾಡಲಾಯಿತು. ನಾನು ಅದೇ ಸಮುದಾಯಕ್ಕೆ ಸಂಬಂಧಿಸಿರುವುದರಿಂದ ವಕ್ತೃಗಳು ಮುಗ್ಧತೆ ಯಿಂದ ಮಾಹಿತಿಗಳನ್ನು ಎಳೆ ಎಳೆಯಾಗಿ ಬಿಡಿಸುತ್ತಿದ್ದರು. ತಮ್ಮ ಬದುಕಿನ ಚಿತ್ರಣವನ್ನು ಅನಾವರಣ ಗೊಳಿಸುತ್ತಿದ್ದರು.

ಯಾವ ರಾಗ ದ್ವೇಷ, ಪೂರ್ವಾಗ್ರಹ ಪೀಡನೆಗಳಿಗೆ ಒಳಗಾಗದೆ, ಜನ್ಮ ವೃತ್ತಾಂತಗಳನ್ನು ಮುಕ್ತವಾಗಿ ಹೇಳುತ್ತಿದ್ದರು. ದಾಖಲು ಪರಿಕರಗಳೊಂದಿಗೆ ಸಹಕರಿಸುತ್ತಿದ್ದ ಲಂಬಾಣಿಗರ ಬದುಕು ತೆರೆದ ಸತ್ಯವಾಗಿತ್ತು. ಇದು ಮಾಹಿತಿಗಳ ಸಂಗ್ರಹಣೆಗೆ ಮುಕ್ತ ವಾತಾವರಣವಾಗಿದ್ದು, ಗೌಪ್ಯ ಮಾಹಿತಿಗಳಾವುವು ಇಲ್ಲವೆಂದೇ ಭಾವಿಸಬಹುದಾಗಿದೆ. ಲಂಬಾಣಿಗರು ಇಂದಿಗೂ ತಮ್ಮ ಬೇಡಿಕೆಗಳನ್ನು ಹಕ್ಕೊತ್ತಾಯದ ಮೂಲಕ ಪ್ರತಿಭಟಿಸಿ ಕೇಳುವ ಪ್ರವೃತ್ತಿಯವರಾಗಿಲ್ಲ. ಈ ಉದ್ದೇಶಕ್ಕಾಗಿ ಸಂಘಟಿಸಿ ಹೋರಾಡುವ ಛಾತಿ ಇಲ್ಲವೆಂದೇ ಹೇಳಬಹುದು. ಸಂಘಟನಾತ್ಮಕ ಶಕ್ತಿಯ ಕೊರತೆ ಎದ್ದು ಕಾಣುತ್ತಿದ್ದುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿತ್ತು.

## ಸಂಶೋಧನಾ ತಂತ್ರಗಳು

**೧. ವಿವರಣಾತ್ಮಕ ಸಂಶೋಧನೆ :** ಬಳ್ಳಾರಿ ಜಿಲ್ಲೆ ವ್ಯಾಪ್ತಿಯಲ್ಲಿ ಬರುವ ಲಂಬಾಣಿಗರು ಕನ್ನಡ, ತೆಲುಗು, ತಮಿಳು ಹಾಗೂ ಮಲಯಾಳಂ ಭಾಷಿಕ ಲಂಬಾಣಿಗರನ್ನು ಅಮೂಲಾಗ್ರವಾಗಿ ಅಧ್ಯಯನ ಮಾಡುವ ಉದ್ದೇಶದಿಂದ ವಿವರಣಾತ್ಮಕ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಒಂದು ಪ್ರದೇಶ ಅಥವಾ ಒಂದು ಸನ್ನಿವೇಶದಲ್ಲಿ ಕಂಡುಬರುವ ನೈಜ ಪರಿಸ್ಥಿತಿಯ ವಾಸ್ತವ ಚಿತ್ರಣವನ್ನು ಅರಿಯುವ ಉದ್ದೇಶದಿಂದ ಈ ಕ್ರಮವನ್ನು ಅಳವಡಿಸಿಕೊಳ್ಳಲಾಗಿದೆ.

**೨. ಮನೆ-ಮನೆ ಸಮೀಕ್ಷೆ :** ನಾನು ಅದೇ ಸಮುದಾಯಕ್ಕೆ ಸೇರುವುದರಿಂದ ಲಂಬಾಣಿ ಸಮುದಾಯದ ನಿಖರ ಹಾಗೂ ನಿಷ್ಪಕ್ಷವಾದ ವಾಸ್ತವಾಂಶಗಳನ್ನು ಸಮಾಜಶಾಸ್ತ್ರೀಯ, ಮಾನವಶಾಸ್ತ್ರೀಯ ಹಿನ್ನೆಲೆಯಲ್ಲಿ ತಿಳಿಯಲು ಸೂಕ್ತ ಮಾಹಿತಿ ಸಂಗ್ರಹಿಸುವ ಉದ್ದೇಶದಿಂದ ಪ್ರಶ್ನಾವಳಿಯನ್ನು ರಚಿಸಿ, ಕುಟುಂಬದ ಗಾತ್ರ, ವೈವಾಹಿಕ ಅಂತಸ್ತು, ಲಿಂಗ, ವಯಸ್ಸು, ಶಿಕ್ಷಣ, ಭಾಷೆ, ಧರ್ಮ ಇತ್ಯಾದಿ ಅನೇಕ ಅಂಶಗಳಿಂದ ಸಂಬಂಧಿಸಿದ ಮಾಹಿತಿಗಳನ್ನು ಪಡೆಯಲಾಗಿದೆ. ಬಳ್ಳಾರಿ ಜಿಲ್ಲೆಯ ಎಲ್ಲಾ ಕುಟುಂಬಗಳೆಲ್ಲವನ್ನು ಸಮೀಕ್ಷಿಸಲಾಯಿತು.

**೩. ಸಂಗತಿ ಅಧ್ಯಯನ ವಿಧಾನ :** ಸಂಬಂಧಿಸಿದಂತೆ ಕೆಲವು ಆಯ್ದುಕೊಂಡ ಅಥವಾ ಆಯ್ಕೆ ಮಾಡಿಕೊಂಡಿರುವ ಲಂಬಾಣಿ ಸಮುದಾಯದ ಕುಟುಂಬಗಳನ್ನು ಬಳ್ಳಾರಿ ಜಿಲ್ಲೆಯಾದ್ಯಂತ ಹರಡಿರುವ ಲಂಬಾಣಿಗರನ್ನು

ಅಭ್ಯಸಿಸುವ ದೃಷ್ಟಿಯಿಂದ ವಿವಿಧ ತಾಂಡಗಳಲ್ಲಿ ವಾಸಿಸುತ್ತಿರುವ ಹಲವಾರು ವಕ್ತೃಗಳನ್ನು ಆಯ್ಕೆ ಮಾಡಿಕೊಂಡು, ವಿವರಣಾತ್ಮಕ ಮಾಹಿತಿಗಳನ್ನು ಪಡೆಯುವ ಉದ್ದೇಶದಿಂದ ಪ್ರತ್ಯೇಕ ವಿಸ್ತೃತ ಪ್ರಶ್ನಾವಳಿ ಅನುಸೂಚಿಯನ್ನು ತಯಾರಿಸಿಕೊಂಡು ಮಾಹಿತಿ ಪಡೆದುಕೊಳ್ಳಲಾಯಿತು. ಪ್ರಸ್ತುತ ಅಧ್ಯಯನದಲ್ಲಿ ಈ ಮಾಹಿತಿಗಳನ್ನು ವಿಫುಲವಾಗಿ ಬಳಸಿಕೊಳ್ಳಲಾಗಿದೆ.

**೪. ಸಂದರ್ಶನ :** ಬಳ್ಳಾರಿ ಜಿಲ್ಲೆಯಾದ್ಯಂತ ವಾಸಿಸುತ್ತಿರುವ ಲಂಬಾಣಿ ಬುಡಕಟ್ಟಿನ ವಕ್ತೃಗಳನ್ನು ಸಂದರ್ಶಿಸುವ ಸಲುವಾಗಿ ಸಂದರ್ಶನ ಕೈಪಿಡಿಯ ಸಹಾಯದಿಂದ ತಯಾರಿಸಿಕೊಂಡ ಸಂದರ್ಶನದ ಸೂಚಿಯನ್ನು ಬಳಸಿಕೊಳ್ಳಲಾಯಿತು. ಮುಖಾಮುಖಿ ನೇರ ಸಂದರ್ಶನದಲ್ಲಿ ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದ ಹಲವಾರು ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳುವುದರ ಜೊತೆಗೆ ಕುತೂಹಲಕ್ಕಾಗಿ ಅಗತ್ಯ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ.

**೫. ಪ್ರತ್ಯಕ್ಷ ಸಹಭಾಗಿ ಅವಲೋಕನ :** ಪ್ರಸ್ತುತ ಸಂಶೋಧನೆಯ ಉದ್ದೇಶವನ್ನು ಲಂಬಾಣಿ ಸಮುದಾಯದ ಸದಸ್ಯರಿಗೆ ವಿವರಿಸಿ, ಅವರ ಅನುಮತಿಯೊಡನೆ ಸಹಕಾರವನ್ನು ಪಡೆದು, ಕೆಲವು ಜೀವನಾವರ್ತನೆ ಆಚರಣೆ, ಸಂಸ್ಕಾರ ಚಟುವಟಿಕೆಗಳಲ್ಲಿ ಅವರೊಂದಿಗೆ ಇದ್ದು, ಪ್ರತೇಕ್ಷವಾಗಿ ವೀಕ್ಷಿಸಿ ದಾಖಲಿಸಿಕೊಂಡು ಇವುಗಳನ್ನು ಸಂಶೋಧನೆಯಲ್ಲಿ ಬಳಸಿಕೊಂಡು ಸಂಶೋಧನಾ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದೇನೆ.

## ೧.೪. ಅಧ್ಯಯನದ ಮಹತ್ವ

ಕರ್ನಾಟಕ ರಾಜ್ಯಾದ್ಯಂತ ಹರಡಿರುವ ಲಂಬಾಣಿ ಸಮುದಾಯ ಕುರಿತು ಇದುವರೆಗೆ ಕೆಲವೇ ಕೆಲವು ಅಧ್ಯಯನಗಳು ನಡೆದಿದೆ. ಕೆಲವು ಅಧ್ಯಯನಗಳು ಕೇವಲ ಮಾಹಿತಿಗಾಗಿಯಷ್ಟೇ ನಡೆದಿವೆ ಎನ್ನಬಹುದು. ಸಂಶೋಧನ್ಮಾತಕ ಹುಡುಕಾಟ ಬಹಳ ಕ್ಷೀಣವೆಂದರೂ ತಪ್ಪೇನಿಲ್ಲ. ಒಟ್ಟಾರೆ ಈಗಾಗಲೇ ನಡೆದಿರುವ ಅಧ್ಯಯನಗಳು ಸುದೀರ್ಘ ವಿಶ್ಲೇಷಣೆಯನ್ನು ಒಳಗೊಂಡಿಲ್ಲ ಮತ್ತು ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಲಾಗಿಲ್ಲ. ಲಂಬಾಣಿ ಸಮುದಾಯವು ವಿಶಿಷ್ಟ ಸಾಂಸ್ಕೃತಿಕ ವೃತ್ತಿ ಕಸುಬಿನ ಪರಂಪರೆಯನ್ನು ಹೊಂದಿರುವುದಾದರೂ, ಇದುವರೆಗೆ ಸತ್ಯಾಂಶಗಳ ಅಧ್ಯಯನವು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಕ್ಷೇತ್ರ ಕಾರ್ಯದ ಮೂಲಕ ನಡೆದಿರುವುದು ಬಹಳ ಅಪರೂಪವೆನ್ನಬಹುದು. ಲಂಬಾಣಿ ಸಮುದಾಯದವರ ಪರಂಪರೆ, ಸಾಮಾಜಿಕ ಜೀವನ, ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು ಇತ್ಯಾದಿ ವಿಷಯಗಳು ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆಯುತ್ತವೆ.

ಬಳ್ಳಾರಿ ಜಿಲ್ಲೆಯಾದ್ಯಂತ ವಿಶೇಷವಾಗಿ ಹೊಸಪೇಟೆ, ಕೂಡ್ಲಿಗಿ ಮತ್ತು ಹೂವಿನ ಹಡಗಲಿ, ಹಗರಿಬೊಮ್ಮನ ಹಳ್ಳಿ, ಸಂಡೂರು, ಬಳ್ಳಾರಿ ಮತ್ತು ಸಿರುಗುಪ್ಪ ಪ್ರದೇಶದ ಸೆರಗಿನ ಗುಡ್ಡಗಾಡು ಪ್ರದೇಶ, ಕಾಡಿಗೆ ಅಂಟಿಕೊಂಡಿರುವ ತಾಂಡಾ ಪ್ರದೇಶಗಳಲ್ಲಿ ಲಂಬಾಣಿ ಜನಾಂಗದ ನೆಲೆಗಳು ಹೆಚ್ಚಾಗಿರುವುವು. ಇವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ಔದ್ಯೋಗಿಕ, ರಾಜಕೀಯ ಇತ್ಯಾದಿ ಅಂಶಗಳನ್ನು

ಅಭ್ಯಸಿಸದೇ ಉಪೇಕ್ಷಿಸಲ್ಪಟ್ಟಿದ್ದರಿಂದ ವಿಶೇಷ ಬುಡಕಟ್ಟುವಿನ ಲಂಬಾಣಿಗರ ಬಗ್ಗೆ ವಾಸ್ತವಾಂಶಗಳ ಮೇಲೆ ಬೆಳಕು ಚೆಲ್ಲಲು ಈ ಸಂಶೋಧನೆ ಸಹಾಯಕವಾಗಿದೆ. ಸಾಮಾಜಿಕ ಬದಲಾವಣೆಯ ಪ್ರಕ್ರಿಯೆ ಇಡೀ ಪ್ರಪಂಚವನ್ನೇ ಆವರಿಸಿಕೊಂಡಿರುವಾಗ, ಲಂಬಾಣಿ ಬದುಕಿನಲ್ಲೂ ಅನೇಕ ಸ್ಥಿತ್ಯಂತರಗಳು ಕಂಡುಬರುತ್ತವೆ. ಇವರ ಸಾಮಾಜಿಕ, ಸಾಂಸ್ಕೃತಿಕ, ಮತ್ತು ಆರ್ಥಿಕ, ರಾಜಕೀಯ, ಶೈಕ್ಷಣಿಕ ವರ್ತುಲಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರ್ತಿಸುವುದರಿಂದ ಈ ಅಧ್ಯಯನದ ಮಹತ್ವ ಹೆಚ್ಚಿದೆ.

ಲಂಬಾಣಿಗರ ಸಾಕ್ಷರತೆ ಪ್ರಮಾಣವೇ ಅತ್ಯಂತ ಕಡಿಮೆ ಮಟ್ಟದಲ್ಲಿದೆ. ಒಂದೆರಡು ತಲೆಮಾರಿನ ಹಿಂದಕ್ಕೆ ಹೋದರೆ ಸಾಕ್ಷರತೆ ಮತ್ತಷ್ಟು ಕ್ಷೀಣವಾಗಿದೆ. ಆದರೆ ಈ ವೃತ್ತಿ ಬದುಕಿನ ಕಷ್ಟಕೋಟಲೆಗೆ ಬೇಸತ್ತಿರುವ ಲಂಬಾಣಿಗರು ತಾವು ಅವಿದ್ಯಾವಂತರಾಗಿದ್ದರೂ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ನೀಡುವ ಧಾವಂತದಲ್ಲಿರುವುದು ನಾಗರೀಕ ಸಮಾಜದ ಹೆಗ್ಗುರುತಾಗಿದೆ. ಈ ಸಮುದಾಯದಲ್ಲಿ ಬಹಳಷ್ಟು ಜನರು ಕಡುಬಡವರು. ಹೀಗಾಗಿ ಆರ್ಥಿಕವಾಗಿ ಹಿಂದುಳಿದಿರುವುದರಿಂದ ಉನ್ನತ ಶಿಕ್ಷಣ ಕೊಡಿಸುವ ಸ್ಥಿತಿಯಲ್ಲಿ ಇಲ್ಲದ ಲಂಬಾಣಿಗರು ತಮ್ಮ ಮಕ್ಕಳಿಗೆ ಸಾಮಾನ್ಯ ಶಿಕ್ಷಣವನ್ನು ಕೊಡಿಸುತ್ತಿದ್ದಾರೆ. ಬಳ್ಳಾರಿ ಜಿಲ್ಲೆಗೆ ಸಮೀಪ ಚಿತ್ರದುರ್ಗ, ಕೊಪ್ಪಳ ಜಿಲ್ಲೆಗಳಿದ್ದು, ಇತ್ತೀಚಿನ ವರ್ಷಗಳ್ಲಲಿ ಸರಕಾರದ ಸವಲತ್ತುಗಳಿಂದ ಇಲ್ಲಿಯ ಲಂಬಾಣಿ ಮಕ್ಕಳು ವಿದ್ಯಾಭ್ಯಾಸದ ಕಡೆಗೆ ಗಮನಹರಿಸಿದ್ದಾರೆ. ಈವೆರಡು ಜಿಲ್ಲೆಗಳಿಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯ ಲಂಬಾಣಿ ಮಕ್ಕಳ ವಿದ್ಯಾಭ್ಯಾಸದಮಟ್ಟ ಕಡಿಮೆ ಇದೆ ಎಂದು ಹೇಳಬಹುದು. ಯಾಕೆಂದರೆ ಇವರು ಹೆಚ್ಚಾಗಿ ಅನಕ್ಷರಸ್ಥರಿದ್ದು, ಕೇವಲ ಕೂಲಿಗಾಗಿ ಬೇರೆ ರಾಜ್ಯಗಳಿಗೆ ವಲಸೆ ಹೋಗುವುದರಿಂದ ಇವರ ಶಿಕ್ಷಣದಮಟ್ಟ ಕಡಿಮೆ ಎಂದೇ ಹೇಳಬಹುದು. ಆದುದರಿಂದ ಇದಕ್ಕೆ ಏನು ಕಾರಣಗಳು ಎಂಬುದನ್ನು ತಿಳಿಯುವ ನಿಟ್ಟಿನಲ್ಲಿ ಈ ಸಂಶೋಧನೆಯು ಮಹತ್ವದ್ದಾಗಿದೆ.

ಲಂಬಾಣಿಗರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳ ಅಂಶಗಳು ತಾಂಡಾ ಮತ್ತು ನಗರಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಲಂಬಾಣಿಗಳ ಸಂಪ್ರದಾಯಗಳು ಇನ್ನು ಹೆಪ್ಪುಗಟ್ಟಿವೆ. ಇವರ ಆಚಾರ-ವಿಚಾರ, ನಂಬಿಕೆ, ಆಚರಣೆಗಳು, ಮುಕ್ಕಾಗದಂತೆ ಸಾಂಗವಾಗಿ ನಡೆಯುತ್ತದೆ. ಬಲಿ ದೇವತೆಗಳ ಆರಾಧನೆ ವಿಶೇಷವಾಗಿ ನಡೆದಿವೆ. ಅದೇ ಲಂಬಾಣಿ ನಗರವಾಸಿಗಳಾಗಿರುವವರೂ ಅಲ್ಪಸ್ವಲ್ಪ ಬದಲಾವಣೆ ಯೊಂದಿಗೆ ಬದುಕನ್ನು ನಡೆಸುತ್ತಿದ್ದರೂ, ಲಂಬಾಣಿ ಜನರ ಬದುಕಿನಿಂದ ಪ್ರಭಾವಿತರಾಗಿರುವುದು ಕಾಣಬಹುದು. ತಮ್ಮ ಆಚರಣೆಯ ಮೂಲ ಸೆಲೆಗೆ ಒಳಗಾಗಿರುವ ಲಂಬಾಣಿಗರು ತಾಂಡಾ, ಪಟ್ಟಣಗಳಿಂದ ಏಕೆ? ಸಾಮ್ಯ ಹಾಗೂ ಭಿನ್ನವಾಗಿದ್ದಾರೆಂಬ ವಿಚಾರವು ಈ ಅಧ್ಯಯನದ ಹೂರಣವಾಗಿದೆ.

ಲಂಬಾಣಿ ಸಂಸ್ಕೃತಿಯ ಮೇಲೆ ಬೇರೆ ಬೇರೆ ಸಂಸ್ಕೃತಿಗಳ ಪ್ರಭಾವವಾಗಿದೆ. ಶಿಕ್ಷಣ, ವೈಚಾರಿಕತೆ, ಆಧುನೀಕರಣ, ಸಾರಿಗೆ ಸಂಪರ್ಕ, ಸಾಧನಗಳ ಅಭಿವೃದ್ಧಿ, ಕೃಷಿ ಚಟುವಟಿಕೆ ಮುಂತಾದವು ಇವರ ಬದುಕಿನಲ್ಲಿ ಒಟ್ಟಾರೆ ಬದಲಾವಣೆ ತರುತ್ತಿದ್ದು, ಅದರ ದಿಕ್ಕು ದೆಸೆಗಳನ್ನು ಅಧ್ಯಯನ ಮಾಡುವುದು ಮಹತ್ವದಾಗಿದೆ ಎಂದೇ ಹೇಳಬಹುದು.

## ೧.೫. ಅಧ್ಯಯನದ ವಿನ್ಯಾಸ

ಪ್ರಸ್ತುತ ಈ ಮಹಾಪ್ರಬಂಧವನ್ನು 'ಲಂಬಾಣಿ ಜನಾಂಗದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)' ಎಂಬ ಶೀರ್ಷಿಕೆಯಡಿಯಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದಲ್ಲಿ ಲಂಬಾಣಿ ಸಮುದಾಯದ ಒಟ್ಟಾರೆ ಜೀವನಕ್ರಮವನ್ನು ಹಂತ ಹಂತವಾಗಿ ವಿಭಾಗಿಸಿ ಬಿಟ್ಟು ಏಳು ಅಧ್ಯಾಯಗಳಲ್ಲಿ ಅದನ್ನು ಸಂಗ್ರಹಿಸಲಾಗಿದೆ.

* ಅಧ್ಯಾಯ ಒಂದರ ಶೀರ್ಷಿಕೆಯಡಿಯಲ್ಲಿ ನಡೆಸಲಾದ ಸಂಶೋಧನೆಯ ಉದ್ದೇಶ, ಪ್ರಬಂಧದ ವ್ಯಾಪ್ತಿ ಹಾಗೂ ಇದರ ಸ್ವರೂಪವನ್ನು ಪ್ರಸ್ತುತಪಡಿಸಲಾಗಿದೆ. ಜೊತೆಗೆ ಅಧ್ಯಯನದ ಸಂದರ್ಭದಲ್ಲಿ ಅಗತ್ಯವಾಗಿ ಅನುಸರಿಸಬೇಕಾದ ವಿಧಿ ವಿಧಾನಗಳನ್ನು ಅಧ್ಯಯನದ ವಿನ್ಯಾಸವನ್ನು ಹೇಳಲಾಗಿದೆ.

* ಅದರಂತೆ ಮುಂದಿನ ಹಂತವಾದ ಎರಡನೇ ಅಧ್ಯಾಯದಲ್ಲಿ, ಈ ಮಹಾ ಪ್ರಬಂಧಕ್ಕೆ ಆಯ್ಕೆ ಮಾಡಿಕೊಳ್ಳಲಾಗಿರುವ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ, ಹಿನ್ನೆಲೆ, ಭೌಗೋಳಿಕತೆ, ಸ್ವಾಭಾವಿಕ ಸಂಪತ್ತು ಹಾಗೂ ಈ ಪ್ರದೇಶದಲ್ಲಿ ಕಂಡುಬರುವ ಲಂಬಾಣಿ ಸಮುದಾಯದವರ ಸಾಂಸ್ಕೃತಿಕ ವಿವೇಚನೆಯನ್ನು ಮಾಡಲಾಗಿದೆ. ಅಷ್ಟಲ್ಲದೆ ಈ ಸಮುದಾಯದ ಜನರ ಜೀವನವನ್ನು ಸ್ಥೂಲವಾಗಿ ವಿವರಿಸಲಾಗಿದೆ.

* ಅಧ್ಯಾಯ ಮೂರರಲ್ಲಿ 'ಲಂಬಾಣಿ' ಎಂಬ ಪದದ ನಿಷ್ಪತ್ತಿ, ಈ ಪದ ಸೃಷ್ಟಿಯ ಬಗ್ಗೆ ಇರುವ, ಕಂಡು ಬಂದಿರುವ ದೃಷ್ಟಿಕೋನಗಳು, ವ್ಯಾಖ್ಯಾನಗಳು, ಸಮುದಾಯದ ಜನರು ಹುಟ್ಟಿನಿಂದ - ಸಾವಿನವರೆಗೆ ಆಚರಿಸಲಾಗುವಂತಹ ಸಂಪ್ರದಾಯಗಳು, ಸಂಸ್ಕೃತಿ-ಅವಲೋಕನ, ಸಾಂಸ್ಕೃತಿಕ ಬೆಳವಣಿಗೆಗಳು, ನಂಬಿಕೆ, ಭಾಷೆ, ಉಡುಗೆ-ತೊಡುಗೆ, ಆಹಾರ ಪದ್ಧತಿ ಮುಂತಾದ ಹಲವು ವಿಚಾರಗಳನ್ನು ಈ ಅಧ್ಯಾಯನದಲ್ಲಿ ವಿಸ್ತೃತವಾಗಿ ವಿವರಿಸಲಾಗಿದ್ದು, ಇದು ಇಡೀ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವ ಲಂಬಾಣಿ ಸಮುದಾಯದವರ ಬದುಕಿನ ಮೇಲೆ ಬೆಳಕು ಚೆಲ್ಲುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.

* ನಾಲ್ಕನೆಯ ಅಧ್ಯಾಯದಲ್ಲಿ ಲಂಬಾಣಿ ಸಮುದಾಯದವರ ಮಾರುಕಟ್ಟೆ ಮತ್ತು ವ್ಯಾಪಾರ ಕುರಿತು ವಿವರಿಸಲಾಗಿದೆ. ಲಂಬಾಣಿ ಜನಾಂಗದವರ ಬದುಕಿನ ವಿಧಾನ, ಅವಲಂಬಿತ ವೃತ್ತಿಗಳು, ವಿವಿಧ ಕಸುಬುಗಳು, ಇದರಿಂದ ಬರಬಹುದಾದ ಆದಾಯ ಇತ್ಯಾದಿ ಹಾಗೂ ವಾಣಿಜ್ಯದ ವಿಚಾರಗಳನ್ನು ಈ ಅಧ್ಯಾಯದಲ್ಲಿ ಪ್ರಸ್ತುತಪಡಿಸಲಾಗಿದೆ. ಮೂಲತಃ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವ ಈ ಜನರು ಕೃಷಿಯಿಂದ ಬರುವ ಉತ್ಪನ್ನಗಳನ್ನು, ಕಾಡಿನಿಂದ ದೊರೆಯುವ ಕವಳೆಹಣ್ಣು, ಕಾರೆಹಣ್ಣು, ಸೌದೆ, ಗೊಂದು, ಬಿಕ್ಕೆಹಣ್ಣು ಇನ್ನು ಮುಂತಾದ ಹಣ್ಣು ಹಂಪಲುಗಳನ್ನು ನಗರ ಪ್ರದೇಶಕ್ಕೆ ತಂದು ಮಾರು ವುದು. ಹೀಗೆ ಇವರು ಅಲೆಮಾರಿ, ವ್ಯಾಪಾರಿ ಪ್ರಭಾವದ ಒತ್ತಡಗಳನ್ನು ಎದುರಿಸಿಕೊಂಡು ಹೋಗುತ್ತಿರುವುದು ಇತ್ಯಾದಿ ವಿಷಯಗಳನ್ನು ಇಲ್ಲಿ ನೋಡಬಹುದು. ಒಟ್ಟಾರೆ ಸಮಾಜದ ಪರಿವರ್ತನೆಯ ಹಿನ್ನೆಲೆಯಲ್ಲಿ ಮಾರುಕಟ್ಟೆ ಮತ್ತು ವ್ಯಾಪಾರ ಗಮನಾರ್ಹವಾದುದಾಗಿದೆ.

* ಐದನೆಯ ಅಧ್ಯಾಯದಲ್ಲಿ ಇನ್ನೊಂದು ಮುಖ್ಯ ಸಂಗತಿಯಾದ ಲಂಬಾಣಿ ಸಮುದಾಯದವರ ಏಳಿಗೆ, ಬದಲಾವಣೆಗಳು. ಬದಲಾಗುತ್ತಿರುವ ಇಂದಿನ ದಿನಗಳಲ್ಲಿ ಈ ಸಮುದಾಯದ ಜನರು ತಮ್ಮನ್ನು ಹೇಗೆ ಅದರಲ್ಲಿ ತೊಡಗಿಸಿಕೊಂಡು ಕ್ರಮೇಣ ಹಂತ ಹಂತವಾಗಿ ಅಭಿವೃದ್ಧಿ ಹೊಂದುತ್ತಿದ್ದಾರೆ ಎಂಬ ಸಂಗತಿ ಬಹಳ ಮುಖ್ಯವಾದದ್ದು. ಆರ್ಥಿಕವಾಗಿ ಸ್ವಾವಲಂಬಿಗಳಾಗಿ, ಸಾಮಾಜಿಕ ಜೀವನದಲ್ಲಿ ಬದಲಾವಣೆ ಮಾಡಿಕೊಂಡು, ಧಾರ್ಮಿಕತೆಯಲ್ಲಿ ಪ್ರಜ್ಞಾವಂತರಾಗುತ್ತಿದ್ದು, ಒಟ್ಟಾರೆ ಇದನ್ನು ನಾವು ಪರಿವರ್ತನೆಯ ಹಾದಿಯಲ್ಲಿ ಸಾಗುತ್ತಿರುವ ಸಮುದಾಯ ಎನ್ನಬಹುದು. ಅಷ್ಟರಮಟ್ಟಿಗೆವಿ ಇವರ ಜೀವನದ ಗತಿಬಿಂಬ ಸ್ಥಿತ್ಯಂತರಗೊಳಿಸಿಕೊಳ್ಳುತ್ತಿರುವುದು ನಿಜಕ್ಕೂ ಶ್ಲಾಘನೀಯವಾದುದಾಗಿದೆ. ಅಷ್ಟಲ್ಲದೆ ಸಮಾಜದಲ್ಲಿ ತಮ್ಮದೇ ಆದ ಗುರ್ತಿನ ಛಾಪನ್ನು ಮೂಡಿಸುತ್ತಿರುವುದು ಗಮನಾರ್ಹವಾಗಿದೆ.

* ಇಪ್ಪತ್ತೊಂದನೆಯ ಶತಮಾನದಲ್ಲಿ ಅತ್ಯಂತ ವೇಗವಾಗಿ ಬರುತ್ತಿರುವ ಈ ಜಾಗತೀಕರಣವು ಇವರನ್ನು ಸಹ ಬಿಟ್ಟಿಲ್ಲ ಎಂಬುದಕ್ಕೆ ಇದರ ಪ್ರಭಾವದಿಂದಾಗಿ ಜನಸಮುದಾಯಗಳಲ್ಲಿ ಕಂಡು ಬರುತ್ತಿರುವ ಬದಲಾವಣೆಗಳೇ ಸಾಕ್ಷಿ. ಆಧುನೀಕರಣ, ಕೈಗಾರಿಕೀಕರಣಗಳ ಪರಿಣಾಮಗಳಿಂದಾಗಿ ಈ ಸಮುದಾಯದಲ್ಲಿ ಅನೇಕ ಮಹತ್ತರ ಬದಲಾವಣೆಗಳಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಬಹಳಷ್ಟು ಸುಧಾರಣೆಗಳು ಕಂಡುಬಂದಿವೆ. ಹಾಗೆಯೇ ಸರ್ಕಾರದ ಯೋಜನೆಗಳಿಂದ ಸಿಗಬಹುದಾದಂತಹ ಸೌಲಭ್ಯಗಳು - ಸುಧಾರಣಾ ಕ್ರಮಗಳು, ಅಷ್ಟಲ್ಲದೆ ಇಂದಿಗೂ ಕೆಲವು ಸಂದರ್ಭಗಳಲ್ಲಿ ~~ಕೆಲವು ಜ್ವಲಂತ ಸಮಸ್ಯೆಗಳನ್ನು~~ ಈ ಸಮುದಾಯದವರು ಎದುರಿಸುತ್ತಿರುವ ವಿಚಾರ ವಿಷಾದನೀಯ. ~~ಇಂತವರ~~ ವಿಷಯಗಳನ್ನು ಈ ಮಹಾಪ್ರಬಂಧದ ಆರನೇ ಅಧ್ಯಾಯದಲ್ಲಿ ಪ್ರಸ್ತುತಪಡಿಸಲಾಗಿದೆ.

* ಕೊನೆಯಲ್ಲಿ ಲಂಬಾಣಿ ಜನಾಂಗದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವು ಅಧ್ಯಯನದ ಒಳನೋಟಗಳೊಂದಿಗೆ ಪರಿಪೂರ್ಣವಾಗಿರುವುದಲ್ಲದೆ ಅದು ಕಂಡುಕೊಂಡಿರುವ ಫಲಿತಗಳನ್ನು ಸಮರೂಪದಲ್ಲಿ ಅಳವಡಿಸಿಕೊಂಡಿದೆ ಹಾಗೂ ಹಲವು ಸಲಹೆ-ಸೂಚನೆಗಳನ್ನು ಗುರುತಿಸಲಾಗಿದೆ.

**ಅನುಬಂಧಗಳು**

ಬಳ್ಳಾರಿ ಜಿಲ್ಲೆಯ ನಕ್ಷೆ, ಕೋಷ್ಟಕ, ವೃತ್ತಿ ಪದಕೋಶ, ಪ್ರಶ್ನಾವಳಿ ಮಾದರಿಗಳನ್ನು ಹೇಳಲಾಗಿದೆ.

* ವಕ್ತೃಗಳ ವಿವರ
* ಪರಾಮಾರ್ಶನ ಗ್ರಂಥಗಳ
* ಛಾಯಾ ಚಿತ್ರಗಳು

# ಅಧ್ಯಾಯ ೨

# ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಅವಲೋಕನ

೨.೧. ಭೌಗೋಳಿಕ ಪರಿಸರ

೨.೨. ಐತಿಹಾಸಿಕ ನೋಟ

೨.೩. ಸಾಮಾಜಿಕ ಜೀವನ

೨.೪. ಧಾರ್ಮಿಕ, ಸಾಮಾಜಿಕ ಜೀವನ

೨.೫. ಶೈಕ್ಷಣಿಕ ಬೆಳವಣಿಗೆ

೨.೬. ರಾಜಕೀಯ ಜೀವನ

೨.೭. ಸಾಹಿತ್ಯ ಪರಂಪರೆ

೨.೮. ನೈಸರ್ಗಿಕ ಖನಿಜ ಸಂಪತ್ತು

೨.೯. ಮೌಖಿಕ ಆಧಾರಗಳು

೨.೧೦. ಶಾಸನ ಆಧಾರಗಳು

೨.೧೧. ಗ್ರಾಂಥಿಕ ಆಧಾರಗಳು

೨.೧೨. ಚಾರಿತ್ರಿಕ ಆಧಾರಗಳು

೨.೧೩. ಪ್ರವಾಸಿಗರ ಲಿಖಿತ ಆಧಾರಗಳು

೨.೧೪. ಲಂಬಾಣಿ ಜನಪದ ಕಲೆಗಳು

೨

# ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಅವಲೋಕನ

## ಪ್ರಸ್ತಾವನೆ

ಬಳ್ಳಾರಿ ಜಿಲ್ಲೆಯು ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಸಾಮಾಜಿಕವಾಗಿಯೂ ತನ್ನದೇ ಆದ ಚರಿತ್ರೆಯನ್ನು ಒಳಗೊಂಡಿದೆ. ಬರೀ ರಾಜ್ಯಕ್ಕೆ ಅಷ್ಟೆ ಅಲ್ಲ, ಇಡೀ ವಿಶ್ವವೇ ತನ್ನತ್ತ ನೋಡುವ ಹಾಗೆ ಮಹತ್ವವನ್ನು ಪಡೆದುಕೊಂಡಿದೆ. ಈಚೆಗೆ ಈ ಭಾಗದ ಗಣಿಗಾರಿಕೆಯಿಂದ ಹಾಗೂ ತಾಂತ್ರಿಕ ಅಭಿವೃದ್ಧಿಯಿಂದ ಜಗತ್ತನ್ನೇ ತಲ್ಲಣಗೊಳಿಸುವ ಕಾರ್ಯಸಾಧನೆ ಮಾಡಿರುವುದು ಗಮನಾರ್ಹ. ಈ ಕಾರಣಕ್ಕಾಗಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಒಂದಲ್ಲ ಒಂದು ರೀತಿಯಿಂದ ಭಾರತದೊಂದಿಗೆ ಮೈತ್ರಿ ಪಡೆಯುತ್ತಿರುವುದಕ್ಕೆ ಜಿಲ್ಲೆಯ ಅಪಾರ ಕೊಡುಗೆಯೂ ಒಂದು ಕಾರಣವಾಗಿದೆ ಎನ್ನಬಹುದು.

## ೨.೧. ಭೌಗೋಳಿಕ ಪರಿಸರ

'ಬಳ್ಳಾರಿ' ಎಂಬ ಹೆಸರು ಈ ಭಾಗದಲ್ಲಿ ಬಳಕೆಗೆ ಬಂದಿರುವುದು ತುಂಬಾ ಔಚಿತ್ಯಪೂರ್ಣವಾಗಿದೆ. ಜಿಲ್ಲೆಯಾಗಿರುವ ಬಳ್ಳಾರಿಯೂ ಕರ್ನಾಟಕ ರಾಜ್ಯದ ಗುಲಬರ್ಗಾ ವಿಭಾಗದಲ್ಲಿ ವಿಲೀನವಾಗಿದೆ. ಬಳ್ಳಾರಿಯ ಬಹುತೇಕ ಭಾಗವು ಗಂಡುಮೆಟ್ಟಿನ ನಾಡು ಎಂದು ಕರೆಯಲ್ಪಟ್ಟಿದೆ. ಈ ಕಾರಣಕ್ಕಾಗಿ ಈ ಭಾಗದ ಜನರು ಶೂರರು, ಧೀರರು, ಪರಾಕ್ರಮಿಶಾಲಿಗಳಾಗಿದ್ದರೆಂದು, ಅಷ್ಟೇ ಅಲ್ಲದೆ ಸದ್ಗುಣ ಸಂಪನ್ನರಾಗಿ ಸೌಮ್ಯವಾದಿಗಳಾಗಿದ್ದರೆಂದು ಸಾಹಿತ್ಯಿಕ ಹಾಗೂ ಚಾರಿತ್ರಿಕ ದಾಖಲೆಗಳಿಂದ ತಿಳಿದುಬರುತ್ತದೆ. ಮೊಟ್ಟಮೊದಲ ಉಪಲಬ್ಧ ಕೃತಿ ಕವಿರಾಜಮಾರ್ಗದಲ್ಲಿ ಹಾಗೂ ಹಂಪಿಯ ಪ್ರೌಢದೇವರಾಯನ ಕಾಲದ ಲಕ್ಷ್ಮಿಧರ ಅಮಾತ್ಯನ ಕಾಲದ ಶಾಸನದಲ್ಲಿ ಈ ಪ್ರದೇಶದ ವಿಶೇಷತೆಯು ಉಲ್ಲೇಖಗೊಂಡಿರುವುದನ್ನು ಗಮನಿಸಬಹುದಾಗಿದೆ.

'ಬಳ್ಳಾರಿ' ಎಂಬ ಹೆಸರು ಬಳಕೆಯಾಗಿರುವ ಹಿನ್ನೆಲೆ ಕುರಿತು ಹಲವಾರು ವಿದ್ವಾಂಸರು ತಮ್ಮದೇ ಆದ ಹೇಳಿಕೆಯನ್ನು ನೀಡಿದ್ದಾರೆ. ಈ ಭಾಗದಲ್ಲಿರುವ ಸ್ತ್ರೀದೇವತೆಯಾದ 'ಬಳರಿ' ದೇವತೆಯ ಇರುವಿಕೆಯಿಂದಲೇ 'ಬಳ್ಳಾರಿ' ಎಂಬ ಪದವನ್ನು ಬಳಸಿರಬಹುದು. ಈ 'ಬಳರಿ' ದೇವತೆಯ ಉಲ್ಲೇಖವೂ ಜನ್ನನ 'ಯಶೋಧರ

ಚರಿತೆ'ಕೃತಿಯಲ್ಲಿ ಬಳಕೆಯಾದ ಬಗ್ಗೆ ಗ್ಯಾಜೆಟಿಯರ್‌ನಲ್ಲಿ ನಮೂದಾಗಿದೆ(The word 'Bellary' is used mean a goddess and town said to have derived its name from this word becouse Duragamma had manifested herself in this town the old district Gazzater(ಗ್ಯಾಜೆಟಿಯರ್-೧೯೬೪).

ಈ ಮೇಲೆ ತಿಳಿಸಿದಂತೆ 'ಬಳ್ಳಾರಿ' ಎಂಬ ಪದವು ಜನ್ನ ಕವಿಯ 'ಯಶೋಧರ ಚರಿತ್ರೆ'ಕಾವ್ಯದಲ್ಲಿ ಉಲ್ಲೇಖಕೊಂಡಿದೆ ಮಾತ್ರವಲ್ಲದೆ, ಇದಕ್ಕೂ ಪೂರ್ವದಲ್ಲಿ ದೊರೆತ ದುರ್ಗಸಿಂಹನ 'ಪಂಚತಂತ್ರ' ಕೃತಿಯಲ್ಲಿ ದುಷ್ಟಬುದ್ಧಿ-ಧರ್ಮಬುದ್ಧಿ ಎಂಬ ಭೇದಪ್ರಕರಣದ ಕಥೆಯಲ್ಲಿ ''ಬಳರಿಯ ಮನೆಯಾಪರಕೆಯ ಕುರಣಿಯಂ ಪುಗಿಸುವಂತೆ'' ಎಂಬ ಸಾಲು ಬಳಕೆಯಾಗಿದೆ. ಇದರಿಂದ 'ಬಳರಿ' ಎಂಬ ದೇವತೆಯ ಉಲ್ಲೇಖ ತುಂಬಾ ಪ್ರಾಚೀನವಾದುದೆನಿಸುತ್ತದೆ. 'ಬಳರಿ' ದೇವತೆ ಉಗ್ರಸ್ವರೂಪಳಾಗಿಯೂ ಇದ್ದಳೆಂದು ಜನಪದ ಕಥೆಗಳಲ್ಲೂ ಪ್ರಸ್ತಾಪವಾಗಿದೆ. ಈ ದೇವಿಯನ್ನು ಈಚೆಗೆ 'ಬಳ್ಳಾರಿ ದುರುಗಮ್ಮ' ಎಂಬ ಹೆಸರಲ್ಲಿ ಈಗಲೂ ಆರಾಧನೆ ಮಾಡುತ್ತಿರುವುದು ಕಂಡುಬರುತ್ತದೆ.

ಬಳ್ಳಾರಿ ಎಂಬ ಪದವು ಶಾಸನಗಳಲ್ಲಿ, ಜನಪದರ ಕಾವ್ಯಗಳಲ್ಲಿ ಉಲ್ಲೇಖವಾಗಿದೆ. ರೆ.ಫರ್ಡಿನಂಡ್ ಕಿಟೆಲ್ ಅವರು ತಮ್ಮ 'ಕನ್ನಡ-ಇಂಗ್ಲಿಷ್ ಡಿಕ್ಷನರಿ'ಯಲ್ಲಿ ಬಳರಿ-ಬಳಾರಿ ಎಂಬ ಪದದ ಅರ್ಥವನ್ನು ಹೀಗೆ ನೀಡಿದ್ದಾರೆ. The demon Balari or Mahakali ಎಂದು ಸೂಚಿಸಿದ್ದಾರೆ. ಆದರೆ ಶಾಸನ ಹಾಗೂ ಜನಪದರ ಕಾವ್ಯಗಳಲ್ಲಿ ಬಳರಿ, ಬಳಾರಿ ಎಂದು ಉಲ್ಲೇಖಗೊಂಡಿದೆ. ಖ್ಯಾತ ವಿದ್ವಾಂಸರಾದ ಹೆನ್ರಿ ವೈಟ್ ಹೆಡ್ ಅವರು ಬಳಾರಿಯ ಬಗ್ಗೆ ಪ್ರಸ್ತಾಪ ಮಾಡುವಾಗ ''Durga is one of the many names of kali, The wife of siva'' ಎಂದು ಅವರ The south in Indian village gods ಕೃತಿಯಲ್ಲಿ ತಿಳಿಸಿದ್ದಾರೆ. ಇದರಿಂದಲೇ ಪುರಾಣದ ಉಲ್ಲೇಖದ ಪ್ರಕಾರವೂ ಪಾರ್ವತಿಯ ಹಲವು ಅವತಾರಗಳಲ್ಲಿ ಈ 'ಬಳರಿ' ಎಂಬುದಾಗಿ ತಿಳಿದುಬರುತ್ತದೆ. ಆದರೆ ಸ್ಥಳಪುರಾಣದ ಉಲ್ಲೇಖದಂತೆ ಬಲ ಎಂಬ ಅಸುರರನ್ನು ಇಂದ್ರನು ಸಂಹಾರ ಮಾಡಿದ್ದರಿಂದಲೇ 'ಬಲೌಹರಿ' ಎಂಬ ಪದವೇ ಬಲಹರಿಯಾಗಿ ಬಲರಿ, ಬಳರಿ ಎಂದು ಬಳಕೆಯಾಗಿರಬೇಕೆನಿಸುತ್ತದೆ.

'ಬಳರಿಯ' ಉಲ್ಲೇಖವು ದೇವಿ ಪುರಾಣದಲ್ಲಿ ದುರ್ಗೆಯನ್ನು 'ಬಳರಿ' ಎಂಬ ರೀತಿಯಾಗಿ ಬಳಸಿದ್ದಾರೆ. 'ಸ್ಕಂದ ಪುರಾಣ'ದಲ್ಲಿ ಬಳಾರಿ ಪ್ರದೇಶವನ್ನೇ ''ಲೋಹಾಚಲ'' ಎಂಬುದಾಗಿ ಕರೆದಿದ್ದಾರೆ. ಆದರೆ ಶಿವಪುರಾಣದಲ್ಲಿ ಈ ಭಾಗವು 'ಜಂಬೂದ್ವೀಪ' ಎಂದು ಉಲ್ಲೇಖಗೊಂಡಿದೆ. ಈ ಪದವು ಬಹುತೇಕವಾಗಿ ಜನಪದ ಕಥೆಗಳಲ್ಲಿ ಪ್ರಸ್ತಾಪವಾಗಿರುವುದನ್ನು ಕಾಣಬಹುದಾಗಿದೆ. ಬಳ್ಳಾರಿಯೆಂಬ ಪದವನ್ನು ಉಗ್ರ ಸ್ತ್ರೀ ಸೂಚಕವಾಗಿಯೂ, ವ್ಯಕ್ತಿ ಮತ್ತು ರಾಕ್ಷಸ ಹಾಗೂ ಶಿವಶರಣರ ಸೂಚಕವಾಗಿಯೂ ಬಳಕೆಯಾಗಿರುವುದು ಅಧ್ಯಯನದಿಂದ ತಿಳಿದುಬಂದ ಅಂಶವಾಗಿದೆ.

ಜನಪದ ಕಾವ್ಯಗಳಲ್ಲಿ 'ಬಳರಿ'ಯ ಪದ ಬಳಕೆಯ ಮುನ್ನಾ ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ಹೇಗೆ ಪ್ರಸ್ತಾಪವಾಗಿದೆ ಎಂದು ನೋಡುವುದು ಉಚಿತವೆನಿಸುತ್ತದೆ. ಕ್ರಿ.ಶ.೧೦೪೦ರಲ್ಲಿದ್ದ ಚಂದ್ರರಾಜನು ಬರೆದ 'ಮದನ ತಿಲಕ' ಕೃತಿಯಲ್ಲಿ "ಬಳರಿಯ ಪುಯ್ಯಲಿಡವೋದ ಕುರಿಯಂತಕ್ಕುಂ" ಎಂದಿದೆ. ಈ ದೇವತೆಯ ಆರಾಧನೆಗೆ ಹೆಚ್ಚಾಗಿ ಕುರಿಯ ಬಲಿ ಇತ್ತೆಂಬುದು ಉಲ್ಲೇಖವಾಗಿದೆ. ಈ ಕಾರಣಕ್ಕಾಗಿಯೂ ಉಗ್ರ ಸ್ವರೂಪದ ದೇವತೆಯಾಗಿ ಆರಾಧಿಸಲ್ಪಟ್ಟಿರಬೇಕೆನಿಸುತ್ತದೆ. ಹಾಗೇನೆ ಕ್ರಿ.ಶ.೧೧೦೦ರಲ್ಲಿದ್ದ ಬ್ರಹ್ಮಶಿವನು ತನ್ನ "ಸಮಯ ಪರೀಕ್ಷೆ" ಎಂಬ ಕೃತಿಯಲ್ಲಿ 'ಬಳರಿ' ಎಂಬ ಪದ ಹೀಗೆ ಬಳಕೆಯಾಗಿದೆ.

ಎಕ್ಕಲದೇವಿಗೆ ಮಮಾ
ಲಕ್ಕನಿಗಂ ಬನದ ಬಳರಿಗಂ ಮೈಲಾರಂ...
ಗಶ್ಯದ ಜಾತ್ರೆಯನಾಶ್ವಂ
ಮಕ್ಕಳಗಂ ಜೈನನಳಗೆಂತ್ಯ ಕಾಳಂ

(ನಾಗಯ್ಯ ಜಿ.ಎಂ., ಪು.೪)

................ಹೀಗೆ ದೇವತೆಗಳ ಪಟ್ಟಿಯನ್ನೇ ನೀಡಿದ ಕವಿಯು ಜೈನಧರ್ಮದವನಾಗಿದ್ದರಿಂದ "ಬನದ ಬಳರಿ", 'ಎಕ್ಕಲದೇವಿ', 'ಮೈಲಾರ' ಜಾತ್ರೆಗೆ ತೆರಳುವವರನ್ನು ಖಂಡನೆ ಮಾಡಿರುವುದು ಕಂಡುಬರುತ್ತದೆ.

ಇದೇ ರೀತಿಯಾಗಿ 'ಜನ್ನನ ಯಶೋಧರ ಚರಿತ್ರೆ'ಯಲ್ಲಿ "ಬಳರಿ" ಎಂಬ ಉಲ್ಲೇಖವಿದೆ. 'ಬಳರಿ ದೇವತೆ' ಜಾತ್ರೆಗೆ ಕಡ್ಡಾಯವಾಗಿ ಹೋಗಿ ಬರಬೇಕಾಗಿತ್ತು. ಇಲ್ಲದಿದ್ದರೆ ಊರನ್ನೇ ನಾಶ ಮಾಡುತ್ತಿದ್ದಳೆಂದು ಕಾವ್ಯದಲ್ಲಿ ಪ್ರಸ್ತಾಪವಾಗಿದೆ. ಈ ಕವಿಯೂ ಜೈನನಾಗಿದ್ದರೂ ಸಹ ಚಂಡಮಾರಿ ದೇವತೆಯ ಶಕ್ತಿಯನ್ನು ಉಲ್ಲೇಖಿಸಿರುವುದು ಗಮನಾರ್ಹ. ಅಂತೆಯೇ ಭೀಮ ಕವಿಯ 'ಬಸವಪುರಾಣ'ದಲ್ಲಿ 'ದಿಟ್ಟಬಳಹರಿಮಾರಿಂಗೆ', ಚತುರಾಸ್ಯ ನಿಘಂಟುವಿನಲ್ಲಿ 'ಬಳಾರಿ' ಪದ ಉಲ್ಲೇಖಗೊಂಡಿದೆ. ರಾಜಶೇಖರ ವಿಳಾಸ ಕಾವ್ಯದಲ್ಲಿ ಮಾತ್ರ ತುಂಬಾ ವಿಭಿನ್ನವಾದ ಪ್ರಸಂಗವನ್ನು ನೀಡಿದೆ. ಸೂಳೆಯೊಬ್ಬಳಿಗೆ ಮೋಸ ಮಾಡಿದ ವ್ಯಕ್ತಿಯನ್ನು 'ಮನ್ಮಥಬಳರಿಗೆ ಬಲಿಕೊಡುವೆ' ಎಂದು ಬಳಕೆಯಾಗಿದೆ. ಹೀಗೆ ಸಾಹಿತ್ಯದ ಹಲವು ಕೃತಿಗಳಲ್ಲಿ 'ಬಳರಿ'ಯ ಪದವನ್ನು ಬಳಸಿರುವುದು ಕಂಡುಬಂದಿದೆ. ಇದರೊಂದಿಗೆ ಶಾಸನಗಳಲ್ಲಿ, ದಂತಕಥೆ ಹಾಗೂ ಐತಿಹ್ಯಗಳಲ್ಲೂ 'ಬಳಾರಿ' ಪದದ ಉಲ್ಲೇಖವಾಗಿದ್ದುದು ಹೇಗೆ ಎಂಬುದು ಗಮನಿಸಬಹುದಾಗಿದೆ.

**ದಂತ ಕಥೆ :** 'ಬಳ್ಳಾರಿ' ಎಂಬ ಪದ ದಂತಕಥೆಗಳಲ್ಲೂ ಬಳಕೆಯಾಗಿದೆ. ಈ ಕಥೆಗಳು ಬಹುತೇಕವಾಗಿ ಸಾಮ್ಯವನ್ನು ಕಂಡುಬಂದರೂ ಸಹ ವ್ಯಕ್ತಿಗಳ ಕುರಿತಾಗಿ ಯಾವುದೇ ರೀತಿಯ ಶಾಸನಗಳು ದೊರತಿಲ್ಲ. ಆದರೆ ಲಭ್ಯವಾದ ಹಲವು ದಂತಕಥೆಗಳನ್ನು ಗಮನಿಸಿದರೆ ಆಯಾ ವ್ಯಕ್ತಿಗಳಿಂದಲೇ 'ಬಳ್ಳಾರಿ' ಪದವು ಬಳಸಿರಬಹುದೆಂದು ತಿಳಿದುಬರುತ್ತದೆ. ದಂತ ಕಥೆಯಲ್ಲಿ ಸೂಚಿಸಿದ ಕೆಲವು ಪ್ರಸಂಗಗಳು ಬಳ್ಳಾರಿಯ ಆಸುಪಾಸಿನಲ್ಲೇ ಇರುವುದು ವ್ಯಕ್ತವಾಗಿದೆ.

ಒಂದು ಕಥೆಯ ಪ್ರಕಾರ ಒಬ್ಬ ಮಹಾನ್ ಶರಣನಿಗೆ ಸಂಬಂಧಿಸಿದ ವಿವರಣೆ ಹೀಗಿದೆ. ಈಗಿರುವ ಜಿಲ್ಲೆಯಲ್ಲೆ ಇರುವ ಕೋಳೂರು ಗ್ರಾಮದಲ್ಲಿ ಬಳ್ಳೇಶಮಲ್ಲಯ್ಯನೆಂಬ ಶಿವಶರಣನಿದ್ದನಂತೆ. ಆಗ ಕೋಳೂರು ಅಗ್ರಹಾರವಾಗಿತ್ತೆಂಬುದು ಆ ಗ್ರಾಮದಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಹುಟ್ಟು ಕುರುಡನಾದ ಬಳ್ಳೇಶ ಮಲ್ಲಯ್ಯನು ಪ್ರತಿನಿತ್ಯವೂ ಮಲ್ಲೇಶನ ಆರಾಧನೆಯಲ್ಲಿ ತೊಡಗುತ್ತಿದ್ದನಂತೆ. ಶಿವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆಯಿಂದ ತಪಸ್ಸು ಮಾಡುತ್ತಾನೆ. ಈತನ ಏಕಾಗ್ರತೆಯ ತಪಸ್ಸಿಗೆ ಮೆಚ್ಚಿದ ಶಿವನ ಹೆಸರಿಂದ 'ಮಲ್ಲೇಶ್ವರ' ಎಂಬ ಹೆಸರು ವಾಡಿಕೆಯಾಯಿತಂತೆ. ಈಗಲೂ ಬಳ್ಳಾರಿಯ ಪ್ರಮುಖ ದೇವಾಲಯವಾದ ಮಲ್ಲೇಶ್ವರ ದೇವಾಲಯವೂ ಇದೆ. ಪುರಾತನವಾದ ಈ ದೇವಾಲಯವು 'ಬಳ್ಳಾರಿ ದುರ್ಗಮ್ಮ' ದೇವಾಲಯದ ಎದುರಿಗೆ ಅನತಿ ದೂರದಲ್ಲಿಯೇ ಕಾಣಸಿಗುತ್ತದೆ. ಈ ಮಲ್ಲೇಶ್ವರನಿಗೂ ಬಳ್ಳಾರಿಯ ದುರ್ಗಮ್ಮ ದೇವಿಗೂ ಹೊಂದಾಣಿಕೆಯಾಗುವ ಕಥೆಯೊಂದಿದೆ. ಬಳರಿ ಎಂದರೆ ಉಗ್ರದೇವತೆಯೆಂಬುದಾಗಿ ಅರ್ಥ. ಈ ಕಾರಣಕ್ಕಾಗಿ ಒಮ್ಮೆ ಬಳರಿಯ ದೇವಾಲಯದಲ್ಲಿ ಭಕ್ತರು ಆರಾಧನೆಗೆ ಧಾವಿಸಿ ಬಂದಿರುತ್ತಾರೆ. ಭಕ್ತರೊಂದಿಗೆ ಬಂದ ಮಕ್ಕಳನ್ನು ಬಳ್ಳಾರಿಯ ದುರ್ಗಮ್ಮ ತಿನ್ನುತ್ತಿದ್ದಳಂತೆ. ಹೀಗೆ ದೇವಾಲಯಕ್ಕೆ ಬಂದ ಚಿಕ್ಕ ಮಕ್ಕಳನ್ನು ತಿನ್ನುವುದನ್ನು ಕಂಡ ಮಲ್ಲೇಶನು ಚಿಕ್ಕ ಮಕ್ಕಳನ್ನು ತಿಂದರೆ ಹೇಗೆ ಎಂದು ಪ್ರಶ್ನಿಸಿದಕ್ಕೆ ಮಲ್ಲೇಶ್ವರನಿಗೆ ತಿಳಿಯದೆ ಹಾಗೆಯೇ ಬೆನ್ನು ಹಿಂಭಾಗವಾಗಿ ಹಿಂದಕ್ಕೆ ತಿರುಗಿ ಮಕ್ಕಳನ್ನು ತಿನ್ನತೊಡಗಿದಳಂತೆ. ಈಗಲೂ ಬಳ್ಳಾರಿ ದುರಗಮ್ಮನಿಗೆ ಬೆನ್ನಿಗೆ ಪೂಜೆಯೆಂಬ ಕಥೆಯೂ ಸರಿಯೆನಿಸುತ್ತದೆ. ಆದರೆ ಈ ರೀತಿಯ ಘಟನೆಯು ಜನಪದ ಕಾವ್ಯದ ಪ್ರಕಾರ ಬೇರೆ ರೀತಿಯ ಪ್ರಸಂಗವನ್ನು ನಿರೂಪಿಸುತ್ತದೆ.

ಇದೇ ರೀತಿಯಾಗಿ ಬಲ್ಲಾಳನೆಂಬ ಶಿವಶರಣನೊಬ್ಬ ಒಮ್ಮೆ ಬೇಟೆಗಾಗಿ ಬಳ್ಳಾರಿಯ ಭಾಗಕ್ಕೆ ಬರುತ್ತಾನಂತೆ, ಅಲ್ಲಿದ್ದ ಕ್ರೂರ ಮೃಗಗಳನ್ನು ಕೊಲ್ಲುತ್ತಾನೆ. ಬಳಿಕ ಬಾಯಾರಿ ಬಳಲಿದಾಗ ಬೆಟ್ಟದ ಮೇಲೆ ಇದ್ದ ದೇವನಿರ್ಮಿತವಾದ ನಿರ್ಮಲ ಉದಕ ಕಂಡು ಬಾಯಾರಿಕೆ ನೀಗಿಸಿಕೊಂಡನಂತೆ. ಸುಂದರವಾದ ಪ್ರಾಕೃತಿಕ ಸ್ಥಳದಲ್ಲೇ ಬಲ್ಲಾಳನು ಬಲಗುಡ್ಡದ ಸ್ಥಳದವರೆಗೂ ಪಟ್ಟಣ ನಿರ್ಮಿಸಿ ಇದೇ ಭಾಗದಲ್ಲಿ ವಿಷ್ಣು ಮತ್ತು ಶಿವಾಲಯ ಹಾಗೂ ಜಿನಬಸದಿಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ.

ಇದೇ ಸ್ಥಳದಲ್ಲಿಯೇ ಶಿವಶರಣನೊಬ್ಬ ಶಿವಪೂಜೆ ಮಾಡುತ್ತಿರುತ್ತಾನಂತೆ ನಿತ್ಯಪೂಜೆ ಮಾಡಿದ ಬಳಿಕವೆ ಊಟ ಮಾಡುವ ಪರಿಪಾಠ ಆತನದಾಗಿರುತ್ತದೆ. ಒಮ್ಮೆ ಏಕಾಗ್ರತೆಯಿಂದ ಶಿವನ ಧ್ಯಾನ ಮಾಡುವಾಗ ಶಿವನ ಲಿಂಗದ ಬದಲಿಗೆ ಕೆಲವು ಕಿಡಿಗೇಡಿಗಳು ಬಳ್ಳವನ್ನು ಇಡುತ್ತಾರಂತೆ. ಆ ಬಳ್ಳವನ್ನೇ ಶಿವನ ಲಿಂಗವೆಂದು ಭಾವಿಸಿ ಮಾಡಿದ ಪೂಜೆಗೆ ಶಿವನು ಪ್ರತ್ಯಕ್ಷನಾದನಂತೆ. ಈ ಕಾರಣಕ್ಕಾಗಿಯೇ 'ಬಳ್ಳೇಶ' ಎಂಬ ಹೆಸರು ಬಳಕೆಯಲ್ಲಿ ಬಂತಂತೆ. ಈ 'ಬಳ್ಳೇಶನಿಂದಲೆ ಬಳ್ಳಾರಿ' ಎಂಬ ಪದ ಬಂದಿರಬೇಕೆಂದು ತಿಳಿದುಬರುತ್ತದೆ.

ಬಳ್ಳಾರಿಯ ಪಕ್ಕದಲ್ಲಿರುವ 'ಅಲಿಪುರ'ದ ಉಲ್ಲೇಖವೂ ಶಕರದೊರೆಯ ಅಳ್ವಿಕೆಯಲ್ಲಿತ್ತೆಂಬುದು ಬಾಣಭಟ್ಟ ಮತ್ತು ಭೋಜರಾಜನ ಕಾವ್ಯಗಳಲ್ಲಿ ಉಲ್ಲೇಖಗೊಂಡಿದೆ. ಶಕರದೊರೆ ಮತ್ತು ಗುಪ್ತರಿಗೂ

ನಡುವೆ ನಡೆದ ಕದನದ ಸ್ಥಳವು ಅರಿಪುರ ಬೀಡಿನಲ್ಲಿ ಜರುಗಿತ್ತಂತೆ. ಈ ಅರಿಪುರವೇ ಮುಂದೆ ಅಲಿಪುರ ಆಗಿರಬೇಕು. ಇಲ್ಲಿ ಬಳ್ಳೌಅರಿಪುರ, ಬಳ್ಳಾರಿಪುರವಾಗಿರಬೇಕು. ಈ ಪದವೇ ಮುಂದೆ ಜನರ ಉಚ್ಚಾರಣೆಯಲ್ಲಿ ಬಳ್ಳಾರಿ ಎಂಬುದಾಗಿ ಬಳಸಲ್ಪಟ್ಟಿದೆ.

ಬಳ್ಳಾರಿ ದುರ್ಗಮ್ಮ ದೇವಾಲಯದ ಅರ್ಚಕರು ತಿಳಿಸಿ ಕೊಡುವ ದಂತಕಥೆಯು 'ಬಳರಿ' ದೇವತೆಗೆ ಸಂಬಂಧಿಸಿದುದಾಗಿದೆ. ದೇವಾಲಯದ ಪೂಜಾಕಾರ್ಯದಲ್ಲಿ ತೊಡಗಿರುವ ಗಾಣಿಗ ಮನೆತನದ ವ್ಯಕ್ತಿಗೆ 'ಬಳರಿ' ದೇವತೆ ಕನಸಲ್ಲಿ ದರ್ಶನ ನೀಡಿ ತಾನು ಬನದಲ್ಲಿ ನೆಲೆಯಾಗಿರುವುದಾಗಿ ತಿಳಿಸಿದ್ದಾಳಂತೆ. ಬನದಲ್ಲಿ ನೆಲೆಸಿದ ಆ ದೇವತೆ ಗುಡ್ಡದಿಂದ ಜಿಗಿದು ಬಂದು ಕೆಳಗೆ ಬಂದಂತೆ ಭಾಸವಾಯಿತಂತೆ. ಈ ಕನಸು ಕಂಡ ವ್ಯಕ್ತಿಯು ಬನದ ಬಳಿ ತೆರಳಿದಾಗ ಒಬ್ಬ ಮುದುಕಿ ಗೋಚರಿಸುತ್ತಾಳೆ. ಈ ವ್ಯಕ್ತಿಯನ್ನು ಗಮನಿಸಿ ತನ್ನ ತಲೆಯಲ್ಲಿ ಹರಿದಾಡುವ ಹೇನನ್ನು ತೆಗೆಯಲು ತಿಳಿಸುತ್ತಾಳೆ. ಆಗ ಆ ವ್ಯಕ್ತಿ ತಲೆಯಲ್ಲಿ ಕೈಹಾಕಿ ಕೂದಲು ಬಗೆದು ನೋಡಿದಾಗ ತಲೆಯಲ್ಲಿ ರತ್ನಗಳು ಇರುವುದು ಕಂಡುಬಂದವಂತೆ. ಇದನ್ನು ಕಂಡು ಚಕಿತನಾದ ವ್ಯಕ್ತಿಗೆ ಮುದುಕಿಯ ರೂಪದಲ್ಲಿ ಕಾಣಿಸಿದ್ದು ದೇವತೆಯಾಗಿರುತ್ತಾಳೆ. ಆಕೆಯು ನಿಜರೂಪ ತೋರಿಸಿ ನನ್ನನ್ನು ನಿಮ್ಮ ಮನೆತನದವರು ಗುಡಿಕಟ್ಟಿ ಪೂಜೆ ಮಾಡಬೇಕೆಂದು ಹೇಳಿ ಅದೃಶ್ಯಳಾದಳಂತೆ. ಈಗಲೂ ಬಳ್ಳಾರಿ ದುರ್ಗಮ್ಮ ದೇವಾಲಯದಲ್ಲಿ ಗಾಣಿಗ ಮನೆತನದವರು ಪೂಜೆ ಸಲ್ಲಿಸುತ್ತಿರುವುದು ಕಾಣಸಿಗುತ್ತದೆ.

ಆದರೆ ಜನಪದ ಗೀತೆಯೊಂದರಲ್ಲಿಯೂ ಈ ಕಥೆಗೆ ಸಾಮ್ಯತೆ ತೋರುವಂತೆ 'ಬನದ ದೇವತೆ' ಎಂಬ ಪದ ಬಳಕೆಯಾಗಿರುವುದು ಕಾಣಸಿಗುತ್ತದೆ. ಈಗ ಪೂಜಿಸಲ್ಪಡುವ ಬಳ್ಳಾರಿ ದುರ್ಗಮ್ಮ ದೇವಿಯೇ ಬನದ ದೇವತೆಯಾಗಿರಬೇಕು. ಉಗ್ರಸ್ವರೂಪದ ದೇವತೆ ಎಂಬ ಅರ್ಥವು ಬಳರಿ ಎಂಬ ಪದವಾಗಿ ಬಳಸಲಾಗಿದೆ.

**ಐತಿಹ್ಯ :** ಬಳ್ಳಾರಿ ಪ್ರದೇಶವು ಈ ಹಿಂದೆ ಕುಂತಳನಗರದಲ್ಲಿ ಒಳಗೊಂಡಿತ್ತು. ಆಗ ಬಳ್ಳಾರಿ ಎಂಬ ಪ್ರಸ್ತಾಪ ಆಗಿದ್ದಿಲ್ಲ. ಆದರೆ ಈಗ ಇರುವ ಬಳ್ಳಾರಿ ಕೋಟೆಭಾಗದಲ್ಲಿ ನಡೆದ ಘಟನೆಯೊಂದು ಸಾಕ್ಷಿಯಾಗಿದೆ. ದಕ್ಷಿಣ ದಿಕ್ಕಿನ ತುಂಗಭದ್ರಾ ತೀರದ ಬಳಿಯಲ್ಲಿರುವ ಕುಂತಳನಗರವನ್ನು ಚಂದ್ರಹಾಸನು ಆಳ್ವಿಕೆ ನಡೆಸುತ್ತಿರುತ್ತಾನೆ. ಈ ಸ್ಥಳದಲ್ಲಿಯೇ ನೆಲೆವೂರಿ ಅನೇಕರಿಗೆ ಉಪಟಳ ನೀಡುತ್ತಿರುತ್ತಾನೆ. ಈ ಅಸುರನು ದೇವಕನ್ನೆಯರಿಗೂ ಉಪದ್ರವ ನೀಡುತ್ತಾನೆ. ಈ ವಿಷಯವನ್ನು ದೇವಕನ್ಯೆಯರು ಇಂದ್ರನಿಗೆ ತಿಳಿಸಿ ಬಳಾಸುರನನ್ನು ಸಂಹಾರ ಮಾಡಲು ಬೇಡುತ್ತಾರೆ. ಆಗ ಇಂದ್ರನು ಭೂಲೋಕಕ್ಕೆ ಧಾವಿಸಿಬಂದು ತನ್ನ ವಜ್ರಾಯುಧದಿಂದ ಬಳಾಸುರನನ್ನು ಸಂಹಾರ ಮಾಡಿದನಂತೆ,ಅಂದಿನಿಂದಲೇ ಈ ಗುಡ್ಡಕ್ಕೆ ಬಳಾಸುರನ ನಾಶದಿಂದ ಬಳಾರಿ, ಬಳ್ಳಾರಿ ಎಂಬ ಹೆಸರು ಬಳಕೆಗೆ ಬಂದಿತಂತೆ. ಗುಡ್ಡದ ಬಳಿಯೇ ಇರುವುದರಿಂದ ಈಗಲೂ ಕೋಟೆಯುಳ್ಳ ಭಾಗವು ಗುಂಡು ಕಲ್ಲುಗಳ ಗುಡ್ಡದ ಪ್ರದೇಶವಾಗಿದೆ ಎಂಬುದು ಈ ಐತಿಹ್ಯದಿಂದ ತಿಳಿದುಬಂದ ಸಂಗತಿಯಾಗಿದೆ.

**ಶಾಸನಗಳು :** ಬಳ್ಳಾರಿ ಜಿಲ್ಲೆಯ ಹಲವು ಭಾಗದಲ್ಲಿ ಬಹುತೇಕ ರಾಜಮನೆತನಗಳ ಆಳ್ವಿಕೆಗೆ ಸಂಬಂಧಿಸಿದ ಶಾಸನಗಳು ದೊರೆತಿವೆ. ಆದರೂ ಬಳ್ಳಾರಿ ಎಂಬ ಪದ ಬಳಕೆಯಾದ ಶಾಸನವೆಂದರೆ ಕ್ರಿ.ಶ.೧೦ನೆಳರ

ಸಿರಿವಾರದ ಈಶ್ವರ ದೇವಾಲಯದ ಶಾಸನದಲ್ಲಿ ಪ್ರಸ್ತಾಪವಾಗಿದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಮೌರ್ಯರ ಕಾಲಾವಧಿಯಿಂದಲೂ ಶಾಸನಗಳು ದೊರೆತಿರುವುದು ಕಂಡುಬರುತ್ತದೆ. ಈ ಜಿಲ್ಲೆಯ ಬಹುತೇಕ ತಾಲೂಕುಗಳಲ್ಲಿ ಮೌರ್ಯರಿಂದ ಹಿಡಿದು ವಿಜಯನಗರ ಹಾಗೂ ವಿಜಯನಗರ ಸಾಮ್ರಾಜ್ಯದ ಪತನಾನಂತರದ ಪಾಳೆಯಗಾರರ ಆಳ್ವಿಕೆಗೆ ಸಂಬಂಧಿಸಿದ ಅನೇಕ ಶಾಸನಗಳು ದೊರಕಿರುವುದು ಕಂಡುಬಂದಿದೆ.

ಮೌರ್ಯ ಅರಸು ಮನೆತನದ ಪ್ರಸಿದ್ಧ ದೊರೆಯಾದ ಅಶೋಕನು ಈ ಪ್ರದೇಶದಲ್ಲಿ ಬೌದ್ಧಧರ್ಮ ಪ್ರಸಾರ ಕೈಗೊಂಡ ಬಗ್ಗೆ ದಾಖಲೆಯ ಶಾಸನಗಳು ದೊರಕಿವೆ. ಜಿಲ್ಲೆಯ ಸಿರುಗುಪ್ಪ ತಾಲೂಕಿನ ಉಡೆಗೊಳ ನಿಟ್ಟೂರುಗಳಲ್ಲಿ ಅಶೋಕನಿಗೆ ಸಂಬಂಧಿಸಿದ ಶಾಸನಗಳು ದೊರತಿವೆ. ಆದರೆ ಆ ಬಳಿಕ ಹಿರೇಹಡಗಲಿಯಲ್ಲಿ ದೊರೆತಿರುವ ಶಾಸನದಲ್ಲಿ ಶಾಸನವಾಹನೀರ ಎಂದು ಉಲ್ಲೇಖವಾಗಿದೆ. ಪಲ್ಲವರ ಶಿವ ಸ್ಕಂದವರ್ಮನಿಗೆ ಸಂಬಂಧಿಸಿದ ಶಾಸನವು ಜಿಲ್ಲೆಯ ಆಲೂರು ತಾಲೂಕಿನ ಮ್ಯಾಕಡೋಣಿಯಲ್ಲಿ ದೊರೆತಿದೆ. ಇದರಿಂದ ಪಲ್ಲವರ ಆಳ್ವಿಕೆ ಬಳ್ಳಾರಿ ಜಿಲ್ಲೆಯಲ್ಲಿತ್ತು ಎಂದು ತಿಳಿದುಬರುತ್ತದೆ.

ಬಾದಾಮಿ ಚಾಲುಕ್ಯರಿಗೆ ಸೇರಿದ್ದೆಂದು ಹೇಳಲಾಗುವ ಜಿಲ್ಲೆಯ ಕುರುಗೋಡಿನ ಶಾಸನದಲ್ಲಿ ಸತ್ಯಾಶ್ರಯನ ಪ್ರಸ್ತಾಪವಾಗಿದೆ. ಸಂಡೂರು ತಾಲೂಕಿನ ಕುಮಾರಸ್ವಾಮಿ ದೇವಾಲಯದ ಬಳಿ ಇರುವ ಪಾರ್ವತಿ ದೇವಾಲಯದ ರಚನೆಯು ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದಿಂದ ಕೂಡಿದೆ. ಇದರಿಂದ ಈ ಭಾಗದ ಬಾದಾಮಿ ಚಾಲುಕ್ಯರ ಆಳ್ವಿಕೆಯಿತ್ತೆಂದು ತಿಳಿದುಬಂದಿದೆ.

ಕ್ರಿ.ಶ.ಸುಮಾರು ೭೫೩ರಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟ ಅರಸನಾದ ದಂತಿದುರ್ಗನು ಚಾಲುಕ್ಯ ಅರಸ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಈ ಅರಸರ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ದೊರಕಿವೆ. ಅವುಗಳು ಜಿಲ್ಲೆಯ ಬಾಗಳಿ, ಕುಡತಿನಿ, ಕಡಬಗೆರೆ ಚಿಕ್ಕಪ್ಪನಹಳ್ಳಿ ಮತ್ತು ಕೊಳಗಲ್ಲು ಗ್ರಾಮಗಳಲ್ಲಿ ಲಭ್ಯವಾಗಿವೆ.

ರಾಷ್ಟ್ರಕೂಟರ ಆಳ್ವಿಕೆಯನ್ನು ಕೊನೆಗಾಣಿಸಿದ ಇಮ್ಮಡಿ ತೈಲಪನು ಕಲ್ಯಾಣವನ್ನು ರಾಜಧಾನಿಯಾಗಿ ಆಳಿದನು. ಜಿಲ್ಲೆಯಲ್ಲಿ ದೊರಕಿದ ಕಲ್ಯಾಣ ಚಾಲುಕ್ಯರ ಮೊದಲ ಶಾಸನವು ೯೭೬ರ ಅವಧಿಯದಾಗಿದೆ. ಇದರೊಂದಿಗೆ ಕಳಚೂರ್ಯರ ನಾಲ್ಕು ಶಾಸನಗಳು ದೊರಕಿವೆ.

ನೊಳಂಬ ರಾಜಮನೆತನದ ಅರಸರು ತಲಕಾಡಿನ ಗಂಗರ ದಾಳಿ ಎದುರಿಸಲಾರದೇ ಜಿಲ್ಲೆಯ ಕಂಪಲಿ ಕಡೆ ಸಾಗಿ ಬಂದು ರಾಜಧಾನಿಯಾಗಿ ಆಳ್ವಿಕೆ ನಡೆಸಿದರು. ಈ ಭಾಗವನ್ನು ದೊರೆತ ಬಹುತೇಕ ಶಾಸನಗಳಲ್ಲಿ ನೊಳಂಬವಾಡಿ ೩೨೦೦೦ ಹೆಸರಿನಿಂದ ಕರೆಯಲಾಗಿದೆ. ಇದೇ ರೀತಿಯಾಗಿ ಕುರುಗೋಡನ್ನು ರಾಜಧಾನಿಯನ್ನಾಗಿ ಆಳ್ವಿಕೆ ನಡೆಸಿದವರು ಕುರುಗೋಡು ಸಿಂದರು.

ಹೊಯ್ಸಳರು ಮತ್ತು ಯಾದವರ ಆಳ್ವಿಕೆಯ ಬಳಿಕ ವಿಜಯನಗರವನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡ ವಿಜಯನಗರದ ಅರಸರ ಬಹುತೇಕ ಶಾಸನಗಳು ಜಿಲ್ಲೆಯ ಹಲವು ಗ್ರಾಮಗಳಲ್ಲಿ ದೊರಕಿವೆ.

ಸಂಗಮ ವಂಶದ ದಾನ ಶಾಸನಗಳು ಕಡಿಮೆ ಸಂಖ್ಯೆಯಲ್ಲಿ ದೊರೆತರೆ, ತುಳುವಂಶದ ಕೃಷ್ಣದೇವರಾಯ, ಇಮ್ಮಡಿ ದೇವರಾಯ ಹಾಗೂ ಅಚ್ಯುತರಾಯ ಅರಸರ ಶಾಸನಗಳು ಹೆಚ್ಚಾಗಿ ಕಾಣಸಿಗುತ್ತವೆ. ಈ ಕುರಿತಾಗಿ ಕನ್ನಡ ವಿಶ್ವವಿದ್ಯಾಲಯದ ಹಂಪಿ ಶಾಸನಗಳು ಸಂಪುಟದಲ್ಲಿ ವಿಜಯನಗರದ ಅರಸರ ಶಾಸನಗಳ ಕುರಿತು ಉಲ್ಲೇಖವಾಗಿದೆ. ಹೀಗೆ ಲಭ್ಯವಾದ ಬಹುತೇಕ ರಾಜರ ಶಾಸನಗಳಲ್ಲಿ ಬಳ್ಳಾರಿ ಪ್ರಸ್ತಾಪ ಆಗಿಲ್ಲ. ಆದರೆ ಸಿರಿವಾರದಲ್ಲಿ ದೊರೆತ ಕ್ರಿ.ಶ.೧೦೪೪ರ ಶಾಸನದಲ್ಲಿ ಚಾಳುಕ್ಯ ದೊರೆಯ ಸಾಮಂತರಾಜನಾದ ಪಲ್ಲವ ಅರಸನು ಕಪ್ಪಗಲ್ಲು ಗ್ರಾಮದಲ್ಲಿ ದೊರೆತ ದಾನ ಶಾಸನದಲ್ಲಿ 'ಜೇಷ್ಠರಾಶಿ ಭಳಾರಿ ಗದಾರಾಪೂರ್ವಕವಾಗಿ ಭೂಮಿಯನ್ನು ದತ್ತಿಬಿಟ್ಟ ಬಗ್ಗೆ ನಮೂದಾಗಿವೆ. ಚಾಳುಕ್ಯ ದೊರೆ ತ್ರಿಭುವನ ಮಲ್ಲದೇವನ ಕಾಲದ ೧೧೩೧ರ ಶಾಸನದಲ್ಲಿ 'ಬಳಾರಿಯ ಬೀವರಸ'ನಿಗೆ ಭೂದಾನ ನೀಡಿದ ಬಗ್ಗೆ ಉಲ್ಲೇಖವಾಗಿದೆ.

ಒಟ್ಟಿನಲ್ಲಿ ಶಾಸನಗಳ ದಾಖಲೆಯ ಪ್ರಕಾರ ಕ್ರಿ.ಶ.೧೨ನೇ ಶತಮಾನದಲ್ಲಿ ಬಳಾರಿ, ಬಳ್ಳಾರಿ, ಬಳ್ಳಾರಿಯ ಬೀವರಸ ಎಂಬುದಾಗಿ ಉಲ್ಲೇಖವಾಗಿದ್ದು ಕಂಡುಬಂದಿರುವುದರಿಂದ ಬಳರಿಯ ದೇವತೆಯ ಆಚರಣೆಯಿಂದಲೇ ಈ ಪದ ಬಂದಿರಬೇಕೆನಿಸುತ್ತದೆ. ಏಕೆಂದರೆ ಭಟಾರಿ>ಭಡಾರಿ>ಭಳಾರಿ>ಭಳ್ಳಾರಿ, ಬಳ್ಳಾರಿ, ಎಂಬುದಾಗಿ ಜನರ ಬಳಕೆಯಲ್ಲಿ ಹೀಗಾಗಿರಬಹುದು. ಅಲ್ಲದೆ ವ್ಯಾಕರಣಕಾರನಾದ ಕೇಶಿರಾಜನ ಉಲ್ಲೇಖದಂತೆ ಟ್ >ಡ್ ಆದೇಶವಾಗುವುದು ಸಹಜ. ಹಾಗೇನೆ ಡ್ ಕಾರವನ್ನು ಬೆಟ್ಟಿತ್ತಾಗಿ ಉಚ್ಚಾರಿಸುವೊಡೆ 'ಳ್ ' ಕಾರಂಬರೆಗುಂ ಎಂದು ಹೇಳಿದುದು ಸರಿಯೆನಿಸುತ್ತದೆ. ಬಳರಿ-ಬಳರಿ ಎಂಬ ಪದವು ಉಗ್ರದೇವತೆಗೆ ಸಂಬಂಧಪಟ್ಟ ಹೆಸರಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಇಷ್ಟೆಲ್ಲಾ ಮಹತ್ವ ಪಡೆದ ಬಳ್ಳಾರಿ ಜಿಲ್ಲೆಯೂ ಕರ್ನಾಟಕವಷ್ಟೇ ಅಲ್ಲ ಇಡೀ ಪ್ರಪಂಚಕ್ಕೆ ಮಾದರಿಯಾಗಿತ್ತು ಎನ್ನಲಿಕ್ಕೆ ಕಂಪಲಿ ಅರಸು ಮನೆತನ ಹಾಗೂ ವಿಜಯನಗರ ಅರಸರ ಆಳ್ವಿಕೆಯಿಂದ ತಿಳಿದುಬರುತ್ತದೆ. ಹೀಗೆ ಬೆಳೆದು ಬಂದ ಬಳ್ಳಾರಿಯು ನೈಸರ್ಗಿಕ, ಭೌಗೋಳಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ, ಶೈಕ್ಷಣಿಕ ಹಾಗೂ ಚಾರಿತ್ರಿಕವಾಗಿಯೂ ಹೇಗೆ ಪ್ರಾಮುಖ್ಯತೆ ಪಡೆದಿತ್ತು ಎಂಬುದಾಗಿ ಗಮನಿಸಿದಾಗ ಮಾತ್ರ ಜಿಲ್ಲೆಯ ಅನನ್ಯತೆ ಕಾಣಸಿಗುತ್ತದೆ.

**ನೈಸರ್ಗಿಕ ಲಕ್ಷಣ :** ಜಿಲ್ಲೆಯ ಜನರು ಈ ಭಾಗದ ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವರು ಎಂದು ತಿಳಿದುಬರುತ್ತದೆ. ಆದಿಮಾನವನಿಂದ ಹಿಡಿದು ಆಧುನಿಕ ಕಾಲಘಟ್ಟದ ಮನುಷ್ಯನವರೆಗೂ ಒಂದಲ್ಲ ಒಂದು ರೀತಿಯಿಂದ ನಿಸರ್ಗದಲ್ಲಿ ಲಭ್ಯವಾಗುವ ವಸ್ತುಗಳನ್ನು ಬಳಸಿಕೊಂಡೆ ವಿಕಾಸ ಹೊಂದಿರುವುದಾಗಿ ಚರಿತ್ರೆಯಿಂದ ತಿಳಿದುಬರುತ್ತದೆ. ಮಾನವನಲ್ಲಿ ತಿಳಿವಳಿಕೆ ಮೂಡುವ ಮುನ್ನಾ ನೈಸರ್ಗಿಕವಾಗಿ ದೊರಕುವ ಗೆಡ್ಡೆ-ಗೆಣಸುಗಳನ್ನೇ ಆಹಾರವಾಗಿಸಿಕೊಂಡನೆಂಬುದು ಇಂದು ಇತಿಹಾಸ.

ಮಾನವ ಬೆಳೆದು ಬಂದಂತೆಲ್ಲಾ ನಿಸರ್ಗದ ಒಡನಾಡಿಯಾಗಿ ಬಾಳುವಾಗ ತನ್ನಂತೆ ಇತರ ವಸ್ತು, ಪ್ರಾಣಿಗಳಲ್ಲಿ ಅಗಾಧವಾದ ಶಕ್ತಿಯಿದೆ ಎಂದು ಅರಿತು ಕೆಲವನ್ನು ಸಾಕು ಪ್ರಾಣಿಗಳಾಗಿ ಸ್ವೀಕರಿಸಿದರೆ, ಇನ್ನೂ ಕೆಲವು ಗೋಚರ, ಅಗೋಚರ ಶಕ್ತಿಗಳನ್ನು ದೈವತ್ವಕ್ಕೆ ಏರಿಸಿದನೆಂದು ತಿಳಿದುಬಂದ ಸಂಗತಿಯಾಗಿದೆ.

ಬಳ್ಳಾರಿ ಜಿಲ್ಲೆಯ ನೈಸರ್ಗಿಕ ಸಂಪತ್ತಿಗೆ ವಿಶ್ವಮಾನ್ಯತೆ ದೊರಕಿಸಿಕೊಟ್ಟ ಕೀರ್ತಿ ಸಂಡೂರು ಭಾಗದ ನಿಸರ್ಗಕ್ಕೆ ದಕ್ಕುತ್ತದೆ. ಈ ಹಿಂದೆ ಕೇವಲ ನಿಸರ್ಗದತ್ತವಾದ ಕೊಡುಗೆಗಳು ತಟಸ್ಥವಾಗಿದ್ದವು. ಕಾಡಿನಲ್ಲಿದ್ದ ಪ್ರಾಣಿ-ಪಕ್ಷಿಗಳನ್ನು ನೈಸರ್ಗಿಕವಾಗಿ ದೊರಕುವ ಗಿಡಗಂಟೆಗಳನ್ನು ಬಳಕೆ ಮಾಡುತ್ತಾ ಜೀವಿಸಿದ್ದು ಕಂಡುಬರುತ್ತದೆ. ಮಾನವನಲ್ಲಿ ಅರಿವು ಹೆಚ್ಚಾದಂತೆಲ್ಲಾ ಭೂಮಿಯ ಗರ್ಭದಲ್ಲಿ, ಭೂಮಿಯ ಮೇಲೆ ಇರುವ ಖನಿಜ ನಿಕ್ಷೇಪಗಳ ಬಳಕೆಯಿಂದ ಜಿಲ್ಲೆಯತ್ತ ಇಡೀ ವಿಶ್ವವೇ ಕಣ್ಣರಳಿಸಿ ನೋಡುವಂತೆ ಮಾಡಿದ ಕೀರ್ತಿ ಬಳ್ಳಾರಿಗೆ ಸಲ್ಲಿದೆ. ಇಂದಿಗೂ ವಿದೇಶಕ್ಕೆ ಅತಿ ಹೆಚ್ಚು ರಫ್ತಾಗುವ ನಿಸರ್ಗ ವಸ್ತುಗಳಲ್ಲಿ ಕಬ್ಬಿಣದ ಅದಿರು ಒಂದಾಗಿದೆ. ಇದರೊಂದಿಗೆ ಈ ಭಾಗದಲ್ಲಿ ಗ್ರಾನೈಟ್ , ಮ್ಯಾಂಗನೀಸ್ , ಕ್ಯಾಲ್ಸೈಟ್ , ಬೆಣಚುಕಲ್ಲು, ತಾಮ್ರ, ಸೀಸ, ಜಿಪ್ಸಮ್ ಜೇಡಿಮಣ್ಣು, ಕೆಂಪು ಮಣ್ಣು, ಕಾವಿಮಣ್ಣು ಮುಂತಾದವು ಭೂಗರ್ಭದಿಂದ ದೊರೆಯುವ ಸಂಪನ್ಮೂಲಗಳಾಗಿವೆ. ಇಷ್ಟೆಲ್ಲ ಇದ್ದರೂ ಬೇರೆ ಕಡೆ ಬಂಗಾರ ಲಭ್ಯ ಆದರೂ ನಮ್ಮಲ್ಲಿ ದೊರಕುವ ಅದಿರಿಗೆ ಅಧಿಕವಾದ ಬೆಲೆ ನಿಗಧಿಯಾಗಿದ್ದರಿಂದ ಈ ಭಾಗದ ಬಹುತೇಕರು ಮಣ್ಣನ್ನು ಮಾರಿ ದಿಢೀರನೆ ಕೋಟ್ಯಾಧಿಪತಿಗಳಾದವರ ಬಗೆಗೆ ಹಲವು ಸಂಗತಿಗಳು ದೊರೆಯುತ್ತಿದೆ. ಈ ಕಬ್ಬಿಣದ ಅದಿರನ್ನು ತೆಗೆದು ಅದನ್ನು ಸಾಗಿಸುವ ಕೆಲಸವನ್ನು ಹೆಚ್ಚಾಗಿ ಮಾಡುತ್ತಿರುವವರೆಂದರೆ ಈ ಭಾಗದ ಲಂಬಾಣಿ ಜನಸಮುದಾಯ ಎಂದರೆ ತಪ್ಪಾಗಲಿಕ್ಕಿಲ್ಲ. ತಮ್ಮೊಂದಿಗೆ ತಮ್ಮ ಚಿಕ್ಕ ಮಕ್ಕಳನ್ನು ಈ ಕಾಯಕದಲ್ಲಿ ತೊಡಗಿಸಿಕೊಂಡಿರುವುದು ಕ್ಷೇತ್ರ ಕಾರ್ಯದಿಂದ ತಿಳಿದು ಬಂದ ಸಂಗತಿಯಾಗಿದೆ. ಏಕೆಂದರೆ ನಿಸರ್ಗದೊಂದಿಗೆ ಹಲವು ರೀತಿಯಿಂದಲೂ ಬಾಂಧವ್ಯ ಹೊಂದಿರುವವರೆಂದರೆ ಲಂಬಾಣಿ ಜನರು. ಜಿಲ್ಲೆಯ ಸಂಡೂರು, ಹೊಸಪೇಟೆ, ಹರಪನಹಳ್ಳಿ ತಾಲ್ಲೂಕುಗಳಲ್ಲಿ ಅತಿ ಉತ್ತಮ ಗುಣಮಟ್ಟದ ಕಬ್ಬಿಣದ ಅದಿರು ದೊರಕುತ್ತದೆ. ಈ ಸ್ಥಳಗಳಲ್ಲಿ ಟೆಂಟ್ ಗಳನ್ನು ಹಾಕಿಕೊಂಡು ಅದಿರು ವಹಿವಾಟಿನಲ್ಲಿ ತೊಡಗಿರುವರೆಂದರೆ ಲಂಬಾಣಿಗರು. ಇದರಿಂದ ಜಿಲ್ಲೆಯಲ್ಲಿ ಕಬ್ಬಿಣ ಅದಿರು ದೊರೆಯುವ ಸಂಡೂರು, ಹೊಸಪೇಟೆ ತಾಲೂಕಿನಲ್ಲಿ ತಾಂಡಾಗಳಾಗಿ ಮಾಡಿಕೊಂಡು ಜೀವನ ಸಾಗಿಸುತ್ತಿರುವ ಅಂಶವು ಸಂಶೋಧನೆಯಿಂದ ಕಂಡುಬರುತ್ತದೆ.

ಜಿಲ್ಲೆಯಲ್ಲಿ ಸಂಡೂರು ೨೫೦ಕ್ಕೂ ಹೆಚ್ಚು ಮಿಲಿಯನ್ ಟನ್ ನಷ್ಟು ಅದಿರು ನಿಕ್ಷೇಪ ಇದೆ. ಆದರೆ ಈ ಹಿಂದೆ ಇದ್ದ ಅದಿರನ್ನು ಸಮೂಹ ಈಗ ಇಲ್ಲ. ವಿಶ್ವದ್ಲಲೇ ಹೆಚ್ಚು ಆಮದು ಮಾಡಿಕೊಂಡ ಚೀನಾದೇಶ ಈ ಭಾಗದ ಅದಿರು ಸ್ವೀಕರಿಸಿದೆ. ಇದರಿಂದ ಗಣಿ ಗುತ್ತಿಗೆದಾರರು ಅತಿ ಬೇಗನೆ ಶ್ರೀಮಂತರಾದರು. ಬಿಸಿಲಿಗೆ ಮೈವೊಡ್ಡಿ ಶ್ರಮದಾಯಕ ಕೆಲಸ ಮಾಡಿದ ಲಂಬಾಣಿ ಜನಸಮೂಹ ಮಾತ್ರ ಅದಿರು ತೆಗೆಯುವಲ್ಲಿಯೇ ನಿರತರಾದರು. ಈ ಸ್ಥಳವನ್ನು ಕೊಂಡುಕೊಂಡ ಅನ್ಯರು ತಕ್ಷಣವೇ ಧನಿಕರಾದರು. "ಬರವ ನೀಮಡಗಿದಂತಿರು" ಎನ್ನುವಂತೆ ಲಂಬಾಣಿಗರ ಜೀವನ ವಿಧಾನವು ಇಂದಿಗೂ ಬದಲಾಗಿಲ್ಲ. ಅದಿರು ನಿಕ್ಷೇಪ ವಹಿವಾಟು ಸ್ವಲ್ಪ ಸ್ಥಗಿತವಾದಾಗ ಇವರು ಕೈಗೊಳ್ಳುವ ವೃತ್ತಿ ನಿಸರ್ಗದ ಪ್ರಮುಖ ವೃತ್ತಿಯಾಗಿ ಪರಿಣಮಿಸಿದ ಕೃಷಿಯತ್ತ ವಾಲುತ್ತಾರೆ. ಜಿಲ್ಲೆಯಲ್ಲಿ ಯಥೇಚ್ಛವಾಗಿ ಕಬ್ಬು ಬೆಳೆಯುತ್ತಿರುವುದರಿಂದ ಕಬ್ಬಿನ ಕಟಾವು ಕಾರ್ಯವನ್ನು ಲಂಬಾಣಿಗರೆ ಮಾಡುತ್ತಿರುವುದು ಗಮನಾರ್ಹ ಸಂಗತಿಯಾಗಿದೆ.

ಕಬ್ಬಿಣದ ಅದಿರು ಜೊತೆಗೆ ಜಿಲ್ಲೆಯ ಹರಪನಹಳ್ಳಿ ತಾಲೂಕು ಚಿಗಟೇರಿ, ಕೊನಗನ ಹೊಸೂರು ಕಲ್ಲಹಳ್ಳಿ, ಬಳಿ ಚಿನ್ನದ ನಿಕ್ಷೇಪ ಇರುವುದು ಬೆಳಕಿಗೆ ಬಂದಿದೆ. ತಾಮ್ರದ ಅದಿರು ಸಹ ಹರಪನಹಳ್ಳಿ ತಾಲೂಕಿನಲ್ಲಿ ದೊರತಿದೆ.

ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶವು ಶೇಕಡಾ ೧೪.೪೪ ಪ್ರದೇಶದಿಂದ ಕೂಡಿದೆ. ಇದು ಸುಮಾರು ೧೧೯.೨೪೭ ಹೆಕ್ಟೇರುಗಳಾಗಿದೆ ಎಂದು ತಿಳಿದುಬಂದಿದೆ. ಅರಣ್ಯ ಭಾಗದಲ್ಲಿ ದೊರಕುವ ಕಟ್ಟಿಗೆಯನ್ನು ಉರುವಲಿಗಾಗಿ ಬಳಸುವುದಲ್ಲದೆ ಪೀಠೋಪಕರಣಗಳ ಬಳಕೆಗಾಗಿ ಬಳಸಲಾಗಿದೆ. ನಿಸರ್ಗದಲ್ಲಿ ದೊರಕುವ ಅಂಟು, ಜೇನುತುಪ್ಪ, ಎಣ್ಣೆಯನ್ನು ಮಾರಾಟ ಮಾಡಿ ಬದುಕುವವರಲ್ಲಿ ಲಂಬಾಣಿಗರು ಪ್ರಮುಖರು. ಜೇನನ್ನು ಕಾಡಿನಿಂದ ತಂದು ನಗರದಲ್ಲಿ ಮಾರುವ ವ್ಯವಸ್ಥೆ ಈಗಲೂ ಇದೆ. ನಗರ ಬೆಳೆದಂತೆಲ್ಲ ಇಂದು ಕಾಡುನಾಶ ಆಗುತ್ತಿದೆ. ಇದರಿಂದ ಸರ್ಕಾರವು ನಿಸರ್ಗ ರಕ್ಷಣೆಗಾಗಿ ಅರಣ್ಯ ಇಲಾಖೆಯ ವತಿಯಿಂದ ಪ್ರತಿವರುಷವೂ ವನಮಹೋತ್ಸವ ಏರ್ಪಡಿಸಿ ಸಸಿಗಳನ್ನು ಬೆಳೆಸುವ ವಿನೂತನ ಯೋಜನೆಗೆ ಕೈಹಾಕಿದೆ. ಈ ಯೋಜನೆ ಎಷ್ಟು ಫಲಕಾರಿಯಾಗಿದೆ ಎನ್ನಲಿಕ್ಕೆ ಹವಾಮಾನದ ವೈಪರೀತ್ಯದಿಂದ ಬದಲಾವಣೆಯನ್ನು ಗಮನಿಸಿದರೆ ಸಾಕು. ಸರ್ಕಾರವು ೧೯೮೪ರಲ್ಲಿ ವಿಶ್ವಬ್ಯಾಂಕ್‌ನಿಂದ ಅರಣ್ಯರಕ್ಷಣೆ ಯೋಜನೆಯನ್ನು ಜಾರಿಗೆಗೊಳಿಸಿದೆ, ಆದರೂ ಕಾಂಕ್ರೀಟ್ ಕಾಡಿನಿಂದ ಕಾಡಿನ ಸಂಪತ್ತು ವಿನಾಶದ ಅಂಚಿಗೆ ತಲುಪಿದೆ. ಅರಣ್ಯವಲ್ಲದ, ಖನಿಜ ನಿಕ್ಷೇಪದ ರಫ್ತುವಿನಿಂದಲೂ ನೈಸರ್ಗಿಕ ಅವನತಿ ಉಂಟಾಗುತ್ತಿದೆ. ಅದಿರು ನಿಕ್ಷೇಪವುಳ್ಳ ಸ್ಥಳದಲ್ಲೇ ಬೃಹತ್ ಕಾರ್ಖಾನೆಗಳು ತಲೆ ಎತ್ತಿವೆ.

ಜಿಲ್ಲೆಯ ಬಹುತೇಕ ಗ್ರಾಮಗಳು ನೆರೆಯ ಆಂಧ್ರಕ್ಕೂ ಸಹ ತುಂಗಭದ್ರಾ ನದಿಯು ಜೀವನಾಡಿಯಾಗಿ ಪರಿಣಮಿಸಿದೆ. ಈ ನೀರಿನ ಸೌಕರ್ಯ ಪಡೆದ ರೈತರು ಕೃಷಿಗೆ ಮತ್ತು ಕುಡಿಯಲು ಇದೇ ನೀರನ್ನೇ ಬಳಸುತ್ತಿರುವುದು ಗಮನಾರ್ಹವಾದ ಸಂಗತಿ. ತುಂಗಾಭದ್ರಾ ನದಿಗೆ ಈ ಹಿಂದೆ 'ಪಂಪಾಸರೋವರ', 'ಪಂಪಾನದಿ' ಎಂತಲೂ ಕರೆಯಲಾಗುತ್ತಿತ್ತು. ಈ ನದಿ ನೀರು ಪಶ್ಚಿಮ ಹಾಗೂ ಉತ್ತರದ ಭಾಗಗಳಾದ ಕರ್ನೂಲು ಹತ್ತಿರದ ಕೃಷ್ಣನದಿಗೆ ಸೇರುತ್ತದೆ. ಇದರಿಂದ ಶಿವಮೊಗ್ಗದಲ್ಲಿ ಹುಟ್ಟಿ ಬಂದ ತುಂಗಭದ್ರಾ ನದಿ ಜಿಲ್ಲೆಯ ಜನರಿಗೆ ನೀರುಣಿಸಿ ನೆರೆಯ ಆಂಧ್ರಕ್ಕೂ ಸಾಗುತ್ತದೆ. ಇದರಿಂದ ಕೃಷಿಗೆ ಹೆಚ್ಚು ನೀರು ಬಳಸುತ್ತಿರುವುದು ಕಾಣಸಿಗುತ್ತದೆ.

ತುಂಗಭದ್ರಾ ಅಣೆಕಟ್ಟು ನಿರ್ಮಾಣ ಮಾಡಲು ಈ ಭಾಗದಲ್ಲಿ ಫಲವತ್ತಾದ ಭೂಮಿಯು ಮುಳುಗಡೆಯಾಗಿದೆ. ಇದರಲ್ಲಿ ಬಹುಶಃ ೬೬ ಹಳ್ಳಿಗಳು ಮುಳುಗಿರಬಹುದೆಂದು ಅಂದಾಜಿಸಲಾಗಿದೆ. ಮುಳುಗಡೆ ಪ್ರದೇಶದ ಜನರು ಹೊಸಪೇಟೆಯ ಸುತ್ತಮುತ್ತ ಇರುವ ಹಳ್ಳಿಗಳಲ್ಲಿ ವಾಸವಾಗಿರುವರೆಂದು ಸಂಶೋಧನೆಯಿಂದ ಬೆಳಕಿಗೆ ಬಂದ ಅಂಶವಾಗಿದೆ. ಅಲ್ಲಿ ವಾಡಿಕೆಯಲ್ಲಿದ್ದ ಹಲವು ಊರು ಹೆಸರುಗಳು ಹಾಗೂ ಆಚರಣೆ ವಿಧಿ ವಿಧಾನಗಳು ಈಗಲೂ ಗ್ರಾಮದ ಜನರು ಆಚರಿಸುತ್ತಾ ಬರುತ್ತಿದ್ದಾರೆ. ನದಿಯಲ್ಲಿ ಮುಳುಗಿದ್ದ ಮಲ್ಲಾಪುರ

ಎಂಬ ತಾಲ್ಲೂಕು ಈಗ ಹಗರಿಬೊಮ್ಮನಹಳ್ಳಿಯಲ್ಲಿ ಸೇರಿದೆ. ಹೀಗೆ ಗ್ರಾಮಗಳ ಪುನರ್ವಸತಿಗಾಗಿ ಸರ್ಕಾರವು ಸುಮಾರು ೩೦ ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ ಎಂದು ತಿಳಿದುಬಂದಿದೆ.

ತುಂಗಭದ್ರಾ ನದಿಯ ನೀರು ಕಾಲುವೆಗಳ ಮೂಲಕ ಜನರ ಕೃಷಿಗಾಗಿ ಹೆಚ್ಚು ಬಳಸಲಾಗುತ್ತಿದೆ. ಈ ಭಾಗದ ರೈತನು ಅನಾದಿ ಕಾಲದಿಂದಲೂ ಕೃಷಿಗೆ ಮಹತ್ವ ನೀಡಿದಂತೆ ಅದನ್ನು ಉಳಿಸಿ ಬೆಳೆಸಿಕೊಂಡೆಸಾಗಿ ಬಂದಿದ್ದಾರೆ. ಜಿಲ್ಲೆಯ ೩೮,೦೪೭ ಹೆಕ್ಟೇರು ಪ್ರದೇಶವನ್ನು ಆಹಾರಕ್ಕಾಗಿ ಬಳಕೆಯ ಮಾಡಿ, ೨೪,೦೬೨ ಹೆಕ್ಟೇರ್ ಪ್ರದೇಶದಲ್ಲಿ ಆಹಾರೇತರ ಬೆಳೆಗಳನ್ನು ಬೆಳೆಯುತ್ತಿರುವುದು ಕಾಣಸಿಗುತ್ತದೆ. ಇದರಲ್ಲಿ ಅತಿ ಹೆಚ್ಚಾಗಿ ಕಡಲೆಕಾಯಿ ೫೮,೩೦೦ ಹಾಗೂ ಹತ್ತಿ ೪೬,೯೦೨ ಹೆಕ್ಟೇರ್‌ಗಳಲ್ಲಿ ಬೆಳೆಯಲಾಗುತ್ತಿದೆ. ಭತ್ತವನ್ನು ೨೧,೮೭೬ ಜೋಳ ೧೭,೦೧೪, ಸಜ್ಜೆ ೧೫೦೦೩, ರಾಗಿ ೧೭೧೭೫೩೨, ಕಬ್ಬು ೧೦,೪೪೨ ಹಾಗೂ ತೆಂಗು ಕೇವಲ ೪೬೫ ಹೆಕ್ಟೇರ್‌ಗಳಲ್ಲಿ ಬೆಳೆಯುತ್ತಿದ್ದಾರೆ. ಆದರೆ ತರಕಾರಿ ಬೆಳೆಗಳಾದ ಬದನೆಕಾಯಿ, ಟೊಮ್ಯಾಟೊ, ಮೆಣಸಿನಕಾಯಿ, ಈರುಳ್ಳಿ ಬೆಳೆಗಳನ್ನು ೪೯೭೧ ಹೆಕ್ಟೇರ್ ಗಳಲ್ಲಿ ಬೆಳೆದರೆ, ಬಾಳೆ, ನಿಂಬೆ ಬೆಳೆಯನ್ನು ೫೮೦೫ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ಇಷ್ಟು ಬೆಳೆಗಳಿಗೆ ನೀರುಣಿಸುವ ತುಂಗಭದ್ರಾ ನದಿಯ ನೀರಿನ ಸಂಗ್ರಹ ಸಾಮರ್ಥ್ಯವು ೧೩೩ ಟಿ.ಎಂ.ಸಿ.ಗಳಾಗಿದ್ದು ೧೬೩೩ ಅಡಿಗಳ ಆಳ ಇದೆ. ಈ ಆಳ ಇಂದು ಕಂಡುಬರುವುದಿಲ್ಲ. ಏಕೆಂದರೆ ಈ ಭಾಗದಲ್ಲಿ ಅತಿ ಹೆಚ್ಚು ರೀತಿಯಲ್ಲಿ ಖನಿಜೋದ್ಯಮ ಸಾಗುತ್ತಿರುವುದರಿಂದ ಮಳೆಗಾಲದಲ್ಲಿ ಖನಿಜ ಮಣ್ಣು ಕೊಚ್ಚಿ ಬಂದು ನದಿಯಲ್ಲಿ ಸೇರಿಕೊಂಡಿದೆ. ಬಹಳಷ್ಟು ಪ್ರಮಾಣದಲ್ಲಿ ಹೂಳು ತುಂಬಿಕೊಂಡಿದೆ. ಈಗಲೂ ಹೊಸಪೇಟೆ ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಭಾಗದ ಹಲವು ತಾಂಡಾಗಳಲ್ಲಿ ವಾಸವಾಗಿರುವ ಲಂಬಾಣಿ ಜನರು ನದಿಯ ನೀರನ್ನು ಆಶ್ರಯಿಸಿದ್ದಾರೆ. ಬಹುತೇಕವಾಗಿ ಎರೆಭೂಮಿಯಲ್ಲಿ ಮಳೆಯನ್ನು ನಂಬಿ ಅದರಿಂದ ಬೆಳೆಯನ್ನು ಪಡೆಯುತ್ತಿರುವುದು ಕಂಡುಬಂದಿದೆ.

ತುಂಗಭದ್ರ ನದಿಯಲ್ಲಿ ಮೀನಿನ ಸಾಕಾಣಿಕೆ ಮತ್ತು ಮಾರಾಟ ಪ್ರಕ್ರಿಯೆ ಸಾಗಿದೆ. ಇಲ್ಲಿ ಪ್ರತಿವರುಷವೂ ಸುಮಾರು ೬೦೦ ಮೆಟ್ರಿಕ್ ಟನ್ ಮೀನನ್ನು ಹಿಡಿಯಲಾಗುತ್ತದೆ. ಹೊಸಪೇಟೆ ಮತ್ತು ಕಮಲಾಪುರ ಕೆರೆ ದರೋಜಿ ಇನ್ನೂ ಮುಂತಾದ ಕಡೆ ಕೆರೆಗಳಲ್ಲಿ ಮೀನುಸಾಕಾಣಿಕೆ ನಡೆಸಿ ಅವನ್ನು ಹಿಡಿದು ಮಾರಾಟ ಮಾಡಲಾಗುತ್ತಿದೆ.

ಜಿಲ್ಲೆಯಲ್ಲಿ ಅತ್ಯಧಿಕ ಉಷ್ಣಾಂಶವು ದಾಖಲಾಗಿರುವುದು ಕಂಡುಬರುತ್ತದೆ. ಏಪ್ರಿಲ್ ಮೇ ತಿಂಗಳಲ್ಲಿ ಅಧಿಕ ತಾಪಮಾನ ಕಂಡುಬಂದರೆ ಡಿಸೆಂಬರ್ ನಿಂದ ಫೆಬ್ರುವರಿ ತಿಂಗಳವರೆಗೂ ಹವಾಗುಣ ತಂಪಾಗಿರುತ್ತದೆ. ಹವಾಮಾನ ವೈಪರೀತ್ಯದಿಂದಲೂ ಈ ಭಾಗದಲ್ಲಿ ಯಥೇಚ್ಛವಾಗಿ ಮಳೆಯಾಗುತ್ತದೆ. ಮಳೆಯನ್ನು ಆಶ್ರಯಿಸಿದ ರೈತರಿಗೆ ಈ ಮಳೆಯು ಒಮ್ಮೊಮ್ಮೆ ಒಳಿತು-ಕೆಡಕನ್ನು ನೀಡಿ ಸಾಗುತ್ತದೆ. ಡಿಸೆಂಬರ್ ತಿಂಗಳಲ್ಲಿ ಅತಿ ಕಡಿಮೆ ಅಂದರೆ ೧೬.೭ ಸೆಂಟಿಗ್ರೇಡ್ ಉಷ್ಣಾಂಶ ಇರುವುದು ಕಂಡುಬಂದಿದೆ. ಹಲವು ವರುಷದ ಹಿಂದೆ ಹವಾಮಾನ ವೈಪರೀತ್ಯದಿಂದ ೧೦-೧೨ ಡಿಗ್ರಿ ಸೆಲ್ಸಿಯೆಸ್ ಉಷ್ಣಾಂಶವಿತ್ತೆಂದು ತಿಳಿದುಬಂದಿದೆ.

ಕಳೆದ ಹಲವು ವರುಷದಿಂದಲೂ ಈ ಭಾಗದಲ್ಲಿ ಮಳೆ ಪ್ರಮಾಣವು ೪೦೦ ಮಿ.ಮೀಟರ್ ನಿಂದ ೭೦೦ ಮೀ.ಮೀಟರ್ ಗಳವರೆಗೂ ಆಗಿದೆ. ಇಲ್ಲಿ ಬರಗಾಲದ ಬವಣೆ ಹಾಗೂ ಒಮ್ಮೊಮ್ಮೆ ನೆರೆ ಹಾವಳಿಗೆ ಜನರು ನಲುಗಿ ಹೋಗಿದ್ದಾರೆ. ೨೦೦೯ರಲ್ಲಿ ಆದ ಭಾರೀ ಪ್ರಮಾಣದ ನೆರೆ ಹಾವಳಿಯಿದ ಜನರು ಅಪಾರ ನಷ್ಟವನ್ನು, ಸಾವು ನೋವು ಸಂಭವಿಸಿರುವುದು ಕಂಡುಬರುತ್ತದೆ. ಒಮ್ಮೊಮ್ಮೆ ಬಂಗಾಳ ಕೊಲ್ಲಿಯಿಂದ ಬೀಸಿಬರುವ ಚಂಡ ಮಾರುತದಿಂದ ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ಅತಿ ಹೆಚ್ಚು ಪ್ರಮಾಣದ ಮಳೆಯಾಗುತ್ತದೆ.

**ಕೃಷಿ:** ವ್ಯವಸಾಯಕ್ಕೆ ಹೆಚ್ಚು ಮಹತ್ವವಿರುವ ಜಿಲ್ಲೆಯಲ್ಲಿ ಸಂಶೋಧನಾ ಕೇಂದ್ರ ಮತ್ತು ತರಬೇತಿಗಳನ್ನು ರೈತರಿಗೆ ಆಯೋಜಿಸಿ ಯಶಸ್ವಿಗೊಳಿಸಲಾಗಿದೆ. ಬಳ್ಳಾರಿಯಲ್ಲಿ ೧೯೫೪ರಲ್ಲಿ ಕೇಂದ್ರ ಸರ್ಕಾರದ ಯೋಜನೆಯಂತೆ ಮಣ್ಣು ಸಂರಕ್ಷಣಾ ಸಂಶೋಧನಾ ಉಪಕೇಂದ್ರ ಸ್ಥಾಪಿಸಿ ಹೊಸಪೇಟೆಯಲ್ಲಿ ಮತ್ತು ಕಂಪ್ಲಿ ಭಾಗದ ರೈತರ ಅನುಕೂಲಕ್ಕಾಗಿ ವ್ಯವಸಾಯ ತರಬೇತಿ ಶಾಲೆಗಳನ್ನು ನಡೆಸಿದರೆ, ಹಗರಿ ಮತ್ತು ಸಿರುಗುಪ್ಪಗಳಲ್ಲಿ ಮದ್ರಾಸ್ ಸರಕಾರದ ವತಿಯಿಂದ ೧೯೦೬-೦೭ರಲ್ಲಿ ವ್ಯವಸಾಯ ಸಂಶೋಧನಾ ಕೇಂದ್ರ ಸ್ಥಾಪಿಸಲಾಗಿದೆ. ಈಚೆಗೆ ತೋಟಗಾರಿಕೆ ಇಲಾಖೆಯು ಹಲವು ಸಂಘಸಂಸ್ಥೆಗಳೊಂದಿಗೆ ವೈಜ್ಞಾನಿಕತೆಯನ್ನು ಬೇಸಾಯದಲ್ಲಿ ಅಳವಡಿಸುವ ವಿಧಾನವನ್ನು ನೀಡುವಲ್ಲಿ ಸಫಲವಾಗಿವೆ.

೧೯೪೮-೪೯ರಲ್ಲಿ ಕುರಿ-ದನದ ಸಾಕಾಣಿಕೆಗಾಗಿ ಮಹತ್ವ ನೀಡಿ, ಸಂಡೂರು ತಾಲ್ಲೂಕಿನ ಕುರೇಕುಪ್ಪ ಗ್ರಾಮದಲ್ಲಿ ಒಂದು ಫಾರಂನ್ನು ಸ್ಥಾಪಿಸಲಾಗಿದೆ. ಜೊತೆಗೆ ಈ ಭಾಗದಲ್ಲಿ ૩೦ ಪಶುವೈದ್ಯಾಲಯಗಳಿವೆ. ಅಲ್ಲದೆ ಕೃತಕ ಗರ್ಭಧಾರಣಾ ಕೇಂದ್ರಗಳು ಸ್ಥಾಪನೆಗೊಂಡಿವೆ. ಅಲ್ಲದೆ ಜಿಲ್ಲೆಯ ಹಲವು ಗ್ರಾಮಗಳ ಹೊರವಲಯ ಹಾಗೂ ನಗರಗಳಲ್ಲಿ ಕೋಳಿಸಾಕಾಣಿಕ ಘಟಕಗಳನ್ನು ಸ್ಥಾಪಿಸಲಾಗಿದೆ.

ಇಷ್ಟೆಲ್ಲ ಆದರೂ ಕೇವಲ ತುಂಗಭದ್ರಾನದಿ ಯೋಜನೆಯಷ್ಟೇ ರೈತರಿಗೆ ವರದಾನವಾಗಿಲ್ಲ. ಮಳೆಯಾಶ್ರಿತ ಕೆರೆಗಳ ನೀರು ಕೃಷಿಗಾರಿಕೆಗೆ ಬಳಸಲಾಗಿದೆ. ಈ ರೀತಿಯ ಕೆರೆಗಳು ರಾಜ ಮಹಾರಾಜರ ಕಾಲದಿಂದಲೂ ತುಂಬಾ ಮಹತ್ವ ಪಡೆದಿವೆ. ಅವುಗಳಲ್ಲಿ ಕಮಲಾಪುರ ಕೆರೆ, ದರೋಜಿ ಕೆರೆ, ಇನ್ನೂ ಮುಂತಾದವುಗಳಿವೆ.

ಹೀಗೆ ರೈತನು ಬೆಳೆದ ಹಲವು ಬೆಳೆಗಳನ್ನು ಮಾರುಕಟ್ಟೆಗ ರಫ್ತು ಮಾಡುತ್ತಾನೆ. ಅವುಗಳಲ್ಲಿ ಭತ್ತ, ಜೋಳ, ಈರುಳ್ಳಿ, ನೆಲಗಡಲೆ, ಹತ್ತಿ, ಸಕ್ಕರೆ, ಮ್ಯಾಂಗನೀಸ್ ಅದಿರು, ಕಬ್ಬಿಣದ ಅದಿರು, ಕಂಬಳಿ, ಜಮಖಾನೆಗಳನ್ನು ಹೊರದೇಶಕ್ಕೆ ರಫ್ತು ಮಾಡುವುದು ಕಂಡುಬಂದರೆ ಆಮದು ಮಾಡಿಕೊಳ್ಳುವ ವಸ್ತುಗಳೆಂದರೆ ಸಾಂಬಾರು ಪದಾರ್ಥಗಳು, ಟೀ, ಕಾಫಿ, ಬೀಜ, ಹತ್ತಿಬಟ್ಟೆ, ಗೋಧಿ, ಔಷಧಿಗಳು, ಯಂತ್ರದ ಉಪಕರಣಗಳು ಮತ್ತು ಕಾಗದಗಳಾಗಿವೆ. ಬಹುತೇಕವಾಗಿ ೪೦ ಕೇಂದ್ರದಲ್ಲಿ ವಾರಕ್ಕೆ ಒಮ್ಮೆ ಸಂತೆ-ಜಾತ್ರೆ ನಡೆದರೆ ಇನ್ನು ಕೆಲವು ಭಾಗದಲ್ಲಿ ನಿಯಂತ್ರಿತ ಮಾರುಕಟ್ಟೆಗಳು ಕಾಣಸಿಗುತ್ತವೆ.

ಕೃಷಿಗಾರಿಕೆ ಹಾಗೂ ಸಣ್ಣ ಮತ್ತು ಬೃಹತ್ ಪ್ರಮಾಣದ ಗೃಹಕೈಗಾರಿಕೆಗಳಿಗೆ ಸಾಲ ನೀಡುವ ಕೃಷಿ ಬ್ಯಾಂಕ್‌ಗಳಿವೆ. ಇವುಗಳಲ್ಲಿ ಪ್ರಮುಖವಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಹಾಗೂ ಪ್ರಗತಿ ಗ್ರಾಮೀಣ ಬ್ಯಾಂಕ್ ಸ್ಥಾಪನೆಯಾಗಿದೆ. ಇವು ಅಲ್ಲದೆ ವಾಣಿಜ್ಯಕರಣದ ಅಭಿವೃದ್ಧಿಗಾಗಿ ವಾಣಿಜ್ಯ ಬ್ಯಾಂಕ್‌ಗಳಿವೆ. ಜಿಲ್ಲೆಯಲ್ಲಿ ೧೯೭೨ರಲ್ಲಿ ೬೯ ವಾಣಿಜ್ಯ ಬ್ಯಾಂಕ್‌ಗಳು ಸ್ಥಾಪನೆ ಮಾಡಲಾಗಿದೆ. ಇವುಗಳೊಂದಿಗೆ ಬೇರೆ ಬೇರೆ ರಾಜ್ಯದ ಬ್ಯಾಂಕ್‌ಗಳು, ಆಕ್ಸಿಸ್ ಬ್ಯಾಂಕ್ ಅಲ್ಲದೆ ಒಂದು ಸಮುದಾಯ ನಡೆಸುವ ಸಹಕಾರ ಬ್ಯಾಂಕ್ ಒಂದು ವಾಣಿಜ್ಯ ಬ್ಯಾಂಕ್ ಕೂಡ ಮಾಡುವ ಎಲ್ಲಾ ಸೌಲಭ್ಯಗಳನ್ನು ನೀಡುತ್ತಾ ಸಾಗಿದೆ. ಅದೆಂದರೆ ವಿಕಾಸ ಬ್ಯಾಂಕ್. ವ್ಯವಸಾಯ ಸಹಕಾರ ಬ್ಯಾಂಕ್‌ಗಳಿಗಿಂತಲೂ ಉತ್ತಮ ಸ್ಥಾನವನ್ನು ಕಾದುಕೊಂಡಿದೆ. ಇದರ ಶಾಖಾ ಕೇಂದ್ರಗಳು ಜಿಲ್ಲೆಯಲ್ಲಿ ತಲೆ ಎತ್ತಿವೆ.

ಕೈಗಾರಿಕಾ ಕ್ಷೇತ್ರದಲ್ಲಿ ಜಿಲ್ಲೆಯು ಗಣನೀಯ ಪ್ರಮಾಣದ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ. ಈ ಭಾಗದಲ್ಲಿ ಉತ್ತಮ ಗುಣಮಟ್ಟದ ಅದಿರು ಸಿಗುತ್ತಿರುವುದರಿಂದ ಈಚೆಗೆ ಕಾರ್ಖಾನೆಗಳು ಅಧಿಕವಾಗಿ ಸ್ಥಾಪನೆಯಾಗುತ್ತಿವೆ. ಬಳ್ಳಾರಿ, ಸಂಡೂರು, ಹೊಸಪೇಟೆ ತಾಲೂಕಿನಲ್ಲೇ ಸುಮಾರು ೨೫ಕ್ಕೂ ಹೆಚ್ಚು ಕಾರ್ಖಾನೆಗಳಿವೆ. ಇಲ್ಲಿ ಹೆಚ್ಚಾಗಿ ದೊರೆಯುವ ಕಬ್ಬಿಣದ ಅದಿರು, ಮ್ಯಾಂಗನೀಸ್, ರೆಡ್‌ಆಕ್ಸೈಡ್‌ಗಳನ್ನು ತೆಗೆದು ಮಾರಾಟ ಮಾಡಲಾಗುತ್ತಿದೆ. ಈಚೆಗೆ ಹೊರದೇಶಕ್ಕೆ ಅತಿ ಹೆಚ್ಚು ರಫ್ತು ಆಗಿದ್ದು, ಕಬ್ಬಿಣದ ಅದಿರಾಗಿದೆ. ಈ ಅದಿರು ಸಾಗಾಣಿಕೆಯಿಂದ ದೇಶಕ್ಕೆ ಧಕ್ಕೆ ಆಗುವುದೆಂದು ಅರಿತು, ಅಧಿಕ ಮತ್ತು ರಫ್ತು ಕಾರ್ಯಕ್ಕೆ ಸರ್ಕಾರಗಳು ಕಡಿವಾಣ ಹಾಕಿವೆ. ಆದರೂ ಜಿಲ್ಲೆಯಲ್ಲಿ ತಲೆ ಎತ್ತಿರುವ ಕಾರ್ಖಾನೆಗಳು ಮಾತ್ರ ತಮ್ಮ ಕಾರ್ಯವನ್ನು ಸಾಗಿಸಿವೆ.

''ಸಂಡೂರು ತಾಲೂಕಿನಲ್ಲಿ ೧೯೭೦ರ ಸರಿಸುಮಾರಲ್ಲಿ 'ಎನ್‌ಎಂಡಿಸಿ' ಎಂಬ ಹೆಸರಿನ(ರಾಷ್ಟ್ರೀಯ-ಖನಿಜ ಅಭಿವೃದ್ಧಿ ಸಂಸ್ಥೆ) ಕಾರ್ಖಾನೆ ಸ್ಥಾಪಿಸಿ, ಈ ಭಾಗದ ನಿರುದ್ಯೋಗ ಸಮಸ್ಯೆ ನಿವಾರಣೆಯಾಯಿತು. ''೨೧ ಕೋಟಿ ರೂಪಾಯಿಗಳ ಬಂಡವಾಳ ವಿನಿಯೋಗಿಸಿ, ೯೮ ದಶಲಕ್ಷದಷ್ಟು ಕಬ್ಬಿಣದ ಅದಿರು ಉತ್ಪಾದನೆಯನ್ನು ಮಾಡುವ ಗುರಿ ಹೊಂದಿ ಸಾಧಿಸಿತು(ಟಿ.ಆರ್.ಚಂದ್ರಶೇಖರ್ ಪು.೪೯, ೧೯೯೪) ಎಂದು ತಿಳಿದುಬಂದಿದೆ. ಇದರೊಂದಿಗೆ ಈಚೆಗೆ ತೋರಣಗಲ್‌ನ ಜಿಂದಾಲ್, ಮರಿಯಮ್ಮನಹಳ್ಳಿಯ ಬಳಿಯ ಬಿಎಂಎಂ, ಕುಡತಿನಿಯ ಬಳಿಯಲ್ಲಿ ಸ್ಥಾಪಿಸಿದ ವಿದ್ಯುತ್ ಉತ್ಪಾದನಾ ಘಟಕ, ಅಲ್ಲದೆ ಸಣ್ಣ-ಪುಟ್ಟ ಕಾರ್ಖಾನೆಗಳು ಜೊತೆಗೆ ಇನ್ನೂ ಹಲವು ಕಾರ್ಖಾನೆಗಳು ಸ್ಥಾಪನೆಗಳಾಗುವ ನಿರೀಕ್ಷೆಯಿದೆ. ಅಲ್ಲದೆ ಜಿಲ್ಲೆಯಲ್ಲಿ ಕಂಪ್ಲಿ ಮತ್ತು ಹೊಸಪೇಟೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲಾಗಿದೆ. ಈ ಕಾರ್ಖಾನೆಗಳು ಕೊಡುವ ದರದಲ್ಲಿ ವ್ಯತ್ಯಾಸ ಆಗುತ್ತಿರುವುದರಿಂದ ಪಕ್ಕದ ಜಿಲ್ಲೆಗಳಿಗೆ ಕಬ್ಬು ಸಾಗಿಸಿ ಅಧಿಕ ಬೆಲೆ ಪಡೆಯುತ್ತಿರುವುದು ಕಂಡುಬಂದಿದೆ. ಈ ಕಾರ್ಖಾನೆಗಳ ಉಪ ಉತ್ಪಾದನೆ ವಸ್ತುಗಳಿಂದ ಸ್ಪಿರಿಟ್ ಮತ್ತು ಮಾದಕ ಪಾನೀಯಗಳನ್ನು ತಯಾರಿಸಲಾಗುತ್ತಿದೆ. ಇಷ್ಟೇ ಅಲ್ಲದೆ ಎಂ.ಜಿ. ಆಟೋಮೊಬೈಲ್ಸ್ ಎಂಜಿನಿಯರಿಂಗ್ ಕಂಪನಿಯಲ್ಲಿ ಸುಮಾರು ೪೦ಕ್ಕೂ ಹೆಚ್ಚು ಬಸ್‌ಗಳ ಮೈಕಟ್ಟುಗಳ ಜೋಡಣೆಕಾರ್ಯ ಆರಂಭಿಸಲಾಗುತ್ತಿದೆ.

ಅಲ್ಲದೆ ಬೃಹತ್ ಕಾರ್ಖಾನೆಗಳೊಂದಿಗೆ ಸಣ್ಣ ಪ್ರಮಾಣದ ಕೈಗಾರಿಕೆಗಳು ಇಲ್ಲಿವೆ. ಇಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ಕೈಗಾರಿಕಗಳಿವೆ. ಹತ್ತಿ ಕೈಗಾರಿಕೆಗಳು, ೩೯ ಸಾಮಾನ್ಯ ಇಂಜನಿಯರಿಂಗ್ ಉದ್ಯಮಗಳಿದ್ದರೆ, ೧೫ ಎಣ್ಣೆ ಗಿರಣಿಗಳಿವೆ. ಇವು ಅಲ್ಲದೆ ಸಣ್ಣ ಹಿಡುವಳಿಗಳಾದ ಚರ್ಮ, ರಬ್ಬರ್ , ಪ್ಲಾಸ್ಟಿಕ್ ಕೂಡ, ಹೊಗೆಸೊಪ್ಪು, ಆಹಾರ ಪಾನೀಯ, ಬೀಡಿ ಕಟ್ಟುವ, ಬಟ್ಟೆ ನೇಯುವ ಮತ್ತುಪುಸ್ತಕ ಮುದ್ರಣಾಲಯಗಳು ಇವೆ. ರೇಷ್ಮೆ ಮತ್ತು ಉಣ್ಣೆ ಹಾಗೂ ಹತ್ತಿ ನೇಯವ ಕೈಮಗ್ಗಗಳು ಸ್ಥಾಪನೆಯಾಗಿವೆ. ಹಲವು ಉದ್ಯಮಗಳನ್ನು ಸಹಕಾರ ಸಂಘಗಳು ನಡೆಸುತ್ತಿವೆ. ಸುಮಾರು ೯ ಎಣ್ಣೆ ತೆಗೆಯುವ ಗಾಣಗಳಿವೆ. ಜೊತೆಗೆ ಈ ಭಾಗದಲ್ಲಿ ಕೃಷಿಕರಿಗೆ ಅನುಕೂಲ ಆಗುವ ಎತ್ತಿನ ಬಂಡಿಯ ಸಲಕರಣೆಗಳನ್ನು ತಯಾರಿಸುವ ೨೪ ಘಟಕಗಳು ಸ್ಥಾಪನೆಯಾಗಿವೆ.

ಭೌಗೋಳಿಕವಾಗಿ ಬಳ್ಳಾರಿ ಜಿಲ್ಲೆಯೂ ಭೂಪಟದಲ್ಲಿ ನಂದಿ ಆಕಾರದಂತೆ ಕಾಣಸಿಗುತ್ತದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶ, ಪಶ್ಚಿಮಕ್ಕೆ ಧಾರವಾಡ, ಉತ್ತರಕ್ಕೆ ರಾಯಚೂರು, ದಕ್ಷಿಣ ದಿಕ್ಕಿಗೆ ಚಿತ್ರದುರ್ಗ ಜಿಲ್ಲೆಗಳಿವೆ. ಪೂರ್ವ ಪಶ್ಚಿಮ ಭಾಗ ೧೬೧.೮ ಕಿ.ಮೀ. ಉದ್ದವಿದ್ದರೆ, ಉತ್ತರ ದಕ್ಷಿಣ ಬದಿಯು ೮೩.೬೮ ಕಿ.ಮೀ. ಅಗಲವಾಗಿದೆ. ಪೂರ್ವ ರೇಖಾಂಶವು ೭೫ ಡಿಗ್ರಿ ಉತ್ತರ ರೇಖಾಂಶವು ೧೪ ಡಿಗ್ರಿಯಷ್ಟು ಒಳಗೊಂಡಿದೆ(ಕರ್ನಾಟಕ ಗೆಝೆಟಿಯರ್). ಬಳ್ಳಾರಿ ಜಿಲ್ಲೆಯು ಬ್ರಿಟೀಷರ ಆಳ್ವಿಕೆಯಲ್ಲಿ ಮದರಾಸು ಪ್ರಾಂತ್ಯಕ್ಕೆ ಸೇರಿತ್ತು. ಆಗ ಬಳ್ಳಾರಿಯ ಭಾಗದಲ್ಲಿ ಆದೋನಿ, ಆಲೂರು ಮತ್ತು ರಾಯದುರ್ಗಗಳು ಸೇರಿದ್ದವು. ಈ ಊರುಗಳು, ೧೯೫೩ರ ಅವಧಿಯಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ವೇಳೆಯಲ್ಲಿ ಆಂಧ್ರ ಪ್ರದೇಶವು ವಿಭಜನೆಯಾದ ವೇಳೆಯಲ್ಲಿ ಆದೋನಿ, ಆಲೂರು, ರಾಯದುರ್ಗಗಳು ಆಂಧ್ರ ಪ್ರದೇಶದಲ್ಲಿ ವಿಲೀನವಾದವು. ಇದಾದ ಬಳಿಕ ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳು ಉಪವಿಭಾಗಗಳಾಗಿ ವಿಂಗಡಣೆಯಾದವು.

ಬಳ್ಳಾರಿ ಜಿಲ್ಲೆಯ ೭ ತಾಲ್ಲೂಕು, ೧೧ ಪಟ್ಟಣಗಳು ಹಾಗೂ ೬೨೩ ಗ್ರಾಮವನ್ನೊಳಗೊಂಡಿದೆ. ಜಿಲ್ಲೆಯ ೯೮೯೮ ಕಿ.ಮೀಟರ್ ವಿಸ್ತೀರ್ಣದಲ್ಲಿ ಸುಮಾರು ೧೫ ಲಕ್ಷದಷ್ಟು ಜನಸಂಖ್ಯೆ ಇದೆಯೆಂದು ಸಮೀಕ್ಷೆಯಿಂದ ತಿಳಿದುಬಂದಿದೆ. ಈ ಹಿಂದೆ ಬಳ್ಳಾರಿ ಜಿಲ್ಲೆಯಲ್ಲಿ ಎಂಟು ತಾಲ್ಲೂಕುಗಳಿದ್ದವು. ಹರಪನ ಹಳ್ಳಿಯು ಈಗ ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾಗಿದೆ. ಇದರಿಂದ ಈಗ ಜಿಲ್ಲೆಯಲ್ಲಿರುವ ತಾಲ್ಲೂಕುಗಳೆಂದರೆ ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ, ಸಂಡೂರು, ಸಿರುಗುಪ್ಪಗಳಾಗಿವೆ.

ಜಿಲ್ಲೆಯ ಜೀವನಾಡಿಯಾಗಿರುವ ತುಂಗಭದ್ರಾ ನದಿ ಪಶ್ಚಿಮ ವಾಯುವ್ಯ ಹಾಗೂ ಉತ್ತರ ಈಶಾನ್ಯ ದಿಂದ ಹರಿದು ಸಾಗಿಬರುತ್ತದೆ. ಈ ನದಿಯ ನೀರು ರಾಯಚೂರು, ಆಂಧ್ರ ಜಿಲ್ಲೆಗಳಿಗೂ ವರದಾನವಾಗಿ ಪರಿಣಮಿಸಿದೆ. ಈ ನದಿಯ ಉಪನದಿಗಳೆಂದರೆ ಹಗರಿ, ವೇದಾವತಿ ಮತ್ತು ಚಿಕ್ಕ ಹಗರಿಗಳು. ಈ ನದಿಯ ಹರಿವು ಪಶ್ಚಿಮ ಮತ್ತು ಉತ್ತರದ ಗಡಿರೇಖೆಯಾಗಿ ಸಾಗುತ್ತದೆ.

ತುಂಗಭದ್ರಾ ನದಿಯು ಎರಡು ನದಿಗಳ ಸಂಗಮವಾಗಿದೆ. ತುಂಗ ಮತ್ತು ಭದ್ರ ಎಂಬ ನದಿಗಳು ಬೇರೆ ಬೇರೆಯಾಗಿ ಶಿವಮೊಗ್ಗದಿಂದ ಹರಿದು ಬಂದು ಕೂಡಲಿ ಎಂಬ ಸ್ಥಳದಲ್ಲಿ ಸಂಗಮವಾಗುತ್ತವೆ. ಇದರಿಂದ ಈ ಎರಡು ನದಿಗಳು ಸಂಗಮ ಸ್ಥಳದಿಂದ ತುಂಗಭದ್ರ ನದಿಯಾಗಿ ಪ್ರವಹಿಸುತ್ತಾ ಈ ಭಾಗದ ಕೃಷಿ ಹಾಗೂ ಕುಡಿಯಲು ನೆರವಾಗಿದೆಯಲ್ಲದೆ ಈ ಪ್ರದೇಶದಲ್ಲಿ ತಲೆ ಎತ್ತಿರುವ ಕಾರ್ಖಾನೆಗಳಿಗೂ ಈ ನದಿಯ ನೀರು ಸರಬರಾಜು ಮಾಡಲಾಗುತ್ತಿದೆ. 'ಮಲ್ಲಾಪುರ' ಎಂಬ ಊರಲ್ಲಿ ತುಂಗಭದ್ರ ಅಣೆಕಟ್ಟು ನಿರ್ಮಿಸಲಾಗಿದೆ. ಈ ಮಲ್ಲಾಪುರವು ಅಣೆಕಟ್ಟು ನಿರ್ಮಿಸುವ ಮುನ್ನಾ ಜಿಲ್ಲೆಯ ಉಪತಾಲ್ಲೂಕಾಗಿತ್ತು. ಈ ಅಣೆಕಟ್ಟು ಸ್ಥಳದಲ್ಲಿ ಸುಮಾರು ೬೬ ಹಳ್ಳಿಗಳು ಮುಳುಗಡೆಯಾಗಿವೆ. ಈ ನದಿ ಭಾಗದಲ್ಲಿ ವಾಸವಾಗಿದ್ದ ಜನರು ಹೊಸಪೇಟೆ ತಾಲೂಕಿನ ವಿವಿಧ ಗ್ರಾಮಗಳಲ್ಲಿ ನೆಲೆವೂರಿದ್ದಾರೆ.

ಜಿಲ್ಲೆಯ ಪೂರ್ವಭಾಗಕ್ಕಿಂತಲೂ ಪಶ್ಚಿಮ ಭಾಗವು ಎತ್ತರವಾಗಿದೆ. ಇದರಿಂದ ಅಧಿಕ ಮಳೆ ಈ ಪ್ರದೇಶದಲ್ಲಿ ಆಗುತ್ತದೆ. ಸಂಡೂರು ಬೆಟ್ಟದ ಸಾಲು ತುಂಗಭದ್ರ ಡ್ಯಾಂನ ಮಲ್ಲಾಪುರಂವರೆಗೂ ಹಬ್ಬಿರುವುದು ಕಾಣಸಿಗುತ್ತದೆ. ಸಂಡೂರಿನ ಬಳಿ ಇರುವ ನಾರಿಹಳ್ಳವೂ ಪ್ರಕೃತಿಯ ಮೈಸಿರಿಗೆ ನೀರುಣಿಸುತ್ತಿದೆ. ಇದೇ ಸ್ಥಳದಲ್ಲಿ ಪ್ರಸಿದ್ಧವಾದ ಪೌರಾಣಿಕ ಕುಮಾರಸ್ವಾಮಿ ದೇವಾಲಯವಿದೆ. ಈ ದೇವಾಲಯವು ೧೦೩೩ ಕಿ.ಮೀಟರ್ ಎತ್ತರವಾಗಿದ್ದರೆ, ರಾಮಘಡದ ಬೆಟ್ಟವು ೯೭೨ ಕಿ.ಮೀಟರ್ ಎತ್ತರವಿದೆ. ಹೊಸಪೇಟೆ ತಾಲೂಕಿನ ಜಂಬುನಾಥ ಬೆಟ್ಟವು ೯೦೮ ಕಿ.ಮೀಟರ್ ಎತ್ತರವಾಗಿದೆ. ಇಲ್ಲಿಯೂ ಸಹ ಪುರಾಣ ಪ್ರಸಿದ್ಧವಾದ ದೇವಾಲಯವಿದೆ. ಅದನ್ನು ಜಂಬುನಾಥ ದೇವಾಲಯ ಎಂದು ಕರೆಯಲಾಗುತ್ತದೆ. ಈ ದೇವಾಲಯದ ಜೀರ್ಣೋದ್ಧಾರವನ್ನು ಚೋಳರು ಮಾಡಿರಬಹುದೆಂದು ಇಲ್ಲಿ ದೊರೆತ ತಾಮ್ರ ಶಾಸನಗಳಿಂದ ತಿಳಿದುಬರುತ್ತದೆ. ಈ ಬೆಟ್ಟಗಳಲ್ಲಿ ದೊರಕುವ ಖನಿಜವು ಉತ್ತಮ ಗುಣಮಟ್ಟದ್ದಾಗಿರುವುದರಿಂದ ಈ ಹಿಂದೆ ಕಾಣಿಸುತ್ತಿದ್ದ ಬೆಟ್ಟದ ತಪ್ಪಲಿನ ಅರ್ಧಭಾಗವು ಖಾಲಿಯಾಗಿದೆ. ಅಲ್ಲದೇ ವಿದೇಶಕ್ಕೆ ಇಲ್ಲಿಯ ಕಬ್ಬಿಣದ ಅದಿರು ಸಾಗಾಣೆಯಾಗುತ್ತಿದೆ. ಇದರಿಂದ ಇನ್ನು ಕೆಲವೇ ದಿನದಲ್ಲಿ ಕಬ್ಬಿಣದ ಅದಿರುಳ್ಳ ಬೆಟ್ಟ ಇಲ್ಲಿ ಇತ್ತೆಂದು ನೋಡಲು ಕಾಣಸಿಗುವುದಿಲ್ಲ. ಈ ಗಣಿಗಾರಿಕೆಯಲ್ಲಿ ಹೆಚ್ಚಾಗಿ ಲಂಬಾಣಿಗರು ಕಾರ್ಮಿಕರಾಗಿದ್ದಾರೆ.

### ೨.೨. ಐತಿಹಾಸಿಕ ನೋಟ

ಬಳ್ಳಾರಿ ಜಿಲ್ಲೆಯು ಐತಿಹಾಸಿಕವಾಗಿಯೂ ತುಂಬಾ, ಮಹತ್ವವನ್ನು ಪಡೆದಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ವಾಸವಾಗಿರಬೇಕೆಂದು ಪ್ರಾಚ್ಯವಸ್ತು ಸಂಶೋಧನೆಯಿಂದ ತಿಳಿದುಬಂದ ಸಂಗತಿಯಾಗಿದೆ. ಮಾನವ ಸಂಸ್ಕೃತಿಯು ಅಂದಿನಿಂದ ಬೆಳೆದುಬಂದ ಬಗೆಯು ತುಂಬಾ ಕುತೂಹಲಕಾರಿಯಾಗಿದೆ. ಆದಿಮಾನವನ ವಾಸಸ್ಥಳವು ಐತಿಹಾಸಿಕ ಪ್ರಸಿದ್ಧವಾದ ಹಂಪಿಯೇ ಆಗಿತ್ತೆಂದು ಐತಿಹ್ಯಗಳ ದಾಖಲೆಯಿಂದ ತಿಳಿದು ಬಂದರೂ ಸಹ ಇದಕ್ಕೆ ಪುರಾವೆ ಒದಗಿಸುವಂತೆ ಜಿಲ್ಲೆಯ ಸಂಗನಕಲ್ಲು ಬಳಿ ಆದಿಮಾನವ ಬಳಸುತ್ತಿದ್ದ ಕಲ್ಲು ಕೊಡಲಿಗಳ ಪ್ರಾಕೃತಿಕ ಸಂಪತ್ತಿನ ಕಲ್ಲು ರಾಶಿ ದೊರಕಿದೆ. ಅಲ್ಲದೆ ಪ್ರಾಚೀನ ಇತಿಹಾಸದ ಚಹರೆಗಳ ಸ್ಥಿತ್ಯಂತರಗಳ ನೋಟವು ಈ ಭಾಗದಲ್ಲಿ ಲಭ್ಯವಾಗಿದೆ.

ಈ ಭಾಗದ ಪ್ರಮುಖ ಸ್ಥಳಗಳಾದ ನಿಟ್ಟೂರು, ಕಪ್ಪಗಲ್ಲು, ಸಂಗನಕಲ್ಲು, ಹಂಪಿ, ಹಳಕುಂಡಿ, ದರೋಜಿ, ಹಂಪಸಾಗರ, ತೆಕ್ಕಲಕೋಟೆ, ಗಾದಿಗನೂರು, ಧರ್ಮಸಾಗರ, ಧರ್ಮದಗುಡ್ಡ, ಚೇಪರ ಬೆಳಗಲ್ಲು ಮುಂತಾದ ಸ್ಥಳಗಳಲ್ಲಿ ಆದಿ ಶಿಲಾಯುಗದಿಂದ ಕಬ್ಬಿಣ ಯುಗದವರೆಗಿನ ಪಳೆಯುಳಿಕೆಗಳು ದೊರಕಿವೆ. ಈ ಸ್ಥಳದಲ್ಲಿ ಆದಿ ಮಾನವನು ಬಳಸುತ್ತಿದ್ದ ಮಡಕೆ-ಕಲ್ಲುಕೊಡಲಿ, ಗವಿವರ್ಣಾಚಿತ್ರಗಳು, ಬೂದಿಗುಡ್ಡ, ಮಡಕೆ-ಕುಡಿಕೆಗಳು ದೊರೆತಿರುವುದು ಶೋಧನೆಯಿಂದ ತಿಳಿದುಬಂದ ಸಂಗತಿಯಾಗಿದೆ.

ಮೌರ್ಯ ಅರಸರಿಂದ ಹಿಡಿದು ಪಾಳೇಗಾರಿಕೆಯವರೆಗೆ ಈ ಜಿಲ್ಲೆಯು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದೆ. ''ಬಳ್ಳಾರಿ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ಮೌರ್ಯ ಅರಸರ ಬಳಿಕ ಶಾತವಾಹನರು, ಪಲ್ಲವರು, ಬಾದಾಮಿ ಹಾಗೂ ಕಲ್ಯಾಣ ಚಾಲುಕ್ಯರು, ರಾಷ್ಟ್ರಕೂಟರು, ಕಲಚೂರಿಯರು, ನೊಳಂಬರು, ಹೊಯ್ಸಳರು, ಸೇವುಣರು''(ರವೀಂದ್ರನಾಥ, ಜಿಲ್ಲಾದರ್ಶನ) ಆಳ್ವಿಕೆ ನಡೆಸಿದರ ಬಗೆಗೆ ಉಲ್ಲೇಖ ದೊರೆಯುತ್ತಿದೆ. ಈ ರಾಜರುಗಳ ಚರಿತ್ರೆಯು ಅಲ್ಲಲ್ಲಿ ಕಂಡುಬಂದರೂ ಸಹ ಜಿಲ್ಲೆಯ ಚಾರಿತ್ರಿಕ ಲೋಕಕ್ಕೆ ಅತ್ಯಂತ ಸಾಂಸ್ಕೃತಿಕ ಕೊಡುಗೆ ನೀಡಿದ ಅರಸು ಮನೆತನಗಳೆಂದರೆ ಕಂಪಲಿ ಅರಸರು ಹಾಗೂ ವಿಜಯನಗರ ಸಾಮ್ರಾಜ್ಯದ ರಾಜಮನೆತನ ಮತ್ತು ಪಾಳೆಗಾರರ ಚರಿತ್ರೆಯು ಗಮನಾರ್ಹ. ಇವರು ನೀಡಿದ ದಾನದತ್ತಿಗಳು, ನಿರ್ಮಿಸಿದ ಕೋಟೆ-ಕೊತ್ತಲ, ಕೆರೆ-ಬಾವಿಗಳ ನಿರ್ಮಾಣಗಳೇ ಇಂದು ಮೂಕ ಸಾಕ್ಷಿಗಳಾಗಿ ನಮ್ಮ ಕಣ್ಮುಂದಿವೆ.

ಅತಿಹೆಚ್ಚು ವರ್ಷಗಳ ಕಾಲ ಆಳ್ವಿಕೆ ನಡೆಸಿದ ಅರಸು ಮನೆತನಗಳಲ್ಲಿ ವಿಜಯನಗರದ ಅರಸರು ಪ್ರಮುಖರು. ಈ ಅರಸರ ಆಳ್ವಿಕೆಯ ಪೂರ್ವದಲ್ಲಿ ಹಂಪಿ ತನ್ನದೇ ಆದ ಪೌರಾಣಿಕ ಹಿನ್ನೆಲೆಯನ್ನು ಪಡೆದಿತ್ತು. ಸ್ಥಳ ಪುರಾಣ ಐತಿಹ್ಯಗಳ ದಾಖಲೆಯಿಂದ ಪುರಾಣ ಇತಿಹಾಸ ಹೊಂದಿತ್ತು ಎಂದು ತಿಳಿಯುತ್ತದೆ. ರಾಮಾಯಣ ಕಾಲದಲ್ಲಿ ಪ್ರಸ್ತಾಪವಾದ ಕಿಷ್ಕಿಂದ ಹಂಪೆಯ ಬಳಿ ಇದೆ. ಇದು ಹನುಮನ ತವರೂರು ಅಲ್ಲದೆ, ಇಲ್ಲಿಯೇ ವಾಲಿ-ಸುಗ್ರೀವರ ಆಳ್ವಿಕೆಯಿತ್ತು ಎನ್ನಲಿಕ್ಕೆ ಈಗಲೂ ದೊರೆತಿರುವ ವಾಲಿ ಗುಹೆಗಳ ಪತ್ತೆಯಿಂದ ತಿಳಿದುಬಂದಿದೆ. ರಾಮನು ಸೀತೆಯನ್ನು ಹುಡುಕುತ್ತಾ ದಕ್ಷಿಣದ ಕಾಶಿಯೆಂದೆ ಪ್ರಸಿದ್ಧಿ ಪಡೆದ ಹಂಪೆಗೆ ಲಕ್ಷ್ಮಣ ಸಮೇತನಾಗಿ ಬಂದನೆಂದು ಸ್ಥಳ ಪುರಾಣವು ತಿಳಿಸುತ್ತದೆ. ಇಲ್ಲಿಂದಲೇ ಹನುಮಂತನನ್ನು ಸೀತೆಯ ಬಳಿ ಕಳಿಸಲಾಯಿತು ಎಂದು ಜನರು ತಿಳಿಸುತ್ತಾರೆ.

ಪಂಪಮಹಾತ್ಮೆಯಲ್ಲಿ ಪ್ರಸ್ತಾಪಿಸಿರುವಂತೆ ಉಲ್ಲೇಖದಂತೆ ಶಿವ-ಪಾರ್ವತಿಯರ ಉಲ್ಲೇಖ ಹಾಗೂ ಪಂಪಾಂಬಿಕೆ ಮತ್ತು ವಿರೂಪಾಕ್ಷರ ಚರಿತ್ರೆ ಇದೇ ಭಾಗದಲ್ಲಿ ಕಂಡುಬರುವ ಮಹತ್ವದ ಸಂಗತಿಯಾಗಿದೆ. ದಕ್ಷಬ್ರಹ್ಮನ ಮಗಳಾದ ಪಂಪಾಂಬಿಕೆ ಹಂಪೆಯಲ್ಲಿಯೇ ತಪಸ್ಸು ಮಾಡಿ ವಿರೂಪಾಕ್ಷನನ್ನು(ಶಿವನನ್ನು) ಒಲ್ಮೆಸಿಕೊಂಡ ಕ್ಷೇತ್ರಕ್ಕೆ ಪಂಪಾಕ್ಷೇತ್ರ ಎಂದು ಹೆಸರು. ಇದೇ ಸ್ಥಳದಲ್ಲಿಯೇ ಪಂಪಾಸರೋವರ, ಪಂಪಾತೀರ್ಥ ಎಂದು ಕರೆಸಿಕೊಳ್ಳುವ ನದಿ ಈಗಲೂ ಹಂಪೆಯ ವಿರೂಪಾಕ್ಷ ದೇವಸ್ಥಾನದ ಬಳಿ ಹಾದು

ಹೋಗುತ್ತದೆ. ಇದೇ ಸ್ಥಳದಲ್ಲಿಯೇ ಇರುವ ಮತಂಗ ಪರ್ವತದಲ್ಲಿ ಮತಂಗಮುನಿ ಮತ್ತು ಆತನ ಮಗಳಾದ ಮಾತಂಗಿ ವಾಸವಾಗಿದ್ದರೆಂದು ತಿಳಿದುಬಂದಿದೆ. ಈ ಮತಂಗಿಯೇ ಶಿಲ್ಪರ ಸರಸ್ವತಿಯಾಗಿರುವಳು.

ಆದರೆ ಈ ಸ್ಥಳದಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ದಾಖಲೆಗಳು ಅಷ್ಟೇನೂ ಸಿಗುವುದಿಲ್ಲವಾದರೂ ಸಹ ಹಂಪಿಯ ಪಶ್ಚಿಮ ದಿಕ್ಕಿನಲ್ಲಿರುವ ಧರ್ಮದಗುಡ್ಡದ ಗುಹೆಯಲ್ಲಿ ಪಾಂಡವರು ವನವಾಸದ ವೇಳೆ ತಂಗಿದ್ದರೆನ್ನಲಿಕ್ಕೆ ಹಲವು ಐತಿಹ್ಯಗಳೇ ಸಾಕ್ಷಿಯಾಗಿವೆ. ಅಲ್ಲದೆ ಈ ಭಾಗದಲ್ಲಿ ಇರುವ ಹಲವು ಕುರುಹುಗಳ ಸ್ಥಳ ಪುರಾಣದಿಂದ ತಿಳಿದು ಬಂದ ಸಂಗತಿಯಾಗಿದೆ. ಇಷ್ಟೆ ಅಲ್ಲದೆ ಆಯಾಕಾಲ ಘಟ್ಟದ ಅರಸುಮನೆತನದವರು ತಾವು ಸ್ಥಾಪಿಸಿದ ಶಾಸನಗಳು, ನಿರ್ಮಿಸಿದ ದೇವಾಲಯಗಳು, ಕೆರೆ-ಬಾವಿಗಳು ಐತಿಹಾಸಿಕ ಅಂಶಗಳ ಮೂಲ ಆಕರಗಳಾಗಿ ಪರಿಣಮಿಸಿವೆ.

ಇದರಿಂದಲೇ ಡಾ.ಜೆ.ಎಂ.ನಾಗಯ್ಯರವರು ''ಶಾಸನಗಳು ಒಂದು ಪ್ರದೇಶದ ಪ್ರಾಚೀನ ಇತಿಹಾಸವನ್ನು ಸಂಸ್ಕೃತಿಯನ್ನು ತಿಳಿಸುವಲ್ಲಿ ಮೂಕಸಾಕ್ಷಿಗಳಾಗಿವೆ''[೧]ಎಂಬ ಅವರ ಮಾತು ಸತ್ಯ ಎನಿಸುತ್ತದೆ. ಕ್ರಿ.ಶ.೩ನೇ ಶತಮಾನದಲ್ಲಿದ್ದ ಮೌರ್ಯರ ಆಳ್ವಿಕೆ ಈ ಭಾಗದಲ್ಲಿತ್ತು ಎನ್ನಲು ಜಿಲ್ಲೆಯ ಉಡೇಗೋಳು, ನಿಟ್ಟೂರು ಬಳಿಯಲ್ಲಿ ಅಶೋಕನ ಅತ್ಯಂತ ಮಹತ್ವದ ಶಾಸನಗಳು ದೊರೆತಿವೆ. ಇದಕ್ಕೂ ಪೂರ್ವದಲ್ಲಿ ಬೌದ್ಧ ಮತ್ತು ಜೈನಧರ್ಮದ ದಾಖಲೆಗಳು ಹಂಪೆಯ ಬಳಿಯ ಉತ್ಖನನದಿಂದ ದೊರೆತಿವೆ. ಬೌದ್ಧಧರ್ಮಕ್ಕೆ ಬೌದ್ಧ ಶಿಲ್ಪಗಳು, ಬೌದ್ಧ ಧರ್ಮ ಪ್ರಸಾರಕ್ಕೆ ಪ್ರೋತ್ಸಾಹಿಸಿದ ಅಶೋಕನ ಶಾಸನಗಳು ದೊರಕಿವೆ. ಆದರೆ ಜೈನ ಧರ್ಮದ ಆವಾಸ ತಾಣವು ಬಳ್ಳಾರಿಯ ಪಶ್ಚಿಮ ದಿಕ್ಕಿನಲ್ಲಿರುವ ಕೊಪಣಾಚಲದಲ್ಲಿ ದಾಖಲೆಗಳು ದೊರಕಿವೆ ಎನ್ನಬಹುದು.

ಜಿಲ್ಲೆಯ ಹಿರೇಹಡಗಲಿ ಬಳಿ ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದ ಶಾಸನ ದೊರೆತಿದೆ. ಬನವಾಸಿ ಕದಂಬರು ಉಚ್ಚಂಗಿಯ ದುರ್ಗವನ್ನು ತಮ್ಮ ಉಪರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೆಂದು ಅಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಈ ಪ್ರದೇಶವು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನಲ್ಲಿದೆ. ನಂತರ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಹೊಯ್ಸಳರು, ಸೇವುಣರು ಈ ಪ್ರದೇಶವನ್ನು ಆಳಿದರೆಂದು ತಿಳಿದುಬರುತ್ತದೆ. ಆದರೆ ಜಿಲ್ಲೆಯ ಪ್ರಮುಖ ಸ್ಥಳವಾದ ಕಂಪಲಿ ಅರಸು ಮನೆತನಕ್ಕೆ ಸಂಬಂಧಿಸಿದ ಚರಿತ್ರೆ ವಿಶೇಷವಾದದ್ದಾಗಿದೆ. ಕ್ರಿ.ಶ.೧೦೨೭ರ ಶಾಸನದಂತೆ ಜಗದೇಕ ಮಲ್ಲನೆಂಬ ನೊಳಂಬ ಪಲ್ಲವ ಅರಸನು ''ಕಪಿಲಿಯೆ ಲಾಸನಂ ಗೆಯ್ದು ರಾಜ್ಯಂಗೆಯ್ಯುತ್ತಿರಲು ಎಂದಿದೆ'' ಎಂದು ಹೆರೆಂಜಿ ಕೃಷ್ಣಭಟ್ ತಿಳಿಸಿದ್ದಾರೆ. ಇಲ್ಲಿ ಬಳಸಿರುವ ಕಪಿಲೆಯೆ ಬಳ್ಳಾರಿ ಜಿಲ್ಲೆಯಲ್ಲಿರುವ ಕಂಪಲಿಯಾಗಿದೆ. ಅಲ್ಲದೆ, ಕೋಗಳಿ, ಬಲ್ಲಕುಂದೆ ನಾಡು, ಕುರುಗೋಡು, ಬಾಗಳಿ, ನೊಳಂಬವಾಡಿ, ಸ್ಕಂದನಾಡು ಪ್ರದೇಶಗಳು ಜಿಲ್ಲೆಯಲ್ಲಿರುವ ಹಲವು ಸ್ಥಳಗಳಾಗಿವೆ.

ವಿಜಯನಗರ ಅರಸರು ಆಳ್ವಿಕೆಗೆ ಮುನ್ನಾ ಕಂಪಿಲರಾಜ ಮತ್ತು ಆತನ ಮಗನಾದ ಕುಮಾರರಾಮನ ಚರಿತ್ರೆಯು ಇಡೀ ವಿಶ್ವಕ್ಕೆ ಮಾದರಿಯಾಗಿತ್ತು ಎಂದು ದೊರೆತ ಶಾಸನಗಳು ಹಾಗೂ ಐತಿಹ್ಯಗಳಿಂದ ತಿಳಿದುಬರುತ್ತದೆ.

ಕಂಪಿಲರಾಯ ಮತ್ತು ಕುಮಾರರಾಮ ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿಸಿಕೊಂಡಂತೆ ಜಿಲ್ಲೆಯ ಸಂಡೂರು ತಾಲೂಕಿನ 'ರಾಯನ ಮಲೈ' ಪ್ರದೇಶವು ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ. ಈ ರಾಯನ ಮಲೈ(ರಾಮಘಡ) ಪ್ರದೇಶದಲ್ಲಿ ವಿಜಯನಗರದ ಅರಸರು ನಿರ್ಮಿಸಿದ ರಾಮನ ದೇವಾಲಯ ಹಾಗೂ ಇದೇ ಸ್ಥಳದಲ್ಲಿ ಕುಮಾರರಾಮ ಹೋಲಿಕೆ ರಾಮನಿಗೆ ಸಂಬಂಧಿಸಿದ ವೀರಗಲ್ಲು ಪತ್ತೆಯಾಗಿದೆ.

ಕುಮ್ಮಟದುರ್ಗ ಅರಸರು ಅವಸಾನದ ಬಳಿಕವೇ ಈ ಭಾಗದಲ್ಲಿ ಅತ್ಯಂತ ಬೃಹತ್ ಸಾಮ್ರಾಜ್ಯವೊಂದು ತಲೆ ಎತ್ತಿತು. ಅದುವೇ ವಿಜಯನಗರ ಸಾಮ್ರಾಜ್ಯ. ಇಂದಿನ ಹಂಪಿಯೇ ಅಂದಿನ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಸುಮಾರು ೩೦೦ ವರ್ಷಗಳ ಕಾಲ ಈ ಭಾಗದಲ್ಲಿ ನಾಲ್ಕು ವಂಶಸ್ಥರು ಆಳ್ವಿಕೆ ನಡೆಸಿದ್ದು ಕಾಣಸಿಗುತ್ತದೆ. ಸಂಗಮ, ಸಾಳುವ, ತುಳು ಹಾಗೂ ಅರವೀಡು ವಂಶದ ರಾಜರು ಈ ಸ್ಥಳದಲ್ಲಿ ಆಳ್ವಿಕೆ ನಡೆಸಿದರು. ಇಡೀ ವಿಶ್ವವೇ ಕಣ್ತೆರೆದು ನೋಡುವಂತೆ, ವಿದೇಶದ ಪ್ರವಾಸಿಗರು ಇಮ್ಮಡಿ ದೇವರಾಯ, ಶ್ರೀಕೃಷ್ಣ ದೇವರಾಯನ ಆಳ್ವಿಕೆಯಲ್ಲಿ ಆಗಮಿಸಿ ಈ ರಾಜಧಾನಿಯ ಮಹತ್ವವನ್ನು ಕೊಂಡಾಡಿರುವುದು ಅವರು ಬರೆದ ಪ್ರವಾಸಕಥನಗಳಲ್ಲಿ ದಾಖಲಾಗಿದೆ. ಅಳಿದುಳಿದ ದೇವಾಲಯಗಳು, ಲಭ್ಯವಾದ ಶಾಸನಗಳು ಈ ಸಾಮ್ರಾಜ್ಯದ ವಿಸ್ತಾರ ಎಲ್ಲಿಯವರೆಗೆ ಇತ್ತು ಎಂಬುದನ್ನು ತಿಳಿಯಪಡಿಸುತ್ತವೆ. ಕೊನೆಗೆ ಅರವೀಡು ವಂಶದ ಅಳಿಯ ರಾಮರಾಯನ ಕಾಲದಲ್ಲಿ ಕ್ರಿ.ಶ.೧೬೬೫ರ ರಕ್ಕಸತಂಗಡಗಿ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾಯಿತು. ಕಂಪಲಿ ಅರಸರ ಆಳ್ವಿಕೆ ಕುರಿತು ಹಲವು ಆಧಾರಗಳ ಜೊತೆಗೆ ಜನಪದೀಯ ಮೌಖಿಕ ಕಾವ್ಯಗಳು ಮಹತ್ತರವಾದ ಅಂಶಗಳನ್ನು ತಿಳಯಪಡಿಸುತ್ತವೆ. ಅಂದರೆ ಕೇವಲ ಆದರೆ ವಿಜಯನಗರದ ಅರಸರು ಮಾತ್ರ ಜನಪದರಿಗೆ ವಸ್ತುವಾಗಲಿಲ್ಲ. ಶಿಶುಪ್ರಾಸದಲ್ಲಿ ಮಾತ್ರ ವಿಜಯನಗರದ ಅರಸರ ಆಳ್ವಿಕೆಯನ್ನು ನೆನಪಿಸುವ ಗೀತೆ ಈ ಭಾಗದಲ್ಲಿ ಈಗಲೂ ಪ್ರಚಲಿತದಲ್ಲಿದೆ. ''ಆನೆಬಂತೊಂದು ಆನೆ, ಇಲ್ಲಿಗ್ಯಾಕೆ ಬಂತು, ಹಾದಿ ತಪ್ಪಿ ಬಂತು ಬೀದಿ ತಪ್ಪಿ ಬಂತು'' ಎಂಬ ಪಾಯಿರಿ ಸುಲ್ತಾನರ ಹಂಪಿಯ ದಾಳಿಯನ್ನು ನೆನಪಿಸುತ್ತದೆ. ಈ ರಾಜರ ಆಳ್ವಿಕೆಯ ಬಳಿಕವೇ ಹರಪನಹಳ್ಳಿ ಪಾಳೆಯಗಾರರಲ್ಲಿ ಈ ಭಾಗವು ಹರಿದು ಹಂಚಿಹೋಯಿತು. ಕುರುಬರ ಹಂಡೆಹನುಮಪ್ಪನಾಯಕ ಬಳ್ಳಾರಿ ಪ್ರಾಂತ್ಯವನ್ನು ಆಳಿದನು.

ತದನಂತರದಲ್ಲಿ ಮೈಸೂರಿನ ಹುಲಿ ಎಂದೆ ಪ್ರಸಿದ್ಧನಾದ ಟಿಪ್ಪುಸುಲ್ತಾನನು ಬಳ್ಳಾರಿಯನ್ನು ವಶಕ್ಕೆ ತೆಗೆದುಕೊಂಡನು. ಈತನ ತಂದೆ ಹೈದರ್‌ಅಲಿ ಕಟ್ಟಿಸಿದ ಕೋಟೆ ಇಂದಿನ ಬಳ್ಳಾರಿ ಕೋಟೆ ಎಂತಲೂ ಪ್ರತೀತಿ ಇದೆ. ಇದರ ಬಳಿಕ ಬಳ್ಳಾರಿ ಭಾಗವು ಬ್ರಿಟೀಷರ ಆಳ್ವಿಕೆಗೆ ಒಳಗಾಯಿತು. ಆಗ ಮದರಾಸು ಪ್ರಾಂತ್ಯದಲ್ಲಿ ಬಳ್ಳಾರಿ ವಿಲೀನವಾಗಿತ್ತೆಂದು ತಿಳಿದುಬರುತ್ತದೆ. ೧೯೫೩ರ ಬಳಿಕ ಭಾಷಾವಾರುಪ್ರಾಂತ್ಯ ರಚನೆಯಾದ ನಂತರ ಜಿಲ್ಲೆಯಲ್ಲಿದ್ದ ಆದವಾನಿ, ಆಲೂರು, ರಾಯದುರ್ಗ ಆಂಧ್ರಕ್ಕೆ ಸೇರಿದವು. ಆಗ ಜಿಲ್ಲೆಯಲ್ಲಿ ೮ ತಾಲ್ಲೂಕು

ಗಳು ಒಳಗೊಂಡಿದ್ದವು. ಬಳ್ಳಾರಿ, ಹೊಸಪೇಟೆ, ಸಂಡೂರು, ಹಗರಿಬೊಮ್ಮನಹಳ್ಳಿ, ಹಡಗಲಿ, ಕೂಡ್ಲಿಗಿ, ಸಿರುಗುಪ್ಪ, ಮಲ್ಲಾಪುರಗಳಾಗಿವೆ. ಈಗ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಮಲ್ಲಾಪುರ ಸೇರಿದೆ. ಏಕೆಂದರೆ ತುಂಗಾಭದ್ರ ಅಣೆಕಟ್ಟು ನಿರ್ಮಿಸಿದ ಬಳಿಕ ಉಪ ತಾಲ್ಲೂಕು ಆದ ಮಲ್ಲಾಪುರವು ಹಗರಿಬೊಮ್ಮನ ಹಳ್ಳಿಯಲ್ಲಿ ಸೇರ್ಪಡೆಯಾಗಿದೆ. ಅಲ್ಲದೆ ಹರಪನಹಳ್ಳಿಯೂ ದಾವಣಗೆರೆ ಜಿಲ್ಲೆಗೆ ಸೇರಿದೆ. ಈಗ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳು ಉಳಿದಿವೆ. ಇವುಗಳು ಚಾರಿತ್ರಿಕ ದೃಷ್ಟಿಯಿಂದ ತುಂಬಾ ಮಹತ್ವವನ್ನು ಪಡೆದಿವೆ. ಬಳ್ಳಾರಿ ಜಿಲ್ಲೆಯೂ ಅದರಲ್ಲೂ ಹಂಪೆಯು ಇಡೀ ದಕ್ಷಿಣ ಭಾರತದಲ್ಲೇ ಅತ್ಯಂತ ಮಹತ್ವ ಪಡೆದಿತ್ತು ಎಂಬುದು ಚಾರಿತ್ರಿಕ ದಾಖಲೆಗಳಿಂದ ತಿಳಿದುಬರುತ್ತದೆ.

### ೧.೩. ಸಾಮಾಜಿಕ ಜೀವನ

ಜಿಲ್ಲೆಯಲ್ಲಿ ಬಹುತೇಕ ಗ್ರಾಮಗಳಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಆದರೂ ಕೆಲವು ಕಡೆ ಬಾಲ್ಯ-ವಿಧವಾ ವಿವಾಹಗಳು ಕಂಡುಬರುತ್ತದೆ. ದೇವದಾಸಿ ಪದ್ಧತಿ ಜಿಲ್ಲೆಯಲ್ಲಿ ಈ ಹಿಂದೆ ಅಧಿಕವಾಗಿತ್ತು. ಆದರೆ ಈಗ ಅದರ ಪ್ರಮಾಣ ಕಡಿಮೆಯಾಗಿದೆ. ಈ ಅನಿಷ್ಟ ಪದ್ಧತಿಯ ಆಚರಣೆಗಳು ಕೆಳವರ್ಗದ ಜನರಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಜಿಲ್ಲೆಯ ಹಲವು ಗ್ರಾಮಗಳಲ್ಲಿರುವ ಲಂಬಾಣಿ ಸಮುದಾಯದವರಲ್ಲಿ ಬಾಲ್ಯ ವಿವಾಹ ಸಂಖ್ಯೆ ಕಡಿಮೆ ಆದರೂ ತುಂಬಾ ತಡವಾಗಿ ಮದುವೆ ಮಾಡುವುದು ಕಂಡುಬರುವುದಿಲ್ಲ. ಇವರಲ್ಲಿ ಗಂಡ ಸತ್ತರೆ ವಿಧವೆ ಮತ್ತೊಂದು ಮದುವೆ ಆಗಬಹುದಾದ ಸಂಪ್ರದಾಯವಿದೆ. ಅಲ್ಲದೆ ಬಹುಪತ್ನಿತ್ವವು ರೂಢಿಯಲ್ಲಿರುವುದು ಕ್ಷೇತ್ರಕಾರ್ಯದ ಮೂಲಕ ಬೆಳಕಿಗೆ ಬಂದಿದೆ.

ಜಿಲ್ಲೆಯ ಬಹುತೇಕ ಲಂಬಾಣಿಗರು ಮನೆಗಳನ್ನು ಈಚೆಗೆ ಇಟ್ಟಿಗೆ, ಗಾರೆ, ಕಲ್ಲುಗಳಿಂದ ನಿರ್ಮಾಣ ಮಾಡಿಕೊಂಡಿರುವುದು ಕಂಡುಬರುತ್ತದೆ. ಈ ಹಿಂದೆ ಗುಡಿಸಲು ವಾಸಿಗಳಾಗಿ ತಾಂಡಾದಲ್ಲಿ ಜೀವಿಸುತ್ತಿದ್ದರು.

ಈ ಭಾಗದ ಜನರ ಉಡುಗೆ ತೊಡುಗೆಗಳನ್ನು ಗಮನಿಸಿದರೆ ಆಧುನಿಕ ಶೈಲಿಯ ಉಡುಗೆಗೆ ಇವರು ಒಳಗಾಗಿರುವುದು ಕಂಡುಬರುತ್ತದೆ. ಆದಾಗ್ಯೂ ಕೆಲವು ಗ್ರಾಮಗಳಲ್ಲಿ ಇನ್ನೂ ಸಾಂಪ್ರದಾಯಿಕ ಉಡುಗೆ ಮಾತ್ರ ಮಾಯವಾಗಿಲ್ಲ. ಜುಬ್ಬಾ, ಲುಂಗಿ, ಹೆಗಲ ಮೇಲೆ ಶಲ್ಯಾ ಇನ್ನಿತರೆ ಉಡುಪುಗಳನ್ನು ಪುರುಷರು ಧರಿಸುತ್ತಾರೆ. ಹೆಂಗಸರು, ಸೀರೆ-ಕುಪ್ಪಸ ತೊಡುವುದು ಸಾಮಾನ್ಯವಾದರೂ ಚೂಡಿದಾರ್, ಟೀ-ಶರ್ಟ್ ಜೀನ್ಸ್ ಪ್ಯಾಂಟ್‌ಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಈ ಉಡುಗೆ ತೊಡುಗೆಯು ಎಲ್ಲರಲ್ಲಿ ಕಂಡುಬಂದರೂ ಲಂಬಾಣಿ ಸಮುದಾಯದವರಲ್ಲಿ ಮಾತ್ರ ಪುರುಷರಿಗಿಂತಲೂ ಸ್ತ್ರೀಯರ ಉಡುಗೆ-ತೊಡುಗೆ ಮಾತ್ರ ತುಂಬಾ ಭಿನ್ನ ಹಾಗೂ ವಿಶಿಷ್ಟವಾಗಿದೆ. ಆದರೆ ಈಚೆಗೆ ಸಾಂಪ್ರದಾಯಿಕ ಉಡುಗೆ ಮಾಯವಾಗಿ ಸೀರೆ ಕುಪ್ಪಸಗಳನ್ನು ಧರಿಸುತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ.

ಜಿಲ್ಲೆಯ ಬಹುತೇಕ ಜನರು ಸಸ್ಯಾಹಾರ ಮತ್ತು ಮಾಂಸಹಾರಿಗಳಾಗಿದ್ದಾರೆ. ಆದರೆ ಲಂಬಾಣಿ ಜನರು ಮಾತ್ರ ಹೆಚ್ಚಾಗಿ ಮಾಂಸಹಾರಿಗಳಾಗಿರುವುದು ಕಂಡುಬರುತ್ತದೆ. ಇದರೊಂದಿಗೆ ಜೋಳದ ರೊಟ್ಟಿ ಹಾಗೂ ಮುದ್ದೆಯನ್ನು ಪ್ರತಿಯೊಂದು ತಾಂಡಾದಲ್ಲಿ ಉಪಯೋಗಿಸುತ್ತಿರುವುದು ಸಾಮಾನ್ಯ.

**ಬಳ್ಳಾರಿ ಜಿಲ್ಲೆ ಮತ್ತು ಜಿಲ್ಲೆಯಲ್ಲಿರುವ ತಾಂಡಗಳ ೨೦೧೦ ಮತ್ತು ೨೦೧೧ರ ಜನಗಣತಿಯ ಅಂದಾಜಿನ ಪ್ರಕಾರ ಲಂಬಾಣಿ ಜನಾಂಗದ ಜನಸಂಖ್ಯೆ ವಿವರ ಈ ಕೆಳಗಿನಂತಿವೆ.**

| ಕ್ರ.ಸಂ. | ವಿವರಗಳು | ೨೦೧೦ರ ವರ್ಷ | ೨೦೧೧ರ ವರ್ಷ |
|---|---|---|---|
| ೧ | ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆ | ೨೦,೨೭,೧೪೦ | ೨೫,೩೨,೩೮೩ |
| | ಗಂಡಸರು | ೧೦,೨೯,೭೧೪ | ೧೨,೮೦,೪೦೨ |
| | ಹೆಂಗಸರು | ೯,೯೭,೪೨೬ | ೧೨,೫೧,೯೮೧ |
| ೨ | ಲಂಬಾಣಿ ಜನಾಂಗದ ಒಟ್ಟು ಜನಸಂಖ್ಯೆ | ೬೨,೮೦೫ | ೭೮,೧೮೮ |
| | ಗಂಡಸರು | ೩೩,೯೨೦ | ೩೯,೮೭೨ |
| | ಹೆಂಗಸರು | ೨೮,೬೩೨ | ೩೮,೩೧೬ |

ಇಡೀ ರಾಜ್ಯದಲ್ಲೇ ಜಿಲ್ಲೆಯು ಜನಸಂಖ್ಯೆಯ ದೃಷ್ಟಿಯಲ್ಲಿ ೧೧ನೇ ಸ್ಥಾನ ಪಡೆದಿದೆ. ೧೯೯೧ರಲ್ಲಿಯ ಜನಗಣತಿಯ ಆಧಾರದಂತೆ ಜಿಲ್ಲೆಯಲ್ಲಿದ್ದ ಒಟ್ಟು ಜನಸಂಖ್ಯೆಯು ೧,೪೭,೮೯೯ರಷ್ಟಿತ್ತೆಂದು ಸಮೀಕ್ಷೆಯಿಂದ ತಿಳಿದುಬಂದಿದೆ. ಇದರಲ್ಲಿ ಪರಿಶಿಷ್ಟ ಜಾತಿ ಪುರುಷರು, ೧,೫೬,೯೪೪, ಮಹಿಳೆಯರು ೧,೫೪,೩೦೮ ಇದ್ದು ಮಹಿಳೆಯರ ಪ್ರಮಾಣ ಪುರುಷರಿಗಿಂತ ಕಡಿಮೆ ಎನಿಸುತ್ತದೆ. ಆದರೆ ಪರಿಶಿಷ್ಟ ಪಂಗಡದ ಪುರುಷರು ೭೪,೪೦೨, ಮಹಿಳೆಯರು ೭೩,೪೬೭ರಷ್ಟಿದ್ದಿದ್ದು ತಿಳಿದುಬರುತ್ತದೆ. ಲಂಬಾಣಿ ಸಮುದಾಯವನ್ನು ಮೊದಲು ಪರಿಶಿಷ್ಟವರ್ಗದಲ್ಲಿ ಸೇರಿಸಲಾಗಿತ್ತು. ಈಗ ಪರಿಶಿಷ್ಟಜಾತಿಯಲ್ಲಿ ಸೇರಿಸಲಾಗಿದೆ. ಇದರಿಂದ ಪರಿಶಿಷ್ಟ ಜಾತಿಯ ಹಲವು ಜಾತಿವರ್ಗಗಳೊಂದಿಗೆ ಲಂಬಾಣಿಗರು ಸೇರಿ ಒಟ್ಟು ಜನಸಂಖ್ಯೆ ಹೆಚ್ಚಾಗಿದೆ. ಈ ಅಂಕಿಸಂಖ್ಯೆಯು ೧೦ ವರ್ಷದಲ್ಲಿ ಹೆಚ್ಚಾಗಿದೆ. ಇದರಿಂದ ಜಿಲ್ಲೆಯ ತಲಾವರಮಾನವು ಏರು-ಪೇರಾಗಿ ಕಂಡುಬರುತ್ತದೆ.

**ಹಬ್ಬ ಹರಿದಿನ:** ಜಿಲ್ಲೆಯಲ್ಲಿ ವರ್ಷಕ್ಕೊಮ್ಮೆ ಮತ್ತು ತಿಂಗಳಿಗೊಮ್ಮೆ ಹಬ್ಬಗಳನ್ನು ಚಾಚುತಪ್ಪದೇ ಗ್ರಾಮೀಣ ಭಾಗದ ಜನರು ಆಚರಿಸಿಕೊಂಡು ಬರುತ್ತಿದ್ದಾರೆ. ಆಯಾ ಧರ್ಮದವರು ಕೆಲವು ಹಬ್ಬಗಳನ್ನು ಪ್ರತ್ಯೇಕವಾಗಿ ಆಚರಿಸಿದರೆ ಮತ್ತೆ ಕೆಲವು ಹಬ್ಬಗಳನ್ನು ಎಲ್ಲಾ ಧರ್ಮವರು ಸಾಮೂಹಿಕವಾಗಿ ಆಚರಿಸುವರು. ಇನ್ನು ದೀಪಾವಳಿ, ಮೊಹರಂ ಹಬ್ಬಗಳಲ್ಲಿ ಭಕ್ತಿ ಭಾವದಿಂದ ಬಹುಸಂಖ್ಯೆಯಲ್ಲಿ ಹಿಂದು-ಮುಸ್ಲಿಂ ಬಾಂಧವರು ಪಾಲ್ಗೊಳ್ಳುವರು. ಅಲ್ಲದೆ ಗ್ರಾಮೀಣ ಭಾಗದಲ್ಲಿ ೩ ಇಲ್ಲವೆ ೫ ವರ್ಷಕ್ಕೆ ಅಥವಾ ವರ್ಷಕ್ಕೊಮ್ಮೆ ಗ್ರಾಮ ದೇವತಾ ಜಾತ್ರೆಗಳನ್ನು ವಿಶೇಷವಾಗಿ ಆಚರಿಸುವರು. ಕೆಲವು ಹಬ್ಬಗಳು ರಾಷ್ಟ್ರಮಾನ್ಯತೆ ಪಡೆದರೆ ಇನ್ನೂ ಕೆಲವು ರಾಜ್ಯ ಇಲ್ಲವೆ ಗ್ರಾಮೀಣ ಭಾಗಕ್ಕೆ ಮೀಸಲಾಗಿರುವುದು. ಸಂಶೋಧನೆಯಿಂದ ಬೆಳಕಿಗೆ ಬಂದ ಅಂಶವಾಗಿದೆ. ನೂತನ ವರ್ಷವನ್ನು ಜನವರಿಯಲ್ಲಿ ಆಚರಿಸಿದರೆ ಚೈತ್ರಮಾಸದಲ್ಲಿ ಬರುವ ಯುಗಾದಿಯೇ

ಹೆಚ್ಚಾಗಿ ಹಿಂದೂಗಳಿಗೆ ಹೊಸವರ್ಷಾಚರಣೆ. ಈ ತಿಂಗಳಲ್ಲಿ ಪ್ರಕೃತಿಯು ಕಂಗೊಳಿಸಿ ಸ್ವಾಗತ ತೋರುವ ದೃಶ್ಯ ಎಲ್ಲೆಲ್ಲೂ ಕಂಡುಬರುತ್ತದೆ. ರಾಜ್ಯದಲ್ಲೇ ಪ್ರಮುಖ ಹಬ್ಬವೆಂದರೆ ದಸರಾ. ಅಂತೆಯೇ, ದೀಪಾವಳಿ ಹಬ್ಬವು ಇಡೀ ರಾಷ್ಟ್ರದ ಮಾನ್ಯತೆ ಪಡೆದಿದೆ. ಇವುಗಳೊಂದಿಗೆ, ಮಹಾಶಿವರಾತ್ರಿ, ಸಂಕ್ರಾಂತಿ, ಹೋಳಿಹಬ್ಬ, ಕಾರಹುಣ್ಣಿಮೆ, ಗಣೇಶ-ಜೋಕುಮಾರರ ಹಬ್ಬ, ಹುತ್ತರಿ ಹಬ್ಬ ಮುಂತಾದ ಆಚರಣೆಗಳನ್ನು ಗ್ರಾಮೀಣ ಭಾಗದ ಜನರು ಆಚರಿಸುವರು. ಕೆಲವು ಹಬ್ಬಗಳಲ್ಲಿ ಮನೆ ಮಂದಿಯೆಲ್ಲರೂ ಹೊಸಬಟ್ಟೆಗಳನ್ನು ಧರಿಸಿ ಸಿಹಿ ತಿನಿಸುಗಳನ್ನು ಮಾಡಿ ಸಂಭ್ರಮಿಸುವರು.

ಮುಸ್ಲಿಂ ಸಮುದಾಯದವರಿಗೆ ಹೊಸ ವರ್ಷಾಚರಣೆಯು ಮೊಹರಂ ಹಬ್ಬದಾಚರಣೆಯ ಮೂಲಕ ಆರಂಭವಾಗುತ್ತದೆ. ಈ ಕಾಲದಲ್ಲಿ ಸಂತೋಷಕಾರ್ಯಗಳನ್ನು ಮಾಡುವುದಿಲ್ಲ. ದುಃಖ ಸೂಚಕವಾಗಿ ಮೊಹರಂನನ್ನು ಆಚರಿಸುತ್ತಾರೆ. ಆದರೆ ಹಿಂದೂಗಳು ಮೊಹರಂ ಹಬ್ಬವನ್ನು ಇಂದಿಗೂ ಭಕ್ತಿಭಾವದಿಂದ ಆಚರಿಸುವರು. ಇವುಗಳೊಂದಿಗೆ ಮುಸ್ಲಿಂರ ಶ್ರೇಷ್ಠ ಹಬ್ಬ ಈದ್ ಉಲ್ ಫಿತರ್(ರಮಾಜನ್). ಇಡೀ ತಿಂಗಳು ಉಪವಾಸ ವ್ರತಾಚರಣೆ ಮೂಲಕ ಆಚರಿಸುವ ಹಬ್ಬ ಇದಾಗಿದೆ. ಇದರೊಂದಿಗೆ ಬಕ್ರೀದ್ ಹಬ್ಬ, ಈದ ಮಿಲಾದ್ ಎಂಬ ಹಬ್ಬಗಳನ್ನು ಆಚರಿಸುವರು. ಕ್ರೈಸ್ತಧರ್ಮದವರು ಕ್ರೈಸ್ತನ ದಿನಾಚರಣೆಯನ್ನು ಡಿಸೆಂಬರ್ ೨೫ ವಿಶೇಷವಾಗಿ ಆಚರಿಸುವರು. ಅವರಲ್ಲಿ ಇದೊಂದೆ ದಿನ ಸಂಭ್ರಮಾಚರಣೆ. ಇದರೊಂದಿಗೆ ಗುಡ್‌ಫ್ರೈಡೇ, ಜನವರಿ ೧ರ ಹೊಸ ವರ್ಷಾಚರಣೆ ಆಚರಿಸುವರು. ಜಿಲ್ಲೆಯಲ್ಲಿ ಜೈನ ಮತ್ತು ಬೌದ್ಧಧರ್ಮದವರು ಅಲ್ಲದೆ ಸಿಖ್ ಸಮುದಾಯದವರು ಇದ್ದಾರೆ. ಜೈನರು ತೀರ್ಥಂಕರರನ್ನು, ಜಿನನನ್ನು, ಬೌದ್ಧರು ಬುದ್ಧನನ್ನು, ಸಿಖ್ಖರು ಗುರು ನಾನಕ್‌ರನ್ನು ಧರ್ಮದ ಆದ್ಯರೆಂದು ಪೂಜಿಸುತ್ತಾರೆ.

ಹಿಂದೂ ಧರ್ಮದಲ್ಲಿ ವಿಲೀನರಾಗಿರುವ ಲಂಬಾಣಿ ಸಮುದಾಯದವರು ಕೆಲವು ಹಬ್ಬಗಳನ್ನು ವಿಶಿಷ್ಟವಾಗಿ ಆಚರಿಸುವರು. ಅವುಗಳಲ್ಲಿ ದೀಪಾವಳಿ, ಹೋಳಿಹಬ್ಬ, ದಸರಾ ಹಾಗೂ ಆಯಾ ಗ್ರಾಮಗಳ ಗ್ರಾಮದೇವತಾ ಜಾತ್ರೆ ಇತ್ಯಾದಿ ಉತ್ಸವಗಳನ್ನು ಜೊತೆಗೆ ಮೊಹರಂ ಹಬ್ಬವನ್ನು ಆಚರಿಸುವರು.

**ಆರ್ಥಿಕ ಜೀವನ :** ಜಿಲ್ಲೆಯಲ್ಲಿ ಅತ್ಯುತ್ತಮ ನೈಸರ್ಗಿಕ ಸಂಪತ್ತಿರುವುದರಿಂದ ಆರ್ಥಿಕವಾಗಿ ಈ ಭಾಗದ ಜನರು ಕೆಲವು ಪ್ರಯೋಜನಗಳನ್ನು ಪಡೆದಿದ್ದಾರೆ. ಲಾಭ ಅಧಿಕ ನೈಸರ್ಗಿಕವಾಗಿ ದೊರೆಯುವ ಬೆಟ್ಟಗುಡ್ಡ, ಜಲ-ವಾಯು, ಮುಂತಾದವುಗಳ ಪ್ರಾಮುಖ್ಯತೆಯನ್ನು ಅರಿತು ಜೀವನ ಸಾಗಿಸುತ್ತಿದ್ದಾರೆ. ಗ್ರಾಮೀಣ ಭಾಗದ ಜನರು ಹೆಚ್ಚಾಗಿ ಕೃಷಿಗಾರಿಕೆಯಲ್ಲಿ ತೊಡಗಿಸಿಕೊಂಡರೆ, ಗ್ರಾಮದಲ್ಲಿ ಕೆಲವರು ಉದ್ಯಮಗಳ ಸ್ಥಾಪನೆಯಿಂದ ಅಧಿಕ ಲಾಭಗಳಿಸುತ್ತಿರುವುದು ಕಂಡು ಬರುತ್ತದೆ. ಇದರೊಂದಿಗೆ ವಾಯುಮಾರ್ಗ, ಜಲಮಾರ್ಗ, ಶೈಕ್ಷಣಿಕ ಸುಧಾರಣೆ, ಆರೋಗ್ಯ ಮತ್ತು ಸಾಮಾಜಿಕ ಜನಪದರ ಕಾರ್ಯಗಳಿಂದಲೂ ಆರ್ಥಿಕ ಅಭಿವೃದ್ಧಿಗೆ ಒಂದಿಲ್ಲ ಒಂದು ರೀತಿಯಲ್ಲಿ ಸಹಕಾರಿಯಾಗಿವೆ.

ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದ ಶೇ.೧೨.೪೪ರಷ್ಟು ಭಾಗವು ಅರಣ್ಯ ಪ್ರದೇಶವಾಗಿದೆ. ಇದರಿಂದ ಹೆಚ್ಚಾಗಿ ಈ ಭಾಗದಲ್ಲಿ ವ್ಯವಸಾಯಕ್ಕೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಕೃಷಿಯಲ್ಲಿ ಶೇಕಡಾ ೭೫ರಷ್ಟು

ಜನರು ತಮ್ಮನ್ನು ತೊಡಗಿಸಿಕೊಂಡಿರುವರು. ಇಂದಿನ ಕೈಗಾರೀಕರಣದ ಪ್ರಭಾವದಿಂದ ಈ ಭಾಗದ ನೈಸರ್ಗಿಕ ತಾಣವಾದ ಬೆಟ್ಟಗುಡ್ಡಗಳಲ್ಲಿ ದೊರಕುವ ಖನಿಜ, ಕಲ್ಲುಗಣಿಗಾರಿಕೆಯಿಂದ ಇಡೀ ವಿಶ್ವವೇ ಜಿಲ್ಲೆಯತ್ತಾ ಮುಖ ಮಾಡಿದೆ. ಕೈಗಾರಿಕೆಯ ಮಹತ್ವಕ್ಕೆ ಮುನ್ನಾ ಕೃಷಿಯ ಬೆಳವಣಿಗೆ ಗಮನಿಸುವುದು ಸೂಕ್ತ. ಏಕೆಂದರೆ ಗ್ರಾಮದ ಬಹುತೇಕ ಜನರ ಪ್ರಮುಖ ಉದ್ಯೋಗ ವ್ಯವಸಾಯ ಆಗಿದೆ. ಜಿಲ್ಲೆಯಲ್ಲಿ ಶೇಕಡಾ ೩೨.೯ರಷ್ಟು ನೀರಾವರಿ ಪ್ರದೇಶವಿದ್ದರೆ, ೯೩.೧ರಷ್ಟು ಶೇಕಡಾ ಪ್ರದೇಶ ಮಳೆಯಾಶ್ರಿತವಾಗಿದೆ. ಇಲ್ಲಿ ಹೆಚ್ಚಾಗಿ ಬೆಳೆಯುವ ಬೆಳೆಗಳೆಂದರೆ ದ್ವಿದಳಧಾನ್ಯಗಳಾದ ಜೋಳ, ಹತ್ತಿ, ಮುಖ್ಯ ಬೆಳೆಯಾದರೆ ಕಡಲೆ, ಭತ್ತ, ಸಜ್ಜೆ, ರಾಗಿ ಇತರೆ ಇತ್ಯಾದಿ. ಈ ಬೆಳೆಗಳು ಆರ್ಥಿಕ ಬೆಳೆವಣಿಗೆಗೆ ಪ್ರಮುಖ ಕಾರಣವಾಗಿವೆ. ಅಲ್ಲದೆ ಈ ಭಾಗದಲ್ಲಿ ತುಂಗಭದ್ರಾ ನದಿಯ ನೀರು ಜೀವನಾಡಿಯಾಗಿರುವುದರಿಂದ ವರ್ಷಕ್ಕೆ ಒಮ್ಮೆ ಕಬ್ಬನ್ನು ಬೆಳೆಯುವವರು ಅಲ್ಲದೆ ಬಾಳೆ ಬೆಳೆಯು ಅತ್ಯಧಿಕ ಲಾಭ ತಂದು ಕೊಡುವ ಬೆಳೆಯಾಗಿದೆ. ಕಬ್ಬು ಕಟಾವು ಮುಂತಾದ ಕಾರ್ಯದಲ್ಲಿ ಹೆಚ್ಚಾಗಿ ಲಂಬಾಣಿ ಸಮುದಾಯದವರೇ ಹೆಚ್ಚಾಗಿ ತೊಡಗಿಸಿ ಕೊಂಡಿರುವರು.

ಕೈಗಾರಿಕಾ ಕ್ಷೇತ್ರಕ್ಕೆ ಬಳ್ಳಾರಿ ಜಿಲ್ಲೆಯ ಕೊಡುಗೆ ಅಪಾರವಾಗಿದೆ. ಈ ಉದ್ಯಮದಿಂದ ಜಿಲ್ಲೆಯ ಹಲವು ಕುಟುಂಬಗಳ ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ. ಅತಿ ಹೆಚ್ಚಾಗಿ ದೊರಕುವ ನಿಸರ್ಗ ಸಂಪತ್ತಿನ ಬಳಕೆಯಿಂದಲೂ ಉತ್ತಮ ಅಭಿವೃದ್ಧಿ ಹೊಂದಿದ ಜಿಲ್ಲೆಯಲ್ಲಿ ಬಳ್ಳಾರಿಯೂ ಒಂದಾಗಿ ಪರಿಣಮಿಸಿದೆ. ಆಧುನಿಕ ತಂತ್ರಜ್ಞಾನದ ಆಕ್ರಮಣದಿಂದ ಈ ಭಾಗದಲ್ಲಿ ಬೃಹತ್ ಕೈಗಾರಿಕೆಗಳು ತಲೆ ಎತ್ತಿವೆ. ನಿಸರ್ಗದಲ್ಲಿ ದೊರಕುವ ಉತ್ತಮ ಗುಣಮಟ್ಟದ ಖನಿಜವು ಜಿಲ್ಲೆಯ ಸಂಡೂರು ಮತ್ತು ಹೊಸಪೇಟೆ ತಾಲೂಕಿನಲ್ಲಿ ಕಂಡುಬರುವುದರಿಂದ ಈ ಭಾಗದಲ್ಲಿ ಹೆಚ್ಚು ಕಾರ್ಖಾನೆಗಳು ಸ್ಥಾಪನೆಯಾಗಿವೆ.

ಅವುಗಳಲ್ಲಿ ಸಾರ್ವಜನಿಕ ವರ್ಗದ ಬೆಳವಣಿಗೆಗಾಗಿ ಸಂಡೂರು ತಾಲೂಕಿನ ದೋಣಿಮಲೈನಲ್ಲಿ ಸ್ಥಾಪನೆಗೊಂಡಿರುವ ಎನ್‌ಎಂಡಿಸಿ ತೋರಣಗಲ್‌ನಲ್ಲಿರುವ ವಿಜಯನಗರ ಉಕ್ಕು ಕಾರ್ಖಾನೆ, ತುಂಗಭದ್ರಾ ಸ್ಟೀಲ್, ಬಿಎಂಎಂ ಕಾರ್ಖಾನೆಗಳಿಗೆ ಇದೇ ಭಾಗದ ಅದಿರು ಬಳಸಲಾಗುತ್ತದೆ. ಅಲ್ಲದೆ ಬೇರೆ ಜಿಲ್ಲೆಯಲ್ಲಿರುವ ಕಿರ್ಲೋಸ್ಕರ್ ಹಾಗೂ ಕಲ್ಯಾಣಿ ಸ್ಟೀಲ್ ಉದ್ಯಮಗಳಿಗೆ ಕಚ್ಚಾಸಾಮಗ್ರಿ ಜಿಲ್ಲೆಯಿಂದಲೇ ಸಾಗುತ್ತದೆ. ಇದರೊಂದಿಗೆ ಕಚ್ಚಾಸಾಮಗ್ರಿ ಸಾಗಿಸಲು ಸಣ್ಣಪುಟ್ಟ ಉದ್ಯಮದಾರರು ಇಲ್ಲಿದ್ದಾರೆ. ಅವರಲ್ಲಿ ಬಲ್ಡೋಟಾ, ಮೈನಿಂಗ್, ಗೊಗ್ಗಾ ಕುಟುಂಬ ಇನ್ನಿತರರನ್ನು ಗಮನಿಸಬಹುದು. ಖನಿಜೋದ್ಯಮದಿಂದ ಇಡೀ ದೇಶವಲ್ಲದೆ ಅಂತರಾಷ್ಟ್ರೀಯ ಮಟ್ಟದಲ್ಲೂ ಖ್ಯಾತಿ ಪಡೆದ ಪ್ರದೇಶ ಬಳ್ಳಾರಿ ಜಿಲ್ಲೆಯಾಗಿದೆ.

ಅಲ್ಲದೆ ಇದೇ ಜಿಲ್ಲೆಯಲ್ಲಿ ತಲೆ ಎತ್ತಿರುವ ಹೊಸಪೇಟೆಯ ಸಕ್ಕರೆ ಕಾರ್ಖಾನೆ, ಕಂಪ್ಲಿ ಹಾಗೂ ನೆರೆಯ ಜಿಲ್ಲೆಗಳಲ್ಲಿಯ ಗಂಗಾವತಿ, ಹುಲಿಗಿಯಲ್ಲೂ ಸಕ್ಕರೆ ಕಾರ್ಖಾನೆ ಸ್ಥಾಪನೆಯಾಗಿವೆ. ಈಗ ಇರುವ ಸಕ್ಕರೆ ಕಾರ್ಖಾನೆಗಳೆಂದರೆ ಹೊಸಪೇಟೆ ಮತ್ತು ಗಂಗಾವತಿಯ ಸಕ್ಕರೆ ಕಾರ್ಖಾನೆಗಳು. ಇನ್ನುಳಿದವು ಮುಚ್ಚಿ ಹೋಗಿವೆ. ಈ ಭಾಗದ ರೈತರು ಹೆಚ್ಚಾಗಿ ಕಬ್ಬು ಬೆಳೆಯುತ್ತಿರುವುದರಿಂದ ಸಕ್ಕರೆ ಕಾರ್ಖಾನೆಗಳಿಗೆ ಎಲ್ಲಿಲ್ಲದ ಬೇಡಿಕೆಯಿದೆ. ಈಚೆಗೆ ಕಾರ್ಖಾನೆಗಳು ನೀಡುವ ದರನಿಗದಿಯಿಂದ ರೈತರು ಕಂಗಾಲಾಗಿದ್ದಾರೆ. ಜಿಲ್ಲೆಯ

ಕಾರ್ಖಾನೆಗಳಿಗೆ ಕಬ್ಬು ಸಾಗಿಸದೇ ಹೊರಜಿಲ್ಲೆಗಳಿಗೆ ಸಾಗಾಟ ಮಾಡುವುದು ಕಂಡುಬರುತ್ತದೆ. ಗಣಿಗಾರಿಕೆ ಮತ್ತು ಕಬ್ಬುಕಟಾವು ಕೆಲಸಗಳಲ್ಲಿ ಹೆಚ್ಚಾಗಿ ಲಂಬಾಣಿ ಸಮುದಾಯದವರು ಪಾಲ್ಗೊಂಡಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ.

ಅಲ್ಲದೆ ಜಿಲ್ಲೆಯ ಕಂಪ್ಲಿ ಹಾಗೂ ಇತರೆಡೆಗಳಲ್ಲಿರುವ ರೈಸ್‌ಮಿಲ್‌ಗಳು ಸಹ ಆರ್ಥಿಕಾಭಿವೃದ್ಧಿಗೆ ಪೂರಕವಾಗಿದೆ. ಈ ಜಿಲ್ಲೆಯಲ್ಲಿ ಅತ್ಯಧಿಕವಾಗಿ ಬೆಳೆಯುವ ಬೆಳೆಗಳಲ್ಲಿ ಭತ್ತವೂ ಒಂದು. ಈ ಕಾರಣಕ್ಕಾಗಿ ರೈಸ್‌ಮಿಲ್‌ಗಳು ಹೆಚ್ಚಾಗಿವೆ. ಅಲ್ಲದೆ ಈಚೆಗೆ ಬಳ್ಳಾರಿಯಲ್ಲಿ ಜೀನ್ಸ್ ಪ್ಯಾಂಟ್‌ನ ಉದ್ಯಮವು ಇತ್ತೀಚಿನ ದಿನಗಳಲ್ಲಿ ಅಂತಾರಾಷ್ಟ್ರೀಯ ಮಾರುಕಟ್ಟೆ ಪ್ರವೇಶಿಸುವಷ್ಟು ಸಮರ್ಥಶಾಲಿಯಾಗಿ ಬೆಳೆಯುತ್ತಿರುವುದು ಗಮನಾರ್ಹವಾಗಿದೆ.

ನಿಸರ್ಗತಾಣವಾದ ಈ ಜಿಲ್ಲೆಯಲ್ಲಿ ಹೈನುಗಾರಿಕೆಯು ಹೆಚ್ಚಿನ ಬೆಳವಣಿಗೆ ಕಂಡಿದೆ. ದನಕರುಗಳನ್ನು ವ್ಯವಸಾಯಕಾರ್ಯಗಳಿಗೆ ಬಳಸಲಾಗುತ್ತಿದೆ. ಹಸುಗಳಿಂದ ಹಾಲು ಉತ್ಪಾದನೆಯು ಅಧಿಕವಾಗಿದೆ. ಜೊತೆಗೆ ಕುರಿ-ಕೋಳಿ ಸಾಕಾಣಿಕೆಯಿಂದ ಜಿಲ್ಲೆಯು ಹೊರತಾಗಿಲ್ಲ. ಈ ಕಾರ್ಯದಿಂದಲೂ ತನ್ನದೇ ಆದ ಸ್ಥಾನವನ್ನು ಪಡೆದಿದೆ. ಹುಲ್ಲುಗಾವಲು ಕ್ಷೇತ್ರದಿಂದ ಉತ್ತಮ ಹಸು ತಳಿ ಹಾಗೂ ಕುರಿ ಸಾಕಾಣಿಕೆಗೆ ಯೋಗ್ಯ ಸ್ಥಳವಾಗಿದೆ. ಬೇರೆ ಜಿಲ್ಲೆಯಲ್ಲಿದ್ದು ಕುರುಬ ಸಮುದಾಯದವರು ಬಳ್ಳಾರಿ ಜಿಲ್ಲೆಯ ಹಲವು ಗ್ರಾಮಗಳಲ್ಲಿ ಸಂಚರಿಸಿ ಕುರಿ ಸಾಕಾಣಿಕೆ ಮಾಡಿ ಬದುಕು ಸಾಗಿಸುತ್ತಿದ್ದಾರೆ. ಇದರೊಂದಿಗೆ ಜಿಲ್ಲೆಯಲ್ಲಿ ಕಂಡುಬರುವ ಹಂದಿ ಸಾಕಾಣಿಕೆಯು ಒಂದು ವ್ಯಾಪಾರವಾಗಿದೆ.

### ೨.೪. ಧಾರ್ಮಿಕ, ಸಾಂಸ್ಕೃತಿಕ ಜೀವನ

**ಪೌರಾಣಿಕ ಮಹತ್ವ :** ಜಿಲ್ಲೆಯ ಮಹತ್ವ ಸಾರುವ ಪೌರಾಣಿಕ ಘಟನೆಯು ಈ ಭಾಗದಲ್ಲಿ ಪ್ರಚಲಿತದಲ್ಲಿದೆ. ದೇವಿ ಪುರಾಣದಂತೆ ಬಳ್ಳಾರಿ ದುರುಗಮ್ಮ ಎಂಬ ದೇವತೆಯು ಪಾರ್ವತಿಯ ಅವತಾರವಾಗಿ 'ದುರ್ಗೆ' ಎಂದು ಕರೆಯಲ್ಪಟ್ಟು, 'ದುರುಗಮ್ಮ' ಎಂದು ಬಳಕೆಗೆ ಬಂದಿರಬೇಕೆನಿಸುತ್ತದೆ. ಜನಪದರಲ್ಲಿರುವ ದಂತಕಥೆ ಹಾಗೂ ಕಾವ್ಯಗಳಲ್ಲೂ ಈ ಕುರಿತ ಕಲ್ಪನೆಯಿದೆ. ಬಲಕುಂದೆಯಲ್ಲಿರುವ 'ಮಹಾಕಾಳಿ' ದೇವಾಲಯವು ಶ್ರೀದುರ್ಗೆಯ ಅವತಾರವೆಂತಲೂ ಸ್ಥಳೀಯ ಪುರಾಣಗಳು ಉಲ್ಲೇಖ ನೀಡುತ್ತವೆ.

ಇದೇ ಜಲ್ಲೆಯಲ್ಲಿರುವ ಹಲವು ಗ್ರಾಮಗಳಲ್ಲಿ ಮಹಾಭಾರತ ಮತ್ತು ರಾಮಾಯಣಕ್ಕೆ ಸಂಬಂಧಿಸಿದ ಘಟನಾವಳಿಗಳ ಕುರುಹುಗಳು ಕಂಡುಬರುತ್ತವೆ. ಅದರಲ್ಲೂ ಹಂಪೆಯ ಬಳಿ ಇರುವ ಕಿಷ್ಕಿಂದಾ ಸ್ಥಳವು ರಾಮಾಯಣಕ್ಕೆ ಸಂಬಂಧಿಸಿದ ಸ್ಥಳವೆಂದು ಹೇಳಲಾಗುತ್ತದೆ. ಶ್ರೀರಾಮನು ಸೀತೆಯನ್ನು ಹುಡುಕುತ್ತಾ ದಕ್ಷಿಣದ ಹಂಪೆಗೆ ಧಾವಿಸಿ ಬಂದನೆಂಬ ಉಲ್ಲೇಖವಿದೆ.

ಹಂಪೆಯಲ್ಲಿ ಜರುಗಿದ ಮತ್ತೊಂದು ಪೌರಾಣಿಕ ಘಟನೆಯು "ಪಂಪಾಮಹಾತ್ಮೆ" ಹಾಗೂ ಹರಿಹರನ "ಗಿರಿಜಾ ಕಲ್ಯಾಣ" ಕಾವ್ಯದಲ್ಲಿ ಉಲ್ಲೇಖಗೊಂಡಿದೆ ಮತ್ತು ಈ ಘಟನೆ ತುಂಬಾ ವಿಭಿನ್ನವಾಗಿದೆ. ಶಿವ ಮತ್ತು ಪಾರ್ವತಿಯರು ತಪಸ್ಸು ಮಾಡಿದ ಯೋಗ್ಯಸ್ಥಳವಾಗಿ ಹಂಪೆಯು ಪ್ರಸಿದ್ಧಿ ಪಡೆದಿದೆ. ಪಾರ್ವತಿಯ

ವಿವಾಹವಾಗುವ ಮುನ್ನಾ ನಡೆದ ದಾಕ್ಷಿಯಿಣಿಯ ಪ್ರಸಂಗ ಬೇರೆಲ್ಲೋ ನಡೆದಿಲ್ಲ, ಅದು ಇಲ್ಲಿಯೇ ಎಂಬ ನಂಬಿಕೆ. ಪರ್ವತರಾಜನ ಮಗಳೇ ದ್ರಾಕ್ಷಾಯಿಣಿಯ ಮರುಜನ್ಮವಾಗಿ ಹಂಪೆಯಲ್ಲಿ ತಪಸ್ಸು ಮಾಡುತ್ತಿದ್ದ ಶಿವನನ್ನು ಓಲೈಸಿ ತಪಸ್ಸನ್ನು ಭಂಗಪಡಿಸುವ ದೃಶ್ಯಾವಳಿ, ಮನ್ಮಥದಹನ ಇದೇ ಹಂಪೆಯಲ್ಲೆ ಜರುಗಿತೆಂದು ಈಗಲೂ ಮೂಲ ವಿರೂಪಾಕ್ಷ ದೇವಾಲಯದ ಬಳಿಯಲ್ಲಿ 'ಮನ್ಮಥನ ಹೊಂಡ' ಇದೆಯೆಂದು ಸ್ಥಳಪುರಾಣವು ನೆನಪಿಸುತ್ತದೆ. ಶಿವನ ಮೂರನೆಯ ಕಣ್ಣಿನಿಂದ ಜನಿಸಿದವನೇ 'ವಿರೂಪಾಕ್ಷ' ಎಂತಲೂ ಆ ವಿರೂಪಾಕ್ಷನೇ ಇಂದಿಗೂ ಆರಾಧ್ಯ ದೈವವಾಗಿರುವುದಾಗಿ ತಿಳಿದುಬಂದಿದೆ.

ಶ್ರೀರಾಮನು ವನವಾಸ ಮುಗಿಸಿಕೊಂಡು ರಾವಣನನ್ನು ಸಂಹಾರಮಾಡಿದ ಬಳಿಕ ಸೀತೆಯನ್ನು ಹಂಪೆಯ ಬಳಿ ಇರುವ ಹೇಮಕೂಟಕ್ಕೆ ಕರೆತಂದು, ನಡೆದ ಘಟನಾವಳಿಗಳನ್ನು ತಿಳಿಸಿದನೆಂಬ ಉಲ್ಲೇಖ ರಾಮಾಯಣದಿಂದ ತಿಳಿದುಬರುತ್ತದೆ. ಈಗಲೂ ಇರುವ ಪಟ್ಟಾಭಿರಾಮ ದೇವಾಲಯದ ಬಳಿ ಶ್ರೀರಾಮ-ಲಕ್ಷ್ಮಣ ತಂಗಿದ್ದು, ವಾಲಿ-ಸುಗ್ರೀವರ ಕದನದಲ್ಲಿ ಶ್ರೀರಾಮನು ವಾಲಿಯನ್ನು ಕೊಂದ ಸ್ಥಳಗಳನ್ನು ಸೀತೆಗೆ ತಿಳಿಸುತ್ತಾ ಸಂಡೂರು ತಾಲೂಕಿನ ರಾಮಘಡಕ್ಕೆ ಹೊರಟನೆಂಬುದು ಶ್ರೀರಾಮ-ಸೀತೆ-ಲಕ್ಷ್ಮಣರು ನಡೆದಾಡಿದ ಜಾಗವು ಕಪ್ಪುಕಲ್ಲಾಯಿತು ಎಂಬುದು ಸ್ಥಳ ಪುರಾಣವಾಗಿದೆ. ಅದನ್ನೇ ಈಗಲೂ ಕಾರೆಕಲ್ಲು ಎಂತಲೂ ಬಳಸುತ್ತಿರುವುದು ಕಾಣಸಿಗುತ್ತದೆ. ಇಷ್ಟೆ ಅಲ್ಲದೆ, ''ಇಲ್ಲಿಯೇ ಮತಂಗ ಮುನಿಯು ಜನಿಸಿದನೆಂದು ಆತನಿಗೆ ಒಬ್ಬ ಮಗಳಿದ್ದಳು. ಅವಳೇ ಮಾತಂಗಿ ಆ ಮಾತಂಗಿಯೇ ಇಂದಿನ ಸರಸ್ವತಿಯಾಗಿದ್ದಾಳೆ. ಆದರೆ ಜಾನಪದರು ಪೂಜಿಸುವ ಮಾತಂಗಿ ದಲಿತರ ಪ್ರಮುಖ ಆರಾಧ್ಯ ದೈವವಾಗಿದ್ದಾಳೆ.

ತುಂಗಾಭದ್ರದ ತಟದಲ್ಲಿರುವ ಹುಲಿಗೆಯ ಹುಲಿಗೆಮ್ಮ, ಹೊಸೂರಿನ ಹೊಸೂರಮ್ಮ ದೇವಿಯ ಅವತಾರಿಗಳಾಗಿರುವುದು ಆಯಾ ಸ್ಥಳಗಳಲ್ಲಿ ಉಲ್ಲೇಖವಾದ ಐತಿಹ್ಯ ಸ್ಥಳಪುರಾಣಗಳಿಂದಲೂ ಗಮನಿಸಬಹುದಾಗಿದೆ. ಹೀಗೆ ಜನರಲ್ಲಿ ಹುದುಗಿರುವ ಪೌರಾಣಿಕ ಅಂಶಗಳ ಮಾಹಿತಿಯಿಂದಲೂ ಈ ಭಾಗವು ಪ್ರಾಮುಖ್ಯತೆ ಹೊಂದಿತ್ತೆಂದು ತಿಳಿದುಬರುತ್ತದೆ.

'ಬಳ್ಳಾರಿ ಜಿಲ್ಲೆ'ಯು ಸರ್ವಧರ್ಮಗಳ ಸಮನ್ವಯ ಸ್ಥಳವಾಗಿದೆ. ಈ ಭಾಗದಲ್ಲಿ ಐತಿಹಾಸಿಕವಷ್ಟೇ ಅಲ್ಲ ಪೌರಾಣಿಕ ಕಾಲದಲ್ಲೂ ಸಹ ಧರ್ಮಸಹಿಷ್ಣುತೆಯನ್ನು ಮೈಗೂಡಿಸಿಕೊಂಡಿತ್ತು ಎಂದು ಅಧ್ಯಯನದಿಂದ ತಿಳಿದುಬರುತ್ತದೆ. ಪೌರಾಣಿಕ ಅಂಶಗಳಿಗಿಂತ ಐತಿಹಾಸಿಕ ದಾಖಲೆಗಳಿಂದ ಇಲ್ಲಿ ಎಲ್ಲಾ ಧರ್ಮಗಳಿಗೂ ಪ್ರಾಶಸ್ತ್ಯಯಿತ್ತು ಎಂದು ತಿಳಿದುಬರುತ್ತದೆ. ಈ ಕಾರಣಕ್ಕಾಗಿ ಜೆ.ಎಂ.ನಾಗಯ್ಯರವರು ಬಳ್ಳಾರಿ ಧರ್ಮಸಾಮರಸ್ಯಕ್ಕೆ ಹೆಸರಾಗಿದೆ. ಒಂದು ಧರ್ಮದವರು ಮತ್ತೊಂದು ಧರ್ಮಕ್ಕೆ ದಾನ-ಧರ್ಮಗಳನ್ನು ನೀಡಿದ್ದಾರೆಂದು ತಿಳಿಸಿರುವರು.[೩] ಧರ್ಮಸಮನ್ವಯ ವಿಜಯನಗರ ಸಾಮ್ರಾಜ್ಯದ ಇಮ್ಮಡಿ ದೇವರಾಯ ಹಾಗೂ ಅರವೀಡು ವಂಶದ ಅಳಿಯ ರಾಮರಾಯನ ಆಳ್ವಿಕೆಯ ಕಾಲದಲ್ಲಿ ಧರ್ಮಸಮನ್ವಯತೆಯ ಪಾಲನೆ ಆಡಳಿತದ ಮುಖ್ಯ ನೀತಿಯಾಗಿತ್ತೆಂದು ತಿಳಿದುಬರುತ್ತದೆ.

ಈ ಭಾಗದಲ್ಲಿ ಬೌದ್ಧಧರ್ಮದ ಪ್ರಭಾವ ಗಾಢವಾಗಿತ್ತು ಎಂಬುದರ ಬಗ್ಗೆ ಹೆಚ್ಚಿನ ದಾಖಲೆ ಕಾಣಸಿಗದಿದ್ದರೂ ಅಶೋಕನು ಬೌದ್ಧಧರ್ಮ ಪ್ರಸಾರಕಾರ್ಯ ಕೈಗೊಂಡಿದ್ದನೆಂದು ಶಾಸನಗಳ ಉಲ್ಲೇಖದಿಂದ ತಿಳಿದುಬರುತ್ತದೆ. ಜಿಲ್ಲೆಯಲ್ಲಿ ಎಲ್ಲಿಯೂ ಬೌದ್ಧಸ್ತೂಪಗಳು ಕಾಣಸಿಗುವುದಿಲ್ಲ. ಆದರೂ ಬುದ್ಧನ ಗಾರೆಶಿಲ್ಪಗಳು ಹಂಪೆಯಲ್ಲಿ ಈಚೆಗೆ ಶೋಧನೆಯಿಂದ ಬೆಳಕಿಗೆ ಬಂದಿವೆ. ಅಲ್ಲದೆ ಜಿಲ್ಲೆಯ ಹೊಸಪೇಟೆ ತಾಲೂಕಿನ ವಡಕರಾಯ ದೇವಸ್ಥಾನದ ಆವರಣದಲ್ಲಿ ಬೌದ್ಧ ಧರ್ಮದ ಕುರಿತಾದ ತೃಟಿತ ಶಾಸನವಿದೆ. ಇದು ಎಲ್ಲಿಂದಲೋ ತಂದು ಹಾಕಿರಬಹುದೆಂದು ತಿಳಿದುಬರುತ್ತದೆ.

ಜೈನಧರ್ಮದ ಪ್ರಸಾರಕಾರ್ಯಕ್ಕೆ ಜಿಲ್ಲೆಯಲ್ಲಿ ರಾಜಾಶ್ರಯ ದೊರಕಿತು. ಕೋಗಳಿ ಶಾಸನದ ಉಲ್ಲೇಖದಂತೆ ಗಂಗರ ಅರಸನಾದ 'ದುರ್ವಿನೀತ'ನು ಬಸದಿಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ತ್ತದೆ. ವಿಜಯನಗರ ಸಾಮ್ರಾಜ್ಯದಲ್ಲಿ ಜೈನಬಸದಿಗಳನ್ನು ನಿರ್ಮಿಸಲು ಸಮಾನ ಅವಕಾಶ ದೊರೆಯಿತೆಂದು ಈಗ ಲಭ್ಯ ಇರುವ ಹೇಮಕೂಟದ ಜಿನ ಬಸದಿಗಳಿಂದ ಸ್ಪಷ್ಟವಾಗುತ್ತದೆ. ಇದರಿಂದ ತಿಳಿದುಬರುವ ಸಂಗತಿಯೆಂದರೆ ಎಲ್ಲ ಧರ್ಮದವರು ಇಲ್ಲಿ ನೆಲೆಸಿದ್ದರೆಂಬುದು.

ಶೈವ ಧರ್ಮದ ಪ್ರಭಾವ ಜಿಲ್ಲೆಯಲ್ಲಿ ಅತಿಹೆಚ್ಚಾಗಿ ಕಂಡುಬರುತ್ತದೆ. ಶೈವಧರ್ಮ ಪಂಥಗಳಾದ ಅಘೋರಿಗಳು, ಕಾಪಾಲಿಗಳು, ಲಕುಲೀಶ ಹಾಗೂ ಪಾಶುಪತರು ಇಲ್ಲಿ ವಾಸಿಸಿದ್ದರೆನ್ನಲು ಕ್ರಿ.ಶ.೧೦೪೫ರ ಮೋರಗೇರಿ ಶಾಸನವು ದಾಖಲೆ ನೀಡುತ್ತದೆ. ಮೋರಗೇರಿಯಲ್ಲಿ ಕಾಳಾಮುಖರ ಮಠಗಳು ಇದ್ದವೆಂದು ಆ ಶಾಸನದಿಂದ ತಿಳಿದುಬರುತ್ತದೆ.

ಶೈವಧರ್ಮ ಪ್ರಸಾರ ಮಾಡುವ ಉಜ್ಜಿನಿ ಪೀಠವು ಈ ಜಿಲ್ಲೆಯಲ್ಲಿದೆ. ಅಲ್ಲದೆ ವಿಜಯನಗರ ಆಳ್ವಿಕೆಯ ಕಾಲದಲ್ಲಿ ಹಾಗೂ ಅದಕ್ಕೂ ಪೂರ್ವದಲ್ಲಿ ಶಿವನ ಆವಾಸತಾಣವು ಹಂಪಿಯಾಗಿತ್ತೆಂದು ಹಲವು ಆಧಾರಗಳಿಂದ ತಿಳಿಯುತ್ತವೆ. ಬಳಿಕ ೧೫ನೇ ಶತಮಾನದಲ್ಲಿ ಶೈವಧರ್ಮ ಪ್ರಸಾರಕ್ಕಾಗಿ ಶ್ರೀ ವಿರೂಪಾಕ್ಷನನ್ನು ತಮ್ಮ ಆರಾಧ್ಯದೈವವಾಗಿಸಿಕೊಂಡ ಬಗ್ಗೆ ದಾಖಲೆಗಳು ಕಾಣಸಿಗುತ್ತವೆ. ೧೨ನೇ ಶತಮಾನದ ಶಿವಶರಣರು ಶೈವಧರ್ಮದ ಏಳ್ಗೆಗಾಗಿಯೇ ಪಟ್ಟಶ್ರಮ ಅಪಾರ. ಇವರು ಶಿವನ ಆರಾಧಕರಾಗಿದ್ದರೆಂದು ತಿಳಿದುಬಂದಿದೆ. ಇದಾದ ಬಳಿಕವೇ ಶರಣರ ಚರಿತ್ರೆಯನ್ನು ತಮ್ಮ ಕಾವ್ಯಗಳಲ್ಲಿ ಸೇರಿಸಿದ ಹರಿಹರ-ರಾಘವಾಂಕರವರು ಈ ಧರ್ಮದ ಪ್ರತಿಪಾದಕರಾಗಿ ಮತ್ತು ಸಾಹಿತ್ಯಲೋಕದ ಪ್ರಮುಖರಾಗಿ ನಿಲ್ಲುತ್ತದೆ. ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ಅರಸನಾದ ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ೧೦೧ ವಿರಕ್ತರು ಇದ್ದರೆಂದು ಅವರು ಶಿವನ ಪ್ರಬಲ ಆರಾಧಕರಾಗಿರೆಂದು ತಿಳಿಯುತ್ತದೆ. ಕೊಟ್ಟೂರಿನ ಕೊಟ್ಟೂರೇಶ್ವರ, ಗೋಣಿ ಬಸವೇಶ್ವರ, ಕೋಲ ಶಾಂತಯ್ಯರವರು ನೆಲೆಸಿದ್ದ ಕ್ಷೇತ್ರಗಳು ಇಂದು ಪ್ರಸಿದ್ಧ ಶೈವಾರಾಧನೆಯ ಕ್ಷೇತ್ರಗಳಾಗಿವೆ.

**೨.೫. ಶೈಕ್ಷಣಿಕ ಬೆಳವಣಿಗೆ**

ಬಳ್ಳಾರಿ ಜಿಲ್ಲೆಯು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯೆಂದು ಕರೆಯಿಸಿಕೊಂಡಿದೆ. ಆದರೆ ಹಿಂದೆ ಈ ಭಾಗದಲ್ಲಿ ಅಂದರೆ ರಾಜ-ಮಹಾರಾಜರ ಕಾಲದಲ್ಲಿ ಶಿಕ್ಷಣ ಕ್ಷೇತ್ರದ ಕೊಡುಗೆ ಅಪಾರವಾಗಿತ್ತು.

ಗುರುಕುಲಗಳಲ್ಲಿ ಮಠಮಾನ್ಯಗಳಲ್ಲಿ ಕೇವಲ ಸೀಮಿತ ಜನರಿಗೆ ಮಾತ್ರ ಶಿಕ್ಷಣವನ್ನು ಕಲಿಸಲಾಗುತ್ತಿತ್ತೆಂದು ಚರಿತ್ರೆಯಿಂದ ತಿಳಿದುಬಂದ ಅಂಶವಾಗಿದೆ. ಶ್ರೀಸಾಮಾನ್ಯನಿಗೆ ಶಿಕ್ಷಣವನ್ನು ನೀಡುವಲ್ಲಿ ಪ್ರಮುಖ ಪಾತ್ರವಹಿಸುತ್ತಿರುವುದು ಖಾಸಗಿ ಹಾಗೂ ಸರ್ಕಾರಿ ಶಾಲೆಗಳು. ಆದರೆ ಕೇವಲ ಸೀಮಿತ ಜನರಿಗೆ ಮಾತ್ರ ವಿದ್ಯಾ ಕಲಿಸುವಂತಹ ಇಂತಹ ಶಾಲೆಗಳನ್ನು ಗಮನಿಸಿದ ಬ್ರಿಟೀಷರು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದರು. ಕೇವಲ ಧರ್ಮ ಪ್ರಸಾರದ ಉದ್ದೇಶವಿಟ್ಟುಕೊಂಡು ಬಂದ ಮಿಶನರಿಗಳು ಅತ್ಯಂತ ಬಡಜನರಿಗೂ ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಶಿಕ್ಷಣ ನೀಡುವಲ್ಲಿ ಮಾಡಿದ ಪ್ರಯತ್ನ ಉದಾತ್ತವಾಗಿದೆ. ಕ್ರೈಸ್ತ ಮಿಶನರಿಗಳಲ್ಲಿ ಪ್ರಮುಖರಾದವರಲ್ಲಿ ಜಾರ್ಜ್ ಮೋಗ್ಲಿಂಗ್, ಮೆಕಾಲೆಯವರು ಕೈಗೊಂಡಸೇವೆಯನ್ನು ಇಂದಿಗೂ ಮರೆಯುವಂತಿಲ್ಲ. ಮೊಗ್ಲಿಂಗ್ ೧೮೩೭ರಲ್ಲಿ ಇಂಗ್ಲೀಷ್ ಶಾಲೆಯನ್ನು ಆರಂಭಿಸಿದನು. ಆ ಬಳಿಕ ಪ್ರತಿ ಗ್ರಾಮೀಣ ಭಾಗದಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದರು.

ಈ ಹಿಂದೆ ಇದ್ದ "ಶಿಕ್ಷಣ ಮಾದರಿಯನ್ನು ಇಂಡೋಜಿಯಸ್ ಮಾದರಿಯ ಎಲಿಮೆಂಟರಿ ಶಾಲೆಗಳು" ಶಿಕ್ಷಣ ನೀಡುತ್ತಿದ್ದವು. ಅಗ ಬಹುತೇಕವಾಗಿ ಅಯ್ಯನವರ ಮಠ, ಐಗಳ ಮಠ, ಸಾಲಿಮಠ, ಓದುವ ಮಠಗಳೆಂಬ ಮಾದರಿಯಲ್ಲಿ ವಿದ್ಯೆ ಕಲಿಸಲಾಗುತ್ತಿತ್ತು. ಇದು ಗುರುಕುಲದ ನಂತರದ ರೂಪವಾಗಿದೆ. ಅಗ ಮಠ ಮಾನ್ಯಗಳು ತಾವು ಧರ್ಮ ಪ್ರಸಾರದೊಂದಿಗೆ ಪ್ರತಿಯೊಬ್ಬರು ಶಿಕ್ಷಣದಿಂದ ವಂಚಿತರಾಗಬಾರದೆಂದು ಅನ್ನದಾಸೋಹದ ಜೊತೆಗೆ ಜ್ಞಾನದಾಸೋಹ ಮಾಡಿದ ಕೀರ್ತಿಗೆ ಮಠಮಾನ್ಯಗಳ ಸೇವೆ ಅನುಪಮವಾದುದಾಗಿದೆ. ಮೊದಲು ಏಕಪಾಠಿ, ದ್ವಿಪಾಠಿ, ತ್ರಿಪಾಠಿ ರೀತಿಯಲ್ಲಿ ಕಲಿಕೆ ಪ್ರಕ್ರಿಯೆ ಇತ್ತು. ಇಂದಿನಂತೆ ಇರುವ ಪುಸ್ತಕಗಳಿದ್ದಿಲ್ಲ. ಮರಳಿನಲ್ಲಿ ಬೆರಳಿನ ಮೂಲಕ ಅಕ್ಷರ ಕಲಿಕೆ ಇತ್ತು. ಆ ಬಳಿಕ ಮುದ್ರಿತ ಪುಸ್ತಕಗಳು ಬರುವುದರಲ್ಲಿ ಕ್ರೈಸ್ತಮಿಶನರಿಗಳ ಕೊಡುಗೆ ಅಪಾರವಾಗಿದೆ.

ಮೊತ್ತ ಮೊದಲ ಮುದ್ರಣಯಂತ್ರವು ಆಗಮಿಸಿದ್ದು ಬಳ್ಳಾರಿ ಜಿಲ್ಲೆಗೆ ಎಂಬುದು ಮಹತ್ವದ ಸಂಗತಿಯಾಗಿದೆ. ಇದೇ ವೇಳೆ ಶೈಕ್ಷಣಿಕ ಸುಧಾರಣೆಗಾಗಿ ಜಿಲ್ಲೆಗೆ ಕಲೆಕ್ಟರ್ ಆಗಿ ಬಂದಿದ್ದ ಸರ್ ಥಾಮಸ್ ಮನ್ರೋರವರು ೧೮೨೫ರಲ್ಲಿ ಒಂದು ಕಲೆಕ್ಟೋರಲ್ ಶಾಲೆ ಹಾಗೂ ತಹಶಿಲ್ದಾರ್ ಶಾಲೆಗಳನ್ನು ಆರಂಭಿಸಲಾಯಿತಾದರೂ ಈ ಶಾಲೆಗಳು ಅಷ್ಟೇನೂ ಫಲ ನೀಡಲಿಲ್ಲ. ಇದು ಸುಧಾರಣೆಯಾದದ್ದು ೧೮೫೪ರಲ್ಲಿದ್ದ ಚಾರ್ಲಸ್ ಉಡ್ಸ್ ರವರ ಕಾಲಾವಧಿಯಲ್ಲಿ ಎನ್ನಬಹುದು.

ಕ್ರಿ.ಶ.೧೯ನೆಯ ಶತಮಾನದಷ್ಟೊತ್ತಿಗೆ ಜಿಲ್ಲೆಯಲ್ಲಿ ೩ ಹಿರಿಯ ಮಾಧ್ಯಮಿಕ ಶಾಲೆ ಸ್ಥಾಪನೆಯಾದವು. ಇವುಗಳಲ್ಲಿ ಒಂದು ಮುನ್ಸಿಪಾಲಿಟಿ ನೋಡಿಕೊಂಡರೆ ಹರಪನಹಳ್ಳಿಯ ಬಳಿ ಇರುವ ಶಾಲೆಯನ್ನು ತಾಲೂಕು ಬೋರ್ಡ್ ನೋಡಿಕೊಳ್ಳುತ್ತಿತ್ತು. ಆದರೆ ೩ನೆಯ ಶಾಲೆಯನ್ನು ವಾಡ್ಲಾ ಕಾಲೇಜು ಹೆಸರಲ್ಲಿ ಆರಂಭಿಸಲಾಯಿತು. ಈ ಹೆಸರು ಈಗಲೂ ಬಳ್ಳಾರಿಯಲ್ಲಿದೆ.

೧೮೪೭ರಲ್ಲಿ ಕ್ರೈಸ್ತ ಮಿಶನರಿಯ ಸೊಸೈಟಿಯ ಸಹಾಯಕ ನಿರ್ದೇಶಕರಾಗಿದ್ದ ಜೆ.ಎಸ್.ವಾರ್ಡ್ಲಾರವರ ಅಧ್ಯಕ್ಷತೆಯಲ್ಲಿ ಶಾಲೆಯು ತೆರೆದಿದ್ದರಿಂದ ಅವರ ಹೆಸರೇ ಶಾಲೆಗೆ ನಮೂದಾಯಿತು. ಇವುಗಳ ಜೊತೆಗೆ

ಹೊಸಪೇಟೆ ತಾಲೂಕಿನಲ್ಲಿ ಒಂದು ಶಾಲೆ ಎರಡನೆಯದು ಸಂಡೂರು ತಾಲೂಕಿನ, ಪಬ್ಲಿಕ್ ಶಾಲೆ, ಬಳ್ಳಾರಿಯ ರೋಮನ್ ಕ್ಯಾಥೋಲಿಕ್ ಮಿಶನ್ನಿನ ಸಂತಜೋಸೆಫ್ ಶಾಲೆಯು ಕೇವಲ ಹೆಣ್ಣುಮಕ್ಕಳ ಶಿಕ್ಷಣದ ಕಲಿಕೆಗಾಗಿ ಮೀಸಲಿದ್ದವು. ಈ ಹೆಸರಿನ ಶಾಲೆಯು ಈಗಲೂ ಬಳ್ಳಾರಿಯಲ್ಲಿದೆ.

ಮೈಸೂರು ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯು ವಿಲೀನವಾದಾಗ, ಬಳ್ಳಾರಿಯಲ್ಲಿ ೪೬೪ ಎಲಿಮೆಂಟರಿ, ೧೭ ಮಾಧ್ಯಮಿಕ ಶಾಲೆಗಳು ಅಸ್ತಿತ್ವದಲ್ಲಿದ್ದವು. ಇದಾದ ಬಳಿಕ ಖಾಸಗಿ ಶಾಲೆಗಳು ಜಿಲ್ಲೆಯಲ್ಲಿ ತಲೆ ಎತ್ತಿದವು. ಈಗಲೂ ಜಿಲ್ಲೆಯಲ್ಲಿ ಸರ್ಕಾರಿ ಶಾಲೆಗಳ ಸೇವೆಗಿಂತ ಖಾಸಗಿಯವರು ನೀಡುವ ಶೈಕ್ಷಣಿಕ ಸೇವೆ ಉತ್ತಮವಾಗಿದೆ. ಅದರಲ್ಲಿ ವೀರಶೈವ ವಿದ್ಯಾವರ್ಧಕ ಸಂಘ, ಶ್ರೀ ಉಜ್ಜಯಿನಿ ಪೀಠ, ಟಿಎಂಎಇ ಶಿಕ್ಷಣ ಸಂಸ್ಥೆ ಹರಪನಹಳ್ಳಿ, ಹೊಸಪೇಟೆಯಲ್ಲಿರುವ ಥಿಯಾಸಾಫಿಕಲ್ ಸೊಸೈಟಿ, ಕೊಟ್ಟೂರಿನ ತುಂಗಭದ್ರಾ ಶಿಕ್ಷಣ ಸಂಸ್ಥೆ, ಕಾನಮಡಗಿನ ಸಿದ್ಧಲಿಂಗೇಶ್ವರ ಶಿಕ್ಷಣ ಸಂಸ್ಥೆ, ಹಗರಿಬೊಮ್ಮನಹಳ್ಳಿಯ ರೇಣುಕಾ ವಿದ್ಯಾಸಂಸ್ಥೆಗಳಲ್ಲಿ ಪ್ರಾಥಮಿಕ, ಪ್ರೌಢಶಾಲೆ, ಕಾಲೇಜು ಅಲ್ಲದೆ ತಾಂತ್ರಿಕ, ಕಾನೂನು ಮತ್ತು ವೈದ್ಯಕೀಯ ಶಿಕ್ಷಣ ನೀಡುವಲ್ಲಿ ವಹಿಸಿರುವ ಪಾತ್ರವು ಪ್ರಮುಖವಾಗಿದೆ. ಇದೇ ವೇಳೆ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿಗಳಿಗಾಗಿಯೇ ಪ್ರತ್ಯೇಕ ವಿದ್ಯಾಸಂಸ್ಥೆಯ ಆರಂಭಗೊಂಡವು. ಅವುಗಳಲ್ಲಿ ಅಲ್ಲಿಪುರದ ಹನುಮಂತಪ್ಪ ಗಿರಿಮಲ್ಲಪ್ಪರ ನೇತೃತ್ವದಲ್ಲಿ ೧೯೪೪ರಲ್ಲಿ ವಾಲ್ಮೀಕಿ ನಾಯಕರ ವಿದ್ಯಾಭಿವೃದ್ಧಿ ಸಂಘವು ಸ್ಥಾಪನೆಯಾಯಿತು. ಈಗಲೂ ಈ ಶಿಕ್ಷಣ ಸಂಸ್ಥೆಗಳು ಬಳ್ಳಾರಿ ಜಿಲ್ಲೆಯು ಶೈಕ್ಷಣಿಕ ರಂಗದಲ್ಲಿ ಪ್ರಗತಿ ಸಾಧಿಸುವುದಕ್ಕೆ ಅನುಪಮ ಸೇವೆ ನೀಡುತ್ತಿವೆ. ೧೯೩೦ರಲ್ಲಿ ಹೊಸಪೇಟೆ ತಾಲೂಕಿನ ಕಂಪಲಿರಾಯ ಹೆಸರಿನ ಸಂಸ್ಥೆಯು ಗಿರಿಜನ ಪ್ರೌಢಶಾಲೆ ಆರಂಭಿಸಿ ಕುಮಾರಾಮ ವಿದ್ಯಾರ್ಥಿನಿಲಯವನ್ನು ಅಸ್ತಿತ್ವಕ್ಕೆ ಬಂದಿತು.

ಹೊಸಪೇಟೆಯ ವಿಜಯನಗರ ಕಾಲೇಜು ೧೯೬೪ರಲ್ಲಿ ಅಂದಿನ ಉಪರಾಷ್ಟ್ರಪತಿಯಾಗಿದ್ದ ಝಾಕೀರ್ ಹುಸೇನ್ ರವರ ನೇತೃತ್ವದಲ್ಲಿ ಸ್ಥಾಪನೆಯಾಯಿತು. ಇಂದಿಗೂ ಶೈಕ್ಷಣಿಕವಾಗಿ ತುಂಬಾ ಪ್ರಸಿದ್ಧಿಯಾಗಿದೆ. ಇಲ್ಲಿ ಕಲಾ, ವಾಣಿಜ್ಯ, ವಿಜ್ಞಾನ ಕೋರ್ಸ್‌ಗಳೊಂದಿಗೆ ತಾಂತ್ರಿಕ ಕೋರ್ಸ್‌ಗಳಾದ ಬಿಬಿಎಂ, ಬಿಸಿಎ ಹಾಗೂ ಬಿಸಿಡಿ, ಎಂ.ಕಾಂ., ಎಂ.ಎಸ್ಸಿ, ಕೋರ್ಸ್‌ಗಳು ಆರಂಭವಾಗಿವೆ. ಹೊಸಪೇಟೆಯಲ್ಲಿ ಒಂದು ಸರ್ಕಾರಿ ಕಾಲೇಜ್ ೨೦೦೭ರಲ್ಲಿ ಸ್ಥಾಪನೆಯಾಗಿದೆ. ಅದೇ ರೀತಿ ಜಿಲ್ಲೆಯಲ್ಲಿ ಅನೇಕ ಸರ್ಕಾರಿ ಪ್ರೌಢಶಾಲೆಗಳು ಹಾಗೂ ಕಾಲೇಜುಗಳು ಸ್ಥಾಪಿತವಾಗಿವೆ.

ಹೊಸಪೇಟೆಯಲ್ಲಿ ೧೯೮೪ರಲ್ಲಿ ಥಿಯಾಸಾಫಿಕಲ್ ಸೊಸೈಟಿಯ ಮಹಿಳಾ ಪ್ರಥಮ ದರ್ಜೆ ಕಾಲೇಜು ಸ್ಥಾಪನೆಯಾಯಿತು. ೧೯೮೭-೮೮ರಲ್ಲಿ ಕಂಪ್ಲಿಯಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಸ್ಥಾಪನೆಯಾಯಿತು. ೧೯೯೧-೯೨ರಲ್ಲಿ ಕಮಲಾಪುರದ ಹತ್ತಿರ ಮದಕರಿನಾಯಕ ಟ್ರಸ್ಟ್‌ನಿಂದ ಶ್ರೀಹಂಪಿ ವಿರೂಪಾಕ್ಷೇಶ್ವರ ಪ್ರಥಮ ದರ್ಜೆ ಕಾಲೇಜು ಸ್ಥಾಪಿಸಲಾಯಿತು.

ಸಂಡೂರು ತಾಲೂಕಿನಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಮಾನವನದಲ್ಲಿ ಮೂರು ಮಾಧ್ಯಮಿಕ ಶಾಲೆಗಳಿದ್ದವು. ಸಂಡೂರಿನ ಜುಲ್ಲಿ ಶಾಲೆಯು ೧೯೨೬ರಲ್ಲಿ ಸ್ಥಾಪನೆಯಾದರೆ, ೧೯೪೮ರಲ್ಲಿ ತಾರಾ ಪ್ರಾಥಮಿಕ ಶಾಲೆ ಹಾಗೂ

೧೯೨೬ರಲ್ಲಿ ಜಿಲ್ಲಾ ಮಂಡಳಿಯಿಂದ ಒಂದು ಶಾಲೆ ಆರಂಭವಾದವು. ಇದೇ ಊರಲ್ಲಿ ಛತ್ರಪತಿ ಶಿವಾಜಿ ಶಿಕ್ಷಣ ಸಂಸ್ಥೆ ೧೯೫೮-೫೯ರಲ್ಲಿ ಸ್ಥಾಪನೆಯಾಗಿದೆ. ಮತ್ತು ಇಂದಿಗೂ ತನ್ನ ಹೆಗ್ಗಳಿಕೆಯನ್ನು ವಿಸ್ತರಿಸಿಕೊಳ್ಳುತ್ತಿದೆ. ಖಾಸಗಿ ಶಿಕ್ಷಣ ಸಂಸ್ಥೆಗಳ ಜೊತೆಯಲ್ಲಿ ಸರ್ಕಾರಿ ಶಾಲೆಗಳು ಸೇವೆಸಲ್ಲಿಸುತ್ತಿವೆ. ೨೦೦೮-೦೯ರಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜ್ ಸ್ಥಾಪನೆಯಾಗಿದೆ. ಆದರೆ ಸ್ಮಯೋರಾದ ಪಾಲಿಟೆಕ್ನಿಕಲ್ ಕಾಲೇಜ್, ಸಂಡೂರಿನ ದೇವಗಿರಿಯಲ್ಲಿದೆ. ಅಲ್ಲದೆ ಉನ್ನತ ಶಿಕ್ಷಣ ಕೋರ್ಸ್‌ಗಾಗಿ ನಂದಿಹಳ್ಳಿಯಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರ ಆರಂಭವಾಗಿದೆ. ಆದರೆ ಈಗ ಈ ಸ್ನಾತಕೋತ್ತರ ಕೇಂದ್ರವು ಬಳ್ಳಾರಿಯಲ್ಲಿ ಸ್ಥಾಪಿತವಾದ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸೇರ್ಪಡೆಯಾಗಿದೆ.

ಕೂಡ್ಲಿಗಿ ತಾಲೂಕು ಶೈಕ್ಷಣೀಕವಾಗಿ ಹಿಂದುಳಿದ ಪ್ರದೇಶವಾದರೂ ಸಹ ಇಲ್ಲಿಯೂ ಸಹ ಖಾಸಗಿ ಶಿಕ್ಷಣ ಕೇಂದ್ರಗಳದ್ದೆ ಕಾರುಬಾರು. ೧೯೬೦ರಲ್ಲಿ ಕೂಡ್ಲಿಗಿ ತಾಲ್ಲೂಕಿನ ಚಿಕ್ಕ ಜೋಗಿಹಳ್ಳಿ ಹಾಗೂ ಕೊಟ್ಟೂರಿನಲ್ಲಿ ಒಂದೊಂದು ತಾಲ್ಲೂಕು ಬೋರ್ಡ್‌ನ ಶಾಲೆ ಆರಂಭವಾದವು. ೧೯೮೦ರಲ್ಲಿ ಕಾನಾಮಡಗು ಶ್ರೀಶರಣ ಬಸವೇಶ್ವರ ಪ್ರೌಢಶಾಲೆ, ಉಜ್ಜಿನಿಯ ಸಿದ್ದೇಶ್ವರ ಶಾಲೆ, ಕೂಡ್ಲಿಗಿಯ ಹಿ.ಮ.ವಿ. ಪ್ರೌಢಶಾಲೆಗಳು ಸ್ಥಾಪನೆಯಾಗಿ ಆ ಭಾಗದ ಗ್ರಾಮೀಣ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವಲ್ಲಿ ಯಶಸ್ವಿಯಾಗಿವೆ. ಇಲ್ಲೊಂದು ಸರ್ಕಾರಿ ಪ್ರಥಮ ದರ್ಜೆ ಕಾಲೇನು ಸ್ಥಾಪನೆಯಾಗಿದೆ.

ಕೂಡ್ಲಿಗಿ ತಾಲೂಕಿನಲ್ಲಿ ೪೪ ಪ್ರೌಢಶಾಲೆಗಳು, ೭ ಪದವಿಪೂರ್ವ ಕಾಲೇಜುಗಳು, ೩ ಪ್ರಥಮ ದರ್ಜೆ ಕಾಲೇಜುಗಳು ಒಂದು ಡಿಇಡಿ, ಒಂದು ಸಿಪಿಇಡಿ ಹಾಗೂ ಮೂರು ಐಟಿಐ ಕಾಲೇಜುಗಳು ಸ್ಥಾಪನೆಯಾಗಿವೆ. ಹೂವಿನ ಹಡಗಲಿಯಲ್ಲಿ ೪ ಪದವಿ ಪೂರ್ವಕಾಲೇಜ್‌ಗಳ ಜೊತೆಗೆ ತುಂಗಭದ್ರಾ ಪ್ರೌಢಶಾಲೆ, ಜ್ಞಾನಗಂಗಾ ಪ್ರೌಢಶಾಲೆ, ಎಂ.ಎಂ.ಪಟೇಲ್ ಸ್ಮಾರಕ ಪ್ರೌಢಶಾಲೆ, ಆರಂಭವಾಗಿವೆ. ೧೯೭೦ರಲ್ಲಿ ಗಂಗಾವತಿ ಭಾಗ್ಯಮ್ಮ ಗ್ರಾಮೀಣ ಮಹಾವಿದ್ಯಾಲಯ ಹಾಗೂ ವೀರಶೈವ ಶಿಕ್ಷಣ ಸಂಸ್ಥೆಗಳು ತಲೆ ಎತ್ತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ೧೯೯೭-೯೮ಕ್ಕೆ ಮುನ್ನಾ ಹರಪನಹಳ್ಳಿ ಸೇರಿತ್ತು. ಈಗ ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾಗಿದೆ. ಇಲ್ಲಿ ತಾಂತ್ರಿಕ ಕೋರ್ಸ್ ಹೆಚ್ಚಾಗಿ ಆರಂಭವಾದವು. ಟಿಎಂಎಇ ಸಂಸ್ಥೆಯು ಐಟಿಐ ಶಿಕ್ಷಣ ತರಬೇತಿ ಸಂಸ್ಥೆಗಳಿಗೆ ಪ್ರಧಾನ್ಯತೆ ನೀಡಿತು. ಇದರಿಂದ ಎಷ್ಟೋ ವಿದ್ಯಾರ್ಥಿಗಳು ತರಬೇತಿ ಪಡೆದು ಅತಿ ಹೆಚ್ಚು ಸಂಖ್ಯೆಯ ಶಿಕ್ಷಕರಾಗಿರುವುದು ಕಾಣಸಿಗುತ್ತದೆ. ಒಂದೊಂದು ಡಿಫಾರ್ಮ, ಬಿಫಾರ್ಮ ಹಾಗೂ ೧೯೭೨ರಲ್ಲಿ ಅಂಬ್ಲಿದೊಡ್ಡ ಭರ್ಮಪ್ಪರವರ ಹೆಸರಲ್ಲಿ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಪ್ರಥಮದರ್ಜೆ ಕಾಲೇಜನ್ನು ಸ್ಥಾಪನೆ ಮಾಡಿದೆ.

ಇನ್ನು ಜಿಲ್ಲೆಯ ಪ್ರಮುಖ ತಾಲೂಕಾದ ಸಿರುಗುಪ್ಪ ತಾಲೂಕಿನ ವ್ಯಾಪ್ತಿಯಲ್ಲಿ ಶಿಕ್ಷಣ ಸೇವೆ ಉತ್ತಮವಾಗಿದೆ. ೧೯೭೩ರಲ್ಲಿ ಮಾಜಿ ಸಚಿವರಾದ ಪಿ.ರಾಮಯ್ಯರವರ ಹೆಸರಿನ S.E.S ಶಿಕ್ಷಣ ಸಂಸ್ಥೆ ಮಹತ್ವದಾಗಿದೆ. ಪ್ರಾಥಮಿಕ, ಪ್ರೌಢಶಾಲೆ, ಕಾಲೇಜು ಸ್ಥಾಪನೆಯಾಗಿವೆ. ಇದರೊಂದಿಗೆ ಸರ್ಕಾರಿ ಪ್ರೌಢಶಾಲೆ,

ಕಾಲೇಜುಗಳು, ಪದವಿ ಕಾಲೇಜುಗಳು ಆರಂಭವಾಗಿವೆ. ಇಲ್ಲಿ ಪ್ಯಾರಾಮೆಡಿಕಲ್ ಟೆಕ್ನಿಶಿಯನ್ ಕೋರ್ಸ್, ವೀರಶೈವ ವಿದ್ಯಾವರ್ಧಕ ಸಂಘವು ವಿವೇಕಾನಂದ ಪ್ರಾಥಮಿಕ ಹಾಗೂ ಪ್ರೌಢಶಾಲೆ ಆರಂಭಿಸಿದೆ.

**ಪತ್ರಿಕೋದ್ಯಮ :** ಬಳ್ಳಾರಿ ಜಿಲ್ಲೆಯು ಪತ್ರಿಕೋದ್ಯಮ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿದೆ. ಈ ಭಾಗದಲ್ಲಿ ಪತ್ರಿಕಾ ೦ಗ ಬೆಳೆಯಲು ಕಾರಣ ಕ್ರೈಸ್ತ ಮಿಶನರಿಗಳೆಂದರೆ ತಪ್ಪಾಗಲಿಕ್ಕಿಲ್ಲ. ಬಳ್ಳಾರಿಯಲ್ಲಿ ೧೮೧೫ರಲ್ಲಿ ಮೊಟ್ಟ ಮೊದಲಿಗೆ ಪ್ರಿಂಟಿಂಗ್ ಪ್ರೆಸ್ ಆರಂಭವಾಯಿತು. ಆಗ ಇದ್ದ ರೆವರೆಂಡ್ ಹರ್ಮನ್ ಫೆಡ್ರಿಕ್ ಮೋಗ್ಲಿಂಗ್ ರವರು ೧೮೩೬ರಲ್ಲಿ ಬಳ್ಳಾರಿಗೆ ಬಂದರು. ಇವರು ಕನ್ನಡ ಸಮಾಚಾರ ಎಂಬ ಪತ್ರಿಕೆ ಪ್ರಕಟಿಸಿದರು. ಇದಕ್ಕೂ ಮುನ್ನ ೧೮೩೪ರ ಜುಲೈ ೧ರಂದು ಮಂಗಳೂರಿನಿಂದ ಕನ್ನಡದ ಮೊಟ್ಟ ಮೊದಲ ಪತ್ರಿಕೆಯಾದ 'ಮಂಗಳೂರು ಸಮಾಚಾರ' ಪತ್ರಿಕೆಯನ್ನು ಪ್ರಾರಂಭಿಸಿದರು. ಕಂಪ್ಲಿಯಿಂದ 'ಚಿಲುಮೆ' ಎಂಬ ಪತ್ರಿಕೆ ಪ್ರಕಟವಾಗುತ್ತಿತ್ತು.

೧೯೪೫ರಲ್ಲಿ ಹೊಸಪೇಟೆಯಲ್ಲಿ 'ಸ್ವತಂತ್ರ' ಎಂಬ ಹೆಸರಿನ ವಾರಪತ್ರಿಕೆ ಪ್ರಕಟವಾದರೆ ಕೊಟ್ರಯ್ಯ ಅವರು ಪಂಚಾಚಾರ್ಯ ಎಂಬ ಪತ್ರಿಕೆ ಆರಂಭಿಸಿದ್ದರು. ಕೋ.ಚೆನ್ನಬಸವಪ್ಪರವರು 'ರೈತಪತ್ರಿಕೆ' ಪ್ರಕಟಿಸಿದರು. ಕಂಪ್ಲಿಯಿಂದ ೧೯೬೫ರಲ್ಲಿ 'ಚಿಲುಮೆ' ಎಂಬ ಪತ್ರಿಕೆ ಬೆಳಕಿಗೆ ಬಂದಿತು. ಎಚ್.ಸರ್ವೇಶ್ವರರವರು ೧೧೫೭ ರಲ್ಲಿ 'ನಗರ ನಗಾರಿ' ಎಂಬ ಪತ್ರಿಕೆ ಪ್ರಕಟಪಡಿಸಿದರು.

'ಬಳ್ಳಾರಿ ಜಿಲ್ಲೆ ಸಮಾಚಾರ' ಎಂಬ ವಾರಪತ್ರಿಕೆಯನ್ನು ಸಿ.ಜಿ.ಹಂಪಣ್ಣರವರು ಪ್ರಕಟಿಸಿದರೆ, ಶ್ರೀ ಸಂಗನಬಸವ ಸ್ವಾಮೀಜಿಯವರು ಕೊಟ್ಟೂರುಸ್ವಾಮಿ ಮಠದಲ್ಲಿ 'ಹೇಮಕೂಟ' ಎಂಬ ಮಾಸಿಕ ಪತ್ರಿಕೆ ಪ್ರಕಟಪಡಿಸಿದರು. ಉಜ್ಜನಿಯ ಪೀಠದಿಂದ 'ಸದ್ಧರ್ಮಪ್ರಭೆ ಪ್ರಕಟವಾಯಿತು. ಪ್ರಮುಖ ರಾಜಕಾರಣಿಯಾದ ಎಂ.ಪಿ.ಪ್ರಕಾಶ್ ರವರು 'ಜನಮನ' ಹೆಸರಿನ ಪತ್ರಿಕೆ ಪ್ರಕಟಪಡಿಸಿದರೆ ಇದೇ ಭಾಗದ ಮಹಾಬಲೇಶ್ವರ ಕಾಟ್ರಹಳ್ಳಿರವರು 'ದಿನಬಿಟ್ಟು ದಿನ' ಪತ್ರಿಕೆ ಪ್ರಕಟಮಾಡಿದರು.

ಈಚೆಗೆ ಜಿಲ್ಲೆಯಲ್ಲಿ ದಿನಪತ್ರಿಕೆ ಮತ್ತು ವಾರಪತ್ರಿಕೆಗಳು ಆರಂಭಗೊಂಡು ತಮ್ಮದೇ ಆದ ಸೇವಾ ಕಾರ್ಯವನ್ನು ಮಾಡುತ್ತಿವೆ. ರಾಜ್ಯಮಟ್ಟದ ಪತ್ರಿಕೆಗಳಾದ ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಹಳೆಯ ಪತ್ರಿಕೆಗಳಾದರೆ ಈಚೆಗೆ ಬಂದ ವಿಜಯ ಕರ್ನಾಟಕ ಪತ್ರಿಕೆಯು ಪತ್ರಿಕಾಲೋಕದಲ್ಲಿ ಸಂಚಲನವನ್ನುಂಟು ಮಾಡಿದೆ. ಇದರೊಂದಿಗೆ ಇವೇ ಆವೃತ್ತಿಯ ಇಂಗ್ಲಿಷ್ ಪತ್ರಿಕೆ ಪ್ರಕಟವಾಗುತ್ತಲಿವೆ.

ಸಾಹಿತ್ಯಿಕ ಹಾಗೂ ರಾಜಕೀಯವಾಗಿಯೂ ತುಂಬಾ ಪ್ರಸಿದ್ಧ ಪಡೆದ ವಾರಪತ್ರಿಕೆಗಳೆಂದರೆ ಲಂಕೇಶ್ ಹಾಗೂ ಹಾಯ್ ಬೆಂಗಳೂರ್ ಪತ್ರಿಕೆಗಳು ಜಿಲ್ಲೆಯಲ್ಲಿ ಪ್ರಸಾರಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ. ಬಹಳ ತಡವಾಗಿಯಾದರೂ ಬಾದನಹಟ್ಟಿಯ ಹನುಮಂತರಾಯರಿಗೆ ಪತ್ರಿಕಾ ಅಕಾಡೆಮಿಯು ಪ್ರಶಸ್ತಿ ನೀಡಿ ಗೌರವಿಸಿರುವುದು ಹೆಮ್ಮೆಯ ಸಂಗತಿಯಾಗಿದೆ.

ರಾಜ್ಯಮಟ್ಟದಲ್ಲಿ ಪ್ರಸಾರಗೊಂಡಿರುವ ತರಂಗ, ಸುಧಾ, ಕರ್ಮವೀರ, ಸುಬೋಧಿನಿ, ಪ್ರಬುದ್ಧ ಕರ್ನಾಟಕ, ತುಷಾರ, ಸಾಧನೆ, ಕವಿಮಾರ್ಗ, ಹಾಗೂ ಇನ್ನಿತರೆ ಪತ್ರಿಕೆಗಳು ಜಿಲ್ಲೆಯಲ್ಲಿ ಓದುಗರ ಪ್ರಭಾವವನ್ನು ಗಳಿಸಿಕೊಂಡಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಸಂಶೋಧನಾ ನಿಯತಕಾಲಿಕೆಗಳಾಗಿವೆ. 'ವಿಜ್ಞಾನ ಸಂಗಾತಿ' ಅಪರೂಪದ ವಿಜ್ಞಾನ ಮಾಸಪತ್ರಿಕೆಯನ್ನು ಪ್ರಕಟಿಸಲಾಗುತ್ತಿದೆ. ಜಿಲ್ಲೆಯ ಸ್ಥಳೀಯ ಪತ್ರಿಕೆಗಳಾದ ಹೋರಾಟ, ಹೊಸಪೇಟೆ ಟೈಮ್ಸ್, ಲೋಕ ದರ್ಶನ ಮುಂತಾದ ಪತ್ರಿಕೆಗಳು ಪ್ರಕಟವಾಗುತ್ತಿವೆ. ಹೀಗೆ ಪತ್ರಿಕಾಲೋಕಕ್ಕೆ ಬಳ್ಳಾರಿ ಜಿಲ್ಲೆಯ ಕೊಡುಗೆ ಅಪಾರವಾಗಿದೆ.

### ೨.೬. ರಾಜಕೀಯ ಜೀವನ

ಜಿಲ್ಲೆಯ ರಾಜಕೀಯ ಜೀವನವನ್ನು ಸ್ವಾತಂತ್ರ್ಯ ಪೂರ್ವದ ರಾಜಸತ್ತೆಯ ಕಾಲ ಹಾಗೂ ಸ್ವಾತಂತ್ರ್ಯ ನಂತರದ ಪ್ರಜಾಪ್ರಭುತ್ವದಲ್ಲಿ ಜನಪ್ರತಿನಿಧಿಗಳು ಆಳ್ವಿಕೆ. ಹೀಗೆ ಎರಡು ಭಾಗಗಳಲ್ಲಿ ವಿಂಗಡಿಸಿ ನೋಡ ಬಹುದು.

ಮೊದಲಿಗೆ ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ರಾಜಮಹಾರಾಜರು ಬಳ್ಳಾರಿ ಜಿಲ್ಲೆಯ ಹಲವಾರು ಪ್ರದೇಶಗಳನ್ನು ಆಳಿದರೆಂಬ ಅಂಶವು ದಾಖಲಾತಿಗಳ ಮೂಲಕ ತಿಳಿಯುತ್ತದೆ. ಆಗಿನ ರಾಜರ ಆಳ್ವಿಕೆಗಳನ್ನು ಗಮನಿಸಿಬೇಕಾದರೆ ಈಗಾಗಲೇ ಲಭ್ಯವಾಗಿರುವ ಶಾಸನಾಧಾರಗಳೇ ಪ್ರಮುಖ ಆಧಾರ ಎನ್ನಬಹುದು.

ಜಿಲ್ಲೆಯಲ್ಲಿ ದೊರೆತಿರುವ ಶಾಸನಗಳಲ್ಲಿ ಬಹುತೇಕವಾಗಿ ಶಾತವಾಹನ ರಾಜರಿಂದ ಹಿಡಿದು ಮೈಸೂರು ಒಡೆಯರವರೆಗಿನ ಕಾಲಾವಧಿಯನ್ನು ಗುರುತಿಸಬಹುದು. ಈ ಭಾಗದಲ್ಲಿರುವ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ, ಹರಪನಹಳ್ಳಿ, ಈ ತಾಲೂಕು ಈಗ ದಾವಣಗೆರೆ ಜಿಲ್ಲೆಗೆ ಸೇರಿವೆ. ಇದನ್ನು ಹೊರತುಪಡಿಸಿ ಉಳಿದ ಎಲ್ಲಾ ತಾಲ್ಲೂಕುಗಳಲ್ಲಿ ಆಯಾ ರಾಜರ ಕಾಲದ ಆಳ್ವಿಕೆಯನ್ನು ನೆನಪಿಸಲು ಶಾಸನಗಳೇ ಪ್ರಮುಖ ಆಧಾರ.

ಪ್ರಮುಖ ರಾಜ ಮನೆತನವಾದ ಮೌರ್ಯರ ಆಡಳಿತಕ್ಕೆ ಸಂಬಂಧ ಪಟ್ಟ ಮಹತ್ವದ ಶಾಸನಗಳು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ 'ಉಡೆಗೊಳ' ಮತ್ತು 'ನಿಟ್ಟೂರು'ಗಳಲ್ಲಿ ಶಾಸನಗಳು ದೊರೆತಿವೆ. ಈ ಎರಡು ಗ್ರಾಮಗಳಲ್ಲಿ ದೊರೆತ ಶಾಸನಗಳಿಂದ ಮೌರ್ಯ ಸಾಮ್ರಾಟನಾದ ಅಶೋಕನ ಆಳ್ವಿಕೆಯು ಇಲ್ಲಿಯವರೆಗೆ ಇತ್ತೆಂದು ತಿಳಿಯುತ್ತದೆ. ಆ ಬಳಿಕ ಹಿರೇಹಡಗಲಿಯಲ್ಲಿ ದೊರೆತ ಪಲ್ಲವ ಶಿವಸ್ಕಂದ ವರ್ಮನವರೆಗೆ ಯಾವುದೇ ಶಾಸನವು ದೊರಕಿಲ್ಲ. ಈ ಶಾಸನವು ಶಾತವಾಹನರ ರಾಜರ ಆಳ್ವಿಕೆಯನ್ನು ತಿಳಿಸುತ್ತದೆ. ಶಾಸನದಲ್ಲಿ ನಮೂದಾಗಿರುವ ಪದ ಶಾತವಾಹನ ನೀರಠ ಎಂದಿದೆ. ಇದರಿಂದ ಶಾತವಾಹನರ ಕಾಲಾವಧಿಯಲ್ಲಿ ಜಿಲ್ಲೆಯಲ್ಲಿ ಪಾಳೆಯಗಾರಿಕೆ ಇತ್ತೆಂದು ತಿಳಿದುಬರುತ್ತದೆ. ಇದಲ್ಲದೆ ಪಲ್ಲವರ ಆಳ್ವಿಕೆಯು ಈ ಭಾಗದಲ್ಲಿ ಆಗಿತ್ತೆಂದು ಕಂಡುಬರುತ್ತದೆ. ಹಾಗೇನೆ ದಾವಣಗೆರೆ ತಾಲೂಕಿನ ಅಣಜಿ ಎಂಬಲ್ಲಿ ದೊರೆತ ಶಾಸನದಲ್ಲಿ ಸಣ್ಣಕ್ಕಸ ಪಲ್ಲವನ ಉಲ್ಲೇಖವಿದೆ.

**ಬಾದಾಮಿ ಚಾಳುಕ್ಯರು :** ಚಾಲುಕ್ಯರಿಗೆ ಸಂಬಂಧಪಟ್ಟ ಶಾಸನಗಳು ಜಿಲ್ಲೆಯಲ್ಲಿ ದೊರಕಿವೆ. ಜಿಲ್ಲೆಯ 'ಕುರುಗೋಡಿ'ನಲ್ಲಿ ದೊರೆತ ಶಾಸನದಲ್ಲಿ 'ಸತ್ಯಾಶ್ರಯ'ನ ಉಲ್ಲೇಖವು ಇದೆ. ಅಲ್ಲದೆ ಸಂಡೂರು ತಾಲೂಕಿನ ಕುಮಾರಸ್ವಾಮಿ ದೇವಾಲಯದ ಬಳಿ ಇರುವ ಪಾರ್ವತಿ ದೇವಾಲಯದ ಶಾಸನಗಳ ಲಿಪಿ ಹಾಗೂ ವಾಸ್ತುಶಿಲ್ಪದಿಂದ ಈ ಭಾಗದಲ್ಲಿ 'ಬಾದಾಮಿ ಚಾಲುಕ್ಯ'ರ ಆಡಳಿತ ಇತ್ತೆಂದು ತಿಳಿದುಬರುತ್ತದೆ. ಹಾಗೇನೆ ಹಂಪಿಯಲ್ಲಿರುವ ಹಲವು ದೇವಾಲಯಗಳ ವಾಸ್ತುಶಿಲ್ಪವೂ 'ಚಾಲುಕ್ಯರ ಶೈಲಿಯಲ್ಲಿ ಕಂಡುಬರುತ್ತದೆ. ಹಂಪಿಯ ಜಿನ ಬಸದಿಗಳು ಚಾಲುಕ್ಯರ ಕಾಲದವಾಗಿರಬಹುದೆಂಬುದು ತಜ್ಞರ ಅಭಿಪ್ರಾಯವಾಗಿದೆ.

**ರಾಷ್ಟ್ರಕೂಟರು :** ಚಾಲುಕ್ಯ ಅರಸನಾದ ಇಮ್ಮಡಿ ಕೀರ್ತಿವರ್ಮನನ್ನು ರಾಷ್ಟ್ರಕೂಟ ಅರಸನಾದ ದಂತಿದುರ್ಗನು ಸೋಲಿಸಿದ ಬಳಿಕ ಮಾಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಬಗ್ಗೆ ಈ ಭಾಗದಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ರಾಷ್ಟ್ರಕೂಟರ ಆಳ್ವಿಕೆಯ ಕಾಲದ ರಾಜರ ಬಗೆಗಿನ ಶಾಸನಗಳು ಜಿಲ್ಲೆಯಲ್ಲಿ ದೊರಕಿವೆ. ಇವುಗಳಲ್ಲಿ ಮುಮ್ಮಡಿಇಂದ್ರ, ಮೂರನೆಯ ಕೃಷ್ಣ, ಖೊಟ್ಟಿಗ, ಕೃಷ್ಣನ ಮಗ ಇಂದ್ರನ ಕಾಲದವುಗಳಾಗಿವೆ. ಬಳ್ಳಾರಿ ಜಿಲ್ಲೆಯ ಕುಡತಿನಿ, ಕೊಳಗಲ್ಲು, ಕಡಬಗೆರೆ, ಚಿರಸ್ತಹಳ್ಳಿ ಬಾಗಳಿಗಳಲ್ಲಿ ರಾಷ್ಟ್ರಕೂಟರ ಶಾಸನಗಳು ದೊರಕಿವೆ.

**ಕಲ್ಯಾಣಿ ಚಾಲುಕ್ಯರು:** ರಾಷ್ಟ್ರಕೂಟರ ಪ್ರಾಬಲ್ಯವನ್ನು ಹಿಂದಿಕ್ಕಿದ ಇಮ್ಮಡಿ ತೈಲಪನು ಕಲ್ಯಾಣವನ್ನು ರಾಜಧಾನಿಯಾಗಿಸಿಕೊಂಡು ಆಳ್ವಿಕೆ ನಡೆಸಿದನು. ಕ್ರಿ.ಶ.ಸುಮಾರು ೯೭೬ರಲ್ಲಿ ದೊರೆತಿರುವ ಇಮ್ಮಡಿ ತೈಲಪನ ಶಾಸನ ಮೊಟ್ಟ ಮೊದಲ ಜಿಲ್ಲೆಯಲ್ಲಿ ದೊರೆತ ಕಲ್ಯಾಣ ಚಾಲುಕ್ಯರ ಶಾಸನವಾಗಿದೆ. ಹಾಗೇನೆ ಜಿಲ್ಲೆಯಲ್ಲಿ ೧೧೭೨ರ ನೀಲಗುಂದ ಶಾಸನವು ಬಿಜ್ಜಳ ದೇವನ ಉಲ್ಲೇಖವನ್ನು ನೀಡುತ್ತದೆ. ಇದರಿಂದ ಕಲಚೂರಿಯರ ಆಳ್ವಿಕೆಯ ಆಧಾರವು ಲಭ್ಯವಾಗಿದೆ.

**ನೊಳಂಬ ಅರಸರು :** ನೊಳಂಬರ ಮೇಲೆ ಪದೇ ಪದೇ ತಲಕಾಡಿನ ಗಂಗರು ಧಾಳಿ ಎಸಗುತ್ತಿದ್ದರು. ಇದನ್ನು ಸಹಿಸದೇ ಕಂಪಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಈ ಸ್ಥಳವನ್ನು ನೊಳಂಬ ವಾಡಿ ೩೨೦೦೦ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಇವರ ರಾಜಧಾನಿಯಾದ ಕಂಪಲಿಯು ಬಳ್ಳಾರಿ ಜಿಲ್ಲೆಯಲ್ಲಿದೆ.

**ಸಿಂಧರು :** ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದವರಲ್ಲಿ ಸಿಂಧರು ಪ್ರಮುಖರು. ಜಿಲ್ಲೆಯಲ್ಲಿರುವ ಕುರುಗೋಡಿನ ಬಸವೇಶ್ವರ ಹಾಗೂ ಇತರೆ ದೇವಾಲಯಗಳಲ್ಲಿ ದೊರೆತ ಶಾಸನಗಳಿಂದ ಸಿಂಧರ ಆಳ್ವಿಕೆ ಇತ್ತೆಂದು ತಿಳಿದುಬರುತ್ತದೆ.

**ಹೊಯ್ಸಳರು :** ಈ ರಾಜ ಮನೆತನದವರು ಜಿಲ್ಲೆಯ ಹಲವು ಭಾಗಗಳಲ್ಲಿ ಆಳುತ್ತಿದ್ದರು. ಹೊಯ್ಸಳರ ವಾಸ್ತುಶಿಲ್ಪ ಮಾದರಿ ಹಾಗೂ ಅವರು ಬಳಸಿದ ಶಿಲ್ಪಗಳ ರಚನೆ ಕಪ್ಪು ಶೀಲ್ಪಗಳಲ್ಲಿ ಕೆತ್ತಿದ ಶಾಸನಗಳು ಅವರ ಚರಿತ್ರೆಯನ್ನು ನಿರ್ಮಿಸುತ್ತವೆ. ಸ್ಥಳೀಯ ಐತಿಹ್ಯದ ದಾಖಲೆ ಪ್ರಕಾರ ತುಂಗಭದ್ರನದಿ ತೀರದವರೆಗೂ

ಹೊಯ್ಸಳ ದೊರೆಗಳೂ ಯುದ್ಧ ಮಾಡಿದರೆಂಬುದು ತಿಳಿದುಬರುತ್ತದೆ. ಕ್ರಿ.ಶ.೧೨೨೧ರ ವೀರನರಸಿಂಹನ ಉಲ್ಲೇಖವಿರುವ ಶಾಸನವು ಕೊಟ್ಟೂರಿನಲ್ಲಿ ದೊರೆತಿದೆ. ಈ ಭಾಗ ದಲ್ಲಿ ದೊರೆತಿರುವ ಬಹುತೇಕ ದೇವಾಲಯಗಳು ಹೊಯ್ಸಳರ ಶೈಲಿಯದಾಗಿವೆ.

**ಯಾದವರು :** ದೇವಗಿರಿಯನ್ನು ರಾಜಧಾನಿಯನ್ನಾಗಿಸಿಕೊಂಡ ಯಾದವರ ಆಳ್ವಿಕೆಯು ಈ ಭಾಗದಲ್ಲಿತ್ತು ಎನ್ನಲಿಕ್ಕೆ ಶಾಸನಗಳೇ ಸಾಕ್ಷಿಯಾಗಿವೆ. ಯಾದವರ ದೊರೆ ಸಂಘರ್ಷ ಕಾಲದಲ್ಲಿ ದೊರೆತ ಶಾಸನಗಳು ಈ ಭಾಗದಲ್ಲಿ ದೊರೆತಿವೆ.

**ವಿಜಯನಗರದ ಅರಸರು :** ವಿಜಯನಗರದ ಅರಸರ ಆಳ್ವಿಕೆಯು ಜಿಲ್ಲೆಗೆ ಒಂದು ಶ್ರೇಯಸ್ಸು ತಂದು ಕೊಟ್ಟಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಬಹುತೇಕ ರಾಜ ಮನೆತನಗಳಿಗೆ ಹೋಲಿಸಿದರೆ ಅತಿ ಹೆಚ್ಚು ಅವಧಿಗಳ ಕಾಲ ರಾಜ್ಯಭಾರ ಮಾಡಿದವರೆಂದರೆ ವಿಜಯನಗರದ ಅರಸರು. ಈ ಭಾಗದಲ್ಲಿ ಹೊಯ್ಸಳರು ಮತ್ತು ಯಾದವರ ಬಳಿಕ ಕರ್ನಾಟಕದ ಹಲವಾರು ಪ್ರಾಂತ್ಯಗಳಲ್ಲದೆ ಇಡೀ ದೇಶವೇ ಅಚ್ಚರಿಪಡುವಂತೆ ಆಳ್ವಿಕೆ ನಡೆಸಿದ್ದು ಕಾಣಸಿಗುತ್ತದೆ.

ವಿಜಯನಗರ ಅರಸರ ಆಡಳಿತಾವಧಿಯಲ್ಲಿ ವಿದೇಶಿ ಪ್ರವಾಸಿಗರು ಬಂದು ಇಲ್ಲಿಯ ಜೀವನ ವಿಧಾನಗಳನ್ನು ತಿಳಿಸಿದ್ದು ದಾಖಲಾರ್ಹ. ಅಲ್ಲದೆ ಕೈಫಿಯತ್ತು, ಜನಪದ ಕಾವ್ಯಗಳಲ್ಲಿ ಈ ಅರಸರ ಚರಿತ್ರೆ ಕಂಡುಬರುತ್ತದೆ.

ಕಂಪಲಿ ಅರಸರ ಬಳಿಕವೇ ಹಂಪಿಯನ್ನು ವಿಜಯನಗರ ಸಾಮ್ರಾಜ್ಯ ಎಂಬ ಹೆಸರಿನಲ್ಲಿ ಆಳ್ವಿಕೆ ನಡೆಸಲಾಯಿತು. ಶ್ರೀ ವಿದ್ಯಾರಣ್ಯ ಗುರುಗಳ ಆಶೀರ್ವಾದದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಕಾರಣ ಕರ್ತರಾದ ಸಂಗಮ ವಂಶದ ಹರಿಹರ-ಹಕ್ಕಬುಕ್ಕರು ಈ ರಾಜಧಾನಿಯ ಮೂಲ ಪುರುಷರು. ಈ ರಾಜರ ಶಾಸನಗಳು ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.



ಆದರೆ ತುಳುವಂಶದ ಪ್ರಸಿದ್ಧ ರಾಜರಲ್ಲಿ ಶ್ರೀಕೃಷ್ಣ ದೇವರಾಯನ ಶಾಸನಗಳು ಹೆಚ್ಚಾಗಿ ಸಿಗುತ್ತವೆ. ಇವರ ಬಳಿಕ ಅಚ್ಯುತದೇವರಾಯ ಹಾಗೂ ಸದಾಶಿವರಾಯರ ಶಾಸನಗಳು ಅಧಿಕವಾಗಿ ಲಭ್ಯವಾದರೆ ಅರವೀಡು ವಂಶದವರ ಶಾಸನಗಳು ಕಡಿಮೆ ಪ್ರಮಾಣದಲ್ಲಿ ದೊರಕಿವೆ.

ಸಂಗಮ ವಂಶದ ದೊರೆಗಳಿಂದ ಅರವೀಡು ವಂಶದವರ ಅಳಿಯ ರಾಮರಾಯನವರೆಗೂ ಆಳ್ವಿಕೆಗೊಳ ಪಟ್ಟ ರಾಜ ಮನೆತನವೂ ಸುಮಾರು ೨೦೦ ವರ್ಷಗಳ ಸುದೀರ್ಘ ಕಾಲಾವಧಿಯವರೆಗೆ ಆಳ್ವಿಕೆ ನಡೆಸಿದರು. ಜಿಲ್ಲೆಯಲ್ಲಿರುವ ಬಹುತೇಕ ದೇವಾಲಯಗಳು ವಿಜಯನಗರ ಸಾಮ್ರಾಜ್ಯದ ಮಾದರಿಗಳಲ್ಲಿ ರಚನೆಗಳಾಗಿವೆ. ಹಂಪಿಯ ಸುತ್ತಮುತ್ತ ಸುಮಾರು ಕೋಟೆ ಬಾಗಿಲುಗಳು ಇದ್ದವೆಂದು ಈಗಲೂ ಅಳಿದುಳಿದ ಕೋಟೆಗಳ ಅವಶೇಷಗಳ ರಚನೆಯಿಂದ ತಿಳಿದುಬರುತ್ತದೆ.

ಈ ಸಾಮ್ರಾಜ್ಯದ ಅರಸರಲ್ಲಿ ಇಮ್ಮಡಿ ದೇವರಾಯ ಮತ್ತು ಶ್ರೀಕೃಷ್ಣ ದೇವರಾಯರ ಆಳ್ವಿಕೆಯಿಂದ ಸುಲ್ತಾನರು ಬೇಸತ್ತು ಹೋಗಿದ್ದರು. ಕೊನೆಗೆ ಅಳಿಯ ರಾಮರಾಯನ ಕಾಲಕ್ಕೆ ಚದುರಿ ಹೋದ ಶಾಯಿ ಸುಲ್ತಾನರು ಒಂದಾಗಿ ರಾಜಧಾನಿಯಲ್ಲಿ ಸೇರಿಕೊಂಡು ೧೫೬೫ರ ಅವಧಿಯಲ್ಲಿ ನಡೆದ ತಾಳಿಕೋಟೆ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾಯಿತು.

ವಿಜಯನಗರ ಸಾಮ್ರಾಜ್ಯವು ಚಿರಸ್ಥಾಯಿಯಾಗಿ ನಿಲ್ಲಲು ಈಗಲೂ ಅಳಿದುಳಿದ ಸ್ಮಾರಕಗಳೇ ಕಾರಣ. ಹಂಪಿಯ ಸುತ್ತಮುತ್ತಲೂ ದೊರಕಿರುವ ಶಾಸನ ಹಾಗೂ ದೇವಾಲಯಗಳು ಈ ಸಾಮ್ರಾಜ್ಯದ ಮೇರೆಯನ್ನು ದಾಖಲಿಸುತ್ತವೆ. ಹಂಪಿಯಲ್ಲಿರುವ ಶ್ರೀ ವಿರೂಪಾಕ್ಷ ದೇವಾಲಯವನ್ನು ವಿಜಯನಗರದ ಅರಸರು ಜೀರ್ಣೋದ್ಧಾರ ಮಾಡಿದ ಬಗ್ಗೆ ಶಾಸನಗಳ ದಾಖಲೆಗಳಿವೆ.

ಈಗಲೂ ಅಳಿದುಳಿದ ದೇವಾಲಯಗಳ ಉತ್ಖನನದಿಂದ ದೊರೆಯುತ್ತಿರುವ ಮಾಹಿತಿಗಳು ವಿಜಯನಗರ ಸಾಮ್ರಾಜ್ಯದ ಜೀವಂತ ಸಾಕ್ಷಿಗೆ ಕಾರಣಗಳಾಗಿ ಪರಿಣಮಿಸುತ್ತಲಿವೆ. ಹಂಪಿಯ ರಾಜಧಾನಿಯ ಬಳಿಕ ಅರವೀಡು ವಂಶದವರು ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು.

ಕೊನೆಗೆ ಅಳಿಯ ರಾಮರಾಯನ ಕಾಲಾವಧಿಯಲ್ಲಿ ಅವನತಿ ಹೊಂದಿದ ಬಳಿಕ ಕೊನೆಯ ಅರಸರು ಹಂಪಿಯಲ್ಲಿದ್ದ ಸಂಪತ್ತು ಪಡೆದು ಚದುರಿ ಹೋದರು. ಇವರ ಬಳಿಕ ಜಿಲ್ಲೆಯ ಹಲವು ಭಾಗಗಳಲ್ಲಿ ಬಾಗಳಿಯ ನಾಯಕರು, ಹರಪನಹಳ್ಳಿ ಪಾಳೆಯಗಾರರು ಆಳ್ವಿಕೆ ನಡೆಸಿದರು.

## ೨.೭. ಸಾಹಿತ್ಯ ಪರಂಪರೆ

ಬಳ್ಳಾರಿ ಜಿಲ್ಲೆಯತ ಸಾಹಿತ್ಯ ಕ್ಷೇತ್ರಕ್ಕೆ ಅಪಾರವಾದ ಕೊಡುಗೆ ನೀಡಿದೆ. ಜಿಲ್ಲೆಯಲ್ಲಿ ಕನ್ನಡ, ತೆಲುಗು ಹಾಗೂ ಸಂಸ್ಕೃತ ಭಾಷೆಗಳಲ್ಲಿ ಸಾಹಿತ್ಯ ರಚನೆಯಾಗಿದೆ. ಸಂಸ್ಕೃತ ಕವಿಗಳಲ್ಲಿ ಮತಂಗ ಮುನಿಯ 'ಬೃಹದ್ದೇಶಿ' ಗ್ರಂಥವನ್ನು ಗುರುತಿಸಬಹುದು. ಕನ್ನಡದಲ್ಲಿ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಸಾಹಿತ್ಯದ ಕಾಲಘಟ್ಟಗಳಲ್ಲಿ ಜಿಲ್ಲೆಯ ಹಲವಾರು ಸಾಹಿತಿಗಳು ಕಾಣಸಿಗುತ್ತಾರೆ. ಹಳಗನ್ನಡ ಸಾಹಿತ್ಯದಲ್ಲಿ ಮೊದಲ ಗದ್ಯ ಕವಿಯೆಂಬ ಖ್ಯಾತಿ ಪಡೆದ ಶಿವಕೋಟ್ಯಾಚಾರ್ಯರು ಬಳ್ಳಾರಿಯ ಕೋಗಳಿ ನಾಡಿನವರು. ಇವರು ಕನ್ನಡ ಪ್ರಥಮ ಕವಿ. ಇವರು ಬರೆದ 'ವಡ್ಡಾರಾಧನೆ' ಗದ್ಯಾಕೃತಿಯು ತುಂಬಾ ಉತ್ಕೃಷ್ಟವಾದುದು. ''ಕ್ರಿ.ಶ.೧೧೪೦ರ ಕಾಲಾವಧಿಯಲ್ಲಿದ್ದನೆಂದು ಹೇಳಲಾದ ಶಿವಶರಣ ಬಳ್ಳೇಶ ಮಲ್ಲಯ್ಯನು ಆದ್ಯವಚನಕಾರನೆಂದು ಗುರುತಿಸಲಾಗಿದೆ. ಇವರು ಬರೆದ ವಚನಗಳಲ್ಲಿ 'ಬಳ್ಳೇಶ್ವರ'ನೆಂಬ ನಾಮಾಂಕಿತವಿದೆ. ಈತನ ಹೆಸರಿನಿಂದಲೇ ಬಳ್ಳಾರಿ ಎಂಬ ಹೆಸರು ಬಂದಿರಬೇಕೆಂಬ ಐತಿಹ್ಯವೊಂದು ಪ್ರಚಲಿತದಲ್ಲಿದೆ. ಕ್ರಿ.ಶ.೧೦೪೦ ರಿಂದ ೨೦ನೇ ಶತಮಾನದ ದಮ್ಮೂರ ವೆಂಕಟಪ್ಪನವರಿಗೂ ೬೮ ಶಿವಶಿರಣರನ್ನು ಶಾಂತರಸರು ಗುರುತಿಸಿದ್ದಾರೆ.''[೪] ಬಸವಯುಗದ ಕಾಲಘಟ್ಟದಲ್ಲಿ ಸಾಹಿತ್ಯ ವಲಯದಲ್ಲಿ ಕ್ರಾಂತಿ ಮಾಡಿದ ಇಬ್ಬರು ಪ್ರಮುಖ ಕವಿಗಳು ಕಂಡುಬರುತ್ತಾರೆ. ವಿಜಯನಗರದ ಅರಸರ ಕಾಲದಲ್ಲಿ ಇವರು ಧಾರ್ಮಿಕ ಸಾಹಿತ್ಯ

ಕೃತಿಗಳನ್ನು ರಚಿಸಿದ್ದಾರೆ. ಮಹಾಕವಿ ಹರಿಹರನು ತನ್ನ ರಗಳೆಗಳನ್ನು ಹಾಗೂ ಮಹಾಕವಿ ರಾಘುವಾಂಕನು 'ಷಟ್ಪದಿ ಪ್ರಕಾರಗಳಲ್ಲಿ ಕೃತಿ ರಚಿಸಿದರು. ಹರಿಹರನು ಬಸವರಾಜದೇವ ರಗಳೆ, ಗಿರಿಜಾ ಕಲ್ಯಾಣ ಹರ್ಷ ಶತಕ ಮತ್ತು ಪಂಪಶತಕಗಳನ್ನು ರಚಿಸಿದರು. ರಾಘುವಾಂಕನು ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಪುರಾಣಗಳನ್ನು ರಚಿಸಿದನು. ೧೪ನೇ ಶತಮಾನದಲ್ಲಿ ಮಂಗರಾಜನ ಖಗೇಂದ್ರಯಾಗಿ ದರ್ಪಣವು ರಚನೆಯಾಗಿರುವುದು ಕಂಡುಬರುತ್ತದೆ.

ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ದೊರೆ ಪ್ರೌಢದೇವರಾಯನ ಆಳ್ವಿಕೆಯಲ್ಲಿ ೧೦೧ ವಿರಕ್ತರು ಇದ್ದರು. ಅವರಲ್ಲಿ ಲಕ್ಕಣ್ಣ ದಂಡೇಶ ಮತ್ತು ಚಾಮರಸ ಪ್ರಮುಖರು. ಲಕ್ಕಣ್ಣ ದಂಡೇಶನ ಶಿವಾತತ್ವ ಚಿಂತಾಮಣಿ ಹಾಗೂ ಚಾಮರಸನ ಪ್ರಭುಲಿಂಗ ಲೀಲೆ ಪ್ರಮುಖ ಸಾಹಿತ್ಯ ಕೃತಿಗಳು. ಕಲ್ಲುಮಠದ 'ಪ್ರಭುದೇವನ' ಲಿಂಗಲೀಲಾ ವಿಲಾಸ, ಖತ್ತಲೇಶ್ವರನ ರಾಮಾಯಣ, ಕರಸ್ಥಳವಾಗಿ ದೇವನ ತ್ರಿಪದಿ ಹಾಗೂ ಚಂದ್ರ ಕವಿಯ 'ಗುರುಮೂರ್ತಿ ಶತಕ' ಮುಂತಾದವು ರಚನೆಯಾಗಿವೆ. ಬುಕ್ಕರಾಯನ ಮಗ ಕಂಪಣನ ಹೆಂಡತಿ ಗಂಗಾದೇವಿಯು ಸಂಸ್ಕೃತದಲ್ಲಿ 'ಮಧುರಾವಿಜಯಂ' ಅಥವಾ 'ವೀರಕಂಪಣರಾಯ ಚರಿತೆ' ಬರೆದಳು. ಇವಳನ್ನು ಸಂಸ್ಕೃತದಲ್ಲಿ ಮೊಟ್ಟ ಮೊದಲು ಕೃತಿ ರಚಿಸಿದ ಮಹಿಳಾ ಲೇಖಕಿ ಎನ್ನುವರು.

ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅಷ್ಟದಿಗ್ಗಜರು ಖ್ಯಾತಿ ಪಡೆದಿದ್ದ ಕವಿಗಳು ಇದ್ದರು. ಕೃಷ್ಣದೇವರಾಯ ಸ್ವತಃ ಕವಿಯಾಗಿದ್ದನು. ಅವನೇ ಹಲವಾರು ಕೃತಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ 'ಆಮುಕ್ತಮಾಲ್ಯದ' ಹಾಗೂ 'ಜಾಂಬವತಿ ಕಲ್ಯಾಣ' ಪ್ರಮುಖವಾದವು. ಈತನ ಆಸ್ಥಾನದಲ್ಲಿ ಅಲ್ಲಸಾನಿ ಪೆದ್ದಣ್ಣ ನಂದಿ ತಿಮ್ಮಣ, ದೂರ್ಜಟಿ, ರಾಮಭಕ್ತಕವಿ, ಪೊನ್ನವೀರಭದ್ರ, ಡಿಂಡಿಮರಾಜನಾಥ, ತಿಮ್ಮರಸು, ಪಿರಿಗಳ ಸೂರನ ಮುಂತಾದವರು ಸಾಹಿತ್ಯ ರಚನೆ ಮಾಡಿದ್ದಾರೆ. ವಿರೂಪಾಕ್ಷ ಪಂಡಿತನ ಚೆನ್ನ ಬಸವ ಪುರಾಣ ಪ್ರಮುಖ ಸಾಹಿತ್ಯ ಕೃತಿ. ವಿದ್ಯಾರಣ್ಯ, ವ್ಯಾಸರಾಯ, ಶ್ರೀ ಪಾದರಾಯರು, ಪುರಂದರದಾಸರು, ಕನಕದಾಸರು, ಸರ್ಪಭೂಷಣ ಶಿವಯೋಗಿಗಳು ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ರಚಿಸಿದವರಲ್ಲಿ ಪ್ರಮುಖರು. ಇವರಲ್ಲಿ ವ್ಯಾಸರಾಯರು, ಕನಕದಾಸರು, ಪುರಂದರದಾಸರು ಹೊರಗಿನವರಾದರೂ ಹಂಪೆಯಲ್ಲಿ ಕೃತಿ ರಚನೆಗೆ ತೊಡಗಿದವರು. ಇವರು ದಾಸ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾದದ್ದು.

೧೬ನೇ ಶತಮಾನದಲ್ಲಿ ಅಚ್ಯುತರಾಯನ ಆಸ್ಥಾನದಲ್ಲಿ ಕೃಷ್ಣದೇವರಾಯನ ಮಗಳಾದ ತಿರುಮ ಲಾಂಬಿಕೆಯ 'ವರದಾಂಬಿಕಾ ಪರಿಣಯ' ಎಂಬ ಚಂಪುಕಾವ್ಯ ರಚಿಸಿದಳು. ಇದೇ ಅವಧಿಯಲ್ಲಿ ಮಧುರವಾಣಿ ಎಂಬ ಕವಯಿತ್ರಿ ಇದ್ದಳು. ಚಾಟು ವಿಠಲನಾಥನ ಬಾಗವತ, ಅದೃಶ್ಯ ಕವಿಯ ಪ್ರೌಢರಾಯ ಕಾವ್ಯ, ದೇರಾಜನ ಸೊಬಗಿನ ಸೋಸಿ, ಅವರ ಶತಕಗಳು ರಚನೆಯಾದವು. ೧೮ನೇ ಶತಮಾನದಲ್ಲಿ ಶಂಕರ ಕವಿಯ 'ಚೋರಬಸವ ಚರಿತೆ', ೧೦ನೇ ಶತಮಾನದಲ್ಲಿ ಹಲವಾರು ಸಾಹಿತ್ಯ ಕೃತಿಗಳು ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ರಚನೆಯಾಗಿದೆ. ಆಂಧ್ರ-ಕರ್ನಾಟಕ ಪಿತಾಮಹನೆನಿಸಿದ ಕೃಷ್ಣಮಾಚಾರ್ಯುಲು, ಕೋಲಾಚಲಂ ಶ್ರೀನಿವಾಸರಾವ್ ಹಾಗೂ ಕರಿಬಸಪ್ಪ ಶಾಸ್ತ್ರೀಗಳು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ.

೧೯ನೇ ಶತಮಾನದಲ್ಲಿ ಜಿಲ್ಲೆಯಲ್ಲಿ ಅನೇಕ ಶಿವಶರಣರು, ಅನುಭವಿಗಳು ಅಪರೂಪದ ಸಾಹಿತ್ಯ ಹಾಗೂ ಧಾರ್ಮಿಕ ಕ್ಷೇತ್ರಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಅವರಲ್ಲಿ ಪ್ರಮುಖರೆಂದರೆ ಚಿದಾನಂದರ ಅವಧೂತ ಚೆನ್ನವೀರೇಶ, ಕುರುಗೋಡು ಬಸವ, ಕುರುಗೋಡು ನೀಲಮ್ಮ, ಗದ್ದಿಕೇರಿ ದೊಡ್ಡಬಸಪ್ಪ, ಮೈಲಾರ ಬಸವಲಿಂಗದೇವರು, ಚಿತ್ತವಾಡ್ಗಿ ಕಲ್ಮಟೇಶ್ವರ, ಕಾನಾಮಡಗು ಶರಣರು, ಗೊಳ್ಳರಿ ಗಾದಿಲಿಂಗಪ್ಪ, ಕುಡುತಿನಿ ನಯನಸ್ವಾಮಿ, ಬಸವಣ್ಣ, ಬಳ್ಳಲಿ ಎರ್ರಿತಾತ, ಆದವಾನಿ ಲಕ್ಷ್ಮಣ, ಶಿವರಾಮ ಅವಧೂತ, ಗಡಿಗಿ ಪರಪ್ಪ, ದಮ್ಮೂರ ವೆಂಕಪ್ಪ ಗೋಣೆಬಸವೇಶ್ವರ ಮುಂತಾದವರು ಈ ಶತಮಾನದ ಅಂತ್ಯದಲ್ಲಿ ಹರಪ್ಪನಹಳ್ಳಿ ಭೀಮವ್ವ 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ಕೀರ್ತನೆ ಹಾಗೂ ಗೀತೆಗಳನ್ನು ರಚಿಸಿದ್ದಾರೆ.

೨೦ನೇ ಶತಮಾನದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವೈ.ನಾಗೇಶಶಾಸ್ತ್ರೀ, ಸರ್ವದರ್ಶನ ತೀರ್ಥರು ಕನ್ನಡ, ತೆಲುಗು, ಮರಾಠಿ, ಹಿಂದಿ, ಬಂಗಾಲಿ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ವೈ.ನಾಗೇಶ್ ಶಾಸ್ತ್ರೀಯವರು ಗವಿಸಿದ್ಧೇಶ್ವರ ಪುರಾಣ, ಷಟ್ ಸಲ ಸಿದ್ಧಾಂತ. ಅರ್ಧನಾರೇಶ್ವರ ಪುರಾಣ, ವಿಜಯನಗರ ಅಭ್ಯುದಯ, ನೀತಿ ಚಿಂತಾಮಣಿ ಕೃತಿಗಳನ್ನು ರಚಿಸಿದ್ದಾರೆ. ಬೈಲೂರಿನ ಗುರು ಸಂಗಮೇಶ್ವರ ಶಾಸ್ತ್ರಿಗಳು ಕನ್ನಡ ಪಂಡಿತರಾಗಿ ಇಂಗ್ಲೀಷ್ ಹಾಗೂ ತೆಲಗು ಸಾಹಿತಿಗಳಾಗಿದ್ದರು. ಪಿ.ಶ್ ಯಾನುರಾಯನು ಆದಿಶಂಕರ ಚಾರ್ಯರ ಆನಂದ ಲಹರಿಯನ್ನು ಅನುವಾದಿಸಿದ್ದರು.

ಬಳ್ಳಾರಿ ಹಾಸ್ಯ ಸಾಹಿತಿ ಆರ್.ಭೀಮಸೀನ್‌ರಾವ್ ಅವರು ಬೀಚಿ ಕಾವ್ಯನಾಮದಿಂದ ಸಾಹಿತ್ಯ ರಚನೆ ಮಾಡಿದ್ದಾರೆ. ಇವರ ತಿಮ್ಮನ ಪದಗಳು ಇಂದಿಗೂ ಮಾದರಿಯಾಗಿವೆ. ಇವರ ಬರಹದ ವಿಶಿಷ್ಟ ಶೈಲಿ ಕನ್ನಡ ಎಷ್ಟು ಹಾಗೂ ಹಲವಾರು ಹಾಸ್ಯ ಪ್ರಸಂಗಗಳ ತುಣುಕುಗಳಂತೂ ಮನ ಪುಳಿಕಿತವಾಗುವಂತೆ ಮಾಡುತ್ತವೆ. ಶ್ರೇಷ್ಠ ನಾಟಕಕಾರರು, ಗಮಕಿಗಳು, ಆದ ಜೋಳದ ರಾಶಿ ದೊಡ್ಡನಗೌಡರು ಕನ್ನಡ, ತೆಲುಗು ಹಾಗೂ ಸಂಸ್ಕೃತಗಳಲ್ಲಿ ಅಪಾರ ಪಾಂಡಿತ್ಯ ಗಳಿಸಿದ್ದರು. ಇವರೊಂದಿಗೆ ಕಪ್ಪಗಲ್ ಸಂಜೀವಮೂರ್ತಿ, ಸೋಗಿ ಭಾಸ್ಕರಾ ಚಾರ್ಯ, ಹಿ.ಮ.ನಾಗಯ್ಯ ಕೊ.ಚೆನ್ನಬಸಪ್ಪ ಮುಂತಾದ ಸಾಹಿತಿಗಳು ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡಿದ್ದಾರೆ. ಇವರಲ್ಲದೆ ಭಾರತದ ರಾಷ್ಟ್ರಪತಿಗಳಾಗಿದ್ದ ವಿ.ವಿ.ಗಿರಿಯವರ ಪತ್ನಿ ಸರಸ್ವತಿ ಬಾಯಿಯವರು ಬಳ್ಳಾರಿಯ ಸಂಪರ್ಕವಿಟ್ಟುಕೊಂಡವರು. ಇವರು ಹಲವಾರು ತೆಲುಗು ಭಕ್ತಿಗೀತೆಗಳನ್ನು ರಚಿಸಿದ್ದಾರೆ. ಇವರ ಜೊತೆಗೆ ಬೀಜಾಕ್ಷರ ಮಾಲೆ, ಶೈವ ಸುತ್ತಿ, ಜೀವಿ ಸ್ವರ್ಗ ಭೀಮ ಮೊದಲಾದ ಕೃತಿಗಳನ್ನು ರಚಿಸಿದರು ಅಲ್ಲದೆ ಬೆಳಗೆರೆ ಜಾನಕಮ್ಮನವರು ಕಥೆ, ಕಾವ್ಯ ರಚಿಸಿದರೆ, ಬಳೆಗಾರ ಲಕ್ಕಮ್ಮ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ರಾಮಸಾಗರದ ವೆಂಕಣ್ಣನವರು ಪಂಡಿತರಾಗಿದ್ದರು. ಇತ್ತೀಚಿಗೆ ಹಲವಾರು ನವ್ಯ ಕವಿಗಳು ವಿವಿಧ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯು ಕರ್ನಾಟಕ ಸಂಗೀತ, ನೃತ್ಯ, ನಾಟಕರಂಗ, ಪತ್ರಿಕೋದ್ಯಮ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಉತ್ತಮ ಹೆಸರು ಪಡೆದಿದೆ.

## ೨.೮. ನೈಸರ್ಗಿಕ ಮತ್ತು ಖನಿಜ ಸಂಪತ್ತು

ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು, ಬಳ್ಳಾರಿ ಹಾಗೂ ಹಡಗಲಿ ತಾಲೂಕುಗಳು ವಿವಿಧ ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿದ್ದು ವಿಶ್ವಮಾನ್ಯತೆ ಪಡೆದುಕೊಂಡಿವೆ. ಬಳ್ಳಾರಿ ಜಿಲ್ಲೆಯಿಂದ ವಿದೇಶಕ್ಕೆ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಅದಿರು ರಫ್ತಾಗುತ್ತದೆ. ಜಿಲ್ಲೆಯಲ್ಲಿ ಗ್ರಾನೈಟ್, ಮ್ಯಾಗ್ನಸೈಟ್, ಜೇಡಿಮಣ್ಣು, ಬೆಣಚುಕಲ್ಲು, ಕಲ್ನಾರು, ತಾಮ್ರ, ಸೀಸ, ಚಿನ್ನ, ಜಿಪ್ಸಮ್, ಸುಣ್ಣದ ಕಲ್ಲು, ರೆಡ್ ಆಕ್ಸೈಡ್, ಸೂಜಿಗಲ್ಲು, ವಜ್ರ ಶಿಲಾಸ್ಪಟಿಕ ಮುಂತಾದ ಅಮೂಲ್ಯವಾದ ಖನಿಜ ಸಂಪನ್ಮೂಲಗಳು ಲಭ್ಯವಿವೆ. ಸಂಡೂರು ಬೆಟ್ಟಗುಡ್ಡ ಪ್ರದೇಶ ಅರಣ್ಯದಿಂದ ಕೂಡಿದೆ. ಬಯಲು ಪ್ರದೇಶಗಳಲ್ಲಿ ಕುರುಚಲು ಗಿಡಗಳನ್ನು ಹೆಚ್ಚಾಗಿ ಕೂಡ್ಲಿಗಿ, ಹಗರಿಬೊಮ್ಮನ ಹಳ್ಳಿ, ಹಡಗಲಿ ಸಿರುಗುಪ್ಪ ಮತ್ತು ಬಳ್ಳಾರಿ ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣಬಹುದು. ಬಳ್ಳಾರಿ ಜಿಲ್ಲೆಯಲ್ಲಿ ೭೮೫ ಮಿಲಿಯನ್ ಟನ್ ನಷ್ಟು ಕಬ್ಬಿಣದ ಅದಿರಿನ ನಿಕ್ಷೇಪವಿದೆ ಎಂದು ಕೆಲವು ಅಧಿಕಾರಿಗಳಿಂದ ಅಂದಾಜಿಸಲಾಗಿದೆ. ಮ್ಯಾಂಗನಿಸ್ ಅದಿರು ಬಳ್ಳಾರಿ, ಸಂಡೂರು ಮತ್ತು ಹೊಸಪೇಟೆ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಅಪಾರ ಪ್ರಮಾಣದಲ್ಲಿ ಲಭ್ಯವಿದೆ. ಚಿನ್ನ ಮತ್ತು ತಾಮ್ರ ಸಂಡೂರು ಮತ್ತು ಹಡಗಲಿ ಪ್ರದೇಶದಲ್ಲಿರುವುದನ್ನು ಪತ್ತೆ ಹಚ್ಚಲಾಗಿದೆ.

ಬಳ್ಳಾರಿ ಜಿಲ್ಲೆಯು ಉಷ್ಣ ಹವಾಗುಣ ಹೊಂದಿರುವುದರಿಂದ ಅರಣ್ಯ ಪ್ರದೇಶದ ಪ್ರಮಾಣ ಕಡಿಮೆ. ಹೊಸಪೇಟೆ ಮತ್ತು ಸಂಡೂರು ಪ್ರದೇಶಗಳಲ್ಲಿ ಅರಣ್ಯವನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಅರಣ್ಯ ಪ್ರದೇಶದ ವಿಸ್ತೀರ್ಣ ೬೭೦೧೭ ಹೆಕ್ಟೇರುಗಳಷ್ಟಿದೆ. ಅರಣ್ಯಗಳಲ್ಲಿ ಬಿದಿರು, ಶ್ರೀಗಂಧ, ತೇಗ, ನಂದಿ, ದೇವದಾರು ಹಾಗೂ ಇತರೆ ವಿವಿಧ ಜಾತಿಯ ಮರಗಿಡಗಳನ್ನು ಕಾಣಬಹುದು. ಸಂಡೂರು ಅರಣ್ಯ ಪ್ರದೇಶಗಳಲ್ಲಿ ಔಷಧಿ ಸಸ್ಯಗಳ ಸಂಪತ್ತು ಹೇರಳವಾಗಿ ಲಭ್ಯವಾಗುತ್ತದೆ. ಅರಣ್ಯ ಪ್ರದೇಶಗಳಲ್ಲಿ ಜೇನುತುಪ್ಪ, ಅಂಟು, ಕಾರೆಹಣ್ಣು, ಬಿಕ್ಕೆ ಹಣ್ಣು, ಕವಳಿ ಹಣ್ಣು, ರಾಳ, ಎಣ್ಣೆ, ಉರುವಲಿಂಗ, ಕಟ್ಟಿಗೆ, ಪೀಠೋಪಕರಣಗಳಿಗೆ ಬೆತ್ತ ಹಾಗೂ ಬಿದಿರು ಮತ್ತು ಮರಗಳು ದೊರೆಯುತ್ತವೆ. ಇತ್ತೀಚಿನ ವರ್ಷಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು ತೆಗೆಯುವ ಪ್ರಮಾಣ ಹೆಚ್ಚಾಗಿರುವುದರಿಂದ ಅರಣ್ಯನಾಶವಾಗುತ್ತದೆ. ಬಳ್ಳಾರಿ ಜಿಲ್ಲಾ ಆಡಳಿತವು ೧೯೮೮ರಲ್ಲಿ ವಿಶ್ವಬ್ಯಾಂಕಿನ ನೆರವಿನಿಂದ ಅರಣ್ಯ ಬೆಳೆಸುವ ಮತ್ತು ಸಂರಕ್ಷಣೆ ಮಾಡುವ ಯೋಜನೆಯನ್ನು ಜಾರಿಗೆ ತಂದಿದೆ. ಸರಕಾರಿ ಜಾಗಗಳಲ್ಲಿ ಸಸಿಗಳನ್ನು ನೆಡುವ ಹಾಗೂ ಕಾಯ್ದಿಟ್ಟ ಅರಣ್ಯ ಪ್ರದೇಶವನ್ನು ಅಭಿವೃದ್ಧಿಪಡಿಸುವ ಕಾರ್ಯಗಳನ್ನು ಅರಣ್ಯ ಇಲಾಖೆ ಮಾಡುತ್ತಿದೆ. ಗಣಿ ಕಂಪನಿಗಳು ಅರಣ್ಯ ಬೆಳೆಸುವಲ್ಲಿ ವಿವಿಧ ಯೋಜನೆಗಳನ್ನು ರೂಪಿಸಿ, ಕಾರ್ಯರೂಪಕ್ಕೆ ತರುತ್ತಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಲಭ್ಯವಿರುವ ಭೂ ಪ್ರದೇಶದಲ್ಲಿ ಹೆಚ್ಚಿನ ಭೂಮಿಯನ್ನು ಕೃಷಿಗೆ ಬಳಸಲಾಗುತ್ತದೆ. ಜಿಲ್ಲೆಯಲ್ಲಿ ನೀರಾವರಿ ಪ್ರದೇಶದಲ್ಲಿ ಹೆಚ್ಚಾಗಿ, ಭತ್ತ, ಕಬ್ಬು, ಬಾಳೆ, ಶೇಂಗಾ, ಹತ್ತಿ ಬೆಳೆಯಲಾಗುತ್ತದೆ. ಮಳೆಯಾಶ್ರಿತ ಪ್ರದೇಶದಲ್ಲಿ ಜೋಳ, ಸಜ್ಜೆ, ನವಣೆ, ರಾಗಿ, ಸೂರ್ಯಕಾಂತಿ, ಬೆಳೆಕಾಳುಗಳು, ಕುಸುಬಿ, ಕಡಲೆ, ಈರುಳ್ಳಿ, ಮೆಣಸಿನಕಾಯಿ ಹಾಗೂ ವಿವಿಧ ತರಕಾರಿ ಬೆಳೆಗಳನ್ನು ಬೆಳೆಯುವುದು ಸಾಮಾನ್ಯ.

ತುಂಗಭದ್ರ ನದಿಯು ಜಿಲ್ಲೆಯ ಮೇರೆಯಾಗಿ ಹರಿಯುತ್ತಿರುವುದು ಹಾಗೂ ಮಲ್ಲಾಪುರ ಗ್ರಾಮದಲ್ಲಿ ಅಣೆಕಟ್ಟನ್ನು ನಿರ್ಮಾಣಮಾಡಿ ಕಾಲುವೆಗಳ ಮೂಲಕ ಕೃಷಿ ಭೂಮಿಗೆ ನೀರು ಹರಿಸುತ್ತಿರುವುದರಿಂದ ಜಿಲ್ಲೆಯ ಹೊಸಪೇಟೆ ಮುಖ್ಯವಾಗಿ ಕಡ್ಡಿರಾಂಪುರ ತಾಂಡಾ ಸೀತಾರಂ ತಾಂಡಾ ಮತ್ತು ಕೆರೆತಾಂಡಾ, ಸಿರುಗುಪ್ಪ ಮತ್ತು ಬಳ್ಳಾರಿ ತಾಲೂಕುಗಳ ಹೆಚ್ಚಿನ ಪ್ರದೇಶಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ. ತುಂಗಭದ್ರಾ ನದಿಯು ಜಿಲ್ಲೆಯಲ್ಲಿ ಸುಮಾರು ೩೨೦ ಕಿ.ಮೀ ಉದ್ದವಾಗಿ ಹರಿವು ಇದೆ. ನದಿಗೆ ಹಲವಾರು ಕಡೆ ಸೇತುವೆಗಳನ್ನು ನಿರ್ಮಾಣ ಮಾಡಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ತುಂಗಭದ್ರಾ ನದಿಯಿಂದ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕು, ಹಗರಿಬೊಮ್ಮನಹಳ್ಳಿ, ಹಡಗಲಿ ತಾಲೂಕಿಗೆ ಕುಡಿಯುವ ನೀರು ಸೌಲಭ್ಯ ದೊರಕಿರುತ್ತದೆ. ಇದರಿಂದ ದಕ್ಷಿಣ ಕರ್ನಾಟಕದ ಜಿಲ್ಲೆಗಳು ಬಳ್ಳಾರಿ ಜಿಲ್ಲೆಯ ಮೂಲಕ ಉತ್ತರ ಕರ್ನಾಟಕದ ಜಿಲ್ಲೆಗಳಿಗೆ ಸಂಪರ್ಕ ಪಡೆಯಲು ನೆರವಾಗಿವೆ. ಜಿಲ್ಲೆಯಲ್ಲಿ ಹಗರಿ ಮತ್ತು ಚಿನ್ನ ಹಗರಿ ನದಿಗಳು ತುಂಗಭದ್ರ ನದಿಯ ಉಪನದಿಗಳು. ಇಲ್ಲಿ ಕಂಡುಬರುವ ಪ್ರಮುಖ ನದಿಗಳೊಂದಿಗೆ ದೊಡ್ಡ ದೊಡ್ಡ ಹಳ್ಳಗಳಿವೆ. ಇದರಲ್ಲಿ ಸಂಡೂರಿನ ನಾರಿಹಳ್ಳಕ್ಕೆ ಅಣೆಕಟ್ಟು ಕಟ್ಟಲಾಗಿದೆ. ಹಗ್ಗನೂರು ಹಳ್ಳಿ, ಹಂಪಸಾಗರಹಳ್ಳ ಹಂಪ ಪಟ್ಟಣ, ಬೆಟ್ಟದ ಹುಣಿಸಿ ಹಳ್ಳಿ, ಗೌರಿಪುರಹಳ್ಳಿ, ಹರಿವಿನಿಂದ ರೈತರ ಕೃಷಿಗೆ ಅನುಕೂಲ ಕಲ್ಪಿಸಿದಂತಾಗಿದೆ. ಜಿಲ್ಲೆಯಲ್ಲಿ ೧೯೫೩ರಲ್ಲಿ ತುಂಗಭದ್ರ ಯೋಜನೆ ಆರಂಭವಾಗಿ ಜಿಲ್ಲೆಯ ಹಸಿರು ಕ್ರಾಂತಿಗೆ ನಾಂದಿಯಾಗಿದೆ. ೨೦೦೬-೨೦೦೭ರ ವಾರ್ಷಿಕ ವರದಿಯ ಪ್ರಕಾರ ಜಿಲ್ಲೆಯಲ್ಲಿ ನೀರಾವರಿಯಾದ ಒಟ್ಟು ಪ್ರದೇಶ ೨,೪೭,೮೪೯ ಹೆಕ್ಟೇರ್, ನೀರಾವರಿಯಾದ ನಿವ್ವಳ ಪ್ರದೇಶ ೧,೭೩,೭೧೫ ಹೆಕ್ಟೇರ್ ೨೦೦೬-೨೦೦೭ರಲ್ಲಿ ಜಿಲ್ಲೆಯಲ್ಲಿ ೫,೯೫,೬೮೭ ಹೆಕ್ಟೇರ್ ಪ್ರದೇಶ ಬಿತ್ತನೆಗೊಳ್ಳಪಟ್ಟಿದೆ.

ತುಂಗಭದ್ರ ಅಣೆಕಟ್ಟಿನ ನಿರ್ಮಾಣದಿಂದಾಗಿ ನೂರಾರು ಹಳ್ಳಿಗಳು ಹಾಗೂ ಫಲವತ್ತಾದ ಭೂಮಿ ಮುಳುಗಡೆಯಾಗಿದೆ. ನದಿ ಕಣಿವೆ ಯೋಜನೆಗಳನ್ನು ಜಾರಿಗೆ ತರುವುದು ಇನ್ನು ಕಷ್ಟದ ಕೆಲಸ. ತುಂಗಭದ್ರಾ ನದಿ ಕಣಿವೆ ಯೋಜನೆ ವಿವಿದ್ದೋದ್ದೇಶದಿಂದ ನಿರ್ಮಿಸಲಾಗಿದೆ. ತುಂಗಭದ್ರ ಅಣೆಕಟ್ಟು ಪ್ರದೇಶದಲ್ಲಿ ಮುಳುಗಡೆಯಾದ ಹಳ್ಳಿಗಳು ೧೦೭. ಭೂ ಸ್ವಾಧೀನಕ್ಕಾಗಿ ಸರಕಾರ ಮಾರ್ಚ ೩೧ರವರೆಗೆ ಸುಮಾರು ೩,೭೫,೬೦,೩೬೫ ರೂಪಾಯಿಗಳನ್ನು ಖರ್ಚು ಮಾಡಿದೆ. ೧೦೭ ಹಳ್ಳಿಗಳಲ್ಲಿ ವಾಸಿಸುತ್ತಿದ್ದ ೧೫,೦೦೦ ಕುಟುಂಬಗಳ ೮೦,೦೦೦ ಜನರನ್ನು ಪುನರ್ವಸತಿ ಕೇಂದ್ರಗಳನ್ನು ಸ್ಥಾಪಿಸಿ ಸ್ಥಳಾಂತರಿಸಲಾಗಿದೆ. ನಿಯಮಾವಳಿಯ ಪ್ರಕಾರ ಪುನರ್ವಸತಿ ಹಳ್ಳಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಕೊಡಬೇಕೆಂಬ ನಿಯಮವಿದೆ. ಪುನರ್ವಸತಿ ಹಳ್ಳಿಗಳ ಜನರ ಜೀವನ, ಉದ್ಯೋಗ, ಸ್ಥಳಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅವಶ್ಯಕತೆ ಇದೆ. ೧೦೭ ಹಳ್ಳಿಗಳಲ್ಲಿನ ವಿವಿಧ ಲಂಬಾಣಿ ತಾಂಡಗಳ ಜನರು ಜೀವನ ಹೇಗೆ ರೂಪಿಸಿಕೊಂಡಿದ್ದಾರೆ ಎಂಬುದನ್ನು ಅಧ್ಯಯನ ಮಾಡುವುದು ಅಗತ್ಯವೆನಿಸಿದೆ.

ಬಳ್ಳಾರಿ ಜಿಲ್ಲೆಯ ವಿವಿಧ ಸಂಪನ್ಮೂಲಗಳ ಆಗರ. ಈ ಭಾಗದಲ್ಲಿ ವೈವಿಧ್ಯಮಯವಾದ ಖನಿಜ ಸಂಪನ್ಮೂಲಗಳು ಲಭ್ಯವಿದೆ. ಜಿಲ್ಲೆಯ ಭೂಪ್ರದೇಶದಲ್ಲಿ ಸುಮಾರು ೧೮ನೇ ಶತಮಾನದ ಕೊನೆಯ

ಭಾಗದಿಂದಲೇ ಗಣಿಗಾರಿಕೆಯ ಪ್ರಕ್ರಿಯೆಗಳು ಆರಂಭವಾದ ಬಗ್ಗೆ ಇತಿಹಾಸದುದ್ದಕ್ಕೂ ಅನೇಕ ದಾಖಲೆಗಳು ಕಂಡುಬರುತ್ತವೆ. ಪ್ರಾರಂಭದಲ್ಲಿ ಗಣಿಗಾರಿಕೆ ಚಟುವಟಿಕೆಗಳು, ಸಂಶೋಧನೆ ಅಥವಾ ಅವಿಷ್ಕಾರಗಳ ರೂಪದಲ್ಲಿ ಕಂಡೂ ಬಂದರೂ ಒಂದು ವ್ಯವಸ್ಥಿತ ರೀತಿಯಲ್ಲಿ ಗಣಿಉತ್ಪಾದನಾ ಚಟುವಟಿಕೆಗಳು ಆರಂಭ ಗೊಂಡದ್ದು ಬ್ರಿಟಿಷರ ಆಳ್ವಿಕೆಯಲ್ಲಿ ಎಂಬುದಾಗಿ ತಿಳಿದುಬರುತ್ತದೆ. ೧೯೦೪-೦೫ರಲ್ಲಿ General Sandur Maning Company(GSMC) ಗಣಿಗಾರಿಕೆ ಕೈಗೊಂಡಿದೆ. ದೇವಗಿರಿ, ಕಮತ್ತೂರು, ಸುಬ್ರಾಯನ ಹಳ್ಳಿ, ತುಮಡಿತಾಂಡ, ಗುಂಡಾತಾಂಡ, ಸುಶೀಲನಗರ ತಾಂಡ, ವೆಂಕಟಗಿರಿ ತಾಂಡ, ಇತ್ಯಾದಿ ಗ್ರಾಮಗಳಲ್ಲಿ ಮಾಹಿತಿ ದೊರೆಯುತ್ತದೆ.

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುತ್ತಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳು ಗುಣಮಟ್ಟದಲ್ಲಿ ವಿಶ್ವಖ್ಯಾತಿ ಪಡೆದುಕೊಂಡಿದೆ. ಜಿಲ್ಲೆಯ ಪೂರ್ವಭಾಗದ ತಾಲೂಕುಗಳಾದ ಸಂಡೂರು, ಹೊಸಪೇಟೆ, ಬಳ್ಳಾರಿ, ಅತಿ ಹೆಚ್ಚು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ನಿಕ್ಷೇಪಗಳಿರುವುದು ಪತ್ತೆಯಾಗಿದೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯು ಈ ಪ್ರದೇಶಗಳು ಭೂಗರ್ಭದಲ್ಲಿ ಅಡಗಿರುವ ಖನಿಜ ಸಂಪನ್ಮೂಲಗಳು ಆಧಾರದ ಮೇಲೆ ಜಿಲ್ಲೆಯ ಭೌಗೋಳಿಕ ಪ್ರದೇಶವನ್ನು ಮೂರು ವಲಯಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಜಿಲ್ಲೆಯ ಶೇ.೬೦ಕ್ಕಿಂತಲೂ ಹೆಚ್ಚು ಕಬ್ಬಿಣದ ಅದಿರು, ಸಂಡೂರು ತಾಲೂಕು ವ್ಯಾಪ್ತಿಯಲ್ಲಿ ಕೇಂದ್ರೀಕರಣಗೊಂಡಿದ್ದರೆ, ಹೊಸಪೇಟೆ ವ್ಯಾಪ್ತಿಯಲ್ಲಿ ಶೇ.೩೫ರಷ್ಟು, ಬಳ್ಳಾರಿ ವ್ಯಾಪ್ತಿಯಲ್ಲಿ ಶೇ.೧೫ರಷ್ಟು ಹಂಚಿಕೆಯಾಗಿದೆ. ಒಟ್ಟಾರೆಯಾಗಿ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಸರಾಸರಿ ವಿಸ್ತೀರ್ಣ ೧೦,೨೬೩ ಕಿ.ಮೀ.ಗಳಷ್ಟಿದೆ.

ಬಳ್ಳಾರಿ ಜಿಲ್ಲೆಯಾದ್ಯಾಂತ ಕಬ್ಬಿಣ ಮತ್ತು ಮ್ಯಾಂಗನೀಸ್ ಅದರಿನ ಜೊತೆಗೆ ಬೇರೆ ಬೇರೆ ಖನಿಜ ಸಂಪನ್ಮೂಲಗಳು ಲಭ್ಯವಿದ್ದು ಅವುಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡರೆ, ಜಿಲ್ಲೆಯು ಅಭಿವೃದ್ಧಿ ಸಾಧಿಸು ವುದು ಸುಲಭವೆಂಬುದರಲ್ಲಿ ಸಂದೇಹವಿಲ್ಲ.

ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣದ ಅದಿರು ಸಂಡೂರು, ಹೊಸಪೇಟೆ ಹಾಗೂ ಬಳ್ಳಾರಿ ತಾಲೂಕಿನ ದೋಣಿಮಲೈ ಶ್ರೇಣಿ, ಕುಮಾರಸ್ವಾಮಿ ಬೆಟ್ಟದ ಶ್ರೇಣಿ, ರಾಮದುರ್ಗಾ ಶ್ರೇಣಿ, ತಿಮ್ಮಪ್ಪನ ಗುಡ್ಡದ ಶ್ರೇಣಿ, ಎತ್ತಿನ ಹಳ್ಳಿ ಶ್ರೇಣಿ, ರಾಮಗಡ ಹಾಗೂ ಬೆಳಗಲ್ಲು ಶ್ರೇಣಿಗಲ್ಲು ಕಂಡುಬರುತ್ತದೆ.

ಮ್ಯಾಂಗನೀಸ್ ಅದಿರು ಸಂಡೂರು ತಾಲೂಕಿನ ದೇವಗಿರಿ, ರಾಮನಗಿರಿ, ಸುಬ್ಬಾರಾಯನಹಳ್ಳಿ ಮತ್ತು ಕಂಡಿಕೇರಿ ಪ್ರದೇಶಗಳಲ್ಲಿ ಲಭ್ಯವಿದೆ. ಸೀಸದ ಅದಿರು ಸಂಡೂರು ಮತ್ತು ಹೊಸಪೇಟೆ ತಾಲೂಕಿನ ತೋರಣಗಲ್ಲು ಮತ್ತು ಮೆಟ್ರಿ ಪ್ರದೇಶಗಳಲ್ಲಿ ದೊರೆಯುತ್ತದೆ. ತಾಮ್ರದ ಅದಿರು ಮತ್ತು ಚಿನ್ನದ ಅದಿರು ಸಂಡೂರು ದರೋಜಿ ತಾರಾನಗರ ಮತ್ತು ಎತ್ತಿನ ಹಟ್ಟಿ ಪ್ರದೇಶಗಳಲ್ಲಿ ಲಭ್ಯವಿದೆ. ಜೇಡಿ ಮಣ್ಣು ಮತ್ತು

ಸುಣ್ಣದಕಲ್ಲು ಸಂಡೂರು, ಬಳ್ಳಾರಿ ಮತ್ತು ಹಡಗಲಿ ತಾಲೂಕಿನ, ಕುಮಾರಸ್ವಾಮಿ ಗುಡಿ ತಿಮ್ಮಪ್ಪ ಗುಡಿ, ಬೆಳಗಲ್ ಮತ್ತು ಅರಬ್ಬಿ ಪ್ರದೇಶದಲ್ಲಿ ದೊರೆಯುತ್ತದೆ. ರೆಡ್ ಆಕ್ಸೈಡ್ ಸಂಡೂರು, ಬಳ್ಳಾರಿ ಮತ್ತು ಹೊಸಪೇಟೆ ತಾಲೂಕಿನ ರಾಮಗಡ, ಜಾನಕುಂಟೆ, ಬೆಳಗಲ್, ಜಂಬುನಾಥನಗುಡ್ಡ, ವ್ಯಾಸನಕೆರೆ, ಕರಡಿಹಳ್ಳಿ ಮತ್ತು ವಿಠಲಾಪುರಗಳಲ್ಲಿ ಅಪಾರವಾದ ನಿಕ್ಷೇಪವಿದೆ. ವಜ್ರ ಮತ್ತು ಸೂಜಿಗಲ್ಲು ಹಡಗಲಿ ಮತ್ತು ಸಂಡೂರು ತಾಲೂಕಿನ ದೇವ ಗೊಂಡನಹಳ್ಳಿ, ಮತ್ತು ತೋರಣಗಲ್ಲು ಪ್ರದೇಶಗಳಲ್ಲಿ ಲಭ್ಯವಿದೆ. ಶಿಲಾ ಸ್ಪಟಿಕದ ಹರಳು ಸಂಡೂರು ತಾಲೂಕಿನ ತಿಮ್ಮಪ್ಪನ ಗುಡಿ, ಬೈರವ ತೀರ್ಥ ಮತ್ತು ಲಿಂಗದಳ್ಳಿಯಲ್ಲಿ ದೊರೆಯುತ್ತದೆ. ಕಟ್ಟಡಗಳ ಸಲಕರಣೆ ಹಾಗೂ ಆಭರಣಗಳಿಗೆ ಬಳಸುವ ಕಲ್ಲುಗಳು ಸಂಡೂರು, ಬಳ್ಳಾರಿ ಹಾಗೂ ಹೊಸಪೇಟೆ ತಾಲೂಕಿನ ಬಂಡ್ರಿ, ತೋರಣಗಲ್ಲು, ದರೋಜಿ, ಹೊಸಪೇಟೆ, ಹಂಪಿ, ಕಮಲಾಪುರ ಪ್ರದೇಶಗಳಲ್ಲಿ ದೊರೆಯುತ್ತದೆ.

ಖನಿಜ ಸಂಪನ್ಮೂಲಗಳು ಆಯಾ ರಾಷ್ಟ್ರಗಳ ಸಂಪತ್ತಿನ ಖಜಾನೆಗಳಿದ್ದಂತೆ ಎಂದು ಕ್ರಿ.ಪೂ.೪ನೇ ಶತಮಾನದಲ್ಲಿ ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ವಿಶ್ಲೇಷಿಸಿದ್ದಾನೆ. ವಿಶ್ವದ ಇತಿಹಾಸದಲ್ಲಿ ಮ್ಯಾಂಗನೀಸ್ ನ್ನು ಪ್ರಪ್ರಥಮವಾಗಿ ಕ್ರಿ.ಶ.೧೭೭೪ರಲ್ಲಿ ಪತ್ತೆ ಹಚ್ಚಲಾಯಿತು. ಬಳ್ಳಾರಿ ಜಿಲ್ಲೆಯಲ್ಲಿರುವ ಮ್ಯಾಂಗನೀಸ್ ಅದಿರು ೧೯೯೮ರಲ್ಲಿ ೧೭೪೯.೪೯ ಹೆಕ್ಟೇರ್ ವಿಸ್ತೀರ್ಣ ಹೊಂದಿದ್ದು ೨೦೦೩ರಲ್ಲಿ ಅವರ ಪ್ರಮಾಣವು ೧೯೪೩.೧೪ ಹೆಕ್ಟೇರ್ ಪ್ರದೇಶದಲ್ಲಿ ವ್ಯಾಪಿಸಿದೆ. ಮ್ಯಾಂಗನೀಸ್ ಅದಿರಿನ ಒಟ್ಟು ಉತ್ಪಾದನೆಯ ಪ್ರಮಾಣವನ್ನು ಕೆಳಗಿನ ಕೋಷ್ಟಕದಲ್ಲಿ ಕಾಣಬಹುದು.

| ವರ್ಷ | ಬಳ್ಳಾರಿ |
|---|---|
| ೧೯೯೬-೯೭ | ೨,೭೩,೭೮೩ |
| ೧೯೯೯-೦೦ | ೨೭,೨೮,೫೫ |
| ೨೦೦೩-೦೪ | ೩,೨೬,೪೯೨ |

೧೯೯೯ರ mineral commodity Summarie ಮೂಲದ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ೭೮೨ ದಶಲಕ್ಷ ಟನ್ ಕಬ್ಬಿಣದ ಅದಿರಿನ ನಿಕ್ಷೇಪವಿದೆ ಎಂದು ಅಂದಾಜಿಸಲಾಗಿದೆ. ಬಳ್ಳಾರಿ ಜಿಲ್ಲೆಯಿಂದ ಮಾರಾಟವಾದ ಕಬ್ಬಿಣದ ಅದಿರಿನ ಪ್ರಮಾಣವು ಸಂಡೂರು ಪ್ರದೇಶದಿಂದ ೧೯೯೮ರಲ್ಲಿ ೮೧,೯೩,೦೩೩ ಲಕ್ಷ ಟನ್ ಮತ್ತು ೨೦೦೩ರಲ್ಲಿ ೧,೩೪,೬೫,೪೨೬ ಲಕ್ಷ ಟನ್‌ಗಳಷ್ಟು ಮಾರಾಟ ಮಾಡಲಾಗಿದೆ.

ಹೊಸಪೇಟೆ ಭಾಗದಲ್ಲಿ ೧೯೯೮ರಲ್ಲಿ ೨೯,೮೪,೯೯೯ ಲಕ್ಷ ಟನ್, ೨೦೦೩ರಲ್ಲಿ ೭೪,೩೬,೨೫೪ ಲಕ್ಷ ಟನ್ ಮತ್ತು ಬಳ್ಳಾರಿ ಪ್ರದೇಶದಿಂದ ೧೯೯೮ರಲ್ಲಿ ೧,೨೬,೬೦೬ ಲಕ್ಷ ಟನ್ ಮತ್ತು ೨೦೦೩ರಲ್ಲಿ ೧,೨೮,೭೬೪ ಲಕ್ಷ ಟನ್ ಗಳಿಷ್ಟು ಕಬ್ಬಿಣದ ಅದಿರು ಮಾರಾಟವಾಗಿದೆ.

## ಲಂಬಾಣಿಗರ ಇತಿಹಾಸ ಮತ್ತು ಸಂಸ್ಕೃತಿಯ ಆಕರಗಳು

ಯಾವುದೇ ಜನಾಂಗಕ್ಕೆ ತನ್ನದೇ ಆದ ಇತಿಹಾಸವಿರುತ್ತದೆ. ಜನಾಂಗದ ಇತಿಹಾಸದ ಅಧ್ಯಯನ ಸುಲಭದ ಮಾತಲ್ಲ. ಅನೇಕ ಆಧಾರಗಳಿದ್ದರೂ, ನಿಖರವಾಗಿ ಕಾಲನಿರ್ಣಯವಾಗದೆ. ಅನೇಕ ವಿಷಯಗಳು ಕಾಲನುಗರ್ಭದಲ್ಲಿ ಇನ್ನೂ ಅಡಗಿ ಕುಳಿತಿವೆ. ಹೀಗಿರುವಾಗ ಅಲೆಮಾರಿ ಬುಡಕಟ್ಟಾದ ಲಂಬಾಣಿಗಳ ಇತಿಹಾಸವನ್ನು ಶೋಧಿಸುವುದು ಅತ್ಯಂತ ಪ್ರಯಾಸದ ಕೆಲಸ. ಅಲ್ಲಿ ಇಲ್ಲಿ ಸಿಗುವ ಸಣ್ಣಪುಟ್ಟ ಐತಿಹಾಸಿಕ ಆಧಾರಗಳು ಸಂಶೋಧಕರಿಗೆ ಸರಿ ಮಾರ್ಗವನ್ನು ತೋರುವ ಬದಲು ಮಾರ್ಗ ತಪ್ಪಿಸುವುದೇ ಹೆಚ್ಚು. ಆದ್ದರಿಂದ, ಲಂಬಾಣಿ ಬುಡಕಟ್ಟಿನ ಇತಿಹಾಸವನ್ನು ಹುಡುಕಲು ಹೊರಟ ಸಂಶೋಧಕ ಅತ್ಯಂತ ಎಚ್ಚರಿಕೆಯಿಂದ ಹೆಜ್ಜೆಯನ್ನಿಡಬೇಕಾಗುತ್ತದೆ.

ಯಾವುದೇ ದೇಶದ, ಜನಾಂಗದ, ಇತಿಹಾಸವನ್ನು ತಿಳಿಯಬೇಕಾದರೆ ಲಿಖಿತ ಆಧಾರಗಳು ಪ್ರಧಾನವಾದ ಆಕರಗಳಾಗುತ್ತವೆ. ಲಂಬಾಣಿಗರ ಪ್ರಾಚೀನತೆಯನ್ನು ನಿರ್ಧರಿಸಲು ಆ ಜನಾಂಗ ಮತ್ತು ಅವರಾಡುವ ಭಾಷೆಯಲ್ಲಿ ಮಹತ್ತರವಾದ ಲಿಖಿತ ರೂಪದ ದಾಖಲೆಗಳಿರುವುದಿಲ್ಲ. ಆ ಜನಾಂಗದ ಉಲ್ಲೇಖವಿರುವ ಆಕರಗಳನ್ನು ಇತರ ಭಾಷೆಗಳಲ್ಲಿ ಹುಡುಕಬೇಕಾಗುತ್ತದೆ. ಲಂಬಾಣಿ ಬುಡಕಟ್ಟಿನ ಬಗೆಗೆ ದೊರೆಯುವ ಆಧಾರಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಮೌಖಿಕ ಆಧಾರಗಳು
೨. ಶಾಸನ ರೂಪದ ಆಧಾರಗಳು
೩. ಗ್ರಾಂಥಿಕ ಆಧಾರಗಳು
೪. ಚಾರಿತ್ರಿಕ ಆಧಾರಗಳು ಮತ್ತು ವಿವಿಧ ವಿದ್ವಾಂಸರ ಹೇಳಿಕೆಗಳು
೫. ಪ್ರವಾಸಿಗರ ಬರಹ ರೂಪದ ಆಧಾರಗಳು.

### ೨.೧. ಮೌಖಿಕ ಆಧಾರಗಳು

ಲಂಬಾಣಿ ಭಾಷೆಗೆ ಲಿಪಿ ಇಲ್ಲದಿರುವುದರಿಂದ ಅದರ ಸ್ಥಾಯಿ ರೂಪಗಳಾದ ಶಾಸನ ಸಾಹಿತ್ಯಗಳು ಲಭ್ಯವಿರುವುದಿಲ್ಲ. ಶತ ಶತಮಾನಗಳಿಂದ ಮೌಖಿಕವಾಗಿ ಉಳಿದು ಬಂದಿರುವ ಐತಿಹ್ಯ ಪುರಾಣಗಳನ್ನು ಆಧಾರವಾಗಿಟ್ಟುಕೊಂಡು ಮೂಲವನ್ನು ಪರಿಶೀಲಿಸಬೇಕಾಗುತ್ತದೆ. ಈ ಮೌಖಿಕ ಸಾಹಿತ್ಯದಲ್ಲಿ ಸತ್ಯದ ಜಾಡನ್ನರಸುವುದು ಕಷ್ಟದ ಕೆಲಸ. ಆದರೂ ಮೂಲವನ್ನು ಹುಡುಕುವುದರಲ್ಲಿ ಅವು ಪ್ರಮುಖವಾಗಿರುವುದರಿಂದ ಅವುಗಳ ಪರಿಶೀಲನೆ ಅನಿವಾರ್ಯ.

**ಶ್ಲೋಕ :** ಲಂಬಾಣಿ ಜನಾಂಗದ ಮೂಲವನ್ನು ಕುರಿತು ಈ ಜನಾಂಗದ ಅನುಭವಿಗಳನ್ನು ಕೇಳಿದಾಗ ಅವರಿಂದ ಶ್ಲೋಕ ರೂಪದಲ್ಲಿ ದೊರೆಯುವ ಉತ್ತರ ದೊರೆಯುತ್ತದೆ.




ಎಲ್ಲಾ ಜನಾಂಗದ ಮತ್ತು ಧರ್ಮಗಳಲ್ಲಿ ಬ್ರಹ್ಮಾಂಡ, ಭೂಮಿ, ಮಾನವನ ಉಗಮವನ್ನು ಕುರಿತು ಇರುವ ಪೌರಾಣಿಕ, ಕಾಲ್ಪನಿಕ ಅಂಶಗಳಿರುವಂತೆ ಈ ಮೇಲಿನ ಶ್ಲೋಕದಲ್ಲೂ ಇವೆ. ಆದರೆ ಜಾತಿ, ಮತ, ಭೇದಗಳಿಲ್ಲದೆ ಮಾನವರೆಲ್ಲರೂ ಒಂದು ಮಾರ್ಗದಿಂದ ಬಂದವರೆಂಬುದನ್ನು ಲಂಬಾಣಿಗರ ಈ ಶ್ಲೋಕ ಸೂಚಿಸುತ್ತದೆ. ತೀಡಾನ ಎಂಬಾತನು ಈ ವಂಶದ ಮೂಲಪುರುಷನೆಂಬ ನಂಬಿಕೆಯು ಆಕನ ನಂತರದ ಹೇಳಿಕೆ ಐತಿಹಾಸಿಕ ವ್ಯಕ್ತಿಗಳಿಂದ ಕೂಡಿರುವಂತೆ ಕಂಡುಬರುತ್ತದೆ. ಲಂಬಾಣೀ ವಂಶಾವಳಿಯ ತೀಡಾನ ಮಕ್ಕಳು ಐದು ಜನರು. ಜೋಗಡ್ ಪ್ರದೇಶದ ಜೋಗಿ, ಭೀಮಡ್ ಪ್ರದೇಶದ ವಾಗರಿ, ಖೇಮಡ್ ಪ್ರದೇಶದ ಖೈಲ್ ಕಮ್ಮಾರ್ , ಮೋಲ ಮತ್ತು ಮೋಟಿ ಎಂಬುವವರು.

ಈ ಶ್ಲೋಕದ ಕೊನೆಯ ಭಾಗವನ್ನು ಗಮನಿಸಿದಾಗ ಜೋಗಿ, ಬೈಲ್ ಕಮ್ಮಾರ್ ಮಾರ್ವಾಡಿ, ಲಂಬಾಣಿ, ಹಕ್ಕಿಪಿಕ್ಕ(ವಾಗ್ರಿ) ಈ ಐದು ಬುಡಕಟ್ಟುಗಳು ಒಂದೇ ಮೂಲದಿಂದ ರೂಪುಗೊಂಡಿವೆ ಎಂದು ತಿಳಿದುಬರುತ್ತದೆ. ಅಲೆಮಾರಿಯಾದ ತೀಡನೆಂಬುವನು ಐದು ಬೇರೆ ಬೇರೆ ಪ್ರದೇಶಗಳಿಂದ ಐದು ಮಕ್ಕಳನ್ನು ತಂದು ಸಾಕಿ ಬೆಳೆಸಿರಬೇಕು. ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳದ ಹೆಸರುಗಳು ಜೋಡನೆ ಅದನ್ನೇ ಸೂಚಿಸುತ್ತದೆ. ಹೀಗೆ ಸಾಕಿದ ಮಕ್ಕಳಿಗೆ ತೀಡನು ಬೇರೆ ಬೇರೆ ವೃತ್ತಿಯಲ್ಲಿ ತರಬೇತಿಯನ್ನು ಕೊಟ್ಟಿರಬೇಕು. ಜೋಗಿ ಮಾರ್ವಾಡಿಗಳಿಗೆ ವ್ಯಾಪಾರವನ್ನು, ಬೈಲ್ ಕಮ್ಮಾರರಿಗೆ ಕಬ್ಬಿಣದ ಕೆಲಸವನ್ನು, ಲಂಬಾಣಿಗಳಿಗೆ ವ್ಯಾಪಾರವನ್ನು, ಮೇಲುಶಿಖಾರಿಗಳಿಗೆ ಬೇಟೆಯಾಡುವ ವೃತ್ತಿಯಲ್ಲಿ ಪರಿಣಿತರನ್ನಾಗಿ ಮಾಡಿರಬೇಕು. ಮುಂದೆ ಅವರು ತಮ್ಮ ವೃತ್ತಿಯ ನಿಮಿತ್ತ ಪ್ರತ್ಯೇಕ ಬುಡಕಟ್ಟುಗಳಾಗಿ ಬೆಳೆದಿರಬೇಕು.

ಮುಂದುವರೆದು ಈ ಶ್ಲೋಕವು ಮೋಲನಿಂದ ಲಂಬಾಣಿ ವಂಶ ಬೆಳೆದುದನ್ನು ವಿವರಿಸುತ್ತದೆ. ದಾದಾಮೋಲನನ್ನು ಪುರಾಣ ವ್ಯಕ್ತಿಯನ್ನಾಗಿ ಚಿತ್ರಿಸಿರುವುದರಿಂದ ಅವನ ಐತಿಹಾಸಿಕ ಬದುಕಿನ ರೇಖೆಗಳನ್ನು ಕಂಡುಕೊಳ್ಳುವುದು ಸಾಧ್ಯವಿಲ್ಲ. 'ದಾದಾ' ಎಂದರೆ ಲಂಬಾಣಿ ಭಾಷೆಯಲ್ಲಿ 'ಅಜ್ಜ' ಎಂದರ್ಥ. ಲಂಬಾಣಿಗರು ತಮ್ಮ ಮೂಲ ಪುರುಷನನ್ನು ದಾದಾ ಎಂದು ಕರೆದಿರುವುದು ಔಚಿತ್ಯ ಪೂರ್ಣವಾಗಿದೆ. ದಾದಾ ಮೋಲ ಈ ಬುಡಕಟ್ಟನ್ನು ಬೆಳೆಸಲು ಶ್ರಮಪಟ್ಟ ರೀತಿಯನ್ನು ಮತ್ತೊಂದು ಐತಿಹ್ಯದ ಮೂಲಕ ವಿವರಿಸುತ್ತಾರೆ.

ಐತಿಹ್ಯ - ೧ : ದಾದಾ ಮೋಲ ಒಂಬತ್ತು ಮೊಳ ಎತ್ತರದ ಬೃಹದ್ದೇಹಿ, ಒಂದು ಹೊತ್ತಿಗೆ ಎಂಟು ಅಡಿ ಅಕ್ಕಿ ಅನ್ನವನ್ನು ತಿನ್ನುತ್ತಿದ್ದ ಕೂಳುಬಾಕ. ಅದಕ್ಕೆ ಅವನನ್ನು ಯಾರೂ ಕೆಲಸ ಮಾಡಲು ಮನೆಯಲ್ಲಿಟ್ಟುಕೊಳ್ಳುತ್ತಿರಲಿಲ್ಲ. ಕೊನೆಗೆ ಶ್ರೀಕೃಷ್ಣ ಪರಮಾತ್ಮ ಈತನಿಗೆ ದನಗಾಹಿ ಕೆಲಸವನ್ನು ಕೊಡುತ್ತಾನೆ. ಶ್ರೀ ಕೃಷ್ಣ ಪರಮಾತ್ಮ ಸ್ವರ್ಗಕ್ಕೆ ಹೊರಟು ನಿಂತಾಗ ತನ್ನಲ್ಲಿರುವ ಸಕಲ ವಸ್ತುಗಳನ್ನು ತನ್ನ ಸೇವಕರಿಗೆ ದಾನ ಮಾಡುತ್ತಾನೆ. ಕೊನೆಯಲ್ಲಿ ದಾಧಾ ಮೋಲನಿಗೆ ದಾನ ಕೊಡಲು ಅವನ ಬಳಿ ಏನೂ ಇಲ್ಲವಾದಾಗ ತನ್ನ ಆಪ್ತ ಸಖಿಯಾದ 'ರಾಧಾ'ಳನ್ನೇ ದಾನವಾಗಿ ಕೊಡುತ್ತಾನೆ. ಮೋಲ ರಾಧಾದೇವಿಯೊಡನೆ ದೇಶಪರ್ಯಟನಕ್ಕೆ ಹೊರಡುತ್ತಾನೆ. ಹೊಟ್ಟೆಗೆ ಏನೂ ಇಲ್ಲದೆ ಹಸಿವಾದಾಗ ರಾಧಾದೇವಿ ಸ್ವರ್ಗವಾಸಿ ತನ್ನಣ್ಣಂದಿರಾದ ವರುಣ ಮತ್ತು ಪಾಯಾರನ್ನು ಪ್ರಾರ್ಥಿಸುತ್ತಾಳೆ. ಅವರು ದಾದಾಮೋಲ ಮತ್ತು ರಾಧಾದೇವಿಯವರಿಗೆ ಅರವತ್ತು ಮೊಳ ಉದ್ದವಿರುವ ಒಂದು ಕೋಲನ್ನು, ರಂಗುರಂಗಿನ ಒಂದು ಡೋಲನ್ನು ತಯಾರಿಸಿಕೊಟ್ಟು, ಇನ್ನು ಮುಂದೆ ನೀವಿಬ್ಬರು ಡೊಂಬರಾಟದಿಂದ ಜೀವನಮಾಡಿ ಎಂದು ಆಶೀರ್ವದಿಸಿ ಕಣ್ಮರೆಯಾಗುತ್ತಾರೆ.

ದಾದಾಮೋಲನು ರಾಧಾದೇವಿಯನ್ನು ದೇವೀಭಾವನೆಯಿಂದ ನೋಡಿದ ಕಾರಣ ಅವರಿಗೆ ಮಕ್ಕಳಾಗಲಿಲ್ಲ. ಮುಂದೆ ಅವರು ತಮ್ಮ ದೊಂಬರಾಟವನ್ನು ಪ್ರದರ್ಶನ ಮಾಡುತ್ತ 'ರಾವುಗಡ್' ಪ್ರದೇಶದಿಂದ 'ರಾಠೋಡ್'ನ್ನು 'ಜಾವುಗಡ್' ಪ್ರದೇಶದಿಂದ 'ಚೌಹಣ್'ನನ್ನು ಮತ್ತು 'ಪಾವುಗಡ್' ಪ್ರದೇಶದಿಂದ 'ಪೊಮ್ಮಾರ್'ನನ್ನು ದತ್ತು ಪಡೆಯುತ್ತಾರೆ. ದಾದಾಮೋಲ ರಾಧಾದೇವಿಯರ ಈ ಸಾಕುಮಕ್ಕಳು ಪ್ರಾಯಕ್ಕೆ ಬಂದಾಗ ಅವರಿಗೆ

ಯಾರೂ ಹೆಣ್ಣು ಕೊಡುವುದಿಲ್ಲ. ಕೊನೆಯಲ್ಲಿ ಮದುವೆಗೆ ಮುನ್ನ ಮೈನೆರೆದು ಆ ಕಾರಣಕ್ಕಾಗಿಯೇ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದ ಬ್ರಾಹ್ಮಣನ ಮೂವರು ಕನ್ಯೆಯರೊಂದಿಗೆ ಅವರ ಮದುವೆ ನಡೆಯುತ್ತದೆ. ಅವರಿಂದ ಲಂಬಾಣಿ ಬುಡಕಟ್ಟು ಬೆಳೆಯಿತು ಎಂದು ಹೇಳಲಾಗುತ್ತದೆ.

ಈ ಐತಿಹ್ಯವನ್ನು ಬಹುಪಾಲು ಎಲ್ಲಾ ಲಂಬಾಣಿ ಜನಾಂಗದ ಸಂಶೋಧಕರು ಉಲ್ಲೇಖಿಸಿದ್ದಾರೆ. ದಾದಾಮೋಲ ಒಬ್ಬ ಚಾರಿತ್ರಿಕವ್ಯಕ್ತಿಯಾಗಿರಬೇಕು. ಆದರೆ ಭಾರತೀಯ ಚರಿತ್ರೆಯಲ್ಲಿ ಈತನ ಕಾಲ, ಹೆಸರು, ಇತ್ಯಾದಿಗಳು ಎಲ್ಲಿಯೂ ದಾಖಲಾಗಿರುವುದಿಲ್ಲ. ಮೋಲ ಶ್ರೀಕೃಷ್ಣ ಪರಮಾತ್ಮನ ದನಗಾಹಿಯಾಗಿದ್ದ ನೆಂಬುವುದರಿಂದ ಮಹಾಭಾರತದ ಕಾಲವೇ ಅವನ ಕಾಲವಾಗಿರಬೇಕು. ಸುಮಾರು ಕ್ರಿ.ಪೂ.೧೫ನೇ ಶತಮಾನದಲ್ಲಿ ಇದ್ದಿರಬಹುದಾದ ಶ್ರೀ ಕೃಷ್ಣ ಪರಮಾತ್ಮನ ಚರಿತ್ರೆಯೇ ಲಭ್ಯವಾಗದಿರುವಾಗ ಅವನ ಸೇವಕನಾದ ದಾದಾ ಮೋಲನ ಚರಿತ್ರೆ ಲಭ್ಯವಾಗುವುದಾದರೂ ಎಂತು?

ಈ ಐತಿಹ್ಯ ಭಾರತದಲ್ಲಿ ಬುಡಕಟ್ಟುಗಳು ರೂಪುಗೊಳ್ಳುತ್ತಿರುವ ಆರಂಭದ ಹಂತದ ಮೇಲೆ ಬೆಳಕು ಚೆಲ್ಲುತ್ತದೆ. ಭಾರತದಲ್ಲಿ ವರ್ಣವ್ಯವಸ್ಥೆ ಸಂಕೀರ್ಣಗೊಂಡು ಅಂತರ್ವರ್ಣ ಮದುವೆಗಳು ನಿಷೇಧಿಸಲ್ಪಟ್ಟವು. ಅಂತರ್ವರ್ಣ, ಅಂತಬುಡಕಟ್ಟುಗಳ ಸಂಯೋಗದಿಂದ ಹುಟ್ಟಿದ ಮಕ್ಕಳು ಅವು ಪ್ರತ್ಯೇಕ ಜಾತಿ ಅಥವಾ ಬುಡಕಟ್ಟುಗಳಿಗೆ ಸೇರಲ್ಪಡುತ್ತಿದ್ದವು. ದಾದಾಮೋಲನ ಸಾಕು ಮಕ್ಕಳು ಹೀಗೆ ಅಂತರ್ವರ್ಣ ಸಂಯೋಗದಿಂದ ಹುಟ್ಟಿದವರಾಗಿರಬೇಕು. ಅವರಿಗೆ ಪ್ರಾಯದಲ್ಲಿ ಹೆಣ್ಣು ಕೊಡಲು ಯಾರು ಮುಂದಾಗದಿರುವುದು ಅದನ್ನೇ ಸೂಚಿಸುತ್ತದೆ. ಕೊನೆಗೆ ಬಹಿಷ್ಕೃತ ಬ್ರಾಹ್ಮಣ ಕನ್ಯೆಯರಿಂದ ಅವರ ವಂಶ ಬೆಳೆಯಿತು ಮತ್ತು ಒಂದು ಪ್ರತ್ಯೇಕ ಬುಡಕಟ್ಟಾಗಿ ಭಾರತೀಯ ಸಮಾಜದಲ್ಲಿ ಅಸ್ತಿತ್ವ ಪಡೆದುಕೊಂಡಿತು.

**ಐತಿಹ್ಯ ೨ :** ರಾಮಾಯಣದಲ್ಲಿ ಬರುವ ವಾಲಿ ಮಹಾರಾಜನೊಮ್ಮೆ ಬೇಟೆಯಾಡಲು ಸೈನಿಕರೊಂದಿಗೆ ಕಾಡಿಗೆ ಹೋದನಂತೆ. ದಿನವೆಲ್ಲ ಭೇಟೆಯಾಡಿ ಆಯಾಸಗೊಂಡು ಸ್ನಾನಾದಿಗಳನ್ನು ಮುಗಿಸಿಕೊಂಡು ಭೋಜನಕ್ಕೆಂದು ಕುಳಿತಾಗ, 'ಹೆಣ್ಣು ತನ್ನ ಕೈಯ್ಯಾರೆ ಬಡಿಸಿದ ಊಟದ ಹೊರತಾಗಿ ಊಟ ಮಾಡುವುದಿಲ್ಲ' ಎಂಬ ತಾನು ಪಾಲಿಸಿಕೊಂಡು ಬಂದ ವ್ರತವು ನೆನಪಿಗೆ ಬಂದು ಊಟಮಾಡದೆ ಎದ್ದು ಬಿಡುವನು. ಕೊನೆಗೆ ಆ ಸೈನ್ಯದಲ್ಲಿದ್ದ ಕುಂಬಾರನೊಬ್ಬನು ಮಣ್ಣಿನಿಂದ ಸುಂದರವಾದ ಹೆಣ್ಣು ಗೊಂಬೆಯೊಂದನ್ನು ಮಾಡಿ, ಅದರ ಕೈಯಿಂದ ಉಣಬಡಿಸುವ ಶಾಸ್ತ್ರ ಮಾಡಿಸಿದಾಗ ವಾಲಿ ಊಟ ಮಾಡಿದ ಅವರೆಲ್ಲಾ ಹೊರಟು ಹೋದ ಮೇಲೆ ಮಣ್ಣಿನ ಗೊಂಬೆ ಕಾಡಿನಲ್ಲಿ ಅನಾಥವಾಗಿ ಬಿದ್ದಿರುತ್ತದೆ. ಶಿವ ಪಾರ್ವತಿಯರು ಆ ಮಾರ್ಗವಾಗಿ ಬರುತ್ತಿರುವಾಗ ಆ ಗೊಂಬೆಯ ಸೌಂದರ್ಯಕ್ಕೆ ಮಾರು ಹೋಗಿ ಅದಕ್ಕೆ ಜೀವಕಳೆಯನ್ನು ತುಂಬುತ್ತಾರೆ. ಜೀವಕಳೆ ಪಡೆದ ಗೊಂಬೆಯು ಅಪರೂಪ ಸೌಂದರ್ಯದ ಯುವತಿಯಾಗಿ ಮಾರ್ಪಾಡಾಗುತ್ತದೆ. ಅದೇ ಸಮಯಕ್ಕೆ ಬೇಟೆಯಾಡಲು ಬಂದ ಬೇಡನೊಬ್ಬ ಆ ಸುಂದರ ಹೆಣ್ಣನ್ನು ಕಂಡು ಮದುವೆಯಾಗುತ್ತಾನೆ. ಅವರೇ ಲಂಬಾಣಿ ಬುಡಕಟ್ಟಿನ ಮೂಲ ಪುರುಷರು.

ಈ ಐತಿಹ್ಯದಲ್ಲಿ ಬರುವ ವಾಲಿ ಕತೆಯು ಒಂದು ಕಟ್ಟು ಕತೆಯಾಗಿದೆ. ವಾಲಿಯ ನಂತರ ಸುಗ್ರೀವನು ಅವನ ಹೆಂಡತಿಯನ್ನು ಇಟ್ಟುಕೊಂಡಿದ್ದನೆಂಬುದು ರಾಮಾಯಣದ ಕಥಾಭಾಗ. ಲಂಬಾಣಿಗರಲ್ಲಿ ಪ್ರಚಲಿತವಿರುವ ಮೈದುನ ವಿವಾಹಪದ್ಧತಿಯನ್ನು ಇದು ಹೋಲುತ್ತದೆ. ಇಂತಹ ಸ್ಥೂಲವಾದ ಸಂಪ್ರದಾಯದ ಸಾದೃಶ್ಯವೇ ಈ ಕತೆ ಹುಟ್ಟಲು ಕಾರಣವಿರಬೇಕು.

**ಐತಿಹ್ಯ ೩ :** ಲಂಬಾಣಿಗರು ಮೂಲದಲ್ಲಿ ದೊಂಬರಾಟವನ್ನಾಡುತ್ತ ಊರೂರು ಅಲೆಯುತ್ತಿದ್ದರು. ಹಂದಿ, ನಾಯಿಗಳನ್ನು ಸಾಕಿಕೊಂಡಿದ್ದರು. ಆರ್ಥಿಕ ಪರಿಸ್ಥಿತಿ ಚಿಂತಾನಜನಕವಾಗಿತ್ತು. ತಮ್ಮ ಬದುಕಿಗೊಂದು ಹೊಸದಾರಿಯನ್ನು ತೋರಿಸಬೇಕೆಂದು ಈ ಅಲೆಮಾರಿಗಳು ಥಾಡಿಯ ಬುರದಾಸಬಾವ ಎಂಬ ಗುರುವಿನ ಬಳಿಗೆ ಕರೆದುಕೊಂಡು ಹೋಗಿ, ಅವರ ಪರಿಸ್ಥಿತಿಯನ್ನು ವಿವರಿಸಿ, ಸರಿದಾರಿ ತೋರಿಸಬೇಕೆಂದು ಬೇಡುತ್ತಾನೆ. ಆಗ ಬುರದಾಸಬಾವ 'ತೀನ್ ಕಚ್ಚರ್'(ಮೂರು ಹೆಸರುಗತ್ತೆಗಳ ಹೇರು) ಹಣವನ್ನು ಲಂಬಾಣಿಗಳಿಗೆ ಸಾಲ ರೂಪದಲ್ಲಿ ಕೊಟ್ಟು ವ್ಯಾಪಾರವನ್ನು ಮಾಡುವಂತೆ ಪ್ರೋತ್ಸಾಹಿಸುತ್ತಾನೆ. ಅಂದಿನಿಂದ ಲಂಬಾಣಿಗರು ವ್ಯಾಪಾರ ವೃತ್ತಿಯನ್ನಾರಂಭಿಸಿದರು.

**ಐತಿಹ್ಯ ೪ :** ಲಂಬಾಣಿಗರು ಮೂಲದಲ್ಲಿ ಸನ್ಯಾಸಿಗಳಿಗೆ ಅಗತ್ಯವಿರುವ ಕಾವಿಬಟ್ಟೆಗಳಿಗೆ ಬಳಸಲಾಗುತ್ತಿದ್ದ ಕಾವಿ ಬಣ್ಣದ ವ್ಯಾಪಾರವನ್ನು ಮಾಡುತ್ತಿದ್ದರು. ದೂರ ದೂರದ ಕಾವಿಮಣ್ಣಿರುವ ಗುಡ್ಡಗಳನ್ನು ಅಗೆದು, ಸೋಸಿ, ಕತ್ತೆಗಳ ಮೇಲೆ ಹೇರಿಕೊಂಡು ತಂದು ಸನ್ಯಾಸಿಗಳಿಗೆ ಮಾರುತ್ತಿದ್ದರು. ಒಮ್ಮೆ ಲಂಬಾಣಿ ಹೆಂಗಸು ಕಾವಿ ಬಣ್ಣದ ಧೂಳಿನಿಂದ ಕೂಡಿದ್ದ ತಮ್ಮ ಉಡುಪುಗಳನ್ನು ತೊಳೆದಾಗ ಅವಳ ಉಡುಪುಗಳು ಸಹ ಕಾವಿ ಬಣ್ಣವಾದವು. ಕಾವಿಬಣ್ಣದ ಉಡುಪುಗಳು ಶ್ವೇತವರ್ಣೀಯ ಲಂಬಾಣಿ ಮಹಿಳೆಯರಿಗೆ ತುಂಬಾ ಚೆನ್ನಾಗಿ ಒಪ್ಪಿದವು. ಅಂದಿನಿಂದ ಲಂಬಾಣಿ ಸ್ತ್ರೀಯರು ಕಾವಿಬಣ್ಣದ ಬಟ್ಟೆಗಳನ್ನು ಧರಿಸಲಾರಂಭಿಸಿದರು. ಕ್ರಮೇಣ ಅವು ಕೆಂಪುಬಣ್ಣದ ಬಟ್ಟೆಗಳಿಗೆ ಪರಿವರ್ತನೆಯಾಗಿ ಅವರಿಗೆ ಪ್ರಿಯವಾದವು.

### ೨.೧೦. ಶಾಸನ ಆಧಾರಗಳು

ಅಶೋಕನ ಕಾಲದಿಂದಲೂ ಭಾರತದ ಮೂಲೆ-ಮೂಲೆಗಳಲ್ಲಿಯೂ ಶಾಸನಗಳು ಕಂಡುಬರುತ್ತವೆ. ಆಯಾ ಕಾಲದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಗಳ ಮೇಲೆ ಬೆಳಕು ಚೆಲ್ಲುವಲ್ಲಿ ಶಾಸನಗಳ ಪಾತ್ರವು ಮಹತ್ವಪೂರ್ಣದ್ದಾಗಿರುತ್ತದೆ. ಭಾರತದ ಉದ್ದಗಲಕ್ಕೂ ಸಹಸ್ರಾರು ಪ್ರಾಚೀನ ಶಾಸನಗಳು ಕಂಡುಬಂದರೂ ನಾಡಿಗೆ, ಸಂಸ್ಕೃತಿಗೆ ತನ್ನದೇ ಆದ ಸೇವೆ ಸಲ್ಲಿಸಿದ ಪ್ರಮುಖ ಜನಾಂಗಗಳಲ್ಲಿ ಒಂದಾದ ಲಂಬಾಣಿ ಬುಡಕಟ್ಟನ್ನು ಕುರಿತು ಶಾಸನಗಳಲ್ಲಿ ಉಲ್ಲೇಖವಿಲ್ಲದಿರುವುದು ಆಶ್ಚರ್ಯದ ಸಂಗತಿ. ಆದ್ದರಿಂದ ಲಂಬಾಣಿಗರ ಪೂರ್ವೇತಿಹಾಸವನ್ನು ಶಾಸನಗಳನ್ನಾಧರಿಸಿ ಹೇಳಲು ಯಾವ ಆಧಾರಗಳೂ ಸಿಗುವುದಿಲ್ಲ.

ಕುಂಬ್ರಲೇಚ್ ಅವರು ತಮ್ಮ ಗ್ರಂಥದಲ್ಲಿ 'ಭಂಗಿ-ಜಂಗಿ' ಎಂಬಿಬ್ಬರು ಲಂಬಾಣಿ ನಾಯಕರುಗಳು ಅಸಫ್ ಜಾನ್ ಮತ್ತು ಅವನ ವಜೀರನಾದ ಷಹಜಹಾನ್ ಎಂಬುವರೊಂದಿಗೆ ಕ್ರಿ.ಶ.೧೬೩೦ರಲ್ಲಿ ಮಾಡಿಕೊಂಡ ಒಪ್ಪಂದದ ಒಂದು ತಾಮ್ರ ಪತ್ರವನ್ನು ಉಲ್ಲೇಖಿಸಿದ್ದಾರೆ. ಅದನ್ನು ಹೈದರಾಬಾದ್ ಕೋರ್ಟಿನ ಪ್ರವೇಶದ್ವಾರದಲ್ಲಿ ಈಗಲೂ ಕಾಣಬಹುದೆಂದಿದ್ದಾರೆ. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಯುದ್ಧ ಮಾಡ ಹೊರಟ ತನ್ನ ಸೈನಿಕರನ್ನು ಹಿಂಬಾಲಿಸಲು ೧,೮೦,೦೦೦ ಜಾನುವಾರುಗಳ ಹೇರುಳ್ಳ ಭಂಗಿ-ಜಂಗಿ ಹೆಸರಿನ ಬಂಜಾರಿ ನಾಯಕರಿಗೂ, ೫೨,೦೦೦ ಜಾನುವಾರುಗಳ ಹೇರುಳ್ಳ 'ಭಗವಾನ್ ದಾಸ್ ' ವಡತ್ಯಾನಿಗೂ ಅಸಫ್ ಜಾನ್ ಅದೇಶಿಸುತ್ತಾನೆ. ಸರಕು ಸಾಗಾಣಿಕೆಯಿಂದ ಆಗಬಹುದಾದ ತೊಂದರೆಯನ್ನು ಮನಗಂಡು ಅಸಫ್ ಜಾನ್ ಭಂಗಿ-ಜಂಗಿ ನಾಯಕರುಗಳಿಗೆ ಬಂಗಾರದ ಬರಹವಿರುವ ತಾಮ್ರ ಶಾಸನದ ಮೂಲಕ ನಿರೂಪವೊಂದನ್ನು ಹೀಗೆ ಹೊರಡಿಸುತ್ತಾನೆ.

Ranjan Ka Pani,
Chhappar ka ghas,
Din ka tin khun mu'af;
Aur Jahan Asaf Jan ke ghore,
Wahan Bhangi Jhangi Ka bail

'ಭಂಗಿ-ಜಂಗಿ' ನಾಯಕರುಗಳು ತಮ್ಮ ಜಾನುವಾರುಗಳಿಗೆ ನೀರಿನ ಕೊರತೆಯಾದರೆ ನನ್ನನ್ನು ಹಿಂಬಾಲಿಸುತ್ತಿರುವ ಸೈನಿಕರ ಪಾತ್ರೆಯಿಂದ ತೆಗೆದುಕೊಳ್ಳಬಹುದು. ಹುಲ್ಲಿಗೆ ಕೊರತೆಯಾದಲ್ಲಿ ಮನೆಯ ಛಾವಣಿ ಹುಲ್ಲನ್ನು ಬಳಸಿಕೊಳ್ಳಬಹುದು. ದಿನಕ್ಕೆ ಮೂರು ಕೊಲೆಗಳಿಗೆ ಕ್ಷಮಾಪಣೆ, ಎಲ್ಲಿ ನನ್ನ ರಾವುತರಿರುತ್ತಾರೆಯೋ ಅಲ್ಲಿ ಭಂಗಿಲ-ಜಂಗಿಯರ ಜಾನುವಾರುಗಳಿರುತ್ತವೆ. ಅಸಫ್ ಜಾನನ ನಿರೂಪವನ್ನು ಈ ಶಾಸನ ಉಲ್ಲೇಖಿಸಿದ್ದು ಬಂಜಾರ ಜನಾಂಗವನ್ನು ಕುರಿತು ಲಭ್ಯವಿರುವ ಮೊಟ್ಟ ಮೊದಲ ಲಿಖಿತ ದಾಖಲೆಯಾಗಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಈ ಬರಹದಲ್ಲಿ ಅಸಫ್ ಜಾನನು ಆ ಜನರ ಮೇಲಿಟ್ಟಿದ್ದ ವಿಶ್ವಾಸ, ನಂಬಿಕೆಗಳು ವ್ಯಕ್ತವಾಗುತ್ತವೆ. ಕ್ರಿ.ಶ.೧೬೩೦ರ ವೇಳೆಗೆ ಲಂಬಾಣಿಗಳು ಸೈನಿಕರಿಗೆ ಆಹಾರ ಧಾನ್ಯಗಳನ್ನು ಪೂರೈಸುತ್ತಿದ್ದ ಪ್ರಮುಖ ಜನಾಂಗವಾಗಿದ್ದರು. ಅವರ ಸ್ಥಾನಮಾನಗಳು ಅಂದಿನ ಸಮಾಜದಲ್ಲಿ ಸಾಕಷ್ಟು ಉತ್ತಮ ಮಟ್ಟದ್ದಾಗಿದ್ದಿತು. ಲಕ್ಷ-ಲಕ್ಷ ಜಾನುವಾರುಗಳನ್ನು ಸಾಕಿ ಅವುಗಳನ್ನು ಬಳಸಿಕೊಂಡು ವ್ಯಾಪಾರ ಮಾಡುತ್ತಿದ್ದರು. ಹೀಗೆ ಹಲವಾರು ವಿಷಯಗಳ ಮೇಲೆ ಈ ಶಾಸನವು ಬೆಳಕು ಚೆಲ್ಲುತ್ತದೆ.

### ೨.೧೧. ಗ್ರಾಂಥಿಕ ಆಧಾರಗಳು

ಲಂಬಾಣಿಗರು ಮಾತನಾಡುವ ಭಾಷೆಗೆ ಲಿಪಿಯಿಲ್ಲದಿರುವುದರಿಂದ ಅವರದೇ ಆದ ಗ್ರಾಂಥಿಕ ಸಾಹಿತ್ಯವಿಲ್ಲ. ಈ ಕಾರಣದಿಂದ ಲಂಬಾಣಿಗರನ್ನು ಕುರಿತ ಗ್ರಂಥಸ್ಥ ಇತರ ಬಾಹ್ಯ ಆಕರಗಳನ್ನು ಶೋಧಿಸಬೇಕಾಗುತ್ತದೆ. ಈ ದಿಶೆಯಲ್ಲಿ ದಂಡಿಯ ದಶಕುಮಾರ ಚರಿತೆಯಲ್ಲಿ ಈ ಜನಾಂಗವನ್ನು ಕುರಿತು ಒಂದು ಸಣ್ಣ ಸುಳಿವು ಸಿಗುತ್ತದೆ. ಅದನ್ನು ಹೊರತುಪಡಿಸಿ ಜನಾಂಗದ ಬಗ್ಗೆ ಲಿಖಿತ ಆಧಾರಗಳು ಚರಿತ್ರೆಯಲ್ಲಿ ದೊರೆಯುವುದಿಲ್ಲ.

ಎಚ್.ಎಂ.ಎಲಿಯಟ್ ರವರು ಬಂಜಾರ ಪದವು ದಂಡಿಯ ದಶಕುಮಾರ ಚರಿತ್ರೆಯಲ್ಲಿ ಬರುವ 'ಪ್ರಮತಿ' ಕತೆಯಲ್ಲಿ ಉಲ್ಲೇಖಿತವಾಗಿದೆಯೆಂದು ಹೇಳುತ್ತಾ, ಆ ಪದದ ನಿಷ್ಪತ್ತಿಯನ್ನು ಪರ್ಷಿಯನ್ ಮೂಲದಲ್ಲಿ ಗುರುತಿಸಲು ಯತ್ನಿಸುತ್ತಾರೆ.

ದಶಕುಮಾರ ಚರಿತೆಯ ಮೊದಲ ಮುದ್ರಣದ ಪ್ರತಿಯಲ್ಲಿ 'ಬಂಜಾರ' ಎಂಬ ಪದದ ಬಳಕೆಯಿರದೆ ಅವರ ಬದಲಾಗಿ "Mahati nigame Naigamanam", ಎಂಬ ಪದದ ಬಳಕೆಯಾಗಿವುದು ಕಂಡುಬರುತ್ತದೆ. ಅದ್ದರಿಂದ ದಶಕುಮಾರ ಚರಿತೆಯ ಆನಂತರದ ಮುದ್ರಣಗಳಲ್ಲಿ ಕಾಣಿಸಿಕೊಳ್ಳುವ 'ಬಂಜಾರ್' ಪದವು ಪ್ರಕ್ಷಿಪ್ತವಿರಬೇಕೆಂದು ಡಬ್ಲ್ಯೂ.ಕ್ರೂಕ್ ರವರ ಅಭಿಪ್ರಾಯ ಪಡುತ್ತಾರೆ.

ಅಲ್ಲದೇ ಈ ಸಂದರ್ಭದಲ್ಲಿ ಬರುವ ತಾಂಡದಲ್ಲಿ ಕೋಳಿ ಕಾಳಗದ ವರ್ಣನೆ ಬಂಜಾರ ಜನಾಂಗದ ಸಂಸ್ಕೃತಿ, ರೀತಿ-ನೀತಿಗಳ ವಿವರವೇ ಆಗಿರುವುದರಿಂದ ದಂಡಿಯು 'ಬಂಜಾರ' ಪದವನ್ನು ನಿರ್ದಿಷ್ಟವಾಗಿ ಬಳಸದಿದ್ದರೂ, ಅತನ ಮನಸ್ಸಿನಲ್ಲಿ ಆ ಜನಾಂಗವನ್ನು ಕುರಿತಾದ ವರ್ಣನೆ ಆಗಿರಬೇಕೆಂಬುದು ಕ್ರೂಕ್ ರವರ ಅಭಿಮತ. ಇದನ್ನು ಗ್ರಹಿಸಿಯೇ ಮುಂದಿನವರು "Mahati Nnigame Naigamanam", ಪದಕ್ಕೆ ಪರ್ಯಾಯವಾಗಿ ಬಂಜಾರ ಪದವನ್ನು ಬಳಸಿರಬೇಕು ಎಂಬುದು ಕ್ರೂಕ್ ರವರ ಅಭಿಪ್ರಾಯ.

ದಂಡಿಯ ದಶಕುಮಾರ ಚರಿತ್ರೆಯಲ್ಲಿ ಲಂಬಾಣಿ ಜನಾಂಗವನ್ನು ಕುರಿತು ಸಿಗುವ ಮಾಹಿತಿಗಳು ಅವ ಪ್ರಾಚೀನತೆಯನ್ನು ಗುರುತಿಸಲು ದೊರೆತ ಅಮೂಲ್ಯ ಆಕರಗಳಾಗಿವೆ. ದಂಡಿಯು ಸಂಸ್ಕೃತ ಸಾಹಿತ್ಯದ ಶ್ರೇಷ್ಠ ಕವಿ. ಈತನ ಕಾಲ ಸುಮಾರು ಕ್ರಿ.ಶ.೭ನೇ ಶತಮಾನ. ಆ ವೇಳೆಗಾಗಲೇ ಲಂಬಾಣಿ ಜನಾಂಗ ವ್ಯವಸ್ಥಿತವಾದ ರೀತಿಯಲ್ಲಿ ಬೆಳವಣಿಗೆಯಾಗಿತ್ತೆಂಬುದು ಇದರಿಂದ ತಿಳಿದುಬರುತ್ತದೆ. ಆದ್ದರಿಂದ, ಈ ಜನಾಂಗದ ಪ್ರಾಚೀನತೆಯನ್ನು ಇನ್ನೂ ಸ್ವಲ್ಪ ಹಿಂದಕ್ಕೆ ತಳ್ಳಬಹುದು. ಅಂದರೆ, ಕ್ರಿ.ಪೂ.೨ ಅಥವಾ ೩ನೇ ಶತಮಾನದಿಂದಲೂ ಈ ಜನಾಂಗ ಅಸ್ತಿತ್ವದಲ್ಲಿತ್ತೇಂದು ಊಹಿಸಲು ಅವಕಾಶವಿದೆ. ಕ್ರಿ.ಶ.ದ ಆರಂಭದಲ್ಲಿ ರಚನೆಯಾದ ಕೃತಿಗಳಲ್ಲಿ ಲಂಬಾಣಿ ಜನಾಂಗದ ಉಲ್ಲೇಖವೇನಾದರೂ ದೊರಕುತ್ತದೆಯೇ ಎಂಬುದು ವಿಚಾರಣೀಯ. ಇದು ಹೆಚ್ಚಿನ ಸಂಶೋಧನೆಗಳಿಂದ ಸ್ಪಷ್ಟವಾಗಬೇಕಿದೆ. ಹಾಗೇನಾದರೂ ಉಲ್ಲೇಖಗಳು ದೊರೆತರೂ ಅದು 'ಬಂಜಾರ' ಎಂಬ ಜಾತಿವಾಚಕ ಉಲ್ಲೇಖವಾಗಿಯೇ ದೊರಕಬೇಕೆಂದೇನೂ ಇಲ್ಲ. ಸಂಸ್ಕೃತಿ ನಡೆ-ನುಡಿಗಳಿಂದ ಆ ಜನಾಂಗದ ಸುಳಿವುಗಳೇನಾದರೂ ಗೋಚರವಾಗುತ್ತವೆಯೇ ಎಂಬ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆಗಳ ಅಗತ್ಯವಿದೆ. ಏಕೆಂದರೆ, ಭಾರತೀಯ ಸಂಸ್ಕೃತಿಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸಿದಿ ಪ್ರಮುಖ ಬುಡಕಟ್ಟು ಜನಾಂಗವೊಂದು ಅದುವರೆಗೆ ಅಸ್ತಿತ್ವದಲ್ಲೇ ಇರಲಿಲ್ಲ ಎನ್ನುವುದು ಬದುಕಿನ ಮಾತಾದೀತು.

### ೨.೧೨. ಚಾರಿತ್ರಿಕ ಆಧಾರಗಳು

ಯಾವುದೇ ದೇಶದ ಚರಿತ್ರೆ ಅಲ್ಲಿ ವಾಸಿಸುವ ಸಮಸ್ತ ಜನಾಂಗದ ಪ್ರಾಚೀನತೆಯ ಪ್ರಾಥಮಿಕ ಮಾಹಿತಿಯನ್ನು ಒದಗಿಸಿಕೊಡುತ್ತದೆ. ಭಾರತವು ಸಮಸ್ರಾರು ವರ್ಷಗಳಿಂದ ತನ್ನ ಒಡಲಲ್ಲಿ ನೂರಾರು ಜಾತಿ,

ಬುಡಕಟ್ಟುಗಳನ್ನು ಪೋಷಿಸಿಕೊಂಡು ಬಂದಿದೆ. ಅವುಗಳಲ್ಲಿ ಲಂಬಾಣಿ ಜನಾಂಗವು ಒಂದು. ತನ್ನದೇ ಆದ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಲಂಬಾಣಿ ಜನಾಂಗದ ಪ್ರಾಚೀನತೆಯ ಖಚಿತ ದಾಖಲೆಗಳು ಚರಿತ್ರೆಯಲ್ಲಿ ಸಿಗುವುದಿಲ್ಲ. ಲಂಬಾಣಿ ಜನಾಂಗವು ವೃತ್ತಿಯ ಮೂಲಕವೇ ಚರಿತ್ರೆಯಲ್ಲಿ ಕಂಡು ಬರುವುದರಿಂದ ವೃತ್ತಿ ಮತ್ತು ಪ್ರಾಚೀನತೆ ಎರಡನ್ನು ಒಟ್ಟೊಟ್ಟಿಗೆ ಶೋಧಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಮಾನವನ ಹುಟ್ಟಿನಷ್ಟೇ ಪ್ರಾಚೀನವಾದುದು ಆತನ ವೃತ್ತಿ. ಮಾನವನ ಬದುಕು ಸಾಂಘಿಕ ರೂಪವನ್ನು ಪಡೆದುಕೊಳ್ಳಲು ಪ್ರಾರಂಭಿಸಿದ ಮೇಲೆ ವೃತ್ತಿಯು ನಿರ್ದಿಷ್ಟ ಸ್ವರೂಪವನ್ನು ಪಡೆದುಕೊಳ್ಳುತ್ತಾ ಹೋಯಿತು. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ವೃತ್ತಿಗಳೇ ಜಾತಿಗಳಾಗಿ ಪರಿವರ್ತನೆಯಾದುದೊಂದು ವಿಪರ್ಯಾಸ. ಬುಡಕಟ್ಟು ಜನಾಂಗಗಳಿಗೆ ತನ್ನದೆನ್ನುವ ಮೂಲ ವೃತ್ತಿಯೇ ಇಲ್ಲ. ಸಮಾಜ ಬದಲಾವಣೆ ಹೋದಂತೆಲ್ಲಾ ಜೀವನ ನಿರ್ವಹಣೆಗೆ ಅನುಕೂಲಕರವಾದ ವೃತ್ತಿಯನ್ನು ಕೈಗೊಳ್ಳುತ್ತಾ ಬಂದಿದ್ದಾರೆ. ಉದಾ : ಚಂಚು, ಗೊಂಡ, ನಿಸ್ಸಹಿ, ಕೊಲಾನು, ನಾಯಕ, ಪ್ಗೇಡ, ಮಾರಿಯ, ಹಕ್ಕಿಪಿಕ್ಕಿ ಮೊದಲಾದ ಬುಡಕಟ್ಟುಗಳು ಕಾಡಿನ ಸಂಪನ್ಮೂಲವನ್ನೇ ಅವಲಂಬಿಸಿ ಜೀವನ ನಡೆಸುತ್ತಿದ್ದರು. ಮತ್ತೆ ಕೆಲವು ಬುಡಕಟ್ಟುಗಳು ವ್ಯಾಪಾರ ಮಾಡಿ ಜೀವನ ನಡೆಸುತ್ತ ಬಂದಿದ್ದಾರೆ. ಅವರುಗಳಲ್ಲಿ ಲಂಬಾಣಿ ಬುಡಕಟ್ಟು ಒಂದಾಗಿತ್ತು.

ವೇದ ಪೂರ್ವಕಾಲದಿಂದಲೂ ಭಾರತದಲ್ಲಿ ಒಳ ಮತ್ತು ಹೊರ ವ್ಯಾಪಾರವು ನಿರಾಂತಕವಾಗಿ ನಡೆಯುತ್ತಿತ್ತೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಭೂ ಮತ್ತು ಜಲ ಮಾರ್ಗಗಳಿಂದ ವ್ಯಾಪಾರವು ಸಮೃದ್ಧವಾಗಿ ನಡೆಯುತ್ತಿತ್ತು. ಅಂದಿನ ಸಮಾಜದಲ್ಲಿ ವ್ಯಾಪಾರಿಗಳಿಗೆ ವಿಶೇಷವಾದ ಗೌರವಾದರಗಳಿದ್ದವು. ವ್ಯಾಪಾರಿ ಬಣವು (Caravans) ಭಾರತದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಪರಿವರ್ತನೆಗೆ ತನ್ನದೇ ಆದ ಕಾಣಿಕೆಯನ್ನಿತ್ತಿದೆ. ಇತರ ಜನಾಂಗಕ್ಕೆ ಹೋಲಿಸಿದರೆ ವ್ಯಾಪಾರಿ ಬಣವು ಪ್ರಾಚೀನ ಭಾರತದಲ್ಲಿ ಸಾಮಾಜಿಕ, ಆರ್ಥಿಕ ದೃಷ್ಟಿಯಿಂದ ಉತ್ತಮ ಜೀವನ ನಡೆಸುತ್ತಿದ್ದರು. ಅಸ್ಪೃಶ್ಯತೆಯ ಕಾವು ಈ ಬಣಗಳಿಗೆ ತಟ್ಟಿದಂತೆ ಕಂಡುಬರುವುದಿಲ್ಲ. ತಮ್ಮ ವೃತ್ತಿಯಿಂಧಾಗಿ ಎಲ್ಲರ ಹಿತ ಚಿಂತಕರಾಗಿ ಜವಾಬ್ದಾರಿಯ ಜೀವನ ನಡೆಸುತ್ತಿದ್ದರು. ಪ್ರಾಚೀನ ಭಾರತದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದ ಬಣಗಳೆಂದರೆ ವೈಶ್ಯ(Vaisaya), ವಣಿಕ(Vanika), ಸಾರ್ಥವಾಹ(Sarthavaha), ಗಾಹಪತಿ(Gahapathi), ಶ್ರೇಷ್ಠ(Sresthi) ಮತ್ತು ನಿಗಮ(Nigama)

ಸಾರ್ಥವಾಹರು ದೇಶದಾದ್ಯಂತ ಗುಂಪು ಗುಂಪಾಗಿ ಸಂಚರಿಸುತ್ತ ವ್ಯಾಪಾರ ಮಾಡುತ್ತಿದ್ದ ಒಂದು ವ್ಯಾಪಾರಿ ಬಣವಾಗಿತ್ತು. ''ಸಾರ್ಥವಾಹವು ವ್ಯಾಪಾರ ಸಮುದಾಯದ ಒಂದು ಭಿನ್ನ ಬಣವಾಗಿ ಕಂಡುಬರುತ್ತದೆ. ಅವರು ಸರಕುಗಳನ್ನು ಕೊಳ್ಳುತ್ತ ಮತ್ತು ಮಾರಾಟ ಮಾಡುತ್ತ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸುತ್ತಿದ್ದರು. ಸಾಮಾನ್ಯವಾಗಿ ಅವರು ಗುಂಪು ಗುಂಪಾಗಿ ಸಂಚರಿಸುತ್ತಿದ್ದರು. ಅನೇಕ ಎತ್ತಿನ ಗಾಡಿ ಮತ್ತು ಪ್ರಾಣಿಗಳ ಮೇಲೆ ಹೇರಿಕೊಂಡು ಸೈನ್ಯ ರಕ್ಷಕರಂತೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ

ಸರಕುಗಳನ್ನು ಸಾಗಿಸುವುದರಲ್ಲಿ ನಿಷ್ಣಾತರಾಗಿದ್ದರು. ಹೀಗೆ ಪರಿಣಿತರಾದವರನ್ನು ಸಾರ್ಥವಾಹ ಎಂದು ಕರೆಯುತ್ತಿದ್ದರು.'' ಕಠಿಣ ಪ್ರಮಾಣದ ದಿನಗಳಲ್ಲಿ ಸಾರ್ಥವಾಹರು ಅತ್ಯಂತ ಎಚ್ಚರಿಕೆಯಿಂದ ವ್ಯಾಪಾರ ಮಾಡುತ್ತಿದ್ದರು. ವಿದ್ವಾಂಸರ ಅಭಿಪ್ರಾಯದಲ್ಲಿ ಈ ವ್ಯಾಪಾರಿಬಣದ ಲಕ್ಷಣಗಳು ಸ್ಪಷ್ಟವಾಗುತ್ತವೆ.

''ಸಾರ್ಥವಾಹರು ವ್ಯಾಪಾರಕ್ಕೆ ಅಣಿಯಾಗುವ ಪೂರ್ವದಲ್ಲಿ ವ್ಯಾಪಾರದ ವಸ್ತುಗಳು ಹೇರಿರುವ ಎತ್ತುಗಳನ್ನು ಕ್ರಮವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸಿಕೊಳ್ಳುತ್ತಿದ್ದರು. ಒಂದೊಂದು ಗುಂಪಿನಲ್ಲಿ ಕನಿಷ್ಟ ಐದನೂರು ಸಂಖ್ಯೆಯಷ್ಟು ಎತ್ತುಗಳಿರುತ್ತಿದ್ದವು. ಒಂದೊಂದು ಗುಂಪಿಗೆ ಒಬ್ಬೊಬ್ಬ ನಾಯಕನನ್ನು ಆಯ್ಕೆ ಮಾಡುತ್ತಿದ್ದರು. ಒಂದು ದೊಡ್ಡ ಮರದ ನೆರಳಿನಲ್ಲಿ ಎಲ್ಲಾರು ಕುಳಿತು ಚರ್ಚಿಸಿ, ಸೂಕ್ತ ನಾಯಕನನ್ನು ಆಯ್ಕೆ ಮಾಡುತ್ತಿದ್ದರು. ಆಯ್ಕೆಯಾದ ನಾಯಕನು ವ್ಯಾಪಾರಿ ಬಣವನ್ನು ಸುರಕ್ಷಿತವಾಗಿ ಉದ್ದೇಶಿತ ಸ್ಥಳಕ್ಕೆ ತಲುಪಿಸುವಷ್ಟು ನಿಪುಣನಾಗಿರಬೇಕಿತ್ತೆಂಬ ವಿಷಯವನ್ನು 'ದಿಗ್ ನಿಕಾ'ದಲ್ಲಿ ವಿವರಿಸಲಾಗಿದೆ. ನಾಯ್ಕನು ಅತ್ಯಂತ ಸೂಕ್ಷ್ಮಮತಿಯೂ, ಗುಂಪನ್ನು ನಿಯಂತ್ರಿಸುವ ಸಮರ್ಥಶಾಲಿಯೂ ಆಗಿರಬೇಕಿತ್ತು. ಕಾಡಿನ ಮಾರ್ಗವನ್ನು ಬಲ್ಲವನು, ಹವಾಮಾನಗಳ ವೈಪರಿತ್ಯವನ್ನು ತಿಳಿಯುವ ನಿಪೂಣನು ಆಗಿರಬೇಕಿತ್ತು''(Arun Kumar Mishre: Trading communties in Ancient India from earlist times to ೩೦೦ AD.1992, p.36)

ಸಾರ್ಥವಾಹರ ಬಣಗಳಲ್ಲಿ ಹೊಂದಾಣಿಕೆಗಳಿರುತ್ತಿದ್ದವು. ಅವುಗಳಲ್ಲಿ ಮುಖ್ಯವಾದುದೆಂದರೆ ವಿಶೇಷ ಸಂದರ್ಭಗಳಲ್ಲಿ ನಗಾರಿಯನ್ನುಬಾರಿಸಿ ಜೊತೆಯ ವ್ಯಾಪಾರಿಬಣಗಳಿಗೆ ಸೂಚನೆ ಕೊಡುತ್ತಿದ್ದರು. ''ಕಾರ್ವಾನರು ವ್ಯಾಪಾರವನ್ನು ಪ್ರಾರಂಭಿಸುವ ಮುನ್ನ ಸಾರ್ಥನಾಯಕನು ಕೂಡು ಬಂಡವಾಳ ವ್ಯವಸ್ಥೆಯನ್ನು ಪ್ರಾರಂಭಿಸಲು ಇತರ ವ್ಯಾಪಾರಿ ಸಮುದಾಯಗಳನ್ನು ಆಹ್ವಾನಿಸುತ್ತಿದ್ದನು. ಅಂತಹ ಸಂದರ್ಭಗಳಲ್ಲಿ ಸಾರ್ಥವಾಹ ನಾಯಕನು ಇತರ ವ್ಯಾಪಾರಿ ಬಣಗಳು ತಮ್ಮ ಸರಕುಗಳೊಂದಿಗೆ ತಮ್ಮ ಸಂಸ್ಥೆಯನ್ನು ಸೇರಿಕೊಳ್ಳಲು ನಗಾರಿ ಮತ್ತು ಗಂಟೆಗಳನ್ನು ಬಾರಿಸಿ ಪ್ರಕಟಪಡಿಸುತ್ತಿದ್ದರು.'' ಹೀಗೆ ಸಾರ್ಥವಾಹರ ವ್ಯಾಪಾರಿ ಬಣಗಳಿಗೆ ಪರಸ್ಪರ ಆಂತರಿಕ ಸಂಬಂಧವಿರುತ್ತಿತ್ತು.

ಲಂಬಾಣಿ ಜನಾಂಗದ ಮೂಲವೃತ್ತಿಯು ವ್ಯಾಪಾರವಾಗಿತ್ತು. ಕ್ರಿ.ಶ.೧೪ನೇ ಶತಮಾನದಲ್ಲಿ ಅವರು ಗುಂಪು ಗುಂಪಾಗಿ ವ್ಯಾಪಾರ ಮಾಡುತ್ತಿದ್ದರೆಂಬುದು ಚರಿತ್ರೆಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಪ್ರತಿಯೊಂದು ಗುಂಪಿಗೂ ಒಬ್ಬ ನಾಯಕನಿರುತ್ತಿದ್ದನು. ನಾಯಕನನ್ನು ಆಯ್ಕೆ ಮಾಡಲಾಗುತ್ತಿತ್ತು. ವ್ಯಾಪಾರವೃತ್ತಿಯು ಕಣ್ಮರೆಯಾಗಿ ಲಂಬಾಣಿಗರು ತಾಂಡಾವಾಸಿಗಳಾದ ಮೇಲೂ, ನಾಯಕರ ನೇಮಕವಿರುವುದು ಬಹುಶಃ ಸಾರ್ಥವಾಹರ ಕಾಲದ ಬಳುವಳಿಯಾಗಿರಬೇಕು... ಸಾರ್ಥವಾಹರು ವಿಶೇಷ ಸಂದರ್ಭಗಳಲ್ಲಿ ಇತರ ವ್ಯಾಪಾರಿ ಬಣಗಳಿಗೆ ಸೂಚನೆ ಕೊಡಲು ಬಾರಿಸುತ್ತಿದ್ದ ನಗಾರಿಯ ಲಂಬಾಣಿಗರಲ್ಲಿ ಒಂದು ಸಾಂಸ್ಕೃತಿಕವಾದ್ಯವಾಗಿ ಇಂದಿಗೂ ಉಳಿದುಕೊಂಡು ಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ತಂಡ ತಂಡವಾಗಿ ಸಂಚರಿಸುವುದು, ಎತ್ತುಗಳ ಮೇಲೆ ವ್ಯಾಪಾರದ ವಸ್ತುಗಳನ್ನು ಹೇರಿಕೊಂಡು ಸ್ಥಳದಿಂದ ಸ್ಥಳಕ್ಕೆ ಸಾಗಿಸುವುದು, ದೊಡ್ಡ ದೊಡ್ಡ

ಗುಂಪುಗಳಿಗೊಬ್ಬ ನಾಯಕನನ್ನು ಆಯ್ಕೆ ಮಾಡಿಕೊಳ್ಳುವುದು, ನಗಾರಿಯ ಬಳಕೆ ಹೀಗೆ ಹಲವಾರು ವಿಷಯಗಳಲ್ಲಿ ಬಂಜಾರ ವ್ಯಾಪಾರ ಬಣಗಳಿಗೂ ಮತ್ತು ಸಾರ್ಥವಾಹರ ವ್ಯಾಪಾರ ಬಣಗಳಿಗೂ ಸಾಮ್ಯವಿದೆ. ಯಾವುದೇ ಜನಾಂಗ ಮೂಲದ ಹಲವಾರು ಲಕ್ಷಣಗಳನ್ನು ತನ್ನ ಒಡಲಿನಲ್ಲಿ ಗರ್ಭೀಕರಿಸಿಕೊಂಡು ಬೆಳೆದು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ 'ಸಾರ್ಥವಾಹ' ಎಂಬ ವೇದಪೂರ್ವ ಕಾಲದ ವ್ಯಾಪಾರ ಬಣಗಳಲ್ಲಿ ಲಂಬಾಣಿ ಜನಾಂಗದ ಮೂಲವಿರಬಹುದೆಂದು ಈ ಅಧ್ಯಯನದಿಂದ ಊಹಿಸಲು ಅವಕಾಶವಿದೆ.

ಲಂಬಾಣಿಗರು ವ್ಯಾಪಾರವೃತ್ತಿಯಿಂದ ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ಹೊಂದಿದ್ದರೂ ಸಂಕಷ್ಟದಿಂದ ದೂರವೇನು ಇರಲಿಲ್ಲ. ಪ್ರಾಚೀನ ಕಾಲದಲ್ಲಿ ಒಳನಾಡ ವ್ಯಾಪಾರವು ಅತ್ಯಂತ ಶ್ರಮದಾಯಕ ವೃತ್ತಿಯಾಗಿತ್ತು. ದುರ್ಗಮವಾದ ಕಾಡು, ಬೆಟ್ಟ, ಹೊಳೆ-ಹಳ್ಳಗಳನ್ನು ದಾಟಿ ಬಂದು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಧವಸ ಧಾನ್ಯಗಳನ್ನು ಸಾಗಿಸಬೇಕಾಗಿತ್ತು. ಚತುರರೂ, ಧೈರ್ಯಶಾಲಿಗಳೂ, ಸಾಹಸಿಗಳೂ, ಆದ ಲಂಬಾಣಿಗರಿಂದ ಮಾತ್ರ ಈ ವೃತ್ತಿಯನ್ನು ನಿಭಾಯಿಸಲು ಸಾಧ್ಯವಾಗುತ್ತಿತ್ತು. ದೊಡ್ಡ ಮೊತ್ತದ ಬಂಡವಾಳವನ್ನು ಹೂಡಿ, ದರೋಡೆಕೋರರ ಪಾಲಾಗದಂತೆ ಅದನ್ನು ಲಾಭದಾಯಕವಾಗಿ ಪರಿವರ್ತಿಸುವ ಜಾಣತನ ಅವರಿಗಿರಬೇಕಿತ್ತು. ಅಂದರೆ ಲಂಬಾಣಿಗಳ ಜೀವನ ದಿನವೂ ಸಾವು ಮತ್ತು ಬದುಕಿನ ನಡುವಿನ ಹೋರಾಟವಾಗಿತ್ತು. ಇಂದು ಲಂಬಾಣಿಗಳು ಜಾಣತನ, ಸಾಹಸ, ಅನುಭವ ಪಡೆದಿರುವ ಬುಡಕಟ್ಟಾಗಿರಲು ಅವರ ಪೂರ್ವದ ವೃತ್ತಿ ಪ್ರಮುಖ ಕಾರಣವಾಗಿದೆ.

ಕ್ರಿ.ಪೂ.೩೨೪ರಲ್ಲಿ ಸ್ಥಾಪನೆಯಾದ ಮೌರ್ಯ ಚಕ್ರಾಧಿಪತ್ಯದಲ್ಲಿ ಬಂಜಾರರು ವ್ಯಾಪಾರ ವೃತ್ತಿಯಲ್ಲಿ ನಿರತರರಾಗಿದ್ದರೆಂಬ ವಿಚಾರ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ.

''Such as the modern bringara's, who bariney was to supply merchants and others Loith asmed protaran ga quwsp professional charater? while refraining frona decisive pronounciation, we cannot but incline in the cirumstances to the formes alternative, for which the glids g medival Europe supply a fair anology''(ಸಣ್ಣರಾಮ ಲಂಬಾಣಿ ಸಂಸ್ಕೃತಿ, ೧೯೯೧, ಪು.೩೧).

ಮೌರ್ಯ ಕಾಲದ ವ್ಯಾಪಾರ ವಹಿವಾಟುಗಳನ್ನು ವಿವರಿಸುತ್ತ ಲೇಖಕರು, ಈಗಿನ ಹೆಸರು ಆ ಕಾಲದ ಜನಾಂಗಕ್ಕಿರದಿದ್ದರೂ, ಆ ಕಾಲದಲ್ಲಿ ವ್ಯಾಪಾರವನ್ನು ಮಾಡುತ್ತಿದ್ದ ಜನರು ಲಂಬಾಣಿಗಳೇ ಆಗಿದ್ದರೆಂಬುದಾಗಿ ಅಭಿಪ್ರಾಯಪಡುತ್ತಾರೆ. ಆದ್ದರಿಂದ ಲಂಬಾಣಿ ಜನಾಂಗವು ಕ್ರಿ.ಪೂ.೩ನೇ ಶತಮಾನದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದರೆಂಬುದು ತಿಳಿದುಬರುತ್ತದೆ.

ಕ್ರಿ.ಪೂ.೩ನೇ ಶತಮಾನದ ವೇಳೆಗೆ ದೊಡ್ಡ ದೊಡ್ಡ ವ್ಯಾಪಾರಬಣಗಳು ಅವನತಿ ಹೊಂದಿದವು. ಚಿಕ್ಕ ಚಿಕ್ಕ ಗುಂಪುಗಳಾಗಿ ಅವು ಬಂಜಾರ, ಲಂಬಾಣಿಗರೆಂಬ ಹೆಸರಿನಲ್ಲಿ ಈಗಲೂ ಗುರುತಿಸಿಕೊಳ್ಳುತ್ತಿದೆ ಎಂಬ ವಿದ್ವಾಂಸರ ಅಭಿಪ್ರಾಯವು ಲಂಬಾಣಿ ಜನಾಂಗದ ಪ್ರಾಚೀನತೆ ಮತ್ತು ವ್ಯಾಪಾರಿ ವೃತ್ತಿಯನ್ನು

ಗುರುತಿಸಲು ದೊರೆಯುವ ಅತ್ಯಮೂಲ್ಯ ಆಕರವಾಗಿದೆ. ಕ್ರಿ.ಶ.೩ನೇ ಶತಮಾನದ ವೇಳೆ ಲಂಬಾಣಿ ಜನಾಂಗ ತನ್ನ ಅಸ್ತಿತ್ವವನ್ನು ಪಡೆದುಕೊಂಡಿತ್ತೆಂಬುದನ್ನು ಇಲ್ಲಿ ನಿಚ್ಚಳವಾಗಿ ಗುರುತಿಸಬಹುದಾಗಿದೆ. ಆದ್ದರಿಂದ ಲಂಬಾಣಿ ಜನಾಂಗದ ಅಧ್ಯಯನದ ಸಂದರ್ಭದಲ್ಲಿ ಇದು ಮಹತ್ವ ಪೂರ್ಣ ಆಕರವಾಗಿರುತ್ತದೆ.

**ದೊಂಬರಾಟ ವೃತ್ತಿ :** ಲಂಬಾಣಿಗಳು ತಮ್ಮ ಮೂಲ ವೃತ್ತಿದೊಂಬರಾಟವೆಂದೇ ಹೇಳುತ್ತಾರೆ. ಅದಕ್ಕೆ ಚರಿತ್ರೆಯಲ್ಲಿ ಲಿಖಿತ ಆಧಾರಗಳು ದೊರೆಯುವುದಿಲ್ಲ. ಆದರೆ ಆ ಜನಾಂಗದಲ್ಲಿ ದೊರೆಯುವ ವಿಪುಲವಾದ ಮೌಖಿಕ ಆಧಾರಗಳು ಬಹಳ ಖಚಿತವಾಗಿ ಈ ವೃತ್ತಿಯ ಬಗೆಗೆ ಮಾಹಿತಿಗಳನ್ನು ಒದಗಿಸುತ್ತವೆ. ಅಷ್ಟೇ ಏಕೆ, ದೊಂಬರಾಟ ವೃತ್ತಿಯು ಲಂಬಾಣಿ ಸಂಸ್ಕೃತಿಯ ಮೇಲೆ ಎಂದೂ ಮರೆಯಲಾಗದ ಛಾಪನ್ನು ಒತ್ತಿರುವುದು ಆಧಾರ ಸಮೇತ ತೋರಿಸುತ್ತಾರೆ.

ದೊಂಬರಾಟದ ವೃತ್ತಿಗೆ ಸಂಬಂಧಿಸಿದಂತೆ ಲಂಬಾಣಿಗಳಲ್ಲಿ ಜನಪ್ರಿಯವಾದ ಹೇಳಿಕೆಯೊಂದು ಪ್ರಚಲಿತವಿದೆ.

''ಮಾಣಕಿರ್ ಖಾವ್, ಗದ್ವಾರಿ ಲದಣಿ
ಸೊರೇರಿ ಡಾಂ, ಕೆಂಟೋಭರೋ ತಮಾಕು
ಗುಣೇಮಾರ್ ಜಾಂಗ್ಯಾ, ಬುಂಟಸ್ ಭರ್ಜಿ
ಸಿಂಗೀಸ್ ಕೊತ್ರಿ, ಸಾಟೆಹಾತೇರಿ ಭಾಲೋ
ರಂಗೀ ಛಂಗಿರ್ ಡೋಲ್, ಅಂತರ್ ಮಂತರ್ ಲಾಗಾಮಾರತೆ ಆಯೇ''

(ಸಣ್ಣರಾಮ ಲಂಬಾಣಿ ಸಂಸ್ಕೃತಿ, ೧೯೯೧, ಪು.೩೨-೩೩).

ಗಂಡ ಹೆಂಡತಿ ಮತ್ತು ಮಕ್ಕಳು ಒಟ್ಟಿಗೆ ಸೇರಿ ಒಂದೇ ಗಂಗಾಳದಲ್ಲಿ ಊಟ ಮಾಡುವ ಪದ್ಧತಿಯನ್ನುಳ್ಳವರು ಕತ್ತೆಯಹೇರು, ಹಂದಿಯ ಮಂದೆ ಹಿಡಿಯಷ್ಟ ತಂಬಾಕು, ದೊಗಲೆ ಚಡ್ಡಿ, ಮಡ್ಡಚುರಿ, ಬಡಕಲುನಾಯಿ ಅರವತ್ತು ಮೊಳ ಉದ್ದದ ಬೊಂಬು, ಬಣ್ಣ ಬಣ್ಣದ ಡೋಲು ಸಮೇತ ಒಳ ಹೊರಲಾಗ ಹಾಕುತ್ತ ಬಂದವರು ಲಂಬಾಣಿಗರು ಎಂದು ಮೇಲಿನ ಹೇಳಿಕೆಯ ಸಾರಾಂಶವಾಗಿದೆ.

ಮೌಖಿಕ ಸಂಪ್ರದಾಯದಲ್ಲಿ ತಲೆ ತಲಾಂತರದಿಂದ ಬಂದಿರುವ ಈ ಹೇಳಿಕೆಯನ್ನು ಪರಿಶೀಲಿಸಿದಾಗ, ಲಂಬಾಣಿಗರಲ್ಲಿ ದೊಂಬರಾಟದ ವೃತ್ತಿ ಇದ್ದಿರಬೇಕೆಂದು ಊಹಿಸಲು ಅವಕಾಶವಿದೆ. ಈ ಹೇಳಿಕೆಯು ಲಂಬಾಣಿ ಜನಾಂಗದ ವೃತ್ತಿ ಮತ್ತು ಪ್ರವೃತ್ತಿ ಎರಡನ್ನು ಅತ್ಯಂತ ಸಮರ್ಪಕವಾಗಿ ಅಷ್ಟೇ ವ್ಯಂಗ್ಯವಾಗಿ ಚಿತ್ರಿಸುತ್ತದೆ. ಲಂಬಾಣಿ ಹಿರಿಯರು ಅನುಭವಿಗಳು ಈಗಲು ತಮ್ಮ ಮೂಲದ ವೃತ್ತಿ ದೊಂಬರಾಟವಾಗಿತ್ತೆಂಬುದನ್ನು ಒಪ್ಪಿಕೊಳ್ಳುತ್ತಾರೆ. ಅವರ ಸಾಂಪ್ರದಾಯಿಕ ಮದುವೆಗಳಲ್ಲಿ ಅವರು ಉಡುವ ದೊಗಲೆ ಪಾಯಿಜಾಮ, ಮದುವೆ ಚಪ್ಪರವನ್ನು ಕಟ್ಟಲು ಬಳಸುವ ಒಂಟಿಕೋಲು ಇವು ದೊಂಬರಾಟ ವೃತ್ತಿಯ ಪಳಿಯುಳಿಕೆ ಎನ್ನುತ್ತಾರೆ.

ಲಂಬಾಣಿ ಮಹಿಳೆಯರು ಉಡುವ ಆಕರ್ಷಣೀಯ ಕೆಂಪುವರ್ಣದ ಉಡುಪುಗಳು ದೊಂಬರಾಟ ವೃತ್ತಿಯ ಹಿನ್ನೆಲೆಯಲ್ಲಿ ಬಂದವುಗಳಾಗಿವೆ ಎಂಬುದು ಆ ಜನಾಂಗದ ಹಿರಿಯರ ಅಭಿಪ್ರಾಯ. ಈ ಆವೃತ್ತಿಯನ್ನು ಕುರಿತಂತೆ ಅವರಲ್ಲಿ ಹಲವಾರು ಐತಿಹ್ಯಗಳು ಪ್ರಚಲಿತದಲ್ಲಿವೆ.

**ಐತಿಹ್ಯ ೧ :** ಕೋಳಿ ಗಾತ್ರದ ಸೊಳ್ಳೆಗಳಿರುವ ಮಚ್ಛುಗಡ್ ಎಂಬ ರಾಜ್ಯವನ್ನು ಮುಸ್ಲಿಂ ದೊರೆಯೊಬ್ಬನು ಆಳುತ್ತಿದ್ದನು. ರಾತ್ರಿಯಾಗುತ್ತಿದ್ದಂತೆ ಕೋಳಿಗಾತ್ರದ ಸೊಳ್ಳೆಗಳು ಸಿಕ್ಕ ಸಿಕ್ಕ ಜನರ ರಕ್ತವನ್ನು ಹೀರಿ ಕೊಲ್ಲುತ್ತಿದ್ದವು. ಜನರು ಭಯದಿಂದ ಕತ್ತಲಾಯಿತೆಂದರೆ ಮನೆಯಿಂದ ಹೊರಗಾರೂ ಬರುತ್ತಿರಲಿಲ್ಲ. ಆ ರಾಜ್ಯಕ್ಕೆ ದಾದಾಮೋಲ ತನ್ನ ಸಂಗಾತಿಯೊಂದಿಗೆ ದೊಂಬರಾಟವನ್ನು ಪ್ರದರ್ಶಿಸಲು ಹೋಗುತ್ತಾನೆ. ರಾಜನು ಸೊಳ್ಳೆಗಳ ಸಮಸ್ಯೆಯನ್ನು ಮುಂದೊಡ್ಡಿ ದೊಂಬರಾಟ ಪ್ರದರ್ಶನವನ್ನು ನಿರಾಕರಿಸುತ್ತಾನೆ. ದಾದಾಮೋಲ ಸೊಳ್ಳೆಯ ಸಮಸ್ಯೆಯನ್ನು ನಿವಾರಿಸುವುದಾಗಿ ನಂಬಿಸಿ ರಾಜನಿಂದ ದೊಂಬರಾಟ ಪ್ರದರ್ಶನಕ್ಕೆ ಅಪ್ಪಣೆಯನ್ನು ಪಡೆಯುತ್ತಾನೆ.

ಲಂಬಾಣಿಗರ ಮಾಟ-ಮಂತ್ರದಗುರು 'ಭವಯ್ಯ'ನೆಂಬುವನ ಸಹಕಾರದಿಂದ ಮಚ್ಛರಗಡಿನ ಸೊಳ್ಳೆಗಳನ್ನು ನಿಯಂತ್ರಿಸಿ, ದಾದಾ ಮೋಲ ದೊಂಬರಾಟವನ್ನು ಯಶಸ್ವಿಯಾಗಿ ಪ್ರದರ್ಶಿಸುತ್ತಾನೆ. ರಾಜನಿಗೆ ದಾದಾಮೋಲನ ಚಮತ್ಕಾರವನ್ನು ಕಂಡು ಆಶ್ಚರ್ಯವಾಗುತ್ತದೆ. ಇವರ ದೊಂಬರಾಟ ಮುಗಿದ ಮೇಲೆ ಮತ್ತೆ ಸೊಳ್ಳೆಗಳು ಮರುಕಳಿಸುತ್ತವೆಂಬುದನ್ನು ಗ್ರಹಿಸಿದ ರಾಜ, ಲಂಬಾಣಿ ಮಂತ್ರವಾದಿ ಭವಯ್ಯನ ರುಂಡವನ್ನು ಕತ್ತರಿಸುತ್ತಾನೆ. ರಾಜ್ಯದ ಹಿತಕ್ಕಾಗಿ ಹಾಗೆ ಮಾಡಿದೆನೆಂದೂ, ತನ್ನನ್ನು ಕ್ಷಮಿಸಬೇಕೆಂದೂ ದಾದಾ ಮೋಲನನ್ನು ಬೇಡಿಕೊಳ್ಳುತ್ತಾನೆ. ದಾದಾಮೋಲ ಕ್ಷಮಿಸುತ್ತಾನೆ.

ಈ ಐತಿಹ್ಯ ಉತ್ಪ್ರೇಕ್ಷೆಯಿಂದ ಕೂಡಿದ್ದರೂ, ಲಂಬಾಣಿಗರು ದೊಂಬರಾಟ ವೃತ್ತಿಯಲ್ಲಿದ್ದರೆಂಬುದನ್ನು ಖಚಿತಪಡಿಸುತ್ತದೆ. ಆದರೆ ಆ ವೃತ್ತಿಯನ್ನು ಯಾವ ಕಾಲದಲ್ಲಿ ಅವರು ಅಲಂಬಿಸಿದ್ದರೆಂಬುದನ್ನು ಅವರ ಪರಂಪರೆಯಲ್ಲಿ ಗುರುತಿಸುವುದು ಕಷ್ಟ. ವ್ಯಾಪಾರಿ ಬಣಗಳು ಛಿದ್ರಕೊಂಡು ಬಂಜಾರ ಬಣಗಳಾದ ಮೇಲೆ ಆ ವೃತ್ತಿಯನ್ನು ಕೈಗೊಂಡಿರಬೇಕು. ಈ ವೃತ್ತಿಯಲ್ಲಿ ಅವರು ಅನುಭವಿಸಿದ ತೊಂದರೆ, ಪರದಾಟ, ಸಾವು-ನೋವುಗಳು ಅವರ ಮೌಖಿಕ ಸಾಹಿತ್ಯದಲ್ಲಿ ದೊರೆಯುತ್ತವೆ.

ಲಂಬಾಣಿ ಬುಡಕಟ್ಟಿನ ವ್ಯಾಪಾರ ವೃತ್ತಿಗೆ ಸಂಬಂಧಿಸಿದಂತೆ ಖಚಿತವಾದ ಇತಿಹಾಸವು ಸುಮಾರು ೧೪ನೇ ಶತಮಾನದಿಂದ ಈಚೆಗೆ ದೊರೆಯುತ್ತದೆ. ಆ ವೇಳೆಗಾಗಲೇ ಈ ಜನಾಂಗದವರು ಇತಿಹಾಸದ ಪುಟಗಳಲ್ಲಿ ಬಂಜಾರರೆಂಬ ಹೆಸರಿನಿಂದ ಗುರುತಿಸಲ್ಪಟ್ಟಿದ್ದರು. ದೆಹಲಿ ಸುಲ್ತಾನರು ಪ್ರಾಬಲ್ಯಕ್ಕೆ ಬಂದ ಮೇಲೆ ಅಂದಿನ ಕಾಲದ ವ್ಯಾಪಾರ ವಹಿವಾಟುಗಳಲ್ಲಿ ಬಂಜಾರರ ಪಾತ್ರವು ಪ್ರಧಾನವಾಗಿತ್ತು. ದೆಹಲಿ ಸುಲ್ತಾನರ ಕಾಲದ ಆಂತರಿಕ ವ್ಯಾಪಾರವನ್ನು ಕುರಿತು ವಿವರಿಸುತ್ತ, ಸುಪ್ರಸಿದ್ಧ ಇತಿಹಾಸಕಾರರು ಕೆ.ಎನ್.ಚಟ್ನೀಸರು ''ಬಂಜಾರರಂತಹ ನಿರ್ದಿಷ್ಟ ವ್ಯಾಪಾರ ಸಮುದಾಯಗಳು ದೊಡ್ಡರಾಜಪ್ಪನದಿಂದ ಬಂದವರು ಮತ್ತು

ಪ್ರಮುಖವಾಗಿ ದೂರದ ಸ್ಥಳಗಳಿಗೆ ಸರಕು ಸಾಕಾಣಿಕೆಗೆ ಪ್ರಸಿದ್ಧರಾಗಿದ್ದರು.'' ಇಲ್ಲಿ ದೂರದ ವ್ಯಾಪಾರಕ್ಕ ಲಂಬಾಣಿ ಬುಡಕಟ್ಟು ಪ್ರಸಿದ್ಧವಾಗಿತ್ತೆಂಬ ವಿಚಾರ ತಿಳಿದು ಬರುತ್ತದೆ.

ದೂರದ ವ್ಯಾಪಾರಕ್ಕೆ ಪ್ರಸಿದ್ಧವಾಗಿದ್ದ ಲಂಬಾಣಿಗಳು ತಮ್ಮ ವ್ಯಾಪಾರ ವಸ್ತುಗಳನ್ನು ಸಾಗಿಸಲು ಪ್ರಾಣಿಗಳನ್ನು ಬಳಸುತ್ತಿದ್ದರು. ''ಸಾಮಾನ್ಯವಾಗಿ ಎತ್ತುಗಳು, ಚಕ್ಕಡಿಗಳು ಮತ್ತು ಕುದುರೆಗಳು ಅವರ ಸಾಗಾಣಿಕೆಯ ಸಾಧನಗಳಾಗಿದ್ದವು. ಸಹಸ್ರಾರು ಸಂಖ್ಯೆಯಲ್ಲಿ ಎತ್ತುಗಳನ್ನು ಅವರು ತಮ್ಮ ವ್ಯಾಪಾರಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಅವರು ಕಾರ್ಯನಿರತರಾಗಿದ್ದ ದೇಶದ ಭಾಗಗಳ ವ್ಯಾಪಾರಮಾರ್ಗಗಳ ಪೂರ್ಣ ಪರಿಚಯ ಅವರಿಗಿರುತ್ತಿತ್ತು.'' ಲಂಬಾಣಿಗಳು, ಎತ್ತು ಎತ್ತಿನಗಾಡಿ, ಕುದುರೆ, ಒಂಟೆಗಳ ಮೇಲೆ ದವಸ-ಧಾನ್ಯಗಳನ್ನು ಹೇರಿಕೊಂಡು ದೂರ ದೂರದ ಊರುಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು.

ಲಂಬಾಣಿಗರು ವ್ಯಾಪಾರದವಸ್ತುಗಳನ್ನು ಸಾಗಿಸಲು ಕುದುರೆ, ಒಂಟೆ, ಹೆಸರುಗತ್ತೆ, ಮೊದಲಾದ ಪ್ರಾಣಿಗಳನ್ನು ಸಹ ಬಳಸುತ್ತಿದ್ದರು. ಎತ್ತಿನಗಾಡಿಯನ್ನು ಅಲ್ಲಲ್ಲಿ ಬಳಸಿದ ನಿದರ್ಶನಗಳಿವೆ. ಆದರೂ ಎತ್ತುಗಳ ಮೇಲೆ ವ್ಯಾಪಾರದ ವಸ್ತುಗಳನ್ನು ಹೇರಿಕೊಂಡು ಸಾಗಿಸುವುದು ಲಂಬಾಣಿಗರಿಗೆ ಹೆಚ್ಚು ಪ್ರಿಯವಾಗಿತ್ತು.

ಲಂಬಾಣಿಗರಿಗೆ ಗೋವುಗಳ ಬಗ್ಗೆ ಅತ್ಯಂತ ಪವಿತ್ರ ಭಾವನೆಯಿದೆ. ಅದು ವೃತ್ತಿ ನಿಮ್ಮಿತ್ತ ಬಂದಿರಬಹುದು. ಸಾವಿರ ಸಾವಿರ ಸಂಖ್ಯೆಯಲ್ಲಿ ದನಗಳನ್ನು ಸಾಕುತ್ತಿದ್ದರು. ವ್ಯಾಪಾರಕ್ಕಾಗಿ ತಾವೇ ಸಾಕಿದ ಎತ್ತುಗಳನ್ನು ಬಳಸಿಕೊಳ್ಳುತ್ತಿದ್ದರು. ಒಂದೊಂದು ಗುಂಪು ಒಂದೊಂದು ಎತ್ತನ್ನು ಆಯ್ದುಕೊಂಡು 'ಸಾಂಡ್' ಎಂದು ಕರೆದು ಅತ್ಯಂತ ಆಧಾರದಿಂದ ಸಾಕುತ್ತಿದ್ದರು. ಈಗಲೂ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲುಕುಗಳ ತಾಂಡಾಗಳಲ್ಲಿ ಧಾರ್ಮಿಕ ಆಚರಣೆಗಳಲ್ಲಿ, ಪ್ರಾರ್ಥನಾ ಗೀತೆಗಳಲ್ಲಿ ಹಿಂದೆ ಪ್ರಸಿದ್ಧವಾಗಿದ್ದ ಸಾಂಡ್ ಗಳ ಹೆಸರುಗಳನ್ನು ಸ್ಮರಿಸುತ್ತಾರೆ. ಮಧ್ಯ ಭಾರತದ ಬಂಜಾರರು ವಿಚಿತ್ರ ರೀತಿಯಲ್ಲಿ ಹಸುವನ್ನು ಪೂಜಿಸುತ್ತಾರೆ. ಈ ಪ್ರಾಣಿಯನ್ನು 'ಹಪಾದಿಯಾ' ಎಂದು ಕರೆಯುತ್ತಾರೆ ಸಂಸ್ಕೃತದ ಹತ್ಯೌಆದ್ಯ = ಹತಾದಿಯಾ ಎಂದಾಗಿದೆ. (ಕೊಲ್ಲುವುದು ಮಹಾಪಾಪ) ಇದು ಬಾಲಾಜಿ ಸೇವೆಗೆ ಮೀಸಲಾದುದು. ಅದರ ಮೇಲೆ ಯಾವ ಭಾರವನ್ನು ಹೇರುವುದಿಲ್ಲ. ಕೆಂಪು ರೇಷ್ಮೆ, ಗೆಜ್ಜೆ, ಕಂಚಿನ ಸರಪಣಿ, ಮತ್ತು ಪಾದಗಳ ಮೇಲೆ ಉಂಗುರ, ಕವಡೇಸರ, ಇವೇ ಮೊದಲಾದವುಗಳಿಂದ ಅಲಂಕರಿಸುತ್ತಾರೆ.

ಅಲೆಮಾರಿಗಳಾದ ಲಂಬಾಣಿಗರು ಅವರು ಅದನ್ನು ಗುಂಪಿನ ಮುಂದೆ ನಡೆಸಿಕೊಂಡು ಹೋಗುತ್ತಾರೆ. ಅದು ಎಲ್ಲಿ ಮಲಗುವುದೊ ಅಲ್ಲಿ ತಮ್ಮ ದಿನದ ವಸತಿಯನ್ನು ಏರ್ಪಡಿಸಿಕೊಳ್ಳುತ್ತಾರೆ. ಯಾವುದೋ ರೋಗ ರುಜಿನಗಳು ಬಂದರೆ, ತೊಂದರೆಗಳು ಎದುರಾದರೆ ಹಸುವಿನ ಪಾದಮುಟ್ಟಿ ಅಣೆ ಪ್ರಮಾಣಗಳನ್ನು ಮಾಡುವದು ಉಂಟು. ''ಎನ್ ಸೈಕ್ಲೋಪಿಡಿಯಾ ಆಫ್ ರಿಲಿಜಿಯನ್ ಅಂಡೇ ಎಥಿಕ್'' ಗ್ರಂಥದಲ್ಲಿ ಹೇಳಿರುವ ಈ ಮಾತುಗಳು ಲಂಬಾಣಿಗಳಲ್ಲಿ ಗೋವುಗಳನ್ನು ಕುರಿತಿರುವ ನಂಬಿಕೆ ಮತ್ತು ಆಚರಣೆಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

೧೭ನೇ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದ ಮರಾಠರ ಕಾಲದಲ್ಲಿ ಬಂಜಾಗರ ವ್ಯಾಪಾರವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಮಹಾರಾಷ್ಟ್ರದ ಪೇಶ್ವೆಗಳು ತಮ್ಮ ಆಳ್ವಿಕೆಯಲ್ಲಿ ಸಕ್ಕರೆ, ಸಾಂಬಾರು, ಪದಾರ್ಥಗಳು ಮತ್ತು ಒಣಹಣ್ಣು ಹಂಪಲುಗಳನ್ನು ಚೈನಾ, ಅಫ್‌ಘಾನಿಸ್ಥಾನ್, ಪರ್ಷಿಯಾ, ಅಂದೋನಿಯಾ ಮುಂತಾದ ದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಚೌಲ, ದಬೋಲ್, ರಾಜಿಪುರ ಮೊದಲಾದ ದೊಡ್ಡ ದೊಡ್ಡ ಬಂದರುಗಳು, ಕೊಂಕಣ ಕರಾವಳಿಯ ವಾಗೋತಾನ್, ಮಹಾದ್, ಬಾಲ್ ಸರ್, ಪೆನ್‌ವೆಲ್, ಕೋಲಂಬಿ ಮೊದಲಾದ ಚಿಕ್ಕ ಚಿಕ್ಕ ಬಂದರುಗಳು. ಆ ಕಾಲದಲ್ಲಿ ಹೆಚ್ಚು ಕ್ರಿಯಾಶೀಲವಾಗಿದ್ದವು. ಹೀಗೆ ಬೇರೆ ಬೇರೆ ದೇಶಗಳಿಂದ ಭಾರತದ ಬಂದರುಗಳಿಗೆ ಬಂದ ವಸ್ತುಗಳನ್ನು, ದೇಶದ ಮೂಲೆ ಮೂಲೆಗೂ ತಲುಪಿಸುವ ಜವಾಬ್ದಾರಿಯನ್ನು ಲಂಬಾಣಿ ವ್ಯಾಪಾರಿಗಳು ನಿಭಾಯಿಸುತ್ತಿದ್ದರು. ''The goods were unloaded at these ports carried in land to various markets over long distonccst by Huge caravans of Lambanies who some times numbered as man ten thousands''[೫] ವಿದ್ವಾಂಸರ ಈ ಹೇಳಿಕೆಯಲ್ಲಿ ಲಂಬಾಣಿಗಳ ವ್ಯಾಪಾರದ ಕ್ರಮವು ಸ್ಪಷ್ಟವಾಗುತ್ತದೆ.

ಲಂಬಾಣಿಗಳ ವ್ಯಾಪಾರವು ಚೆನ್ನಾಗಿ ನಡೆಯುತ್ತಿದ್ದ ದಿನಗಳಲ್ಲಿ ಅದರ ವೃತ್ತಿ ಮತ್ತೊಂದು ತಿರುವನ್ನು ಪಡೆದುಕೊಳ್ಳುತ್ತದೆ. ಅದೇ ಯುದ್ಧನಿರತ ಸೈನಿಕರಿಗೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವುದು. ಸುಲ್ತಾನರ, ಮೊಗಲರ, ಮರಾಠರ, ಕೊನೆಗೆ ಬ್ರಿಟಿಷ್ ಸೈನಿಕರಿಗೆ ಆಹಾರ ಧಾನ್ಯವನ್ನು ಲಂಬಾಣಿಗರು ಸರಬರಾಜು ಮಾಡಲಾರಂಭಿಸಿದರು. ಅದಕ್ಕೆ ಕಾರಣ ಈ ವೃತ್ತಿಯು ಸಾಮಾನ್ಯ ವ್ಯಾಪಾರಕ್ಕಿಂತ ಹೆಚ್ಚು ಲಾಭದಾಯಕವಾಗಿರಬೇಕು. ಈ ಬಗೆಯ ವ್ಯಾಪಾರದಲ್ಲಿ ಸೈನಿಕರಿಂದ ರಕ್ಷಣೆ ಲಭಿಸಿರಬೇಕು ಮತ್ತು ''ಕ್ರಿ.ಶ.೧೭ನೇ ಶತಮಾನದಲ್ಲಿ ಪೇಶ್ವೆಗಳ ಕಾಲದಲ್ಲಿ ಬಂಜಾರಾ ವ್ಯಾಪಾರಿಗಳಾದ ಪೋಮಾಜಿನಾಯ್ಕ ಮತ್ತು ಗೋವಿಂದ ನಾಯ್ಕ ಭುಕ್ಯಾ ಎಂಬುವರು ೧೫ ಸಾವಿರ ಎತ್ತುಗಳ ಹೇರುವಷ್ಟು ದವಸ ಧಾನ್ಯಗಳನ್ನು ಸೈನಿಕರ ವಸತಿಗಳಿಗೆ ತಲುಪಿಸುವ ಕರಾರು ಮಾಡಿಕೊಂಡಿರುತ್ತಾರೆ. ಅದಕ್ಕಾಗಿ ಅವರಿಗೆ ಆದ್ರ್ರಾರಿಯ ಸುಂಕದಿಂದ ವಿನಾಯಿತಿ ಲಭಿಸಿರುತ್ತದೆ'' ಎಂಬ ಮಾತುಗಳಲ್ಲಿ ಆ ಬಗೆಯ ವ್ಯಾಪಾರಿಗಳಿಗೆ ರಾಜರುಗಳು ರಿಯಾಯ್ತಿಗಳನ್ನು ಕೊಡುತ್ತಿದ್ದರೆಂಬುದು ತಿಳಿದುಬರುತ್ತದೆ. ಹೀಗೆ ಹಲವಾರು ಅನುಕೂಲಗಳಿಗಾಗಿ ಅವರು ತಮ್ಮ ವ್ಯಾಪಾರದ ವಿಧಾನವನ್ನು ಬದಲಾಯಿಸಿಕೊಂಡಂತೆ ಕಂಡುಬರುತ್ತದೆ.

ಉತ್ತರ ಮತ್ತು ಮಧ್ಯಭಾರತದಲ್ಲಿ ತಮ್ಮ ವ್ಯಾಪಾರವನ್ನು ಕೇಂದ್ರೀಕರಿಸಿದ ಲಂಬಾಣಿಗರು ದಕ್ಷಿಣ ಭಾರತವನ್ನು ಪ್ರವೇಶಿಸಿದ್ದು ಬಹಳ ತಡವಾಗಿಯೇ ಎಂಬುದನ್ನು ವಿದ್ವಾಂಸರು ದಾಖಲಿಸಿದ್ದಾರೆ. ಜನರಲ್ ಬ್ರಿಗ್ಸ್ ಅವರು ಕ್ರಿ.ಶ.೧೮೮೧೩ರಲ್ಲಿ ಬರೆದ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ. ''ಕ್ರಿ.ಶ.೧೪೧೭ರಲ್ಲಿ ಬಂಜಾರರ ಬೆಂಗಾವಲಿನ ಬಹುದೊಡ್ಡ ಎತ್ತುಗಳ ಗುಂಪೊಂದು ಖಾನ್ ಕಹನ್ ನಿಂದ ಸೆರೆಹಿಡಿಯಲ್ಪಟ್ಟಿತ್ತು. ಮತ್ತು ದಕ್ಷಿಣದ ರಾಜಧಾನಿಯಾಗಿದ್ದ ಗುಲ್ಬರ್ಗಾಕ್ಕೆ ಕಳುಹಿಸಲ್ಪಟ್ಟಿತು. ಪೆರಿಸ್ತ ಅವರನ್ನು ಕಾಳು ವ್ಯಾಪಾರಿಗಳೆಂದು ಕರೆದಿದ್ದಾನೆ. ಅವರು ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಸಂಚರಿಸುತ್ತಿದ್ದರು.

ಕ್ರಿ.ಶ.೧೪೧೭ರಲ್ಲಿ ಲಂಬಾಣಿಗರು ದಕ್ಷಿಣ ಭಾರತವನ್ನು ಪ್ರವೇಶಿಸಿದ ದಾಖಲೆ ಸಿಗುತ್ತದೆ. ಆ ಕಾಲದಲ್ಲಿ ಅವರನ್ನು "ಕಾಳು ಮಾರುವ ವ್ಯಾಪಾರಿಗಳು" ಎಂದು ಕರೆಯುತ್ತಿದ್ದರೆಂಬ ವಿಷಯ ಇಲ್ಲಿ ಗಮನಾರ್ಹವಾಗುತ್ತದೆ. ಈಗಲೂ ಕಾಳು ಮಾರಾಟ ಮಾಡುವ ಪದ್ಧತಿಯು ಬಳ್ಳಾರಿ ಜಿಲ್ಲೆಯ ಲಂಬಾಣಿ ತಾಂಡಗಳಲ್ಲಿ ನಾನು ಕ್ಷೇತ್ರಾ ಕಾರ್ಯ ಮಾಡುವಾಗ ಕಣ್ಣಾರೆ ಕಂಡ ವಿಷಯವಾಗಿರುತ್ತದೆ.

ಮೊಗಲ್ ಮತ್ತು ಬ್ರಿಟಿಷರ ಒಕ್ಕೂಟ ಮೈಸೂರಿನ ಮೇಲೆ ದಾಳಿ ಮಾಡಿದಾಗ ಆ ಒಕ್ಕೂಟದ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವ ಕರಾರನ್ನು ಬಂಜಾರರು ಮಾಡಿಕೊಂಡಿರುತ್ತಾರೆ. ಆಗೊಮ್ಮೆ ಅವರು ದಕ್ಷಿಣ ಕಡೆಗೆ ಬರುತ್ತಾರೆ. ಕ್ರಿ.ಶ.೧೭೯೨ರಲ್ಲಿ ಭೀಮಾನಾಯಕ್‌ನೆಂಬ ಬಂಜಾರ ವ್ಯಾಪಾರಿಗೆ ೨೫೦೦ ವಸ್ತುಗಳು ಹೇರುವಷ್ಟು ಧಾನ್ಯಗಳನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಲು ಬ್ರಿಟೀಷರು ೧,೫೦,೦೦೦ ರೂಪಾಯಿಗಳನ್ನು ಮುಂಗಡವಾಗಿ ಕೊಡುತ್ತಾರೆ. ಪಶ್ಚಿಮ ಘಟ್ಟವನ್ನು ದಾಟುವ ಸಮಯದಲ್ಲಿ ಉಂಟಾದ ಅಡಚಣೆಯಿಂದಾಗಿ ನಿಗದಿತ ಸಮಯಕ್ಕೆ ಆಹಾರ ಧಾನ್ಯಗಳನ್ನು ತಲುಪಿಸಲಾಗಲಿಲ್ಲ. ಅನೇಕ ಅಡೆತಡೆಗಳನ್ನು ದಾಟಿ ಲಂಬಾಣಿ ನಾಗರಿಕರು ಕ್ರಿ.ಶ.೧೭೯೯ರ ವೇಳೆಗೆ ಮೈಸೂರನ್ನು ತಲುಪುತ್ತಾರೆ. ಆ ವೇಳೆ ಮೈಸೂರು ಬ್ರಿಟಿಷರ ದೇಶವಾಗಿರುತ್ತದೆ. ಭಾರತ ಸಂಪೂರ್ಣವಾಗಿ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿರುತ್ತದೆ. ರಾಜಕೀಯ ಯುದ್ಧಗಳಿಗೆ ಸಂಪೂರ್ಣವಾಗಿ ತೆರೆ ಎಳೆದಂತಾಗುತ್ತಿದೆ. ಅದರೊಂದಿಗೆ ಲಂಬಾಣಿ ವ್ಯಾಪಾರ ವೃತ್ತಿಯು ನಿಂತು ಹೋಗುತ್ತದೆ.

## ೨.೧೩. ಪ್ರವಾಸಿಗರ ಲಿಖಿತ ಬರಹಗಳು

ಭಾರತವು ಪ್ರಾಚೀನ ಕಾಲದಿಂದಲೂ ಅನೇಕ ಪ್ರವಾಸಿಗರನ್ನು ಆಕರ್ಷಿಸುತ್ತಲೇ ಬಂದಿದೆ. ಹುಯೆನ್ ತ್ಸಾಂಗ್, ಫಾಹಿಯಾನ್ ಮೊದಲಾವರು ಇಲ್ಲಿಗೆ ಬಂದು ತಾವು ಕಂಡದ್ದನ್ನು ಬರೆದ ಅನುಭವಗಳು ಭಾರತದ ಇತಿಹಾಸದ ರಚನೆಗೆ ಅಮೂಲ್ಯ ಆಕರಗಳಾಗಿವೆ. ಭಾರತಕ್ಕೆ ಭೇಟಿಯನ್ನಿತ್ತ ಪ್ರವಾಸಿಗರು ತಮ್ಮ ಅನುಭವದಲ್ಲಿ ಲಂಬಾಣಿ ಜನಾಂಗದವರ ಬಗ್ಗೆ ಬರೆದ ಮಾಹಿತಿಗಳು ಆ ಜನಾಂಗವನ್ನು ಅರಿಯಲು ಉಪಯುಕ್ತ ಮಾಹಿತಿಗಳಾಗಿವೆ.

ಕ್ರಿ.ಶ.೧೬೨೮ರಲ್ಲಿ ಭಾರತವನ್ನು ಸಂದರ್ಶಿಸಿದ 'ಪೀಟರ್ ಮಂಡಿ'ಯು ಹೀಗೆ ಬರೆಯುತ್ತಾರೆ. "ಹೋಗುವ ದಾರಿಯಲ್ಲಿ ಬುರಾನ್‌ಪುರಕ್ಕೆ ಧವಸ ಧಾನ್ಯಗಳನ್ನು ಸಾಗಿಸುವ ಹೇರೆತ್ತು. ಹೇರು ಕೋಣಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಅನೇಕ ಬಣಜಾರರನ್ನು ಕಂಡೆವು." ಮುಂದುವರೆದ ಅವರು ಮತ್ತೊಂದು ಅನುಭವದಲ್ಲಿ ಹೀಗೆ ವಿವರಿಸುತ್ತಾರೆ. "ಆಗಷ್ಟ್ ೨೩ರಂದು ನಮಗೆ ಒಂದು ತಾಂಡ ಅಂದರೆ ಎತ್ತುಗಳ ಬಣಜಾರ ಸಿಕ್ಕಿತು. ತಾಂಡಾದಲ್ಲಿ ೧೪೦೦೦ ಎತ್ತುಗಳಿದ್ದವು. ಗೋಧಿ, ಅಕ್ಕಿ ಮುಂತಾದ ಧವಸ ಧಾನ್ಯಗಳನ್ನು ಅವುಗಳ ಮೇಲೆ ಹೇರಿದ್ದರು. ಒಂದೊಂದು ಎತ್ತಿನ ಮೇಲೆ ನಾಲ್ಕು ದೊಡ್ಡ ಮಣಗಳ ಹೇರು ಇತ್ತು. ಇವೆಲ್ಲಾ ಆಗ್ರಾಕ್ಕೆ ಹೋಗುತ್ತಿದ್ದವು. ಈ ಬಂಜಾರರು ತಮ್ಮ ಹೆಂಡತಿ, ಮಕ್ಕಳು ಮತ್ತು ಸಾಮಾನು

ಸರಂಜಾಮುಗಳ ಸಮೇತ ಹೊರಡುತ್ತಾರೆ. ಇವರು ಒಂದು ಕಡೆ ನಿಲ್ಲದೆ ಒಂದು ಊರಿಂದ ಮತ್ತೊಂದು ಊರಿಗೆ ಅಲೆದಾಡುತ್ತಾರೆ. ಇದರಿಂದ ಆ ಜನಾಂಗದ ಪ್ರತಿಯೊಬ್ಬರು ವರ್ತಕರಾಗಿದ್ದರು ಎಂದು ತಿಳಿಯುತ್ತದೆ.

ಪೀಟರ್ ಮಂಡಿಯವರ ಅನುಭವದ ಈ ಬರವಣಿಗೆಯು ಲಂಬಾಣಿ ಜನಾಂಗದ ಬಗೆಗೆ ಅಮೂಲ್ಯ ಮಾಹಿತಿಯಾಗಿದೆ. ಲಂಬಾಣಿಗರ ಬದುಕು, ವ್ಯಾಪಾರ ವಿಧಾನ, ವ್ಯಾಪಾರ ವಸ್ತುಗಳು ಮೊದಲಾದ ವಿಷಯಗಳನ್ನು ಸಾಕಷ್ಟು ವಿವರವಾಗಿಯೇ ಲೇಖಕರು ವಿವರಿಸಿದ್ದಾರೆ. ಅಲ್ಲದೆ ಲಂಬಾಣಿ ಸ್ತ್ರೀ ಪುರುಷರ ಸ್ವಭಾವವನ್ನು ಸರಿಯಾಗಿಯೇ ಗ್ರಹಿಸಿರುವುದು ಅವರ ಬರವಣಿಗೆಯ ಅಗತ್ಯವನ್ನು ಹೆಚ್ಚಿಸಿದೆ. ಅವರ ಬರವಣಿಗೆಯಲ್ಲಿ ಲಂಬಾಣಿ ಜನಾಂಗದ ವ್ಯಾಪಾರದ ಬದುಕು ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.

''ಕ್ರಿ.ಶ.೧೬೫೮ ರಿಂದ ೧೬೬೭ರವರೆಗೆ ಭಾರತದಲ್ಲಿ ಪ್ರವಾಸ ಮಾಡಿದ ಪ್ರಾನ್ಸ್ ಸ್ವಾಸ್ ಬೆರೆನ್ಯೇ ಎಂಬುವರು ಔರಂಗಜೇಬ್ ಮತ್ತು ದಾರನಿಗೂ ನಡೆದ ಯುದ್ಧವನ್ನು ಕುರಿತು ವಿವರಿಸುತ್ತ ಲಂಬಾಣಿಗಳ ಬಗೆಗೆ ಸಂಕ್ಷಿಪ್ತ ಮಾಹಿತಿಯೊಂದನ್ನು ಕೊಡುತ್ತಾನೆ. ''ಇಷ್ಟೇಲ್ಲದೆ ಸೈನ್ಯವನ್ನು ಹಿಂಬಾಲಿಸಿ ಹೋಗುವ ಬಣಜಾರ ವರ್ತಕರು ಇತ್ಯಾದಿ ಅಸಂಖ್ಯಾತ ಜನರಿದ್ದರು.'' ಅವರ ಈ ವಿವರಣೆಯಲ್ಲಿ ಲಂಬಾಣಿ ವರ್ತಕರು ಸೈನ್ಯಕ್ಕೆ ಅಹಾರ ಧಾನ್ಯಗಳನ್ನು ಸರಬರಾಜು ಮಾಡುತ್ತಿದ್ದರೆಂಬ ವಿಷಯ ತಿಳಿದು ಬರುತ್ತದೆ. ಒಟ್ಟಾರೆಯಾಗಿ ಲಂಬಾಣಿ ಬುಡಕಟ್ಟಿನ ಸ್ವಭಾವ, ಸ್ಥಿತಿಗತಿಗಳನ್ನು ತಿಳಿಯಲು ವಿದೇಶ ಪ್ರವಾಸಿಗರು ಕೊಡುವ ಮಾಹಿತಿ ಅತ್ಯಮೂಲ್ಯವಾದುದಾಗಿದೆ''.[೬]

**ವೃತ್ತಿಯಲ್ಲಿ ಪ್ರಾಮಾಣಿಕತೆ :** ಲಂಬಾಣಿಗಳ ಪ್ರಾಮಾಣಿಕತೆಯನ್ನು ಕುರಿತು ಡಾ.ಎಂ.ಚಿದಾನಂದ ಮೂರ್ತಿ ಅವರು ತಮ್ಮ ಲೇಖನದಲ್ಲಿ ''ಈ ಜಾತಿಯಲ್ಲಿ ಭಿಕ್ಷುಕರಿಲ್ಲ. ಭಿಕ್ಷೆ ಬೇಡುವುದು ಅತಿ ಹೀನವಾದ ಕೆಲಸ ವೆಂದು ನಂಬಿದ್ದಾರೆ. ಇವರಿಗೆ ತಮ್ಮ ಜಾತಿಯಲ್ಲಿ ಅತ್ಯಾಭಿಮಾನ. ಆದ್ದರಿಂದ ಈ ಜಾತಿಯಿಂದ ಮತ್ತೊಂದು ಜಾತಿಗೆ ಮತಾಂತರಗೊಂಡ ಪ್ರಸಂಗಗಳು ಅತ್ಯಲ್ಪ. ತಾವು ಸಾಲ ಮಾಡಿದ್ದರೆ ಅದನ್ನು ತಾವು ಸಾಯುವ ಮುನ್ನ ತೀರಿಸಬೇಕೆಂದು ದೃಢ ನಿಶ್ಚಯ ಮಾಡುತ್ತಾರೆ. ತಂದೆ ಆಕಸ್ಮತ್ ಸಾಲ ತೀರುವ ಮುನ್ನ ಸತ್ತರೆ ಮಕ್ಕಳಾಗಲಿ, ಮೊಮ್ಮಕ್ಕಳಾಗಲಿ ಅದನ್ನು ತೀರಿಸಿಯೇ ತಿರುತ್ತಾರೆ. ಲಂಬಾಣಿಗಳಲ್ಲಿ ಪ್ರಮಾಣಿಕತೆಗೆ ಬಹುದೊಡ್ಡ ಸ್ಥಾನವಿದೆ. ಲಂಬಾಣಿ ಜನಾಂಗದ ಅಂತರ್ಯವನ್ನು ಬಿಚ್ಚಿಟ್ಟಂತಿರುವ ಈ ಮಾತುಗಳು ಆ ಜನಾಂಗದ ಹಿರಿಯರಿಗೆ, ಪ್ರಾಮಾಣಿಕತೆಗೆ ಬರೆದ ಭಾಷ್ಯದಂತಿದೆ.[೭]

### ೨.೧೪. ಲಂಬಾಣಿ ಜಾನಪದ ಕಲೆಗಳು

ಮಾನವನು ತನ್ನ ಸುತ್ತಮುತ್ತಲಿರುವ ಪ್ರಕೃತಿಯ ಚೆಲುವನ್ನು ಕಂಡು ಮಾರುಹೋಗಿ ಅದರ ಪುನರ್‌ಸೃಷ್ಟಿಗೆ ಪ್ರಯತ್ನಿಸಿದೆಂದೂ ಆ ಮೂಲಕ ಕಲೆಯು ಜನ್ಮ ತಾಳಿತು ಎಂದು ಹೇಳಲಾಗುತ್ತದೆ. ಚೆಲುವನ್ನು ಕಾಣುವ ಕಂಡದ್ದನ್ನು ಅಭಿವ್ಯಕ್ತಿಪಡಿಸಿ ಬಿಚ್ಚಿಸುವ ಪ್ರವೃತ್ತಿ ಮನುಷ್ಯನ ಸ್ವಭಾವದಲ್ಲಿಯೇ ಇದೆ. ಮಾನವನ ಈ ಪ್ರವೃತ್ತಿಯು ಕಲೆಯ ಉಗಮದ ಬಿಂದು. ಸೃಷ್ಟಿಯ ಅವ್ಯಕ್ತ ಸ್ವರೂಪದ ನಾದ

ಮಾಧುರ್ಯವನ್ನು ಪರಿಭಾವಿಸಿದ ಆದಿ ಮಾನವನು ಆನಂದ, ಆಶ್ಚರ್ಯಗಳಿಂದ ಮೂಕವಿಸ್ಮಿತನಾಗಿ ಪುನಸ್ಸೃಷ್ಟಿಗೆ ಪ್ರಯತ್ನಿಸಿದುದರ ಫಲವಾಗಿ ಕಲೆಯು ಅರಳಿ ನಿಂತಿತು. ಕಲೆ ಆದಿಮಾನವನು ಪಡೆದ ಪ್ರಕೃತಿಯ ಅಂತರಂಗ ದರ್ಶನದ ಕಾಣಿಕೆಯ ಫಲ. ಕ್ರಿ.ಪೂ.೩೦೦೦ ವರ್ಷಗಳ ಹಿಂದೆಯೇ ಕಲೆಯು ಆರಂಭವಾದುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಗುಹೆಗಳಲ್ಲಿ, ಚಾಚು ಬಂಡೆಗಳ ಅಡಿಯಲ್ಲಿನ ಮಾನವರ ಸಾಲು, ಹುಲಿ, ನವಿಲುಗಳು ಚಿತ್ರಗಳು, ಆದಿ ಮಾನವನ ಕಲೆಯ ರೂಪಗಳೇ ಆಗಿವೆ.

ಮನುಷ್ಯನ ಅಂತರಂಗ ದ್ರವ್ಯವು ಮನಸ್ಸಿನ ಮೂಲಕ ಪ್ರವಹಿಸಿದಾಗ ಕಾವ್ಯ ಸಂಗೀತ ನೃತ್ಯಾದಿ ಕಲೆಗಳಾಗಿಯೂ, ಬುದ್ಧಿ ಮೂಲಕ ಪ್ರವಹಿಸಿದಾಗ ತರ್ಕಜ್ಞಾನಾದಿಗಳು ಶಾಸ್ತ್ರಗಳಾಗಿಯೂ ಪರಿಣಮಿಸುತ್ತವೆ. ಶಾಸ್ತ್ರದಲ್ಲಿ ದುರ್ಗ್ರಾಹ್ಯಾಗಳಾಗಿ ಬೇಸರ ತರಿಸುವ ಸಂಗತಿಗಳು ಕಲಾ ಮಾಧ್ಯಮದಲ್ಲಿ ರಸಭರಿತವಾಗಿ ರಂಜಿಸಬಲ್ಲವು. ಮನಸ್ಸಿಗೆ ಸುಖವಿಲ್ಲದ ನಿರ್ವೇದ ಅಥವಾ ವಿಮುಖತೆ, ಭಯ, ದುಃಖ, ಬೇಸರ ಈ ವಿಕಾರಾದಿಗಳಿಗೂ ಕಲಾ ಮಾಧ್ಯಮದಿಂದ ರಸತ್ವ ಪ್ರಾಪ್ತವಾಗಬಲ್ಲದು. ಈ ಕಾರಣದಿಂದಲೇ ಕಾವ್ಯ ಕಲಾದಿಗಳು ಮನುಷ್ಯ ಜೀವನದಲ್ಲಿ ಅತ್ಯಂತ ಪ್ರಮುಖವಾದ ಸ್ಥಾನವನ್ನು ಪಡೆದಿವೆ.

ಶಾಸ್ತ್ರೀಯ ದೃಷ್ಟಿಯಿಂದ ವಿಚಾರ ಮಾಡಿ ನೋಡಿದಾಗ ಕಲೆಯು ಪ್ರಮುಖವಾಗಿ ಎರಡು ಘಟ್ಟಗಳಲ್ಲಿ ಕಾರ್ಯನಿರ್ವಹಿಸುತ್ತದೆಂದು ವಿದ್ವಾಂಸರು ಗುರುತಿಸುತ್ತಾರೆ. ಮೊದಲನೆಯದಾಗಿ ಮನುಷ್ಯನ ಮನಸ್ಸನ್ನು ಆಕರ್ಷಿಸಿ, ಆ ವಸ್ತುವಿನ ವಿಷಯದಲ್ಲಿ ಆಸಕ್ತಿಯನ್ನು, ಕುತೂಹಲವನ್ನು ಉಂಟು ಮಾಡುತ್ತದೆ. ಎರಡನೆಯದಾಗಿ ಅದು ಜೀವಿಗೆ ಸಂಸ್ಕಾರದ ಸಾಧನೆಯಾಗಿ ಮನುಷ್ಯನನ್ನು ಉನ್ನತ ಮಟ್ಟಕ್ಕೇರಿಸುವ ಮೆಟ್ಟಿಲಾಗಿ ಚಿಂತನೆಯ ಮಾರ್ಗವನ್ನು ತಲುಪಿಸುತ್ತದೆ. ಕಲೆಯ ಮೊದಲನೆಯ ಘಟ್ಟವು ಇಂದ್ರಿಯ ಗ್ರಾಹ್ಯವಾಗಿ ಜಗತ್ತಿನ ಅನೇಕ ವೃತ್ತಿಗಳಲ್ಲಿ ವ್ಯಾಪಿಸಿದೆ. ಛಾಯಾಚಿತ್ರ, ಮರಗೆಲಸ, ಚಲನಚಿತ್ರ, ವ್ಯವಸಾಯ, ವಾಸ್ತುಶಿಲ್ಪ ನೇಯ್ಗೆ, ಕಸೂತಿ ಮೊದಲಾದವುಗಳಲ್ಲಿ ಇದನ್ನು ಕಾಣಬಹುದು.

ಜನಪದ ಕಲೆಗೆ ಮಾನವನ ಉಗಮದಷ್ಟೇ ಪ್ರಾಚೀನ ಇತಿಹಾಸವಿದೆ. ವಿಶಾಲವಾದ ಅರ್ಥದಲ್ಲಿ ಜನಪದ ಕಲೆಯೆಂಬುದು ಜನರ ಕಲೆಯೇ ಆಗಿದೆ. ಜನಪದರ ಬದುಕಿನ ಅವಿಭಾಜ್ಯ ಅಂಗಗಳಾದ ಇವು ವಂಶಾಪಾರಂಪರ್ಯವಾಗಿ ಪೀಳಿಗೆಯಿಂದ ಪೀಳಿಗೆಗೆ ಅಪ್ರಜ್ಞಾಪೂರ್ವಕವಾಗಿ ವರ್ಗಾಯಿಸಲ್ಪಡುತ್ತದೆ. ಯಾವುದೇ ಲಾಭಕ್ಕಾಗಿ ಅಥವಾ ಯಾರದೋ ತೆವಲಿಗಾಗಿ ಹುಟ್ಟಿರದ ಜನಪದ ಕಲೆಗಳು ಅವರ ಅತ್ಯಂತ ಸೂಕ್ಷ್ಮವೂ, ಸಂಕೀರ್ಣವೂ ಆದ ವ್ಯಕ್ತಿತ್ವದ ಅಭಿವ್ಯಕ್ತಿಗಳಾಗಿವೆ. ಕೆಲವೇ ಜನರ ಸಂಪರ್ಕ ಪಡೆದಿರುವ ಸಾಂಪ್ರದಾಯಿಕ ಜನಪದ ಕಲೆಗಳು ಹೊಸ ಹೊಸದನ್ನು ಸೃಷ್ಟಿಸುವ ಮುಂದಿನ ತಲೆಮಾರುಗಳಿಗೆ ವರ್ಗಾಯಿಸುವ ಜೀವಂತ ಸೃಷ್ಟಿಯಾಗಿವೆ. ಜನಪದ ಕಲೆಯ ಉಗಮ ನಿರಪೇಕ್ಷವಾದುದೆಂಬುದನ್ನು ಹಲವು ವಿದ್ವಾಂಸರು ನಿರೂಪಿಸಿದ್ದಾರೆ.

ಮೂಲತಃ ಸೌಂದರ್ಯೋಪಾಸಕರಾದ ಲಂಬಾಣಿ ಜನಾಂಗವು ಕಲೆಯ ಆಗರವಾಗಿದೆ. ಈ ಜನಾಂಗದ ಮಹಿಳೆಯರ ಉಡುಗೆ-ತೊಡುಗೆಗಳೇ ಇದಕ್ಕೆ ಸ್ಪಷ್ಟ ನಿದರ್ಶನ. ಅವರ ಕಲಾಪ್ರೌಢಿಮೆಯನ್ನು ೧. ಹಚ್ಚೆ,

೨. ರಂಗೋಲೆ, ೩. ಕಸೂತಿ, ೪. ಉಡುಗೆ-ತೊಡುಗೆ, ೫. ನೃತ್ಯ, ೬. ವಾದ್ಯ ಇವೇ ಮೊದಲಾದವುಗಳಲ್ಲಿ ನಾವು ಕಾಣಬಹುದು.

**೧. ಹಚ್ಚೆ ಕಲೆ:** ಮಾನವನು ನಗ್ನವಸ್ಥೆಯಲ್ಲಿರುವಾಗಲೇ ಜನ್ಮ ತಾಳಿದ ಅತಿ ಪ್ರಾಚೀನ ಕಲೆ ಹಚ್ಚೆ. ಆದಿ ಮಾನವನು ತನ್ನ ಬೆತ್ತಲೆ ದೇಹದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಅನೇಕ ಪ್ರಯತ್ನಗಳನ್ನು ನಡೆಸಿದನು. ಆ ಪ್ರಯತ್ನಗಳ ಫಲವಾಗಿ ಹಚ್ಚೆ ಉಗಮವಾಯಿತು ಎಂಬುದು ಮಾನವಶಾಸ್ತ್ರಜ್ಞರ ಅಭಿಪ್ರಾಯ. ಮಾನವನು ದೇಹ ಸೌಂದರ್ಯಕ್ಕೆ ವಸ್ತುಗಳನ್ನು ಬಳಸಿಕೊಳ್ಳುವ ಮುನ್ನ ಬಂದ ಕಲೆ ಹಚ್ಚೆ. ದುರದೃಷ್ಟವಶಾತ್ ಅದರ ಪ್ರಾಚೀನತೆಯ ಬಗೆಗೆ ಪ್ರಾಗೈತಿಹಾಸಿಕ ದಾಖಲೆಗಳು ನಮಗೆ ಸಿಗುವುದಿಲ್ಲ. ದೇಹದ ಸೌಂದರ್ಯವರ್ಧನೆಗಾಗಿ ಜಾಣ್ಮೆಯಿಂದ ದೇಹಕ್ಕೆ ಅಳಿಸಲಾಗದಂತೆ ಬಣ್ಣವನ್ನು ತುಂಬಿಕೊಳ್ಳುವ ಕಲೆ ಅತೀ ಪ್ರಾಚೀನ ಕಾಲದಲ್ಲಿಯೇ ಪ್ರಾರಂಭವಾಗಿರಬೇಕು ಎಂಬುದು ವಿದ್ವಾಂಸರ ಅಭಿಮತ.

ಮಾನವರ ಸಂಸ್ಕೃತಿಯ ವಿಕಾಸದ ಹೆಜ್ಜೆಯ ಗುರುತುಗಳಾದ ಜನಪದ ವಿಶಿಷ್ಟ ಕಲಾ ಪ್ರಕಾರಗಳು ನಶಿಸಿ ಹೋಗಿವೆ. ಮತ್ತೆ ಕೆಲವು ನಶಿಸುವ ಸ್ಥಿತಿಯಲ್ಲಿವೆ. ಆದರೆ ಹಚ್ಚೆಯು ಪ್ರಪಂಚದ ಅನೇಕ ದೇಶಗಳಲ್ಲಿ ನಶಿಸಿ ಮತ್ತೆ ಮರು ಹುಟ್ಟನ್ನು ಪಡೆಯುತ್ತ ಇಂದಿಗೂ ಉಳಿದು ಬಂದಿದೆ. ಅರೆ ಬೆತ್ತಲೆಯ ಆದಿವಾಸಿಗಳು ಇಂದಿಗೂ ಮೈ ತುಂಬಾ ಹಚ್ಚೆಯನ್ನು ಹೊಯ್ಸಿಕೊಳ್ಳುವುದು ಈ ಕಲೆಯ ಜೀವಂತಿಕೆಗೆ ನಿದರ್ಶನವಾಗಿದೆ.

ಹಚ್ಚೆಯ ಮಾನವ ಕುಲದಲ್ಲಿ ಉಗಮಗೊಂಡು ವಿಕಾಸವಾಗಿಲು ಹಲವು ಕಾರಣಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. 'ವೆಟ್ಟ್ ಗಾರ್ಡೆಟ್ಸ್ ಮತ್ತು ಇತರರು ಹಚ್ಚೆಯ ಧರ್ಮದ ಸಂಕೇತವಾಗಿ ಉಗಮವಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ. ಜೋಸ್ಟ್ ಮತ್ತು ವೆಸ್ಟರ್ ಮಾರ್ಕ್ ಎಂಬುವರು ಹಚ್ಚೆ ಹಾಕಿಸಿಕೊಳ್ಳುವುದು ದೇಹವನ್ನು ಶೃಂಗರಿಸಿಕೊಳ್ಳುವುದಕ್ಕಾಗಿ ಎಂದು ನಿರೂಪಿಸಿದ್ದಾರೆ. ಹಚ್ಚೆ ಹಾಕಿಸಿಕೊಳ್ಳುವುದು ಧರ್ಮ ಮತ್ತು ಶೃಂಗಾರದ ಕಾರಣಗಳ ಹೊರತಾಗಿ ಎಲ್ಲಾ ಕಡೆಯಲ್ಲೂ ಇದೆ.

ಜಾನಪದದಲ್ಲಿ ಹಚ್ಚೆಯು ವಿಶಿಷ್ಠವಾದ ಸ್ಥಾನವನ್ನು ಪಡೆದಿದ್ದು ಮದುವೆಗೆ ಮೊದಲು ಹಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯ ರೂಢಿಯಲ್ಲಿದೆ. ಒಂದು ಕಾಲದಲ್ಲಿ ಗಂಡು-ಹೆಣ್ಣೆಂಬ ತಾರತಮ್ಯವಿಲ್ಲದೇ ಹೆಚ್ಚೆ ಹಾಕಿಸಿಕೊಳ್ಳಲು ಮುಂದಾಗುತ್ತಿದ್ದರು. ಹೀಗಾಗಿ ಹೆಚ್ಚೆ ಹಾಕಿಸಿಕೊಳ್ಳುವುದು ಒಂದು ಕಾಲಕ್ಕೆ ಸಾಮಾನ್ಯ ಸಂಗತಿಯಾಗಿತ್ತು. ಭಾರತಕ್ಕೆ ಬಂದ ಟ್ರಾವೇನಿಯರ್ ಎನ್ನುವ ಪ್ರವಾಸಿಗ 'ಬಂಜಾರ ಜಾತಿಯ ಹೆಂಗಸರು ಮುಂಗೈನಿಂದ ತೋಳಿನವರೆಗೂ ತಮ್ಮ ಕೈಗಳನ್ನು ಹೂವಿನ ಹೆಚ್ಚೆಯಿಂದ ಶೃಂಗರಿಸಿಕೊಂಡು ಅದಕ್ಕೆ ಅನೇಕ ಬೇರುಗಳ ರಸದಿಂದ ತಯಾರಿಸಿದ ವಿವಿಧ ಬಣ್ಣಗಳನ್ನು ಹಚ್ಚಿಕೊಂಡು ಚರ್ಮವೇ ಹೂವಿನೋಪಾದಿಯಲ್ಲಿ ಕಂಗೊಳಿಸುವಂತೆ ಮಾಡಿಕೊಳ್ಳುತ್ತಿದ್ದರು' ಎಂದು ಹೇಳಿದ್ದಾರೆ.

ಪ್ರಪಂಚದ ಎಲ್ಲಾ ಬುಡಕಟ್ಟು ಜನಾಂಗಗಳಲ್ಲಿ ಪ್ರಮುಖವಾಗಿ ಎರಡು ಪ್ರಕಾರದ ಹಚ್ಚೆ ಬಳಕೆಯಲ್ಲಿರುವುದಾಗಿ ಗುರುತಿಸಲಾಗಿದೆ. 'ಒಂದು ಚರ್ಮದ ಅಡಿಯಲ್ಲಿ ವರ್ಣದ್ರವವನ್ನು ಶಾಶ್ವತವಾಗಿರುವಂತೆ

ತುಂಬುವುದು, ಎರಡನೆಯದಾಗಿ ದೇಹದ ಮೇಲೆ ಕಲೆ ಅಥವಾ ಗಾಯವನ್ನು ಮಾಡಿಕೊಳ್ಳುವುದು, ಗಾಯವನ್ನು ನಿರ್ದಿಷ್ಟ ದೇಹದ ಭಾಗವನ್ನು ಸುಡುವುದರ ಮೂಲಕ ಅಥವಾ ಕೊಯ್ದುಕೊಳ್ಳುವುದರ ಮೂಲಕ ಮಾಡಿಕೊಳ್ಳಬಹುದು. ಈ ಎರಡು ವಿಧಾನಗಳು ಜನಾಂಗದ ಬಣ್ಣವನ್ನು ಆಧರಿಸಿ ಹುಟ್ಟಿಕೊಂಡಿದೆ. ಗಾಯ ಮಾಡಿಕೊಳ್ಳುವ ವಿಧಾನವು ಕಪ್ಪುವರ್ಣದ ಜನರಲ್ಲಿ ಪ್ರಚಲಿತವಿದ್ದು ಆಸ್ಟ್ರೇಲಿಯ, ಟಾಸ್ಮೆನಿಯಾ, ಕ್ಯಾಲಿಡೋನಿಯ, ಫಿಜಿ, ಮುಂತಾದ ಭಾಗಗಳಲ್ಲಿ ರೂಢಿಯಲ್ಲಿದೆ. ಚರ್ಮದ ಅಡಿಯಲ್ಲಿ ವರ್ಣದ್ರವ ತುಂಬುವ ಹಚ್ಚೆಯ ವಿಧಾನವು ನ್ಯೂಜಿಲ್ಯಾಂಡಿನ ಮಾರೀಸ್, ಬರ್ಮ, ಮಲೇಶಿಯಾ ದ್ವೀಪಗಳು ಹಾಗೂ ಭಾರತದಲ್ಲಿ ಹೆಚ್ಚು ಪ್ರಚಲಿತದಲ್ಲಿವೆ. ಅಂತೆಯೇ ಸುಮಾತ್ರ ದೇಶದಲ್ಲಿಯ ಒಂದು ಜನಾಂಗ ತಮ್ಮ ಮುಖದ ಮೇಲಿನ ಹನ್ನೆರಡು ಭಾಗಗಳಿಗೆ ಕಬ್ಬಿಣದ ಸಲಾಖೆಯಿಂದ ಸುಟ್ಟಿಕೊಂಡು ಸುಟ್ಟಗುರುತುಗಳನ್ನು ಮಾಡಿಕೊಳ್ಳುತ್ತಾರೆ.

ಆಂಗ್ಲ ಭಾಷೆಯಲ್ಲಿ ಹಚ್ಚೆ ಹಾಕಿಸಿಕೊಳ್ಳುವುದರ ಮತ್ತು ಅದರ ಪದ ಬಳಕೆಯ ಬಗೆಗೂ ಸಾಕಷ್ಟು ವಿವರಣೆಯನ್ನು ನೀಡಿರುವುದು ಕಾಣಬಹುದಾಗಿದೆ. ಇದೇ ಪದವನ್ನು ಕ್ಯಾಪ್ಟನ್ ಕುಕ್‌ನು ತನ್ನ ಬರಹಗಳಲ್ಲಿ ವಿವರಿಸಿದ್ದಾನೆ.

ಹೀಗೆ, ಕುಕ್ಕನು ಬಳಸಿದ ಪದವು ಮುಂದೆ ಪ್ರಪಂಚದಾದ್ಯಂತ ಬಳಕೆಗೆ ಬಂದಿತು. 'ಟಾಟೂ' ಎನ್ನುವ ಆಂಗ್ಲ ಭಾಷೆಯ ಪದಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಹಚ್ಚೆ ಪದವು ಬಳಕೆಯಲ್ಲಿದೆ. ಹಚ್ಚೆ ಎಂಬ ಪದವನ್ನು ಕುರಿತು 'ಹಣಚಿ' ಎಂಬ ಹೆಸರು ಇದಕ್ಕಿದೆ. ಹಣಚಿಯೇ ಆಮೇಲೆ ಹಚ್ಚೆಯಾಗಿರಲು ಸಾಧ್ಯ. ಹಣಚಿ, ಹಂಚಿ, ಹಚ್ಚೆ ಇತ್ಯಾದಿಗಳಾಗಿ ಬೇರೆ ಬೇರೆ ಹೆಸರುಗಳಿಂದಲೂ ಹಚ್ಚೆಯನ್ನು ಕರೆಯುತ್ತಾರೆ. ಆಂಗ್ಲ ಭಾಷೆಯಲ್ಲಿರುವ 'Tattoo' ಎಂಬ ಪದದ ಮೂಲವನ್ನು ಕುರಿತು ವಿದ್ವಾಂಸರು ಹೀಗೆ ಹೇಳಿದ್ದಾರೆ. ''The word 'Tatu' or 'Tattoo' means to make or puncture the skin, is derived from the tatrition word take, reduplicated from the roota 'to strike' It was used by Captain cook in the account of his visit to Tahiti.''[೮]

ಭಾರತದಲ್ಲಿ ಎಲ್ಲಾ ಬುಡಕಟ್ಟು ಜನಾಂಗದಲ್ಲಿ ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ರೂಢಿಯಲ್ಲಿದ್ದು ಲಂಬಾಣಿಗರಲ್ಲಿ ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ಎಂದಿನಿಂದ ರೂಢಿಗೆ ಬಂದಿತ್ತೆಂಬುದನ್ನು ಖಚಿತವಾಗಿ ಹೇಳಲು ದಾಖಲೆಗಳು ದೊರೆಯುವುದಿಲ್ಲ. ಸೌಂದರ್ಯ ವರ್ಧಕರಾದ ಲಂಬಾಣಿಗರು ಅತಿ ಪ್ರಾಚೀನ ಕಾಲದಲ್ಲಿಯೇ ಹಚ್ಚೆ ಹಾಕಿಸಿಕೊಳ್ಳುತ್ತಿರಬಹುದೆಂದು ಊಹಿಸಬಹುದು. ಶ್ವೇತವರ್ಣದವರಾದ ಲಂಬಾಣಿ ಸ್ತ್ರೀಯರು ಚರ್ಮದ ಕೆಳಭಾಗದಲ್ಲಿ ವರ್ಣದ್ರವ ತುಂಬಿಕೊಳ್ಳುವ ಹಚ್ಚೆಯ ವಿಧಾನವನ್ನು ರೂಢಿಸಿಕೊಂಡಿದ್ದಾರೆ. ಬಟ್ಟೆ ಧರಿಸಿದಾಗ ಮುಚ್ಚಿಕೊಳ್ಳುವ ದೇಹದ ಭಾಗಗಳನ್ನು ಹೊರತುಪಡಿಸಿ ಬಾಹ್ಯದೃಷ್ಟಿಗೆ ಕಾಣುವ ದೇಹದ ಎಲ್ಲಾ ಭಾಗಗಳಿಗೂ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಗಡ್ಡ, ಗಲ್ಲ, ಹಣೆ, ಉಬ್ಬಿನ ಕೊನೆ, ಮೂಗಿನ ಎರಡು ಪಕ್ಕಗಳಲ್ಲಿ ಒಂದರಿಂದ ಐದರವರೆಗೆ ಚುಕ್ಕೆಯನ್ನು ಹಾಕಿಸಿಕೊಳ್ಳುತ್ತಾರೆ. ಕೈ ಮತ್ತು ಕಾಲು ಬೆರಳುಗಳ ಮೇಲೆ

ಒಂದರಿಂದ ಮೂರರವರೆಗೆ ಚುಕ್ಕೆಯ ಆಕಾರದಲ್ಲಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಲಂಬಾಣಿ ಸ್ತ್ರೀಯರ ಹಚ್ಚೆಯ ಸೌಂದರ್ಯವು ಕಾಣುವುದು ಅಂಗೈ, ಮುಂಗೈ, ಕಾಲುಗಳ ಮಾಂಸ ಖಂಡಗಳ ಮೇಲೆ, ಈ ಭಾಗಗಳ ಮೇಲೆ ನಾನಾ ಬಗೆಯ ಬಳ್ಳಿ, ಗಿಡಮರ, ಪಕ್ಷಿ, ಚೇಳು, ಮಾವಿನ ಎಲೆ, ಕಮಲದ ಹೂ. ಹೀಗೆ ತಮಗೆ ಬೇಕಾದ ವಿನ್ಯಾಸಗಳಲ್ಲಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಅಲ್ಲದೇ ಕಾಲುಬೆರಳು ಪಾದ, ಮೊಣಕಾಲು, ಕೈಬೆರಳು, ಇವುಗಳ ಮೇಲೆಯೂ ಹಚ್ಚೆಯ ಗುರುತನ್ನು ಕಾಣಬಹುದು. ಹಚ್ಚೆಯ ಹಲವಾರು ಚಿತ್ರವಿನ್ಯಾಸಗಳನ್ನು ಅಧ್ಯಯನ ಮಾಡಿದ ಮಾಸ್ಟರ್ ಫಾಸ್ ಟಿಯವರು ಇದು ಸಂಪೂರ್ಣವಾಗಿ ಅಲಂಕಾರಿಕವಾಗಿದ್ದು ಯಾವುದೇ ಕುಲಮುದ್ರೆ ಅಥವಾ ಸಂಕೇತವಾಗಲಿ ಇಲ್ಲವೆಂದು ಹೇಳಿದ್ದಾರೆ.

ಹಚ್ಚೆ ಹಾಕಿಸಿಕೊಂಡಿದ್ದಕ್ಕೆ ಪ್ರತಿಯಾಗಿ ವಿವಿಧ ಪ್ರದೇಶಗಳ್ಳಲಿ ವಿವಿಧ ರೂಪದಲ್ಲಿ ಸಂಭಾವನೆ ಕೊಡುವ ಪದ್ಧತಿ ರೂಢಿಯಲ್ಲಿದೆ. ಧವಸ ಧಾನ್ಯ, ನಗದು, ಊಟ ಹಾಕುವ, ಉಡಿಗೆ ತೊಡಿಸುವ ಹೀಗೆ ಹಲವಾರು ರೂಪಗಳಲ್ಲಿ ಸಂಭಾವನೆಯನ್ನು ನೀಡುತ್ತಾರೆ. ಈ ಹಚ್ಚೆಯನ್ನು ತಾಯಿತಂದೆಯರು ತಮ್ಮ ಮಕ್ಕಳಿಗೂ, ಅಜ್ಜ-ಅಜ್ಜಿಯವರು ತಮ್ಮ ಮೊಮ್ಮಕ್ಕಳಿಗೂ ಹಾಕಿಸುತ್ತಾರೆ. ಮರಣದ ತರುವಾಯವು ತಮ್ಮ ಮಕ್ಕಳ, ಮೊಮ್ಮಕ್ಕಳ ಮೈಮೇಲಿರುವ ಹಚ್ಚೆಯು ತಮ್ಮ ನೆನಪನ್ನು ಮೂಡಿಸಲಿ ಎಂಬುದೇ ಇದಕ್ಕೆ ಕಾರಣವಾಗಿದೆ.

ಸಾಮಾನ್ಯವಾಗಿ ಲಂಬಾಣಿ ಪುರುಷರು ಹಚ್ಚೆ ಹಾಕಿಸಿಕೊಳ್ಳೂವುದು ಬಹಳ ಅಪರೂಪದ ಸಂಗತಿ. ಹೆಚ್ಚೆಂದರೆ ಪ್ರಿಯತಮ, ಪ್ರಿಯತಮೆಯ ನೆನಪಿಗಾಗಿ ತಮ್ಮ ಕೈಯ ಮೇಲೆ ನಲ್ಲೆಯ ಹೆಸರಿನ ಹಚ್ಚೆಯನ್ನು ಹಾಕಿಸಿಕೊಳ್ಳಬಹುದು. ಪುರುಷರು ಹಚ್ಚೆಯನ್ನು ಹಾಕಿಸಿಕೊಂಡರೆ ಅಂತಹವರನ್ನು ಇತರ ಪುರುಷರು ಹೆಣ್ಣಿಗನೆಂದು ಹಿಯ್ಯಾಳಿಸುವುದು ರೂಢಿಯಲ್ಲಿದೆ ಮತ್ತು ತಮ್ಮ ಸ್ಥಾನವು ತಾಂಡದಲ್ಲಿ ಕುಗ್ಗುತ್ತದೆಂಬ ಭಯವು ಇರುತ್ತದೆ.

ಹಚ್ಚೆಗೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳು ಈ ಜನರಲ್ಲಿ ರೂಢಿಯಲ್ಲಿದೆ. ಮುಖದ ಮೇಲೆ ಹಚ್ಚೆಯ ಬೊಟ್ಟಿದ್ದರೆ ದೃಷ್ಟಿದೋಷ ತಗಲುವುದಿಲ್ಲ. ಮುಂಗೈಯಲ್ಲಿ ಧಾನ್ಯಗಳು ಹೆಚ್ಚಿದ್ದರೆ ಅಂತಹವರ ಕೈಯಲ್ಲಿ ಧನ ಧಾನ್ಯಗಳು ವೃದ್ಧಿಸುತ್ತವೆ. ಉಬ್ಬಿನ ಕೊನೆಯಲ್ಲಿ ಹಚ್ಚೆ ಹಾಕಿಸಿಕೊಂಡರೆ ತಲೆಸುತ್ತುವುದಿಲ್ಲ. ತಲೆನೋವಾಗಲ್ಲ. ಅಂಗೈ ಪಾದಗಳ ಮೇಲೆ ಹಾವು, ಚೇಳುಗಳ ಹಚ್ಚೆ ಹಾಕಿಸಿಕೊಂಡರೆ ಹಾವು ಚೇಳುಗಳು ಕಚ್ಚುವುದಿಲ್ಲ. ಕಚ್ಚಿದರೆ ವಿಷವೇರುವುದಿಲ್ಲ. ಗರ್ಭಿಣಿಯರು ಹಚ್ಚೆ ಹಾಕಿಸಿಕೊಂಡರೆ ಮನೆಬೆಳಗುವ ಸುಂದರ ಮಗಳು ಜನಿಸುತ್ತಾಳೆ. ಎರಡು-ಮೂರು ಮಕ್ಕಳು ಹುಟ್ಟಿ ಸತ್ತರೆ ತಾಯಿಯ ನಡುವಿನ ಮೇಲೆ ಹಚ್ಚೆ ಹಾಕಿಸಿಕೊಂಡರೆ ಮುಂದೆ ಹುಟ್ಟುವ ಮಕ್ಕಳು ಬದುಕುತ್ತವೆ. ಕಾಯಿಲೆಯಿಂದ ಮೈ ಕೈ ನೋವು, ಕೈಕಾಲು ಊದಿಕೊಳ್ಳುವುದು, ಸಂದು ಹಿಡಿಯುವ ಸ್ಥಳಗಳಲ್ಲಿ ಹಚ್ಚೆ ಹಾಕಿಸಿಕೊಂಡರೆ ಕಾಯಿಲೆ ವಾಸಿಯಾಗಬಹುದೆಂಬ ಹತ್ತು ಹಲವು ನಂಬಿಕೆಗಳು ಇವರಲ್ಲಿ ಪ್ರಚಲಿತವಾಗಿವೆ.

ಲಂಬಾಣಿ ಮಹಿಳೆಯರಲ್ಲಿ ಹಚ್ಚೆಯು ಸೌಂದರ್ಯವರ್ಧನೆಯ ದೃಷ್ಟಿಯಿಂದ ಆರಂಭಗೊಂಡು ಕ್ರಮೇಣ ಧಾರ್ಮಿಕರೂಪವನ್ನು ಪಡೆದುಕೊಂಡಿದೆ. ಈಚಿನ ದಿನಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿಗರಲ್ಲಿ ನಾಗರಿಕತೆಯ ಪರಿಣಾಮದಿಂದ ಹಚ್ಚೆ ಹಾಕಿಸಿಕೊಳ್ಳುವುದು ಕಡಿಮೆಯಾಗುತ್ತಿದೆ. ಶ್ವೇತ ವರ್ಣದ ಲಂಬಾಣಿ ಮಹಿಳೆಯರು ಸುಂದರ ವದನಕ್ಕೆ ಹಚ್ಚೆಯು ಒಂದು ಬಗೆಯ ಮಾದಕ ಕಳೆಯನ್ನಿತ್ತು ಸೌಂದರ್ಯವನ್ನು ಹೆಚ್ಚಿಸುತ್ತದೆ ಎಂಬುದನ್ನು ಯಾರೂ ನಿರಾಕರಿಸುವಂತಿಲ್ಲ.

**೨. ರಂಗೋಲಿ:** ಹಿಂದು ಜಾನಪದ ಕಲೆಗಳಲ್ಲಿ ಅತ್ಯಂತ ವೈವಿಧ್ಯ ಪೂರ್ಣವಾದುದೆಂದರೆ ರಂಗೋಲಿ. ಸಾಮಾನ್ಯವಾಗಿ ಇದು ಹೆಂಗಸರ ಕೈಕೆಲಸವಾಗಿದ್ದು ಸುರ್ಯೋದಯಕ್ಕೆ ಮುಂಚೆ ಗೋವಿನ ಸಗಣಿಯನ್ನು ನೀರಿನಲ್ಲಿ ಬೆರೆಸಿ ನೀರಿನಿಂದ ಸಾರಿಸಿ ಶುಚಿಗೊಳಿಸಿ ರಂಗೋಲಿ ಹಾಕುವುದು. ಹೆಂಗಸರ ದಿನನಿತ್ಯದ ಕೆಲಸವಾಗಿರುತ್ತದೆ. ಇದನ್ನು ದೋಷನಿವಾರಕ ಎಂಬುದಾಗಿಯೂ ಭಾವಿಸುತ್ತಾರೆ. ಅಂಗಳದ ಶುಚಿತ್ವವನ್ನು ಕಾಪಾಡಬೇಕೆಂಬ ವೈಜ್ಞಾನಿಕ ಉದ್ದೇಶದಿಂದ ಹುಟ್ಟಿರುವ ಈ ಕಲೆಯು ಇಂದು ಧಾರ್ಮಿಕ ಅರ್ಥವನ್ನು ಪಡೆದುಕೊಂಡು ಆಚರಣೆಯಲ್ಲಿದೆ ರಂಗೋಲಿಯು ಮನೆಯಮುಂದೆ ಇದ್ದರೆ ಭೂತ-ಪ್ರೇತಗಳು ಮನೆಯನ್ನು ಪ್ರವೇಶಸಲಾಗುವುದಿಲ್ಲ. ರಂಗೋಲಿ ಇಲ್ಲದ ಮನೆಯು ದೆವ್ವಗಳ ವಾಸಸ್ಥಾನ ಇತ್ಯಾದಿ ನಂಬಿಕೆಗಳು ಹಿಂದೂಗಳಲ್ಲಿ ರೂಢಿಯಲ್ಲಿವೆ.

ಹಿಂದೂ ಧಾರ್ಮಿಕ ನಂಬಿಕೆಗಳ ಅಡಿಯಲ್ಲಿ ಬೆಳೆದು ಬಂದಿರುವ ರಂಗೋಲಿ ಕಲೆಯು ಲಂಬಾಣಿ ಜನಾಂಗದಲ್ಲಿ ಒಂದು ಮಹತ್ವಪೂರ್ಣವಾದ ಸ್ಥಾನವನ್ನು ಪಡೆದುಕೊಂಡಿದೆ. ಈ ಜನಾಂಗದಲ್ಲಿರುವ ರಂಗೋಲಿ ಕಲೆಯನ್ನು 'ಸಾಂಕ್ಯ ಪೂರೇರೋ' ಹಾಗೂ 'ಚೊರೋಪೂರೇರೋ' ಎಂಬ ಎರಡು ಪ್ರಕಾರಗಳಲ್ಲಿ ಗುರುತಿಸಬಹುದು. ಮೊದಲನೆಯ ಪ್ರಕಾರದ ರಂಗೋಲಿಯನ್ನು ವಧು-ವರರ ಬೆನ್ನ ಮೇಲೆ ಮದುವೆ ಶಾಸ್ತ್ರಗಳಲ್ಲಿ ಬಿಡಿಸಲಾಗುತ್ತದೆ. ಇಲ್ಲಿ ವಧು-ವರರಿಗೆ ಶುಭಕೋರುವ ಹಾಗೂ ದುಷ್ಟಶಕ್ತಿಗಳು ಹತ್ತಿರ ಸುಳಿಯದಂತೆ ತಡೆಯುವ ಉದ್ದೇಶವಾಗಿರುತ್ತದೆ ಮತ್ತು ಎರಡನೆಯ ಪ್ರಕಾರದ ರಂಗೋಲಿಯನ್ನು ಕುಲದೇವತೆಯ ಪೂಜಾಸಂದರ್ಭಗಳಲ್ಲಿ ಮನೆಯ ಅಂಗಳ, ಹೊಸ್ತಿಲು, ದೇವರ ಎದುರಿನಲ್ಲಿ ವಿಶಿಷ್ಟವಾದ ಪೂಜಾ ಸ್ಥಳಗಳಲ್ಲಿ ಪೂರ್ವಿಕರನ್ನು ಆರಾಧಿಸುವ ವಿಶೇಷ ಸಂದರ್ಭಗಳಲ್ಲಿ ಮಾತ್ರ ರಂಗೋಲಿ ಬಿಡಿಸುತ್ತಾರೆ. ಪ್ರಮುಖವಾಗಿ ರಂಗೋಲಿಯು ಹೆಂಗಸರ ಕಲೆಯಾಗಿದ್ದರೂ ಲಂಬಾಣಿಗರಲ್ಲಿ ಗಂಡಸರೂ ಸಹ ರಂಗೋಲಿ ಕಲೆಯನ್ನು ಮೈಗೂಡಿಸಿಕೊಂಡಿರುವುದು ಒಂದು ವಿಶೇಷವಾಗಿದೆ. ಈ ಕಲೆಯ ವಿಚಾರವಾಗಿ ಲಂಬಾಣಿ ಹಿರಿಯರನ್ನು ವಿಚಾರಿಸಿದಾಗ, ಹೊರ ಬರುವ ಅಭಿಪ್ರಾಯಗಳ ಪ್ರಕಾರ ದೇತಾಕಾರ್ಯಗಳಲ್ಲಿ ಮಹಿಳೆಯರಿಗಿರುವ ಪುರುಷರೇ ಮುಂದಾಗಿ ಕಾರ್ಯನಿರ್ವಹಿಸುವುದೇ ಇದಕ್ಕೆ ಕಾರಣವಾಗಿದೆ ಎನ್ನುತ್ತಾರೆ.

ಲಂಬಾಣಿಗರು ತಮ್ಮ ಕುಲದೇವತೆ ಆರಾಧನೆಯ ಸಂದರ್ಭದಲ್ಲಿ ವಿಶೇಷ ರೀತಿಯ ರಂಗೋಲಿ ಹಾಕುವುದನ್ನು ಕಾಣಬಹುದು. ಅಕ್ಕಿ ಹಿಟ್ಟು ಅಥವಾ ಜೋಳದ ಹಿಟ್ಟನ್ನು ತೆಗೆದುಕೊಂಡು ವೃತ್ತಕಾರದ ರಂಗೋಲಿಯನ್ನು ಬಿಡಿಸಿ ರಂಗೋಲಿಯ ಮೇಲೆ ಗೋಣಿಚೀಲ ಅಥವಾ ಕರೆಕಂಬಳಿ ಮಡಿಕೆ ಮಾಡಿ ಹಾಕಿ

ಅದರ ಮೇಲೆ ದೇವರನ್ನು ತಾತ್ಕಾಲಿಕವಾಗಿ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಮದುವೆ ಮನೆಯಲ್ಲಿಯೂ ಹೀಗೆಯೇ ರಂಗೋಲಿಯನ್ನು ಹಾಕಿ ಬಟ್ಟೆ ಹಾಸಿ ಅದರ ಮೇಲೆ ವಧು-ವರರನ್ನು ಕೂರಿಸಿ ಶಾಸ್ತ್ರ ಸಂಪ್ರದಾಯವನ್ನು ಪೂರೈಸುತ್ತಾರೆ. ಈ ಬಗೆಯ ರಂಗೋಲಿಗೆ ಕಾರಣವನ್ನು ಹಿರಿಯರು ತಮ್ಮದೇ ಆದ ರೀತಿಯಲ್ಲಿ ವಿವರಿಸುತ್ತಾರೆ. ''ತಮ್ಮ ಮೂಲ ಪುರುಷರಾದ ದಾದಮೋಲ, ರಾಧಿ ದಾದಿಯರು ಋತುಮತಿಯಾಗಿದ್ದಾರೆಂಬ ಕಾರಣದಿಂದ ಬ್ರಾಹ್ಮಣ ಸಮಾಜದಿಂದ ಬಹಿಷ್ಕರಿಸಲ್ಪಟ್ಟ ಮೂವರು ಕನ್ಯೆಯರನ್ನು ತಮ್ಮ ದತ್ತು ಮಕ್ಕಳಿಗೆ ಮದುವೆ ಮಾಡಿಸುತ್ತಾರೆ. ಹಾಗೆ ಮದುವೆ ಮಾಡಿದಾಗ ನವ ವಧು-ವರರಿಗೆ ಲೋಪದೋಷಗಳು ಎದುರಾಗದಂತೆ, ದುಷ್ಟಶಕ್ತಿಗಳು ಪೀಡಿಸದಂತೆ ದಿಗ್ಬಂಧಿಸಲು ಈ ಬಗೆಯ ರಂಗೋಲಿಯನ್ನು ಹಾಕಿದ್ದರು. ಅಂದಿನ ವಿಧಾನವನ್ನು ಇಂದಿಗೂ ನಾವು ಅನುಸರಿಸುತ್ತೇವೆ ಎಂಬುದು ಅವರ ವಿವರಣೆಯಾಗಿದೆ. ಈ ಹೇಳಿಕೆಯಲ್ಲಿರುವಂತೆ ರಂಗೋಲಿ ಬಿಡಿಸಲು ಅಕ್ಕಿಹಿಟ್ಟು ಅಥವಾ ಜೋಳದ ಹಿಟ್ಟು ಬಳಕೆ ಪುರಾತನ ಕಾಲದ ವಿಧಾನವನ್ನು ಸ್ವಲ್ಪವು ಬದಲಾಯಿಸದಂತೆ ರಂಗೋಲಿ ಹಾಕುವುದು, ಇವುಗಳನ್ನು ಗಮನಿಸಿದಾಗ ದುಷ್ಟ ಶಕ್ತಿಗಳು ನಿರ್ಬಧಕ್ಕಾಗಿ ಲಂಬಾಣಿಗರಲ್ಲಿ ರಂಗೋಲಿ ರೂಢಿಯಲ್ಲಿತ್ತು ಎಂಬುದಾಗಿ ನಿರ್ಧರಿಸಬಹುದಾಗಿದೆ. ಮಾಟ, ಮಂತ್ರ, ಭೂತ ಪ್ರೇತಗಳಂತ ದುಷ್ಟಶಕ್ತಿಗಳನ್ನು ನಂಬಿರುವ ಲಂಬಾಣಿಗರು ಇವುಗಳನ್ನು ತಡೆಗಟ್ಟಲು ಬಳಸಿದ ಕ್ರಮ ಇದಾಗಿರಬಹುದೆಂದು ಊಹಿಸಬಹುದು.

ಇತ್ತೀಚಿನ ದಿನಗಳಲ್ಲಿ ರಂಗೋಲಿಯನ್ನು ಅಲಂಕಾರಿಕ ದೃಷ್ಟಿಯಿಂದ ಹಾಕುವ ಪದ್ಧತಿ ಲಂಬಾಣಿಗರಲ್ಲಿ ಬೆಳೆದು ಬರುತ್ತದೆ. ಇಲ್ಲಿ ಮಹಿಳೆಯರ ಪಾತ್ರವನ್ನು ಪ್ರಮುಖವಾಗಿ ಕಾಣಬಹುದಾಗಿದೆ. ಹೀಗೆ ರಂಗೋಲಿ ಹಾಕುವುದು ಸಹಜವಾಗಿ ವೈವಿಧ್ಯತೆಯಿಂದ ಕೂಡಿದ್ದು ಕರಕುಶಲತೆ ಹಾಗೂ ಸಮೃದ್ಧಿಯಿಂದ ಕೂಡಿರುತ್ತವೆ. ಧಾರ್ಮಿಕ ಸಂದರ್ಭದಲ್ಲಿ ಹಾಕುವ ಈ ಕಲೆ ಶ್ರದ್ಧೆ ಮತ್ತು ಭಕ್ತಿಗಳಿಗೆ ಒಳಪಟ್ಟಿರುತ್ತವೆಯಾದರೂ ಇವುಗಳಲ್ಲಿ ಕಲಾತ್ಮಕತೆಗೇನೂ ಕೊರತೆ ಇರುವುದಿಲ್ಲ.

**೩. ಕಸೂತಿ ಕಲೆ :** ಲಂಬಾಣಿ ಮಹಿಳೆಯರಲ್ಲಿ ವಂಶಪಾರಂಪರ್ಯವಾಗಿ ಬಂದಿರುವ ಕಲೆಗಳಲ್ಲಿ ಕಸೂತಿ ಕಲೆ ಅತ್ಯಂತ ಪ್ರಮುಖವಾಗಿದೆ. ''ರಂಗು ರಂಗಿನ ದಾರಗಳಿಂದ ಬಣ್ಣ ಬಣ್ಣದ ತುಂಡು ಬಟ್ಟೆಗಳನ್ನು ಗಾಜಿನ ತುಂಡುಗಳಿಂದ ಹಾಗೂ ಪ್ರಿಯವಾದ ಸಣ್ಣ ಸಣ್ಣ ವಸ್ತುಗಳನ್ನು ಬಟ್ಟೆಯ ಮೇಲೆ ಬಂಧಿಸಿ ರಂಗುರಂಗಿನಿಂದ ವರ್ಣಮಯ ಮತ್ತು ಚಿತ್ತಾಕರ್ಷಕವಾಗಿ ಕಾಣುವಂತೆ ಮಾಡುವ ಕಲೆಯೇ ಕಸೂತಿ.'' ಈ ಹೇಳಿಕೆಯಿಂದ ಕಸೂತಿಯ ವರ್ಣನೆಯನ್ನು ಸಂಪೂರ್ಣವಾಗಿ ಗುರುತಿಸಬಹುದಾಗಿದೆ. ಶುಭ್ರವಾದ ಕೆಂಪು ಬಟ್ಟೆಯ ಮೇಲೆ ವಿವಿಧ ವಿನ್ಯಾಸಗಳಲ್ಲಿ ಕಂಡುಬರುವ ಈ ಕಲೆಯು ಅತ್ಯಂತ ಆಕರ್ಷಣೀಯವಾಗಿರುತ್ತದೆ.

ಲಂಬಾಣಿಗಳಲ್ಲಿ ಕಸೂತಿಯು ಎಂದು ಆರಂಭವಾಯಿತೆಂದು ಖಚಿತವಾಗಿ ಹೇಳಲು ಯಾವುದೇ ಆಧಾರಗಳು ದೊರೆಯುವುದಿಲ್ಲ. ಇದರ ಕಸೂತಿಯ ಮೇಲೆ ಉತ್ತರ ಭಾರತದ ಇತರೇ ಜನಾಂಗಗಳಾದ ಗರಾಸಿಯ, ಜಾಟ್ಸ್, ದಾಸಿ, ತಾ ಜಾಟ್ಸ್ ಹಾಗೂ ರಾಜಸ್ಥಾನದ ಮಹಿಳೆಯರ ಪ್ರಭಾವ ಬೀರಿದೆಯೇ? ಅಥವಾ ಹಲವಾರು ಶತಮಾನಗಳಿಂದ ತೊಗಲಿನ ಉತ್ಪನ್ನಗಳ ಮೇಲೆ ಚಿನ್ನ-ಬೆಳ್ಳಿಯ ಕಸೂತಿಯನ್ನು

ಹಾಕುತ್ತಿದ್ದ ಕಜೇ ಚಮ್ಮಾರರ ಕಸೂತಿಯ ಪ್ರೇರಣೆಯಾಗಿದೆಯೇ? ಎಂಬುದು ತಿಳಿದುಬರುವುದಿಲ್ಲ. ಆದರೆ ಲಂಬಾಣಿ ಜನಾಂಗದಷ್ಟೆ ಪ್ರಾಚೀನ ಇತಿಹಾಸ ಕಸೂತಿ ಕಲೆಗೆ ಇದೆ ಎಂಬುದನ್ನು ಖಚಿತವಾಗಿ ಹೇಳಬಹುದು.

''ಖುಣ್ ಮತ್ತು ತೋಣ್ ಎಂಬ ಲಂಬಾಣಿ ಪದಗಳು ಕಸೂತಿ ಎಂಬ ಕನ್ನಡದ ಪದಕ್ಕೆ ಸಮಾನಾರ್ಥವಾಗಿ ಬಳಕೆಯಾಗಿವೆ. ಆದರೂ 'ಖಿಲಣ್' ಎಂಬ ಪದವು ಹೆಚ್ಚು ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ".[೯]

ಬಳ್ಳಾರಿ ಜಿಲ್ಲೆಯ ಎಲ್ಲ ಲಂಬಾಣಿ ತಾಂಡಾಗಳಲ್ಲಿ ಲಂಬಾಣಿ ಮಹಿಳೆಯರು ತಾವೇ ಕಸೂತಿ ಹಾಕಿ ಸಿದ್ಧಪಡಿಸಿದ ಉಡುಪುಗಳನ್ನು ಧರಿಸುತ್ತಾರೆ. ಹೆಣ್ಣು ಮಗುವು ಜನಸಿದ ಎಂಟರಿಂದ ಹತ್ತು ವರ್ಷದವಳಾಗುತ್ತಿದ್ದಂತೆ ತನ್ನ ತಾಯಿಯ ಜೊತೆ ಸೂಜಿ ಹಿಡಿದುಕೊಂಡು ಕಸೂತಿ ಹಾಕಲು ಪ್ರಾರಂಭಿಸುತ್ತಾಳೆ. ಮುಖ್ಯವಾಗಿ ಹೊಸಪೇಟೆ ತಾಲೂಕಿನ ಸೀತಾರಾಂ ತಾಂಡಾ, ಕಲ್ಲಹಳ್ಳಿ ತಾಂಡಾ ಹಾಗೂ ಮರಿಯಮ್ಮನಹಳ್ಳಿ ತಾಂಡಾದಲ್ಲಿ ಚಿಕ್ಕ ಚಿಕ್ಕ ಹೆಣ್ಣು ಹುಡುಗಿಯರು ಕಸೂತಿ ಕಲೆಯಲ್ಲಿ ತೊಡಗಿದ್ದಾರೆ. ಹನ್ನೆರಡು-ಹದಿನೈದು ವರ್ಷಗಳಲ್ಲಿ ತಮ್ಮ ಉಡುಪಿನ ಮೇಲೆ ಸುಂದರವಾದ ಕಸೂತಿ ಹಾಕುವ ಪರಿಣತಿಯನ್ನು ಪಡೆದಿರುತ್ತಾಳೆ. ಈ ರೀತಿಯ ಕಸೂತಿ ಕೆಲಸ ಒಂದು ಬಗೆಯಲ್ಲಿ ತಾಯಿಯಿಂದ ಮಗಳಿಗೆ ಹರಿದು ಬರುವ ವಂಶಾಪಾರಂಪರ್ಯ ಕಲೆಯಾಗಿದ್ದು ತಾಯಿಯಿಂದ ಮಗಳಿಗೆ ಬೆಳೆದು ಬರುವ ವೃತ್ತಿ ಎನ್ನಲೂಬಹುದು. ಇವರು ಕಸೂತಿಗೆ ಬಳಸುವ ಚಿತ್ರಗಳಿಗೆ ಪ್ರಕೃತಿಯೇ ಪ್ರೇರಣೆ. ಪ್ರಕೃತಿಯಲ್ಲಿನ ಗಿಡ, ಮರ, ಬಳ್ಳಿ, ಪರಿಚಿತ ಪ್ರಾಣಿಗಳು ಇವರ ಕಸೂತಿಯಲ್ಲಿ ಕಾಣಬಹುದು. ಇವರ ಕಸೂತಿಯಲ್ಲಿ ವಿವಿಧ ಪ್ರಕಾರದ ವಿನ್ಯಾಸಗಳನ್ನು ಗಮನಿಸಬಹುದು.

**ಬಕ್ಯಾ ತೋಡೋರೊ :** ಈ ಬಗೆಯ ಕಸೂತಿಯು ಚಿಕ್ಕ ಚಿಕ್ಕ ಚುಕ್ಕೆಗಳ ಸಾಲಿನಾಕಾರದಲ್ಲಿ ಇರುತ್ತದೆ. ಕೆಲವು ಕಡೆಗಳಲ್ಲಿ ಒಂದು ಸಾಲಿನ ಚುಕ್ಕೆಗಳಿದ್ದರೆ ಮತ್ತೆ ಕೆಲವು ಕಡೆಗಳಲ್ಲಿ ಬೇರೆ ಬೇರೆ ಬಣ್ಣದ ದಾರಗಳನ್ನು ಬಳಸಿ ಮೂರು ಸಾಲುಗಳವರೆಗೆ ಇರುತ್ತದೆ. ರೇಲೋ ವಿನ್ಯಾಸದ ಎರಡು ಪಕ್ಕದಲ್ಲಿ ಈ ಬಕ್ಯಾ ವಿನ್ಯಾಸದ ಸಾಲುಗಳಿದ್ದು ಅದರ ಮೇಲೆ 'ಮಾಕಿ' ಎಂಬ ಕಸೂತಿಯನ್ನು ಹಾಕಿರುತ್ತಾರೆ. ಬಕ್ಯಾ ಕಸೂತಿಯು ಸರಳವಾಗಿ ಹೆಣೆಗೆಯಾಗಿದ್ದು ರೇಲೋಪೇರೇರೊ ಕಸೂತಿಯಷ್ಟೇ ಮುಖ್ಯವಾಗಿರುತ್ತದೆ.

**ನಕಾರ :** ಇದು ನಕಾರ ಪದ್ಧತಿಯು ಬಕ್ಯಾ ಕಸೂತಿಯ ಸಾಲಿನ ಮಧ್ಯದಲ್ಲಿ ಬೇರೆ ಬೇರೆ ಬಣ್ಣದ ದಾರಗಳಿಂದ ಕೂಡಿದ್ದು ಮೊಸಳೆ, ಆಕಾರ ಹೊಂದಿರುತ್ತದೆ. ಆದ್ದರಿಂದ ಹಿಂದಿ ಭಾಷೆಯ ಮೊಸಲೆ ಎಂದು ಅರ್ಥವಿರುವ ನಕಾರ ಎಂಬ ಪದದ ಬಳಕೆಯನ್ನು ಇಲ್ಲಿ ಕಾಣಬಹುದು.

**ರೇಲೋಪೆರೇರೊ :** ಇದು ಬಳ್ಳಿಯಾಕಾರದ ವಿನ್ಯಾಸವನ್ನು ಹೊಂದಿದ್ದು ಎರಡರಿಂದ ಮೂರು ಇಂಚುಗಳ ಅಂತರದಲ್ಲಿ ಕನ್ನಡಿಗಳನ್ನು ಸೇರಿಸಿ ಹೆಣೆದಿರುತ್ತಾರೆ. ಈ ಕಸೂತಿಯು ಹೆಚ್ಚು ಸಂಕೀರ್ಣವಾಗಿದ್ದು ಕೆಂಪು ಮತ್ತು ಹಳದಿ ಬಣ್ಣದ ದಾರಗಳ ಬಳಕೆಯನ್ನು ಕಾಣಬಹುದು.

**ಭುರ್ಯಾ :** ವೃತ್ತಾಕಾರದ ಮೂಗಿನಲ್ಲಿ ಧರಿಸುವ ನತ್ತನ್ನು 'ಭುರ್ಯಾ' ಎಂಬುದಾಗಿ ಲಂಬಾಣಿ ಭಾಷೆಯಲ್ಲಿ ಕರೆಯುತ್ತಾರೆ. ಈ ಬಗೆಯ ಕಸೂತಿಯು ನತ್ತಿನಾಕಾರದ ವೃತ್ತಾಕಾರದ ವಿನ್ಯಾಸವನ್ನು ಹೊಂದಿರುತ್ತದೆ. ಹೆಚ್ಚು ಕಸೂತಿಯಿಲ್ಲದೆ ಖಾಲಿ ಜಾಗಗಳಲ್ಲಿ ಈ ಬಗೆಯ ಕಸೂತಿಯನ್ನು ಹಾಕುತ್ತಾರೆ.

**ಮಾಕ್ಕಿ :** ಲಂಬಾಣಿ ಭಾಷೆಯಲ್ಲಿ 'ಮಾಕ್ಕಿ' ಎಂದರೆ ನೋಣ ಎಂದರ್ಥ. ಈ ಕಸೂತಿಯು ಚಿಕ್ಕದಾಗಿದ್ದು ನೋಣಾದಕಾರವನ್ನು ಹೋಲುವುದರಿಂದ ಈ ಕಸೂತಿಗೆ 'ಮಾಕ್ಕಿ' ಎಂದು ಕರೆದಿರಬೇಕು. ರೇಲೋ ಪೇರರೋ ಬುಕ್ಯಾತೊಡೇರೊ ಮೊದಲಾದ ಸಂಕೀರ್ಣ ಕಸೂತಿಗಳ ಮೇಲೆ ಮಾಕ್ಕಿ ಕಸೂತಿಯನ್ನು ಹಾಕಿ ಅಲಂಕರಿಸುತ್ತಾರೆ. ಬೇರೆ ಬೇರೆ ಬಣ್ಣದ ದಾರಗಳನ್ನು ಬಳಸಿ ಈ ವಿನ್ಯಾಸವನ್ನು ಹೆಚ್ಚು ಆಕರ್ಷಣೆಯವಾಗಿ ಮಾಡಿರುತ್ತಾರೆ.

**ಕಟ್ಟಾ ಮಾಡೇರೊ:** ಹೂತಿದ ಬಟ್ಟೆಗಳ ಅಂಚುಗಳಲ್ಲಿ ಒಂದು ಇಂಚು ಅಗಲವುಳ್ಳ ಬಿಳಿಯ ಬಟ್ಟೆಯನ್ನು ಜೋಡಿಸಿ ಕತ್ತರಿಸಿ ಗೋಪುರಾಕಾರದಲ್ಲಿ ಹೊಲೆಯುತ್ತಾರೆ. ಇದು ಕಪ್ಪು ಬಟ್ಟೆಯ ಮೇಲೆ ಬಿಳಿಯ ಗೋಪುರಗಳ ಸಾಲಿನಂತೆ ಸುಂದರವಾಗಿ ಕಾಣುತ್ತದೆ. ಈ ಗೋಪುರಗಳ ತುದಿಯ ಮೇಲೆ ಕೆಂಪು ಅಥವಾ ಹಳದಿ ಬಣ್ಣದ ದಾರಗಳಿಂದ ಸುಂದರವಾದ ಚೌಕಾಕೃತಿಯ ಕಸೂತಿ ಇರುತ್ತದೆ.

ಯಾವುದೇ ಜನಾಂಗದಲ್ಲಿನ ಜನಪ್ರಿಯ ಕಲೆಯು ಆ ಜನಾಂಗದ ವೃತ್ತಿ ಮನೋಧರ್ಮ, ಅಭಿಲಾಷೆಗಳ ಫಲವಾಗಿರುತ್ತದೆ. ಲಂಬಾಣಿ ಜನಾಂಗದ ವೃತ್ತಿ ದೊಂಬರಾಟವಾಗಿದ್ದಾಗ ತಮ್ಮ ವೃತ್ತಿ ಧರ್ಮಕ್ಕನುಗುಣವಾಗಿ ಜನಾಕರ್ಷಣೆಯ ಉಡುಪುಗಳನ್ನು ಧರಿಸುವುದು ಅನಿವಾರ್ಯವಾಗಿತ್ತು. ಈ ಕಾರಣಕ್ಕಾಗಿಯೇ ಲಂಬಾಣಿ ಮಹಿಳೆಯರು ಕೆಂಪುವರ್ಣದ ಬಟ್ಟೆಗಳ ಮೇಲೆ ವಿವಿಧ ವಿನ್ಯಾಸದ ಕಸೂತಿಗಳನ್ನು ಹಾಕಿಕೊಂಡು ಧರಿಸುವುದಕ್ಕೆ ಪ್ರಾರಂಭಿಸಿದರು. ಹೀಗೆ ರೂಢಿಗೆ ಬಂದ ಕಲೆಯು ಕ್ರಮೇಣ ತಮ್ಮ ಮೂಲ ವೃತ್ತಿಯಾದ ದೊಂಬರಾಟವನ್ನು ಬಿಟ್ಟು ವಾಣಿಜ್ಯ(ವ್ಯಾಪಾರ) ವೃತ್ತಿಯನ್ನು ಪ್ರಾರಂಭಿಸಿದ ಮೇಲೂ ಮುಂದುವರಿಸಿರಬೇಕು ಎಂಬುದಾಗಿ ವಿವರಿಸಬಹುದಾಗಿದೆ. ಇಂತಹ ಕಲೆಗೆ ಅದರದೆ ಆದ ವೈಶಿಷ್ಟ್ಯವನ್ನು ಗುರುತಿಸಬಹುದು. ಇವರ ಕಲೆಯಲ್ಲಿ ಸೂಕ್ಷ್ಮ ಕುಸುರಿಯ ಕಲಾ ನೈಪುಣ್ಯತೆಯು ಎಂತಹವರ ನ್ನಾದರೂ ಬೆರಗುಗೊಳಿಸುತ್ತದೆ. ದಟ್ಟ ಕೆಂಪುವರ್ಣದ ಬಟ್ಟೆಗಳ ಮೇಲೆ ಅಂದವಾಗಿ ಜೋಡಿಸಿದ ಆಕರ್ಷದ ಹಾಗೂ ಆಕರ್ಷಣೆಯ ಈ ಮಹಿಳೆಯರ ಬಣ್ಣ ಬಣ್ಣದ ಕಸೂತಿ ಬಡತನದ ಬದುಕಿಗೆ ಜೀವ ತುಂಬುವ ಒಂದು ರಮ್ಯಲೋಕ ಅತ್ಯಂತ ತಾಳ್ಮೆಯಿಂದ ವರ್ಷಪೂರ್ತಿ ಒಂದು ಜೊತೆ ಉಡುಪಿನ ಮೇಲೆ ನಾನಾ ಬಗೆಯ ಕಸೂತಿಯನ್ನು ಬಣ್ಣ ಬಣ್ಣದ ದಾರಗಳಿಂದ ಹಣೆಯುವ ಅವರ ತಾಳ್ಮೆಗೆ ತಲೆದೂಗಲೇಬೇಕು. ಅಂತೆಯೇ ಬರೀ ಬಟ್ಟೆಗೆ ಜೀವತುಂಬುವ ಈ ಕೆಲಸ ಒಂದು ವಿಶಿಷ್ಟ ಕಲೆಯಾಗಿ ಬೆಳೆದುಬಂದಿದೆ. ಆದುದರಿಂದ ಸರ್ಕಾರ ಈ ಸಮುದಾಯಕ್ಕೆ ಅವರದೇ ಆದ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಿ ಕೊಡಬೇಕು.

**ಲಂಬಾಣಿ ಉಡುಗೆ-ತೊಡುಗೆಗಳು:** ಉಡುಪು ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲೊಂದಾಗಿದೆ. ಮೊದಲು ದೇಹದ ರಕ್ಷಣೆ ಮಾತ್ರ ಇದರ ಉದ್ದೇಶವಾಗಿತ್ತಾದರೂ ವಿಕಾಸಕ್ರಮದಲ್ಲಿ ಮನುಷ್ಯನಿಗೆ ಅಲಂಕಾರ ಪ್ರಜ್ಞೆ

ಮಾಡುತ್ತಾರೆ ಬಂದುದರ ಹಿನ್ನೆಲೆಯಲ್ಲಿ ಅಲಂಕಾರಕ್ಕೂ ಅವಕಾಶ ಮಾಡಿಕೊಡಲಾಯಿತು. ವಾಸಿಸುವ ಪ್ರದೇಶ, ಅನುಸರಿಸುವ ಮತ ಬೇರೆ ಬೇರೆಯಾದಂತೆ ಉಡುಪಿನ ಸ್ವರೂಪ ಮತ್ತು ವಿನ್ಯಾಸದಲ್ಲಿ ಬದಲಾವಣೆಗಳು ಕಂಡುಬಂದವು. ಈ ದೃಷ್ಟಿಯಿಂದ ಉಡುಪು, ಸಂಸ್ಕೃತಿಯನ್ನು ಪ್ರತಿನಿಧಿಸುವ ವಸ್ತು ವಿಶೇಷವಾಗಿ ಪರಿಗಣಿಸಲ್ಪಡುತ್ತದೆ.

ಮಾನವ ಶರೀರವನ್ನು ಮುಚ್ಚುವ ಸಾಧನವೇ ಉಡುಪು. ಅದು ಶರೀರವನ್ನು ರಕ್ಷಿಸುವುದಲ್ಲದೆ ಅಲಂಕಾರವೂ ಅದರ ಉದ್ದೇಶ. ಮನುಷ್ಯರಿಗೂ ಪ್ರಾಣಿಗಳಿಗೂ ಇರುವ ಒಂದು ಪ್ರಮುಖ ವ್ಯತ್ಯಾಸವೆಂದರೆ ಅವರು ಧರಿಸುವ ಉಡುಪು. ಭಾರತೀಯ ಸಂಸ್ಕೃತಿಯಲ್ಲಿ ಉಡುಗೆ-ತೊಡುಗೆಗಳಿಗೆ ಬಹಳ ಮಹತ್ವದ ಸ್ಥಾನವಿದೆ. ಮಾನ ಮುಚ್ಚುವ ಪರಿಯಾಗಿ, ಅಲಂಕಾರ ಪ್ರಿಯತೆಗಾಗಿ ಎಂಬ ಎರಡು ಹಂತಗಳಲ್ಲಿ ಭಾರತೀಯ ಬಟ್ಟೆಗಳ ವಿನ್ಯಾಸ ಜನರ ಮನೋಭಿಲಾಷೆಯನ್ನು ಅಭಿವ್ಯಕ್ತಿಸುತ್ತದೆ. ಒಂದು ಸಮುದಾಯದ ಜನರು ಧರಿಸುವ ಬಟ್ಟೆಗಳು ಅವರ ಸಾಂಸ್ಕೃತಿಕ ಆಚರಣೆ, ಪರಿಸರದ ಪ್ರಭಾವ, ಶರೀರದ ರಕ್ಷಣೆ ಮತ್ತು ಗುಪ್ತಾಂಗಗಳ ಮರೆಮಾಚಲು ಅವರು ನಡೆಸಿದ ಪ್ರಯತ್ನದ ಫಲವಾಗಿ ರೂಪುಗೊಂಡಿದೆ.

''ಉಡುಗೆ-ತೊಡುಗೆಗಳೂ ಯಾವುದೇ ಸಮಾಜದ ಗುರುತಿನ ಬಾಹ್ಯ ಚಿಹ್ನೆಯಾಗಿರುವುದರ ಜೊತೆಗೆ ಅವು ಸಾಮೂಹಿಕ ಬದುಕಿನಲ್ಲಿ ವ್ಯಕ್ತಿ ವ್ಯಕ್ತಿಗೂ ಇರುವ ಸಂಬಂಧ ಸಂಪರ್ಕಗಳನ್ನು ಹೊರಗೆಡಹುತ್ತವೆ.'' ಹಾಗೆ ನೋಡಿದರೆ ಭಾರತೀಯ ಮಹಿಳೆಯಲ್ಲೇ ಹೆಚ್ಚು ಆಕರ್ಷಣೀಯವಾದ ಉಡುಪುಗಳನ್ನು ಲಂಬಾಣಿ ಮಹಿಳೆಯರು ಧರಿಸುವರೆಂಬುದು ಅವರ ಉಡುಗೆಗಳಿಂದಲೇ ಸಾಬೀತಾಗುತ್ತದೆ. ಸುದೀರ್ಘವಾದ ಸಾಂಸ್ಕೃತಿಕ ಇತಿಹಾಸವಿರುವ ಈ ಸಮುದಾಯದ ವೇಷ-ಭೂಷಣಗಳು ಅವರ ವೃತ್ತಿ ಧರ್ಮ, ಪರಿಸರದ ಪ್ರಭಾವ. ಕಲ್ಪನಾ ಸಾಮರ್ಥ್ಯ ಈ ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತವೆ. ಉಡುಗೆ-ತೊಡುಗೆಗಳಲ್ಲಿ ಇತರ ಭಾರತೀಯ ಮಹಿಳೆಯರಿಗಿಂತ ಭಿನ್ನರಾಗಿ ನಿಲ್ಲುವ ಲಂಬಾಣಿ ಮಹಿಳೆಯರು ಧರಿಸುವ ಉಡುಪುಗಳನ್ನು ಕುರಿತಂತೆ ಹಲವು ಕಡೆ ಐತಿಹ್ಯಗಳಿವೆ.[೧೦]

**ತೊಡುಗೆಗಳು :** ಶೃಂಗಾರ ಪ್ರಿಯರಾದ ಲಂಬಾಣಿ ಮಹಿಳೆಯರು ದೇಹದ ಅಂಗಾಗಳನ್ನು ವಿವಿಧ ಬಗೆಯ ಆಭರಣಗಳಿಂದ ಕಲಾತ್ಮಕವಾಗಿ ಅಲಂಕಾರಿಸಿಕೊಂಡಿರುತ್ತಾರೆ. ಕಿವಿ.ಮೂಗು, ತಲೆ, ಕೊರಳು, ಕೈ-ಕಾಲುಗಳು ಹಾಗೂ ಇವುಗಳ ಬೆರಳುಗಳನ್ನು ಆಭರಣಗಳಿಂದ ಶೃಂಗರಿಸಿಕೊಳ್ಳುತ್ತಾರೆ. ಇವರು ಧರಿಸುವ ಆಭರಣಗಳನ್ನು ಕಂಡು ವಿದ್ವಾಂಸರಾದ ಎಡ್ಗರ್ ಥಸ್ಟನ್ ''ಅವರ ಉಡುಗೆ ವಿಚಿತ್ರವಾಗಿರುತ್ತದೆ. ಮತ್ತು ಅವರ ಆಭರಣಗಳು ಅಸಾಧಾರಣವಾದ ಆಯ್ಕೆಯಾಗಿರುತ್ತವೆ. ನಾವು ಕಂಡಂತೆ ಲಂಬಾಣಿ ಹೆಂಗಸರು ೮ ರಿಂದ ೧೦ ಪೌಂಡ್ ತೂಕದ ಲೋಕದ ಅಥವಾ ದಂತದ ಆಭರಣಗಳನ್ನು ತೋಳು ಮತ್ತು ಕಾಲುಗಳಲ್ಲಿ ಧರಿಸಿಕೊಂಡಿರುತ್ತಾರೆ'' ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ.[೧೧]

**ನೃತ್ಯ :** ದೇಹದ ಲಯಬದ್ಧವಾದ ಚಲನೆಯ ಕ್ರಮವೇ ನೃತ್ಯ. ಇದು ಮಾನವನ ಸಹಜ ಪ್ರವೃತ್ತಿಯಾಗಿದ್ದು 'ಆದಿ ಮಾನವನ ಬದುಕಿನ ಮಹತ್ವದ ಘಟನೆಗಳು ಇದಕ್ಕೆ ಪ್ರೇರಕವಾಗಿರಬೇಕು. ಹುಟ್ಟು, ಹರೆಯ,

ಮದುವೆ, ಸಾವು ಮುಂತಾದ ಪ್ರಾಕೃತಿಕ ಸಹಜ ಪ್ರಸಂಗಗಳಲ್ಲಿ ಮಾನವನು, ನೃತ್ಯದ ಪರಿಗಳನ್ನು ವೈವಿಧ್ಯಮವಾಗಿ ಅಳವಡಿಸಿಕೊಂಡಿದ್ದಾನೆ. ಅಲ್ಲದೇ ಮೂರ್ತಿ ಪೂಜೆ, ರೋಗಗಳನ್ನು ಗುಣಪಡಿಸುವುದು, ಪಿಶಾಚಿಗಳನ್ನು ಬಿಡಿಸುವುದು ಮುಂತಾದ ಸಂದರ್ಭಗಳಲ್ಲಿ ನಡೆಸುವ ಕ್ರಿಯಾ ಪರಂಪರೆಗಳು ನೃತ್ಯರೂಪವೇ ಆಗಿದೆ.

''ಸಂವೇದನೆಗಳಿಗೆ, ಭಾವನೆಗಳಿಗೆ ಅನುಗುಣವಾಗಿ ಉಂಟಾಗುವ ದೇಹದ ಲಯಬದ್ಧವಾದ ಚಲನೆಯೇ ನೃತ್ಯದ ಮೂಲ ಇದು ಮನುಷ್ಯನಲ್ಲಿ ಮಾತ್ರವಲ್ಲದೇ ಪ್ರಾಣಿಗಳಲ್ಲಿಯೂ ಕಂಡುಬರುವ ಸಹಜ ಪ್ರವೃತ್ತಿ. ಆಯಾ ಆದಿವಾಸಿ ಜನಾಂಗಗಳ ಸಾಂಸ್ಕೃತಿಕ ಬದುಕಿನ ಕುರುಹಾಗಿರುವ ನೃತ್ಯವು ಎಲ್ಲಾ ಬುಡಕಟ್ಟು ಜನಾಂಗಗಳಲ್ಲಿ ಪ್ರಮುಖವಾದ ಅಂಶವಾಗಿದೆ. ತಮ್ಮ ನಿತ್ಯದ ಜಂಜಾಟವನ್ನು ಪರಿಹರಿಸಿಕೊಳ್ಳಲು ಈ ಜನರು ನೃತ್ಯದ ಮೊರೆ ಹೋಗುತ್ತಿದ್ದರು. ದೇವರನ್ನು ಒಲಿಸಿಕೊಳ್ಳಲು ನಿಸರ್ಗದ ನೇರವನ್ನು ಪಡೆದುಕೊಳ್ಳಲು, ಪ್ರಕೃತಿ ಪ್ರಕೋಪವನ್ನು ತಡೆದುಕೊಳ್ಳಲು ಪ್ರಾರ್ಥನೆ, ಸಂಗೀತ ನೃತ್ಯಗಳು ಮಾಧ್ಯಮವಾದವು.''[೨]

''ಈ ನೃತ್ಯ ಕಲೆಗಳು ಪ್ರಾದೇಶಿಕ ಹಾಗೂ ಜನಾಂಗೀಯ ವೈವಿಧ್ಯತೆಯಿಂದ ಕೂಡಿದ್ದು, ಹವಾಗುಣ, ಭೌಗೋಳಿಕ ಸ್ಥಿತಿಗತಿ, ಜನಾಂಗದ ಮನೋಧರ್ಮ, ಇವುಗಳನ್ನು ಅವಲಂಬಿಸಿದೆ. ಈ ನೃತ್ಯ ಕಲೆಯನ್ನು ಕುರಿತು ಮನುಷ್ಯ ತನ್ನಲ್ಲಿ ಅಡಿಗಿಸಿಕೊಂಡಿರುವ ಅವ್ಯಕ್ತ ಭಾವನೆಯನ್ನು ವಿಚಾರಗಳನ್ನು, ಸೃಷ್ಟಿಪಡಿಸುವುದಕ್ಕಾಗಿ ಈ ದೈಹಿಕ ಕ್ರಿಯೆಯನ್ನು(ನರ್ತನ) ಲಯಬದ್ಧವಾದ ರೀತಿಯಲ್ಲಿ ಹೊರ ಚೆಲ್ಲಿಪಾ, ಗತ್ತುಗಳೊಂದಿಗೆ ಮೈಮನ ತಣಿಸುವ ಕತೆಯೇ ನೃತ್ಯ ಕಲೆ.

ಸಂಪ್ರದಾಯ ನಿಷ್ಠುರರು, ರಸಿಕ ಪ್ರವೃತ್ತಿಯವರು ಆದ ಲಂಬಾಣಿಗಳ ನೃತ್ಯವು ಆಕರ್ಷಣೀಯವೂ, ವೈಶಿಷ್ಟ್ಯಪೂರ್ಣವೂ ಆಗಿರುತ್ತದೆ. ಇವರಲ್ಲಿ ಸ್ತ್ರೀ-ಪುರುಷರು ಪ್ರತ್ಯೇಕ ಗುಂಪುಗಳಾಗಿ ನರ್ತಿಸುವ ಪದ್ಧತಿ ಇದೆ.

ಲಂಬಾಣಿಗರಲ್ಲಿ ಸ್ತ್ರೀಯರಿಗೆ ಪುರುಷರಿಗಿಂತ ನೃತ್ಯದಲ್ಲಿ ಹೆಚ್ಚಿನ ಆಸಕ್ತಿ. ಸಂಪ್ರದಾಯ ನಿಷ್ಠುರರಾಗಿರುವ ಇವರು ದೇವರು ಧರ್ಮಗಳಲ್ಲಿ ಅಪಾರ ನಂಬಿಕೆಯುಳ್ಳವರು, ಹಬ್ಬ ಹರಿದಿನಗಳಲ್ಲಿ ದೇವಸ್ಥಾನದ ಮುಂದೆ ಸೇರಿ ದೇವರಿಗೆ ಪ್ರೀತಿಯಾಗುವ ರೀತಿಯಲ್ಲಿ ನರ್ತಿಸುತ್ತಾರೆ. ಧಾರ್ಮಿಕ ಉದ್ದೇಶಕ್ಕಾಗಿ ನರ್ತಿಸುವ ಈ ನೃತ್ಯಗಳು ಸಾಂಪ್ರದಾಯಿಕ ನೃತ್ಯಗಳಾಗಿರುತ್ತವೆ. ಇವು ಸರಳ ಹಾಗೂ ಕಲಾತ್ಮಕವಾಗಿದ್ದು ನೋಡುವವರಿಗೆ ಅತ್ಯಾಕರ್ಷಣೀಯವಾಗಿರುತ್ತದೆ. ಹತ್ತಾರು ಮಹಿಳೆಯರು ಕೈ ಕೈ ಹಿಡಿದುಕೊಂಡು ತಮ್ಮಲ್ಲಿಯೇ ವರ್ತುಲವನ್ನು ರಚಿಸಿಕೊಂಡು ನರ್ತನವನ್ನಾರಂಭಿಸುತ್ತಾರೆ. ಇದು ''ಜನರು ಒಗ್ಗಟ್ಟಿನ ಸಂಕೇತ ಸುತ್ತು ಸಾಲು ಅವರ ಸಂಸ್ಕೃತಿ ಸಂಪ್ರದಾಯಗಳಿಗೆ ಹಾಕಿದ ಸುತ್ತ ಬೇಲಿ, ಆ ಬೇಲಿ ದಾಟುವುದು ಅಷ್ಟು ಸುಲಭದ ಮಾತಲ್ಲ'' ಎಂಬ ವಿಶೇಷ ಅರ್ಥವನ್ನು ವರ್ತುಲವು ಒಳಗೊಂಡಿದೆ.

ಮೂಲತಃ ವಲಸೆ ಪ್ರವೃತ್ತಿಯವರಾದ ಲಂಬಾಣಿಗರು ವ್ಯಾಪಾರಕ್ಕಾಗಿ ಊರಿಂದೂರಿಗೆ ಅಲೆದಾಡಬೇಕಾಗಿತ್ತು. ಆ ದಿನಗಳಲ್ಲಿ ಗ್ರಾಮಗಳ ಹೊರವಲಯದಲ್ಲಿ ಕಾಡಿನ ಅಂಚಿನಲ್ಲಿ ತಾತ್ಕಾಲಿಕ

ಬಿಡಾರಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ತಾವು ಬೀಡುಬಿಟ್ಟ ಗುಡ್ಡಗಾಡು ಪ್ರದೇಶಗಳಲ್ಲಿ ನೃತ್ಯಕ್ಕೆ ಪ್ರತ್ಯೇಕ ರಂಗಸಜ್ಜಿಕೆಯನ್ನು ಸಿದ್ಧಪಡಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಕಲ್ಲು-ಮುಳ್ಳುಗಳಿಂದಾವೃತ್ತವಾದ ಸ್ಥಳದಲ್ಲಿ ನರ್ತಿಸುವುದು ಅನಿವಾರ್ಯವಿತ್ತು. ಅಂತಹ ಸಂದರ್ಭದಲ್ಲಿ ವೃತ್ತಾಕಾರದಲ್ಲಿ ಮಂದಗತಿಯಲ್ಲಿ ನರ್ತಿಸುವ ವಿಧಾನ ಸುರಕ್ಷಿತವಾಗಿರುವುದರಿಂದ ಈ ವಿಧಾನವನ್ನು ಅಳವಡಿಸಿಕೊಂಡಿರಬೇಕು.

ಪ್ರಕೃತಿಯನ್ನು ತಮ್ಮ ಜೀವನದ ಒಡನಾಡಿಯನ್ನಾಗಿಸಿಕೊಂಡಿರುವ ಲಂಬಾಣಿಗರ ನೃತ್ಯದ ಮೇಲೆ ನಿಸರ್ಗದ ಪ್ರೇರಣೆ ಆಗಿರಲು ಸಾಧ್ಯವಿದೆ. ''ವ್ಯಕ್ತ ಮತ್ತು ನೇರ ಸಾಲಿನಲ್ಲಿ ನರ್ತಿಸುವ ಮಾದರಿಗಳು ಬಳ್ಳಾರಿ ಜಿಲ್ಲೆಯ ಎಲ್ಲಾ ತಾಂಡಗಳಲೂ ಈಗಲೂ ಈ ನೃತ್ಯ ಪದ್ಧತಿಯೂ ಇದೆ. ಈ ಮಾದರಿಗಳೂ ಸಹ ನಿಸರ್ಗದ ಮರಗಿಡಗಳ ಮೂಲವನ್ನು ಸಂಕೇತಿಸುತ್ತದೆ'' ಲಂಬಾಣಿಗಳ ವೃತ್ತಾಕಾರದ ನರ್ತನವು ನಿಸರ್ಗದ ಮರಗಿಡಗಳನ್ನು ಭೂಮಿ-ಚಂದ್ರನ ಪರಿಭ್ರಮಣೆಯ ಸೂಚಕವಾಗಿರಬಹುದು.[೧೩]

ಉತ್ತರ ಕರ್ನಾಟಕದ ಲಂಬಾಣಿ ಸ್ತ್ರೀಯರಲ್ಲಿ ಕೋಲಾಟವು ಹೆಚ್ಚು ಪ್ರಸಿದ್ಧವಾಗಿದೆ. ಹೋಲಿ ಮತ್ತು ತೀಜ್ ಹಬ್ಬಗಳಲ್ಲಿ ಕೋಲಾಟವನ್ನು ಹೆಚ್ಚಾಗಿ ಕಾಣಬಹುದು. ಸ್ತ್ರೀಯರು ಗುಂಪು ಗುಂಪಾಗಿ ಕೈಯಲ್ಲಿ ಕೋಲುಗಳನ್ನು ಹಿಡಿದುಕೊಂಡು ಹಾಡಿನೊಂದಿಗೆ ತಾಳಬದ್ಧವಾಗಿ ನರ್ತಿಸುತ್ತಾರೆ. ಕೋಲಾಟದ ಹಾಡು ಅವರದೇ ಆದ ದಾಟಿಯಲ್ಲಿ ವಿಶಿಷ್ಟಗತಿಯಲ್ಲಿ ಮೂಡಿಬರುತ್ತದೆ. ಈ ಕುಣಿತವು ನೋಡುಗರಿಗೆ ಅತ್ಯಂತ ಆಕರ್ಷಣೆಯವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಂಡಗಳ ಲಂಬಾಣಿಗರು ಸೇರಿದಂತೆ ಇತರ ಜಿಲ್ಲೆಗಳಿಗೂ ಕಾಣಬಹುದು. ಹುಟ್ಟು ಕಲಾವಿದರಾದ ಲಂಬಾಣಿ ಮಹಿಳೆಯರು ನೃತ್ಯದ ವರ್ಣನೆಯನ್ನು ಗೊ.ರೊ.ಚನ್ನಬಸಪ್ಪನವರು ಹೀಗೆ ವರ್ಣಿಸಿದ್ದಾರೆ :''ಲಂಬಾಣಿ ಮಹಿಳೆಯರು ಮನತುಂಬಿ ಕುಣಿಯುವಾಗ ಕೇಳಿ ಬರುವ ಕಾಲ್ಗೆಜ್ಜೆಯ ಸದ್ದು, ಕೈಯಾಡಿಸುವಾಗ ಬರುವ ದಂತದ ಬಳೆಗಳ ಸಪ್ಪಳ ಗುಂಪು ಹಾಡುಗಾರಿಕೆಯು ಇಂಪು ದನಿ, ಬಗ್ಗಿ ಕುಣಿಯುವಾಗ ಇಳಿ ಬಿಡುವ ಮುಂಗೂದಲಿನ ಕಚ್ಚಿಗಳ ಸೊಗಸು, ಕೈಬೀಸಿ ಆಡುವಾಗ ಉಂಟಾಗುವ ಮೇಲು ಹೊದಿಕೆ ಹಾಗೂ ಕವಡೆ ಸರಕುಗಳ ಚೆಲ್ಲಾಟ, ಹಾಡಿನ ಸೊಲ್ಲು ತಪ್ಪಿದಾಗ ನಾಯಕಿಯ ಮುಖದಲ್ಲಿ ಕಾಣುವ ನಸುಗೋಪ, ಸೊಲ್ಲು ಸರಿಯಾದಾಗ ಎಲ್ಲರ ಮುಖದಲ್ಲೂ ಮಿಂಚಿನ ನಗೆ ಇವನ್ನೆಲ್ಲಾ ಪ್ರತ್ಯಕ್ಷ ಕೇಳಿ ನೋಡಿಯೇ ಅನಂದಿಸಬೇಕು. ಲಂಬಾಣಿ ಕುಣಿತದ ನೋಟದ ಸೊಬಗನ್ನು ಚಂದ್ರನ ಬೆಳಕಿನಲ್ಲಿ ಅನುಭವಿಸಬೇಕು. ಒಟ್ಟಿಗೆ ಜೋಡಿಸಿದ ಗಾಜಿನ ಬಿಲ್ಲೆಗಳ ಹೊಳಪು ಇವುಗಳಲ್ಲಿ ಕಾಣುವ ಚಂದ್ರನ ಪ್ರತಿಬಿಂಬ ಕುಣಿತದ ಸೊಬಗಿಗೆ ಮೆರಗು ತಂದುಕೊಡುತ್ತದೆ''.[೧೪]

''ಲಂಬಾಣಿ ಪುರುಷರಲ್ಲಿ ಕೋಲಾಟವನ್ನು ಹೊರತುಪಡಿಸಿ ಮತ್ತೆ ಬೇರಾವ ನರ್ತನಗಳು ಕಂಡು ಬರುವುದಿಲ್ಲ. ಹೋಳಿ, ತೀಜ್, ಹಬ್ಬಗಳಂತ ವಿಶೇಷ ಸಂದರ್ಭದಲ್ಲಿ ಮಾತ್ರ ಕಾಣಬಹುದಾಗಿದೆ. ಹೋಲಿ ಹಬ್ಬದಲ್ಲಾಡುವ ಕೋಲಾಟದಲ್ಲಿ ಅಶ್ಲೀಲ ಹಾಡುಗಳು ಹೆಚ್ಚಾಗಿದ್ದು ಸರಳವಾಗಿ ಸಂಪ್ರದಾಯ ಕಥೆಗೆ ಹೆಚ್ಚು

ಒತ್ತುಕೊಟ್ಟು ಒಂದೇ ಮಾದರಿಯಲ್ಲಿ ಕೋಲುಗಳನ್ನು ಹಾಕುತ್ತಾರೆ. ಯಾವುದೇ ನವೀನ ಮಾದರಿಯ ಚಮತ್ಕಾರಗಳು ಕಂಡುಬರುವುದಿಲ್ಲ. ಆದರೆ ಇಂದಿನ ದಿನಗಳಲ್ಲಿ ಇವರ ಸಂಪ್ರದಾಯಿಕ ಕೋಲಾಟವು ತೇರುಕೋಲು, ಜಡೆಕೋಲು, ಅಂಗಡಿಕೋಲು, ಕುಕ್ಕರಗಾಲು ಕೋಲು, ಚೆಂಡಾಡುವ ಕೋಲು ಹೀಗೆ ಹತ್ತಾರು ವಿಭಿನ್ನ ಬಗೆಯ ಕೋಲಾಟಗಳನ್ನು ಜಾಣ್ಮೆಯಿಂದ ಪ್ರದರ್ಶನ ಮಾಡುತ್ತಿದ್ದಾರೆ. ಈ ಕೋಲಾಟ ಕೇವಲ ತಾಂಡವರ ಮನೋರಂಜನೆಗೆ ಮೀಸಲಾಗಿರುವ ನಗರಗಳಲ್ಲಿಯು ಪ್ರದರ್ಶನಗೊಂಡು ಮೆಚ್ಚಿಗೆ ಪಡೆಯುತ್ತಿವೆ.[೧೮]

ಲಂಬಾಣಿ ನೃತ್ಯವು ವರ್ಣವೈವಿಧ್ಯತೆಯಿಂದ ಕೂಡಿದ್ದು, ಮೈಮನ ರೋಮಾಂಚನಗೊಳಿಸುವಂತಿರುತ್ತದೆ. ಅಲ್ಲದೆ ಸಾಂಸ್ಕೃತಿಕ ಸೆಳೆತವುಳ್ಳದಾಗಿದೆ. ಇಲ್ಲಿ ಪುರುಷರಿಗಿಂತ ಮಹಿಳೆಯರ ನೃತ್ಯಗಳಲ್ಲಿ ಹೆಚ್ಚಿನ ವೈವಿಧ್ಯತೆ ಹಾಗೂ ಆಕರ್ಷಣೀಯತೆಯನ್ನು ಗುರುತಿಸಬಹುದು.

ಒಟ್ಟಾರೆಯಾಗಿ, ಬಂಜಾರ ಸಮಾಜದ ಕೇಂದ್ರಬಿಂದುವಾಗಿರುವ ಮಹಿಳೆ ಇಂದಿಗೂ ತನ್ನ ಸ್ಥಾನವನ್ನು ಪ್ರತ್ಯೇಕತೆಯನ್ನು ಕಾಪಾಡಿಕೊಂಡು ಬರುವುದರಲ್ಲಿ ಸಫಲಳಾಗಿದ್ದಾಳೆ. ಬಂಜಾರ ಎಂದರೆ ಸಾಕು ಎಲ್ಲರ ಮನದಲ್ಲಿ ಹಾದು ಹೋಗುವ ಚಿತ್ರವೆಂದರೆ ಕಸೂತಿಮಾಡುತ್ತಾ, ಕುಣಿಯುತ್ತಾ, ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಾ ಜನಗಳನ್ನು ಅವರ ಮನಸ್ಸನ್ನು ತಮ್ಮ ಕಡೆ ಸೆಳೆದಿಟ್ಟಿರುವ ಗುಂಪು. ಗುಂಪಾದ ಮಹಿಳೆಯರ ಚಿತ್ರಗಳು. ಈ ಸಮಾಜದ ಗುರುತಾಗಿ, ಸಮಾಜದ ಅಭಿವೃದ್ಧಿಗಾಗಿ ಸದಾ ಹೋರಾಟ ಮಾಡುತ್ತಿರುವ ಬಂಜಾರ ಮಹಿಳೆ, ನಿಜಕ್ಕೂ ಒಂದು ಶಕ್ತಿ ಒಂದು ತಳಹದಿ ಮತ್ತು ಒಂದು ಗುರುತಾಗಿದ್ದಾಳೆ.

**ಅಡಿಟಿಪ್ಪಣಿಗಳು**

೧. **ಬಳ್ಳಾರಿ ಜಿಲ್ಲೆಯ ಗೆಜೆಟಿಯರ್**, ೧೯೯೪

೨. ನಾಗಯ್ಯ ಜಿ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಪು.೪

೩. ಅದೇ, ಪು.೬

೪. ಸಣ್ಣರಾಮ, **ಲಂಬಾಣಿ ಸಂಸ್ಕೃತಿ**, ೧೯೯೯, ಪು.೩೯ ೪೦

೫. ಅದೇ, ಪು.೩೬

೬. ಅದೇ, ಪು.೩೯-೪೦

೭. ಚಿದಾನಂದಮೂರ್ತಿ ಎಂ., **ವಾಗಾರ್ಥ**, ೧೯೮೧, ಪು.೯೮

೮. ಡಾ.ಎನ್.ಶೇಖರ್‌ನಾಯ್ಕ, **ಕರ್ನಾಟಕದ ಲಂಬಾಣಿಗಳು**, ೨೦೦೨, ಪು.೯೦

೯. ಸಣ್ಣರಾಮ, **ಪೂರ್ವೋಕ್ತ**, ೧೯೯೯, ಪು.೩೯ ೪೦

೧೦. ಅಂಬಳಿಕೆ ಹಿರಿಯಣ್ಣ, **ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ**, ೧೯೯೯, ಪು.೨೫೬

೧೧. ಎಡ್ಗರ್ ಥರ್ಸ್ಟನ್ ಅಂಡ್ ರಂಗಚಾರ್, **ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ**, ವ್ಯಾಲ್ಯೂಂ ೪, ಮದ್ರಾಸ್, ೧೯೮೭, ಪು.೨೩೫

೧೨. ತಿಪ್ಪೇರುದ್ರಸ್ವಾಮಿ, **ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ**, ಮೈಸೂರು, ೧೯೬೮, ಪು.೬೮೬

೧೩. **ಜಾನಪದ ವಿಶ್ವಕೋಶ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೫ ೮೬, ಪು.೮೨೦

೧೪. ಗೊರೂರು ಚನ್ನಬಸವಪ್ಪ, **ಕರ್ನಾಟಕದ ಜಾನಪದ ಕಲೆಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭, ಪು.೧೫೬

೧೫. ಖಂಡೋಬಾ ಪಿ.ಕೆ., **ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ**, ೧೯೯೧, ಪು.೧೭೬

## ಅಧ್ಯಾಯ ೩

# ಲಂಬಾಣಿ ಜನಾಂಗದ ವಿಕಾಸದ ಹಾದಿ

೩.೧. ಜನಪದರಾಗಿ ಲಂಬಾಣಿಗರು

೩.೨. ಲಂಬಾಣಿ ಪದಸೃಷ್ಟಿ-ದೃಷ್ಟಿ

೩.೩. ಲಂಬಾಣಿಗರ ಆಚರಣೆಗಳು

೩.೪. ಲಂಬಾಣಿಗರ ಒಗಟ್ಟುಗಳು

೩.೫. ಲಂಬಾಣಿಗರ ಗಾದೆಗಳು

೩.೬. ಲಂಬಾಣಿಗರ ಆಹಾರಪದ್ಧತಿ

೩.೭. ಲಾವಣಿಗಳು

೩.೮. ಲಂಬಾಣಿಗರ ವೇಷ-ಭೂಷಣಗಳು

೩.೯. ಲಂಬಾಣಿಗರ ಭಾಷೆ

೩.೧೦. ಸಾಹಿತ್ಯ ಗೀತೆಗಳು, ಪಡೆನುಡಿಗಳು
ಸೇವಾಭಾಯಾ ಕಥನಕಾವ್ಯ, ಮಾಟಮಂತ್ರ

೩

# ಲಂಬಾಣಿ ಜನಾಂಗದ ವಿಕಾಸದ ಹಾದಿ

## ೩.೧. ಜನಪದರಾಗಿ ಲಂಬಾಣಿಗರು

ಕರ್ನಾಟಕದಲ್ಲಿ ಇಂದು ೩೦ಕ್ಕೂ ಹೆಚ್ಚು ವಿವಿಧ ಬುಡಕಟ್ಟುಗಳಿವೆ. ಈ ಬುಡಕಟ್ಟಿನ ಜನರು ಹೆಚ್ಚಾಗಿ ಕಾಡು ಕಣಿವೆಗಳಲ್ಲಿ ಹಳ್ಳಿಯ ಅಂಚಿನಲ್ಲಿ ಬದುಕುತ್ತಾರೆ. ಕೆಲವರು ಮಾತ್ರ ಆಧುನಿಕ ಜಗತ್ತಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಸಮಾಜದ ಮುಖ್ಯವಾಹಿನಿಗೆ ಬಾರದಿದ್ದರೂ ತಮ್ಮದೇ ಆದ ಸಂಪ್ರದಾಯ ಆಚರಣೆ-ನಂಬಿಕೆಗಳನ್ನು ರೂಢಿಸಿಕೊಂಡಿರುವ ಹಲವು ಬಡುಕಟ್ಟುಗಳಲ್ಲಿ ಲಂಬಾಣಿಗರು ಒಬ್ಬರು. ಈ ಹಿಂದೆ ಇವರನ್ನು ಗಿರಿಜನರೆಂದು ಕರೆಯುತ್ತಿದ್ದರು. ಆಗ ಗಿರಿ ಕಂದರಗಳಲ್ಲಿ ವಾಸವಾಗಿದ್ದರೂ ಸಹ ಸಂಪೂರ್ಣವಾಗಿ ಬುಡಕಟ್ಟು ಬದುಕನ್ನು ತಿರಸ್ಕರಿಸದೇ ಪಟ್ಟಣದ ಶೈಲಿಯನ್ನು ಸ್ವೀಕರಿಸದೇ ಜೀವನ ಸಾಗಿಸುತ್ತಿದ್ದರು. ಬೆಟ್ಟಗುಡ್ಡಗಳ ತಪ್ಪಲಲ್ಲಿ ಜೀವಿಸುತ್ತಿದ್ದ ತಾಂಡಗಳು ಇಂದು ಜನಸಂಖ್ಯೆ ಹೆಚ್ಚಾಗಿ ಊರು ಬೆಳೆದಂತೆಲ್ಲಾ ಊರಿನ ಮಧ್ಯಭಾಗಕ್ಕೆ ಬಂದು ನಿಂತಿದ್ದಾರೆ.

ಪಟ್ಟಣದ ಬದುಕನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳದೇ ಭಾಗಶಃ ಪಟ್ಟಣದ ಶೈಲಿಗೆ ಒಳಗಾಗುತ್ತಿದ್ದಾರೆ. ಅಂದು ತಮ್ಮದೇ ಆದ ವೇಷ-ಭೂಷಣ, ರೀತಿ-ನೀತಿಗಳನ್ನು ಅನುಸರಿಸಿಕೊಂಡೆ ಬದುಕುತ್ತಿದ್ದ ಲಂಬಾಣಿಗರ ಜೀವನ ವಿಧಾನದ ವಿಕಾಸ ಮಾರ್ಗವು ಸಾಗಿದೆ.

ಹಿಂದಿನ ತಾಂಡಾಗಳಲ್ಲಿದ್ದ ಪರಿಸ್ಥಿತಿಯು ಜಿಲ್ಲೆಯ ಹಲವು ಗ್ರಾಮಗಳಲ್ಲಿ ಸಂಪೂರ್ಣವಾಗಿ ಬದಲಾಗಿದೆ. ಇದಕ್ಕೆಲ್ಲಾ ಮೂಲ ಕಾರಣ ಲಂಬಾಣಿಗರು ಮುಖ್ಯವಾಹಿನಿಯತ್ತ ಬರುತ್ತಿರುವುದು ಪ್ರಮುಖ ಸಂಗತಿಯಾಗಿದೆ. ಆದರೂ ಕೆಲವು ಹಳ್ಳಿಗಳಲ್ಲಿ ಈಗಲೂ ತಾಂಡಾ ಸಂಸ್ಕೃತಿಯು ಕಳಚಿಕೊಂಡಿಲ್ಲ. ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಹಿಂಜರಿಯುತ್ತಿದ್ದಾರೆ. ಇದಕ್ಕೆಲ್ಲಾ ಪ್ರಮುಖ ಕಾರಣವೆಂದರೆ ವಲಸೆಗಾಗಿ ತೆರಳುವಾಗ ಮಕ್ಕಳು ಭವಿಷ್ಯತ್ತಿನ ಶೈಕ್ಷಣಿಕ ಚಟುವಟಿಕೆಗೆ ಮಹತ್ವ ನೀಡದೆ ಅವರ ಜೀವನೋಪಾಯಕ್ಕಾಗಿ ಆಸರೆಗಾಗಿ ಕರೆದೊಯ್ಯುತ್ತಿದ್ದಾರೆ. ಹೀಗೆ ವಾಸವಾಗಿರುವ ತಾಂಡಾಗಳ ಜನರ

ಮಕ್ಕಳನ್ನು ಗುರುತಿಸಿ ಸರ್ಕಾರವು ಶಿಕ್ಷಣ ನೀಡಬೇಕಾಗಿದೆ. ಆದರೂ ಒಮ್ಮೊಮ್ಮೆ ಸರ್ಕಾರದ ಯೋಜನೆಗಳ ಸದುಪಯೋಗ ಪಡೆಯದೇ ತಮ್ಮಷ್ಟಕ್ಕೆ ತಾವೇ ದೂರ ಉಳಿದುಬಿಡುವ ಪ್ರಸಂಗ ಇವರಲ್ಲಿ ಜರುಗಿವೆ.

ಲಂಬಾಣಿ ಜನಾಂಗದ ವಿಕಾಸವು ಹೇಗಾಗಿದೆ ಎಂಬುದರ ಕುರಿತು ಸೂಕ್ಷ್ಮವಾಗಿ ಅವಲೋಕಿಸಿದಾಗ ಸರ್ಕಾರದ ಸವಲತ್ತು ಸರಿಯಾಗಿ ಬಳಕೆ ಮಾಡಿಕೊಂಡಿಲ್ಲ ಎಂದು ತಿಳಿಯುತ್ತದೆ. ಅಲ್ಲದೆ ಜೊತೆಗೆ ಜನಪರ ಯೋಜನೆಗಳ ಅರಿವಿದ್ದಾಗಲೂ ಅವುಗಳ ಗೊಡವೆಗೆ ಹೋಗದೆ ಸುಮ್ಮನಿರುವ ಬಡಜನರು ಕೂಲಿಗಾಗಿ ವಲಸೆ ಹೋಗುತ್ತಿರುವುದು ಸರ್ವೆಸಾಮಾನ್ಯವಾಗಿದೆ.

ಲಂಬಾಣಿಗರಲ್ಲಿ ಉಂಟಾದ ವಿಕಾಸದ ಹಾದಿಯೂ ತುಂಬಾ ಮಹತ್ವವಾದುದಾಗಿದೆ. ಇವರ ಜೀವನದ ಬದಲಾವಣೆಯ ಪರಿಕಲ್ಪನೆಯನ್ನು ಡಾಲ್ಬನ್ ಜಾರ್ಜ್ ಎಂಬ ವಿದ್ವಾಂಸರು ಈ ರೀತಿ ಹೇಳುತ್ತಾ, ''ಸಾಗಾಣಿಕೆ ಕೆಲಸವು ಉನ್ನತಿಯಲ್ಲಿದ್ದಾಗ ಅಭಿವೃದ್ಧಿ ಇಲ್ಲದೇ ನಗದು ಆದಾಯದಲ್ಲಿ ಬೆಳವಣಿಗೆ, ಉನ್ನತ ಸ್ಥಿತಿಯಲ್ಲಿದ್ದ ಸಾಂಪ್ರದಾಯಿಕ ವೃತ್ತಿಯ ಅವನತಿಯಿಂದ ಆದಾಯ ಕಡಿಮೆಯಾದ ಸಮಯದಲ್ಲಿ ಲಂಬಾಣಿಗರು ಗುಂಪಾಗಿ ಸೇರಿ ದರೋಡೆ ನಡೆಸುವುದು ಇಲ್ಲವೇ ಕಳ್ಳಬಟ್ಟಿ ಸರಾಯಿ ತಯಾರಿಸುವುದು, ಮಾರಾಟ ಮಾಡುವುದು ಈ ಘಟನೆಗಳಿಂದ ಅವರ ಸಾಂಪ್ರದಾಯಿಕ ಬದಲಾವಣೆಯು ಕ್ಷೀಣವಾಗತೊಡಗಿತು''.[೯] ಇದರಿಂದ ಲಂಬಾಣಿ ಜನಾಂಗದ ಅಭಿವೃದ್ಧಿಗಾಗಿ ಸಾಂಪ್ರದಾಯಿಕವಾಗಿ ರೂಢಿಗೆ ತಂದುಕೊಂಡಿರುವ ಕೆಲವು ಕೆಟ್ಟ ಆಚಾರಗಳನ್ನು ಬಿಡಬೇಕು. ವೈಚಾರಿಕತೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ. ಈಗಾಗಲೇ ಸಾಮಾಜಿಕವಾಗಿಯೂ, ಶೈಕ್ಷಣಿಕವಾಗಿಯೂ ಹಾಗೂ ಆರ್ಥಿಕವಾಗಿಯೂ ದುರ್ಬಲರಾಗಿರುವ ಈ ಜನ ಸಮುದಾಯವು ಪ್ರಗತಿಯಾಗಬೇಕಾದರೆ ಸರಕಾರದ ಸೌಲಭ್ಯಗಳನ್ನು ಯುವಕರು ದೊರಕಿಸಿಕೊಡುವಂತಾಗಬೇಕು. ಆಗ ಮಾತ್ರ ಅಭಿವೃದ್ಧಿ ಸಾಧ್ಯ ಎನ್ನಬಹುದು. ಇದರೊಂದಿಗೆ ಬಹುತೇಕ ತಾಂಡಾಗಳಲ್ಲಿ ಜನಪರ ಸಂಘ-ಸಂಸ್ಥೆಗಳ ಸ್ಥಾಪನೆ ಅನಿವಾರ್ಯವಾಗಿದೆ. ಈ ರೀತಿ ಮಾಡಿದರೆ ತಾಂಡಾಗಳ ಸರ್ವಾಂಗೀಣ ಅಭಿವೃದ್ಧಿ ಸಾಧ್ಯ. ಈ ಕಾರ್ಯವನ್ನು ಪೂರೈಸಲು ಪ್ರತಿಯೊಬ್ಬ ಲಂಬಾಣಿ ಸಮುದಾಯದ ಪ್ರಜ್ಞಾವಂತ ಯುವಕರು ನಿಸ್ವಾರ್ಥಿಗಳಾಗಿ ಪರಿಶ್ರಮವಹಿಸಬೇಕಾಗಿದೆ. ಈ ಕಾರಣಕ್ಕಾಗಿಯೇ ಹಿರಿಯ ವಿದ್ವಾಂಸರೊಬ್ಬರ ಹೇಳಿರುವಂತೆ ಸಮಾಜದಲ್ಲಿ ಒಂದು ಸಂಸ್ಕೃತಿ ನಾಶವಾದರೆ ಇಡೀ ಜನಾಂಗವೇ ನಾಶವಾದಂತೆ ಎಂಬುದು ಸರ್ವ ಸಮ್ಮತಿಯಾಗಿದೆ. ಇದರಿಂದ ಈ ಸಮಾಜದ ಪ್ರತಿಯೊಬ್ಬರು ತಮ್ಮ ಸಂಸ್ಕೃತಿಯಲ್ಲಿನ ಮೌಢ್ಯತೆ, ಕಂದಾಚಾರಗಳನ್ನು ತೊರೆದು ವೈಜ್ಞಾನಿಕ ಮನೋಭಾವವನ್ನು ರೂಢಿಸಿಕೊಳ್ಳಬೇಕಾಗಿರುವುದು ತುಂಬಾ ಅವಶ್ಯವಾಗಿದೆ.

ಲಂಬಾಣಿಗರು ನಿತ್ಯವೂ ಶ್ರಮಜೀವಿಗಳಾಗಿ ದುಡಿಯುತ್ತಾರೆ. ಇವರು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಒಳಗೊಂಡಿದ್ದಾರೆ. ಸ್ವಾಭಿಮಾನಿಗಳಾಗಿ ಬದುಕು ಸಾಗಿಸುವ ಇವರು ಕಷ್ಟಪಟ್ಟು ಜೀವನ ಸಾಗಿಸುವುದು ಕಂಡುಬರುತ್ತದೆ. ಸಂಪ್ರದಾಯ ಪದ್ಧತಿಯನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುವ ಲಂಬಾಣಿಗರು ಯಾವುದೇ ಮಂಗಳಕಾರ್ಯ ಜರುಗುವಾಗ ಸಾಲಮಾಡಿಯಾದರೂ ಕಾರ್ಯಕ್ರಮ ನೆರವೇರಿಸುವರು.

ಬಡತನದ ಬೇಗೆಯಲ್ಲೇ ಕಾಲ ನೂಕುತ್ತಾರೆ. ಇವರಲ್ಲಿರುವ ಕೆಟ್ಟ ಹವ್ಯಾಸವೆಂದರೆ ಮಧ್ಯಪಾನ ಸೇವನೆಯಾಗಿದೆ. ಈ ದುಶ್ಚಟಕ್ಕೆ ಬಲಿಯಾಗಿ ದುಂದು ವೆಚ್ಚ ಮಾಡುತ್ತಾರೆ. ಮಾಂಸಹಾರ, ಕುಡಿತದ ಆಸೆ ಪೂರೈಕೆ ಆದರೆ ಸಾಕು ಸ್ವರ್ಗಸುಖ ಪ್ರಾಪ್ತಿಯಾದಂತೆಯೇ ಸರಿ ಎಂದು ಭಾವಿಸುತ್ತಾರೆ.

ಯಾವುದೇ ಸಂಸ್ಕೃತಿಯು ಮುಂದುವರಿದ ಹಂತಕ್ಕೆ ವಿಕಾಸಗೊಳ್ಳುವಾಗ ಕೆಲವು ಅಸಮಾರ್ಥಗಳು ಕಂಡುಬರುತ್ತದೆ(ಗ್ರಿಟ್ಸ್, ೧೯೭೧). ಹೀಗಾಗಿ ಈ ಸಮುದಾಯದಲ್ಲಿಯ ಸಂಸ್ಕೃತಿಯು ವಿಕಾಸ ಹೊಂದಿದಾಗ ಅನೇಕ ಅಂಶಗಳು ಹೆಚ್ಚಾಗ ತೊಡಗಿದವು. ಈ ಕಾರಣಕ್ಕಾಗಿ ಸ್ಪಿಂಡ್ಲರ್ ಎಂಬ ವಿದ್ವಾಂಸರು ಸಾಮಾಜಿಕ ಆರ್ಥಿಕ ಅಭಿವೃದ್ಧಿಯಿಂದ ಲಂಬಾಣಿ ಜೀವನ ಶೈಲಿಯ ಮೇಲೆ ಉಂಟಾಗಿರಬಹುದಾದ ಪರಿಣಾಮಗಳು ಒಂದೇ ರೀತಿಯವಾಗಿಲ್ಲ. ಅವರ ವೈಯಕ್ತಿಕ, ಕುಟುಂಬ, ಸಾಮಾಜಿಕ ಗುಂಪುಗಳ, ಶೈಕ್ಷಣಿಕ ಮಟ್ಟ, ವಿಭಿನ್ನತೆ ಮುಂತಾದವುಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ ಎಂಬ ಮಾತು ಒಪ್ಪತಕ್ಕದಾಗಿದೆ.

ಹೀಗೆ ಇತರೆ ಸಂಸ್ಕೃತಿಗಳಿಗಿಂತಲೂ ತನ್ನದೇ ಆದ ಸಂಪ್ರದಾಯ ವಿಶಿಷ್ಟ ಶೈಲಿಗಳನ್ನೊಳಗೊಂಡ ಲಂಬಾಣಿ ಸಮುದಾಯವು ತನ್ನದೇ ಆದ ನಿಟ್ಟಿನಲ್ಲಿ ವಿಕಾಸವನ್ನು ಹೊಂದಿದೆ. ಈ ಹಿಂದೆ ಈ ಜನಾಂಗದ ಮೇಲೆ ಆಗಿರುವ ಶೋಷಣೆ ಇತ್ಯಾದಿ ಆರೋಪಗಳನ್ನು ಸಹಿಸಿಕೊಂಡು ಕಷ್ಟಪಟ್ಟು ಶ್ರಮ ಜೀವಿಗಳಾಗಿ ಇತರೆ ಸಮುದಾಯಗಳೊಂದಿಗೆ ಈ ಜನಾಂಗವು ದಾಪುಗಾಲು ಹಾಕುತ್ತಿರುವುದು ಸಂಗತಿಯು ತುಂಬಾ ವಿಚಿತ್ರ ಹಾಗೂ ವಿಸ್ಮಯಕರವಾದುದಾಗಿದೆ.

ಲಂಬಾಣಿ ಸಮುದಾಯವು ಮೂಲತಃ ವ್ಯಾಪಾರಿ ಮನೋಭಾವನೆಯಿಂದ ಬಂದವರಾದರೂ, ಅಲ್ಲಲ್ಲಿ ತಾಂಡಾಗಳನ್ನು ಕಟ್ಟಿಕೊಂಡು ಪ್ರತ್ಯೇಕ ಸಂಸ್ಕೃತಿ ವಿಧಾನವನ್ನು ರೂಢಿಸಿಕೊಂಡಿದ್ದಾರೆ. ಒಂದೂರಿನಿಂದ ಮತ್ತೊಂದು ಊರಿಗೆ ವಲಸೆ ಹೋದಾಗ ಅಲ್ಲಿನ ಮೌಖಿಕ ಸಾಹಿತ್ಯವನ್ನು ತಮ್ಮದಾಗಿಸಿಕೊಂಡು ಅದೇ ದಾಟಿಯಲ್ಲಿ ತಮ್ಮ ಭಾಷೆಗೆ ಅನುಗುಣವಾಗಿ ರಚನೆ ಮಾಡಿ ಆರಾಧನೆ ಮಾಡಿದ ಅಪರೂಪದ ಘಟನೆಯು ಜರುಗಿದವು.

ಕಾಡು-ಮೇಡು ಸುತ್ತಿದ ಅನುಭವದಿಂದ ಮೌಖಿಕ ಸಾಹಿತ್ಯವನ್ನು ಬಲಸಂವೃದ್ಧಿಗಾಗಿ ತಮ್ಮನ್ನು ತೊಡಗಿಸಿಕೊಂಡರು. ಮನೆಯ ಯಜಮಾನನು ವ್ಯಾಪಾರಕ್ಕೆ ಹೋದಾಗ ತಮ್ಮ ಪೂರ್ವಜರು ಹಾಡುತ್ತಾ ಬಂದರು. ಜನಪದ ಸಾಹಿತ್ಯದ ಹಲವು ಪ್ರಕಾರಗಳನ್ನು ಮನದಲ್ಲೇ ಹುದುಗಿಸಿಕೊಂಡರು. ಅಲ್ಲದೆ ಸಂದರ್ಭಗಳು ಬಂದಾಗ ಜನಪದ ಹಾಡುಗಳನ್ನು ಮನದುಂಬಿ ಹಾಡುತ್ತಾ ಹೋದರು. ಬೇರೆ ಬೇರೆ ಕಡೆ ಸಂಚಾರಕ್ಕೆ ಹೋದಾಗ ಅಲ್ಲಿನ ಜನಪದ ಸಾಹಿತ್ಯವನ್ನು ಅರಗಿಸಿಕೊಂಡು ಬಂದು ತಮ್ಮ ಬಂಜಾರ ಭಾಷೆಯಾದ 'ಗೋರಬೋಲಿ'ಯಲ್ಲಿ ಜನಪದ ಸಾಹಿತ್ಯದ ಹಾಡುಗಳನ್ನು ಹಾಡ ತೊಡಗಿದರು. ಹೀಗೆ ಲಂಬಾಣಿಗರ ಮೌಖಿಕ ಸಾಹಿತ್ಯದಲ್ಲಿ ಹಲವು ಭಾಷೆಗಳ ಸಂಗಮವಾಗಿರುವುದನ್ನು ನಾವು ಮನಗಾಣಬಹುದಾಗಿದೆ.

ಲಂಬಾಣಿಗರು ತಮ್ಮ ಬದುಕಿನ ಅಂತರಾಳದಲ್ಲಿ ಜನಪದ ಸಾಹಿತ್ಯದ ಕಥೆಗಳು, ಒಗಟುಗಳು, ಗೀತೆಗಳು, ಲಾವಣಿಗಳು, ಗಾದೆಗಳು, ನುಡಿಗಟ್ಟುಗಳು, ಕೊಸಳಾತ್‌ಗಳು ಕಾಣಸಿಗುತ್ತವೆ. ಲಂಬಾಣಿಗರು ತಮ್ಮ ಹಬ್ಬ ಹರಿದಿನ, ಸಾಂಸ್ಕೃತಿಕ ಕಾರ್ಯಗಳನ್ನು ಮಾಡುವಾಗ ತಮ್ಮ ಬದುಕಿನ ಅನುಭವಗಳನ್ನು ಹಾಡಿನ ರೂಪದಲ್ಲಿ ಹಾಡುತ್ತಿರುವುದು ಕ್ಷೇತ್ರ ಅಧ್ಯಯನದಿಂದ ತಿಳಿದುಬಂದ ಸಂಗತಿಯಾಗಿದೆ.

ಜನಪದ ಸಾಹಿತ್ಯದಲ್ಲಿ ಪ್ರಮುಖವಾದುದು ಕಥಾ ಸಾಹಿತ್ಯ. ಲಂಬಾಣಿ ಜನ ಸಮುದಾಯದಲ್ಲಿ ಅದರಲ್ಲೂ ತಾಂಡಾಗಳಲ್ಲಿ ಜನಪದರು ಹತ್ತು ಹಲವು ವೀರ ನಾಯಕರ, ದೇವತಗಳ ಬಗ್ಗೆ ಕಥೆಗಳನ್ನು ಹೇಳುವುದು ವಾಡಿಕೆಯಾಗಿದೆ. ಈ ಕಥಾ ಪ್ರಕಾರವನ್ನು ಲಂಬಾಣಿ ಭಾಷೆಯಲ್ಲಿ 'ಸಾಕಿ' ಎನ್ನುವರು. ಈ ಕಥನ ಹಂದರಲ್ಲಿ ಲಂಬಾಣಿಗರು ಬಿಚ್ಚಿಟ್ಟ ಬುಡಕಟ್ಟು ಜನರ ಮೂಲ ಹಾಗೂ ಅವರ ಕಸುಬಿನ ವಿಚಾರವಾಗಿಯೂ ಮತ್ತು ಕುಲದೇವತೆಯ ಚಿತ್ರಣದ ವಿವರವನ್ನೊಳಗೊಂಡ ಕಥೆಗಳು ಲಂಬಾಣಿ ಸಮುದಾಯದಲ್ಲಿ ಹುದುಗಿವೆ. ಅವಕ್ಕೆ ರೂಪುಕೊಟ್ಟವರು ಬಂಜಾರ ಜನಾಂಗದ ಮಹಿಳೆಯರೆಂದರೆ ತಪ್ಪಾಗಲಿಕ್ಕಿಲ್ಲ. ಇವುಗಳೊಂದಿಗೆ ಸೃಷ್ಟಿ, ಸ್ಥಿತಿ, ಲಯಕ್ಕೆ ಸಂಬಂಧಪಟ್ಟ ಕಥೆಗಳನ್ನು ತುಂಬಾ ಮನೋಜ್ಞವಾಗಿ ಹೇಳುವುದನ್ನು ಲಂಬಾಣಿಗರು ರೂಢಿಸಿಕೊಂಡಿದ್ದಾರೆ.

ಲಂಬಾಣಿಗರ ಕುಲದೇವತೆಗಳಾದ ಮಾರಿಯಮ್ಮ, ಸೇವಾಭಾಯಿ, ಮೀಟುಭುಕ್ಯಾ, ಸಾತೀಸತ್ತಿ ನಾನುಸಾದ್ , ಲಿಂಗಮಸಾದ್ ಹಾಗೂ ಸೂರ್‌ಸಾದ್ ರವರುಗಳ ಜೀವನ ಚರಿತ್ರೆಯನ್ನು ಕಥಾರೂಪದಲ್ಲಿ ತಿಳಿಸಿಕೊಡುತ್ತಾರೆ. ಈ ರೀತಿಯ ಜನಪದ ಕಥಾಹಂದರವನ್ನು ಲಂಬಾಣಿ ಸಮುದಾಯದಲ್ಲಿರುವ 'ಢಾಡಿಗಳು' ಮನಕ್ಕೆ ಮುಟ್ಟುವ ಹಾಗೆ ತಿಳಿಸುತ್ತಾರೆ. ವೃತ್ತಿಗಾಯಕರಾದ ಢಾಡಿಗಳು ತಾಂಡಾಗಳಿಗೆ ತೆರಳಿ ಅಲ್ಲಿಯ ನಾಯಕನನ್ನು ಭೇಟಿಯಾಗಿ ಕಥೆ ಇಲ್ಲವೆ ಗೀತೆಗಳ ರೂಪದಲ್ಲಿ ಹಾಡಿ ಜನರನ್ನು ರಂಜಿಸುವ ಕೆಲಸವನ್ನು ಮಾಡುತ್ತಾರೆ. ಇವರಿಗೆ ಸೂಕ್ತ ರೀತಿಯಲ್ಲಿ ಹಣ ಇಲ್ಲವೇ ಧಾನ್ಯದ ರೂಪದಲ್ಲಿ ಕಾಣಿಕೆ ನೀಡುವ ಸಂಪ್ರದಾಯ ಈಗಲೂ ಇದೆ.

''ಲಂಬಾಣಿಗರ ಸಾಂಸ್ಕೃತಿಕ ಪರಂಪರೆಯ ಮೂಲ ತಿರುಳು ಗೀತೆಗಳಲ್ಲಿ ಅಡಗಿದೆ ಎಂದು ಗಂಗಾನಾಯ್ಕುರವರು ತಿಳಿಸುತ್ತಾರೆ.[೪] ಬಹುತೇಕ ಸಮಾಜದಲ್ಲಿ ಆಯಾ ಜನಾಂಗದ ಜನಪದರು ಹಾಡುವ ಹಾಡುಗಳು ಜನಪದ ಗೀತೆಗಳಾಗಿವೆ. ಶ್ರೀ ಕೃಷ್ಣನ ಬಾಯಲ್ಲಿ ಬ್ರಹ್ಮಾಂಡ ಅಡಗಿದಂತೆ'' ಜನಪದ ನಾಯಕರ ಗೀತೆಗಳಲ್ಲಿ ಆಯಾ ಜನಾಂಗದ ಸಾಂಸ್ಕೃತಿಕ ಮಹತ್ವವು ಅಡಗಿರುತ್ತದೆ. ಲಂಬಾಣಿಗರಲ್ಲಿಯೂ ಸಹ ಅಪಾರವಾದ ಜನಪದ ಗೀತೆಗಳ ಸಂಪತ್ತೇ ಅಡಗಿದೆ. ಬಂಜಾರ ಗಾಯಕರು ಮಂಗಲ ಕಾರ್ಯಗಳಾದ ಮದುವೆ, ಸೋಬಾನೆ, ತೊಟ್ಟಿಲು ಶಾಸ್ತ್ರ, ಹಬ್ಬ ಹರಿದಿನಗಳಲ್ಲಿ ತುಂಬಾ ಸುಶ್ರಾವ್ಯವಾಗಿ ಹಿಮ್ಮೇಳಿಗರೊಂದಿಗೆ ಗೀತೆಗಳನ್ನು ಹಾಡುತ್ತಾರೆ.

ಈ ರೀತಿಯಾಗಿ ಹಾಡಿದ ಗೀತೆಗಳು ತುಂಬಾ ಸುಶ್ರಾವ್ಯವಾಗಿ ಬದುಕಿನ ತವಕ ತಲ್ಲಣಗಳು ಹಾಗೂ ವಿಸ್ಮಯಕರವಾದ ಪ್ರಸಂಗಗಳನ್ನು ತಿಳಿಸುತ್ತವೆ. ಹಲವು ಹಬ್ಬಗಳಲ್ಲಿ ವಿಶೇಷವಾಗಿ ಜಿಲ್ಲೆಯ ಹೊಸಪೇಟೆ

ಪಟ್ಟಣದ ಪ್ರಭಾವಕ್ಕೆ ಒಳಗಾದರೂ ಸಹ ರಂಗುರಂಗಿನ ವೇಷತೊಟ್ಟು ಮಹಿಳೆಯರು ಕಾಮದಹನ ಹಾಗೂ ದೀಪಾವಾಳಿ ಸಂದರ್ಭದಲ್ಲಿ ಹಾಡುಗಳನ್ನು ಹಾಡಿ ಮನ ತಣಿಸುವರು. ಜಿಲ್ಲೆಯ ಬಹುತೇಕ ತಾಂಡಾಗಳಲ್ಲಿರುವ ಲಂಬಾಣಿ ಮಹಿಳೆಯರು ಈ ರೀತಿಯ ಗೀತೆಗಳನ್ನು ಭಾವತನ್ಮಯರಾಗಿ ವಾದ್ಯದ ಗತ್ತಿಗೆ ತಕ್ಕಂತೆ ನರ್ತಿಸುತ್ತಾ ಹಾಡುವುದು ಕಾಣಸಿಗುತ್ತದೆ.

ಇದೇ ರೀತಿಯಾಗಿ ಜನಪದ ಸಾಹಿತ್ಯದ ಒಗಟು, ಒಡಪು, ಗಾದೆ, ಕೊಸ್ಕವಾತ್, ನುಡಿಗಟ್ಟುಗಳನ್ನು ಲಂಬಾಣಿ ಮಹಿಳೆಯರಷ್ಟೇ ಅಲ್ಲ ಪುರುಷರೂ ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ತಮ್ಮ ಜಾಣ್ಮೆ ಎಷ್ಟೆಂದು ತೋರಿಸುವುದುಂಟು. ಈ ಕಾರಣಕ್ಕಾಗಿ ಕೇವಲ ಸಂಚಾರಿಗಳಾಗಿ ಒಂದು ಊರಿಂದ ಮತ್ತೊಂದು ಊರಿಗೆ ವ್ಯಾಪಾರಕ್ಕಾಗಿ ಅಲೆಯುವ ಲಂಬಾಣಿಗರು ಅಗಾಧವಾದ ಜನಪದ ಸಾಹಿತ್ಯವನ್ನು ಬಲ್ಲವರಾಗಿದ್ದಾರೆ. ಇದರಿಂದ ಲಂಬಾಣಿಗರು ಜನಪದರಾಗಿ ತಮ್ಮದೇ ಸ್ಥಾನವನ್ನು ಪಡೆದುಕೊಂಡಿದ್ದಾರೆ ಎನ್ನಬಹುದು.

## ೩.೨. ಲಂಬಾಣಿ ಪದ ಸೃಷ್ಟಿ-ದೃಷ್ಟಿ

ಹಿಂದೂಗಳಾದ ಲಂಬಾಣಿಗರಲ್ಲಿ ಒಂದು ಪ್ರತ್ಯೇಕ ಜಾತಿವ್ಯವಸ್ಥೆಯಿದೆ. ತಮ್ಮದೇ ಆಚಾರ ವಿಚಾರಗಳಿಂದ ಹಿಂದೂ ಸಂಸ್ಕೃತಿಗೆ ತಮ್ಮ ಕೊಡುಗೆಯನ್ನು ಸಲ್ಲಿಸಿದ್ದಾರೆ. ಬುಡಕಟ್ಟು ಜನಾಂಗದ ಜೀವನ ವಿಧಾನವನ್ನೇ ರೂಢಿಸಿಕೊಂಡಿದ್ದರೂ ಅತ್ತ ನಾಡಿನ ಸಂಸ್ಕೃತಿ ಇಲ್ಲವೇ ಕಾಡಿನ ಸಂಸ್ಕೃತಿಗೂ ಒಗ್ಗಿಕೊಳ್ಳದೇ ಜೀವನ ಸಾಗಿಸುತ್ತಿದ್ದಾರೆ. ಇತರೆ ಸಂಸ್ಕೃತಿಗಳಿಗೂ ಭಿನ್ನವಾಗಿ ಬದುಕುವ ಲಂಬಾಣಿ ಜನಾಂಗದವರನ್ನು ಭಿನ್ನ ಭಿನ್ನ ಹೆಸರುಗಳಿಂದ ಕರೆಯಲಾಗುತ್ತಿದೆ.

ಲಂಬಾಣಿ ಎಂಬ ಪದವು ಬೆಳೆದು ಬಂದ ಬಗೆಯನ್ನು ಹಲವಾರು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ಗುರುತಿಸಿದ್ದಾರೆ. 'ಲಂಬಾಣಿ' ಪದವನ್ನು ಬೇರೆ ಬೇರೆ ರಾಜ್ಯಗಳಲ್ಲಿ ಒಂದೊಂದು ತರಹದ ಹೆಸರಿನಿಂದ ಕರೆಯಲಾಗುತ್ತದೆ.

ಇಡೀ ಭಾರತದಲ್ಲಿ ಲಂಬಾಣಿ ಪದದ ಬಳಕೆಯ ಬಗ್ಗೆ ಏಕಾಭಿಪ್ರಾಯವಿಲ್ಲ. ಹಲವು ರಾಜ್ಯಗಳಲ್ಲಿ ಒಂದೊಂದು ರೀತಿಯ ಪದ ಬಳಕೆ ಮಾಡುತ್ತಿರುವುದು ಗಮನಾರ್ಹ. ಆದರೂ ಬಹುತೇಕವಾಗಿ 'ಲಂಬಾಣಿ' ಎಂಬ ಪದವೇ ತುಂಬಾ ಸೂಕ್ತವಾದ ಹೆಸರು ಎಂಬುದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಲಮಾಣಿ, ಲಂಬಾಣಿ, ಲಂಬಾಡಿ, ಬಂಜಾರ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಗುಜರಾತ್‌ನಲ್ಲಿ ಲವಣಿಯಾ, ಬಕಾಜಾರ, ಚಾರಣ, ಒರಿಸ್ಸಾದಲ್ಲಿ ಲಂಬಾಣಿ, ಬಂಜಾರ ಎಂದು ಕರೆದರೆ ರಾಜಸ್ಥಾನದಲ್ಲಿ ಲದೇಣಿಯಾ, ಗಮಳಿಯಾ, ಗಾವಲಿಯಾ, ಬಂಜಾರ್, ತಮಿಳುನಾಡಿನಲ್ಲಿ ಲಬಾಡಿ, ಸುಗಾಲಿ, ಸುಹಾಲಿ, ಉತ್ತರ ಪ್ರದೇಶದಲ್ಲಿ ಶಿರಕಿ ಬಂಜಾರ, ಶಿರಕಿವಾಲಾ, ಶಿರಕಬಂದ ಎಂದು ಕರೆಯುವರು. ಅಲ್ಲದೆ ಆಂಧ್ರ ಪ್ರದೇಶದಲ್ಲಿ ಲಂಬಾಡ, ಸುಗಾಲಿ, ಸುಕಾಲಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ವಿದೇಶದಲ್ಲೂ ಈ ಸಂಸ್ಕೃತಿಯ ಜನರನ್ನು ಸಿಂಧಿ, ರೋಮಾಸೋ, ಜಿಪ್ಸಿ ಎಂಬ ಹೆಸರು ಬಳಸಿದರೆ, ಯುಗೋಸ್ಲೋವಿಯಾದಲ್ಲಿ ಇತರೆ ದೇಶಗಳಿಗಿಂತಲೂ ಅಧಿಕ ಜನರು ವಾಸವಾಗಿದ್ದರೆಂದು ಸಂಶೋಧನೆಯಿಂದ ತಿಳಿದುಬಂದ ಅಂಶವಾಗಿದೆ.

ಈ ದೇಶದಲ್ಲಿ ಲಂಬಾಣಿ ಇಲ್ಲವೆ ಬಂಜಾರ ಜನಾಂಗದಲ್ಲಿ ೧೬ ಉಪಜಾತಿಗಳು ಹಾಗೂ ೨೭ ಪರ್ಯಾಯ ನಾಮಗಳಿರುವುದು ಕಂಡುಬರುತ್ತದೆ. ಲಂಬಾಣಿ ಪದವು ಜಾತಿಸೂಚಕವಾಗಿ ಕಂಡರೆ ಬಂಜಾರ ಅಥವಾ ಬಣಜಾರ್ ಎಂಬುದು ವರ್ತಕ ವೃತ್ತಿಯನ್ನು ಕೈಗೊಂಡ ಬಗ್ಗೆ ತಿಳಿಸುತ್ತದೆ. ಈಗ ಬಹುತೇಕವಾಗಿ ನೌಕರವರ್ಗದವರು ಹಾಗೂ ಸಂಘ-ಸಂಸ್ಥೆಯವರು ಬಂಜಾರ ಎಂಬ ಹೆಸರಿನಿಂದಲೇ ಕರೆಯಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಲಂಬಾಣಿ ಜನಾಂಗದಲ್ಲಿರುವ ೧೬ ಉಪಜಾತಿಗಳು ಈ ಕೆಳಗಿನಂತೆ ಗುರುತಿಸಬಹುದಾಗಿದೆ. ಗೋರಬಂಜಾರ, ಜೋಗಿ ಬಂಜಾರ, ಚಾರಣ ಬಂಜಾರ, ಢಾಲಿಯಾ ಬಂಜಾರ, ಡಿಗೋರ ಬಂಜಾರಾ, ಧಾಡಿ ಬಂಜಾರಾ, ಧನಕುಟೆ ಬಂಜಾರಾ, ನಾವಿಬಂಜಾರ್, ಬಾಗೋರಾ ಬಂಜಾರ್, ಬಾಮಣಿಯಾ ಬಂಜಾರಾ, ಭಾಟಿ ಬಂಜಾರ್, ಮಥುರಾಬಂಜಾರಾ, ಮಾರುಬಂಜಾರಾ, ರೋಹಿದಾಸ ಬಂಜಾರ್, ಸನಾರ ಬಂಜಾರಾ, ಸಿಂಗಾಡಿಯಾ ಬಜಾರಾ.

ಈ ಜನಾಂಗದ ಪಾರ್ಯಯ ನಾಮಗಳನ್ನು ೨೭ ರೀತಿಯಲ್ಲಿ ಕಾಣಬಹುದಾಗಿದೆ. ಈ ಪರ್ಯಾಯ ನಾಮಗಳನ್ನು ಬೇರೆ ಬೇರೆ ರಾಜ್ಯ ಹಾಗೂ ಅನ್ಯ ದೇಶದಲ್ಲಿ ಲಂಬಾಣಿ ಜನಾಂಗದವರಿಗೆ ಪರ್ಯಾಯವಾಗಿ ಬಳಸಲಾಗುತ್ತದೆ. ಅವುಗಳಲ್ಲಿ ಈ ಕೆಳಗಿನಂತಿವೆ. ಬಂಜಾರಾ, ಬಣಜಾರಾ, ಬನಜಾರಾ, ಬಂಜಾರಿ, ಬ್ರಿಂಜಾರಿ, ಬಂಜಾರೆ, ಬ್ರಜವಾಸಿ, ಲಮಾಣಿ(ಲಂಬಾಣಿ) ಲಮಾನ, ಲಂಬಾಡಾ, ಲಂಬಾಡಿ, ಲಬಾನ (ಲಬಾನಾ) ಲಭಾನ, ಲಭಾನಿ, ಲಭಾನಾ(ಲೋಭಾನಾ), ಬಳದಿಯಾ, ಲಾದೇನಿಯಾ, ಸುಗಾಲಿ, ಗವಾರ(ಗೌರಿಯಾ), ಗವಾರಿಯಾ, ಗಂವಾರಿಯಾ(ಗಮಳಿಯಾ) ಗಾವಾಲಾ, ಕಂಗಿ(ಕಂಗಸಿಯಾ) ಘಾಣದ, ಶಿರಕಿ ಬಂದ, ಶಿಂಗಾಡೆ ಬಂಜಾರಿ, ಶಿರಕಿವಾಲಾಗಳೆಂದು ಕರೆಯಲಾಗುತ್ತಿದೆ.

''ಲಂಬಾಣಿ' ಪದವು ಮೂಲತಃ ಸಂಸ್ಕೃತದಿಂದ ಬಳಸಲಾಗುತ್ತಿದೆ. ಈ ಪದವು ಲವಣ ಎಂಬ ಪದದಿಂದ ಬಂದಿದೆ ಎಂದು ತಿಳಿದುಬಂದಿದೆ. ಲವಣದ ವಿಶೇಷಣವೇ ಲಮಾಣಿಯಾಗಿರಬೇಕೆಂಬುದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಜನಸಮೂಹ ಬಹುಪೂರ್ವದಲ್ಲಿ ಲವಣ ಅಂದರೆ ಉಪ್ಪು; ಉಪ್ಪಿನ ವ್ಯಾಪಾರ ಮಾಡುತ್ತಿದ್ದರಿಂದ ಲವಣಿಗರು ಎಂದು ಕರೆಯುತ್ತಿದ್ದರು. ಈಚೆಗೆ ಈ ಜನಾಂಗದವರನ್ನು ಬಂಜಾರ ಲಮಾಣಿಗರು, ಲಂಬಾಣಿಗರು ಅಥವಾ ಲಂಬಾಡಿಗಳೆಂದು ಕರೆಯಲಾಗುತ್ತಿದೆ. ಇದರೊಂದಿಗೆ ಬಳದ್ ಎಂಬ ಪದಕ್ಕೆ ಎತ್ತುಗಳು ಎಂದು ಕರೆಯುವರು. ಇದರಿಂದ ಬಳದಿಯಾ ಎಂಬ ಪದವು ಸಹ ಈ ಜನಾಂಗಕ್ಕೆ ಸೂಕ್ತ ಬಳಕೆ ಪದವಾಗಿದೆ. ಏಕೆಂದರೆ ಆಗ ಈ ಜನರು ಎತ್ತುಗಳ ಮೇಲೆ ಧವಸ ಧಾನ್ಯ ಇಲ್ಲವೇ ಲವಣವನ್ನು ಹೇರಿಕೊಂಡು ಹೋಗುತ್ತಿದ್ದುದರಿಂದಲೇ ಇವರನ್ನು ಬಳದಿಯಾ, ಬಲಾಡ್ಯಾ ಎಂಬ ಹೆಸರಿನಿಂದ ಕರೆದಿರಬಹುದೆಂದು ತಿಳಿದು ಬರುತ್ತದೆ. ಇದೇ ರೀತಿ ಬಂಜಾರಾ ಎಂಬ ಪದದ ನಿಷ್ಪತ್ತಿಯೂ ಈ ರೀತಿ ಆಗಿರಬಹುದು. ವಣಜ ಧಾನ್ಯ. ಈಗ ಬಳಸುವ ವಾಣಿಜ್ಯ ಎಂಬ ಪದವೂ ಸಹ ಸಂಸ್ಕೃತ

ಪದದಿಂದಲೇ ಬಂದಿದೆ. ಈ ಪದ ಪ್ರಾಂತೀಯ ಭಾಷೆಗೆ ಅಪಭ್ರಂಶವಾಗಿಯೂ ಬಳಕೆಯಾಗಿದೆ ಎನಿಸುತ್ತದೆ. ರಾಜಸ್ಥಾನೀಗಳು ಬನಜಾರಾ ಎಂದರೆ ಗುಜರಾತಿಗಳು ವನಜಾರಾ, ಉರ್ದುವಿನಲ್ಲಿ ಬನಚಾರೆ ಹಾಗೂ ಮರಾಠಿಯಲ್ಲಿ ಬಂಜಾರಿ ಎಂಬುದಾಗಿ ಬಳಸಲಾಗುತ್ತಿದೆ. ಆದ್ದರಿಂದ ಇದೊಂದು ವ್ಯಾಪಾರ ದೃಷ್ಟಿಯಿಂದ ಇಂಥಾ ಪದಗಳನ್ನು ಬಂಜಾರ ಎಂಬ ಪದವು ಈ ರೀತಿ ನಿಷ್ಪತ್ತಿಯಾಗಿರಬಹುದು. ವನಚರ>ವನಜಾರ> ಬನಜಾರ>ಬನಜಾರಾ>ಬಣಜಾರ>ಬಂಜಾರ ಎಂಬುದಾಗಿ ಬಳಕೆಯಾಗಿರಬೇಕೆಂದು ತಿಳಿದುಬಂದಿದೆ.[೩]

ಈ ಹಿಂದೆ ರಾಜರ ಆಳ್ವಿಕೆಯಲ್ಲಿ ವ್ಯಾಪಾರಗಾರರಾಗಿ ಅನೇಕ ಶ್ರಮದಾಯಕವಾದ ಕಾರ್ಯಗಳನ್ನು ಪೂರೈಸಿ ರಾಜರಿಂದ ಮನ್ನಣೆಗೆ ಪಾತ್ರರಾದ ಇವರನ್ನು ಅಂದು ಹೆಚ್ಚಾಗಿ ಲಂಬಾಣಿಗರೆಂದೆ ಕರೆಯಲಾಗುತ್ತಿತ್ತು. ಇತ್ತೀಚೆಗೆ ಈ ಜನಾಂಗದ ಅಭಿವೃದ್ಧಿಗಾಗಿ ಬಹುತೇಕರು ಲಂಬಾಣಿ ಪದ ಬಳಸುವುದಕ್ಕೆ ಉತ್ತಮ ಸ್ಪಂದನೆ ನೀಡುತ್ತಿಲ್ಲ. ಈಗ ಹಿಂದಿನ ಪದವಾದ ಬಂಜಾರ ಪದವನ್ನೇ ಅತಿ ಹೆಚ್ಚಾಗಿ ಬಳಸುವುದು ಕಾಣಸಿಗುತ್ತದೆ. ಏನೇ ಆಗಲೀ ಸರ್ಕಾರದ ಸವಲತ್ತುಗಳನ್ನು ದೊರಕಿಸಿಕೊಡುವಲ್ಲಿ ಸಂಘಸಂಸ್ಥೆಗಳು ಜನಪರ ಕಾರ್ಯಕ್ರಮಗಳನ್ನು ಹಾಕಿಕೊಂಡು ಸಮಾಜದ ಮುಖ್ಯವಾಹಿನಿಗೆ ಕೊಂಡೊಯ್ಯಬೇಕಾದುದು ಅನಿವಾರ್ಯವಾಗಿ ಆಗಬೇಕಾಗಿದೆ. ಈ ಕೆಲಸಕ್ಕೆ ಜನಾಂಗದ ಎಲ್ಲರ ಸಹಕಾರವೂ ಅಗತ್ಯವಾದದ್ದಾಗಿದೆ.

### ೩.೩. ಲಂಬಾಣಿಗರ ಆಚರಣೆಗಳು

ಯಾವುದೇ ಸಮುದಾಯ ಅಥವಾ ಜನಾಂಗವಾಗಲೀ ಅವರು ಆಚರಿಸುವ ಆಚರಣೆಗಳು ತುಂಬಾ ಮುಖ್ಯವಾಗಿರುತ್ತವೆ. ಆಚರಣೆಗಳು ಇಂದು ನಿನ್ನೆಯವಲ್ಲ. ಸಂಪ್ರದಾಯ ಬದ್ಧವಾಗಿ ಅನೋಪಚಾರಿಯಾಗಿ ರೂಢಿಸಿಕೊಂಡು ಬಂದವುಗಳಾಗಿವೆ. ಆಚರಣೆಗಳು ಆಯಾ ಸಂಸ್ಕೃತಿಗೆ ಹಿಡಿದ ಕನ್ನಡಿಗಳಂತೆ ಪರಿಣಮಿಸಿರುತ್ತವೆ. ಆಚರಣೆಗಳಿಲ್ಲದ ಜನಾಂಗವೇ ಇಲ್ಲ ಎನ್ನಬಹುದು.

ಆಚರಣೆ ಎಂಬ ಪದವನ್ನು(Ritued)ಗೆ ಸಂವಾದಿಯಾಗಿ ಬಳಸಲಾಗುತ್ತದೆ. ಹುಟ್ಟಿನಿಂದ ಹಿಡಿದು ಸಾಯುವವರೆಗೆ ಆಚರಿಸುವ ಮತ್ತು ದೈವಾರಾಧನೆಯ ವೇಳೆ ಆಚರಿಸುವ ಆಚರಣೆಗಳಿಗೆ ತನ್ನದೇ ಮಹತ್ವವಿದೆ. ಇವುಗಳನ್ನು ಅಧ್ಯಯನಕ್ಕಾಗಿ ೧. ಸಾಮಾಜಿಕ ಆಚರಣೆ, ೨. ಧಾರ್ಮಿಕ ಆಚರಣೆಗಳಾಗಿ ವಿಂಗಡಿಸಿ ಅದರ ಮಹತ್ವವನ್ನು ತಿಳಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ. ಸಾಮಾಜಿಕ ಆಚರಣೆಗಳಿಗೂ ಧಾರ್ಮಿಕ ಆಚರಣೆಗೂ ಒಂದಕ್ಕೊಂದು ಭಿನ್ನವಾಗಿವೆ. ಈ ಜನಾಂಗದಲ್ಲಿ ತುಂಬಾ ವಿಶಿಷ್ಟವಾಗಿ ಇತರೆ ಜನಾಂಗದವರಿಗಿಂತಲೂ ತುಂಬಾ ವೈಶಿಷ್ಟ್ಯಪೂರ್ಣವಾಗಿ ಆಚರಿಸುವುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದ ಸಂಗತಿಯಾಗಿದೆ.

ಲಂಬಾಣಿ ಜನಾಂಗದ ಸಾಮಾಜಿಕ ಸ್ಥಿತ್ಯಂತರಗಳನ್ನು ತಿಳಿಸುವಾಗ ಸೂಕ್ಷ್ಮವಾಗಿ ದೈನಂದಿನ ಆಚರಣೆಗಳನ್ನು ಗಮನಿಸಲಾಗಿದೆ. ಆದರೂ ಇಂತಹ ಆಚರಣೆಗಳಲ್ಲಿ ಲಂಬಾಣಿ ಜನರು ಹೇಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆಂಬುದು ಮಹತ್ವದ ಸಂಗತಿಯಾಗಿದೆ.

**ಧಾರ್ಮಿಕ ಆಚರಣೆಗಳು:** ಸಾಮಾಜಿಕ ಆಚರಣೆಗಳಿಗಿಂತಲೂ ಲಂಬಾಣಿಗರು ಧಾರ್ಮಿಕ ಆಚರಣೆಗಳಿಗೆ ತುಂಬಾ ಮಹತ್ವವನ್ನು ನೀಡುವರು. ಈ ಆಚರಣೆಗಳಲ್ಲಿ ಅವರು ಸಾಂಘಿಕವಾಗಿ ಪಾಲ್ಗೊಂಡು ಸಂಭ್ರಮಿಸುವರು. ರಾಷ್ಟ್ರೀಯ ಹಬ್ಬಗಳಲ್ಲಿ ಕೆಲವು ಹಬ್ಬಗಳನ್ನು ಹಿಂದೂ ಧರ್ಮದ ಪದ್ಧತಿಗಿಂತ ತುಂಬಾ ಭಿನ್ನವಾಗಿ ಜರುಗಿಸುವುದು ಕಂಡುಬರುತ್ತವೆ. ತಮ್ಮ ತಾಂಡಾಗಳಲ್ಲಿ ತಮ್ಮ ಜನಾಂಗದ ಸಾಂಸ್ಕೃತಿಕ ನಾಯಕ ಹಾಗೂ ದೈವವಾದ ಸೇವಾಲಾಲ್ ರ ವಾರ್ಷಿಕ ಪೂಜಾಚರಣೆಗೆ ತುಂಬಾ ಮಹತ್ವ ನೀಡುತ್ತಾರೆ. ಇದರೊಂದಿಗೆ ಮಾರಿಯಮ್ಮ, ಮೀಟೂಭೂಕ್ಯ, ಸಾತಿಸತ್ತಿ(ಏಳು ಮಕ್ಕಳ ತಾಯಿಯ) ಅರಾಧನೆಯಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುತ್ತಾರೆ. ಇವುಗಳೊಂದಿಗೆ, ದೀಪಾವಳಿ(ದವಾಳಿ) ದಸರಾ, ಹೋಳಿಹಬ್ಬ (ಕಾಮನ ಹಬ್ಬವನ್ನು ತುಂಬಾ ವೈಶಿಷ್ಟ್ಯ ಪೂರ್ಣವಾಗಿ ಜರುಗಿಸುವರು.

ಯಾವುದೇ ಸಮಾಜದಲ್ಲಿ ಹುಟ್ಟಿನಿಂದ ಸಾಯುವವರೆಗೆ ಅನೇಕ ರೀತಿಯ ಆಚರಣೆಗಳನ್ನು ಜರುಗಿಸುವುದು ಸರ್ವೇ ಸಾಮಾನ್ಯವಾಗಿದೆ. ಹುಟ್ಟುವುದು ಆಕಸ್ಮಿಕವಾದರೆ ಸಾಯುವುದು ಅನಿವಾರ್ಯವಾಗಿದೆ. ಈ ಕುರಿತಾಗಿ ವೇದ-ಪುರಾಣ-ಆಗಮುಗಳಲ್ಲೂ ಉಲ್ಲೇಖವಾಗಿವೆ. ಜನನವಾದ ಬಳಿಕ ಆತ್ಮವು ದೇಹದಲ್ಲಿದ್ದು ಆ ವ್ಯಕ್ತಿಯನ್ನು ಬಿಡುಗಡೆಯಾಗುವವರೆಗೆ ಮಾತ್ರ ಭೂಮಿಗೆ ಸ್ವಂತ. ಆ ಬಳಿಕವೂ ದೇಹಕ್ಕೆ ಸಂಸ್ಕಾರ ಮಾಡುವುದು ತದನಂತರದಲ್ಲಿ ಮೃತರ ಆರಾಧನೆ ಮಾಡುವುದು ಕಾಣಸಿಗುತ್ತದೆ.

ಪ್ರತಿಯೊದು ಜಾತಿ-ಜನಾಂಗದಲ್ಲಿ ಹುಟ್ಟಿದ ಮಗುವಿಗೆ ನಾನಾ ರೀತಿಯಾಗಿ ಆಚರಣೆಗಳನ್ನು ಜರುಗಿಸುವರು. ಈ ಮಗು ಹುಟ್ಟಲು ಕಾರಣ ಹೆಣ್ಣು-ಗಂಡಿನ ಜೀವನದಿಂದ ಮಕ್ಕಳು ಹುಟ್ಟುತ್ತಾರೆಂಬುದು ಸಾಮಾನ್ಯನಂಬಿಕೆ. ಹಿಂದೂ ಧರ್ಮದ ಸಾಂಪ್ರದಾಯದಂತೆ ಪ್ರತಿಯೊಬ್ಬ ವ್ಯಕ್ತಿಯೂ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ಹಂತಗಳನ್ನು ದಾಟಬೇಕಾಗಿರುವುದು ಅನಿವಾರ್ಯ. ಈ ಪದ್ಧತಿಯನ್ನು ಎಲ್ಲ ಜಾತಿ-ಜನಾಂಗದವರಲ್ಲಿ ಕಾಣಸಿಗುತ್ತದೆ. ಅದರಲ್ಲೂ ಲಂಬಾಣಿ ಜನಾಂಗದವರು ಇತರೆ ಜನಾಂಗದವರಿಗಿಂತಲೂ ಸಂಸಾರಿಕ ಜೀವನದ ವಿವಾಹ ಬಂಧನಕ್ಕೆ ಹೆಚ್ಚು ಮಹತ್ವ ನೀಡುತ್ತಾರೆ. ವೈವಾಹಿಕ ಜೀವನವು ಅವರಿಗೆ ಸಂಸಾರದ ತಳಪಾಯ ಇದ್ದಂತೆ. ಅತ್ಯಂತ ಚಿಕ್ಕವಯಸ್ಸಿನಲ್ಲೇ ವಿವಾಹಕಾರ್ಯ ಮಾಡುವುದು ಕಾಣಸಿಗುತ್ತದೆ. ಏಕೆಂದರೆ ಈ ಜನಸಮೂಹವು ದುಡಿಮೆಗಾಗಿ ಊರೂರು ಅಲೆಯುವುದು ವಾಡಿಕೆಯಾಗಿದೆ. ಆದ್ದರಿಂದ ತಮ್ಮ ಮನೆಯ ಹೆಣ್ಣನ್ನು ಬೇಗನೆ ವಿವಾಹ ಮಾಡಿಕೊಡುತ್ತಾರೆ. ಚಿಕ್ಕವಯಸ್ಸಿನಲ್ಲೇ ವಿವಾಹ ಬಂಧನಕ್ಕೆ ಒಳಗಾದ ದಂಪತಿಗಳ ಸಂತಾನವೃದ್ಧಿ ಸಹಜವಾಗುತ್ತದೆ.

ಮೂಲತಃ ಬುಡಕಟ್ಟುವಾಸಿಗಳಾಗಿದ್ದರಿಂಧಲೂ ಈಗಲೂ ಈ ಜನಾಂಗದವರು ವಲಸೆ ಹೋಗಿ ಬಳಿಕ ಆಯಾ ಹೊಲಗದ್ದೆಗಳ ಆಸುಪಾಸಿನ ವಿಶಾಲವಾದ ಜಾಗದಲ್ಲೇ ತಾಂಡಾಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಾರೆ. ತುಂಬಾ ಗಟ್ಟಿಗರಾದ ಈ ಜನರು ವಿಷಜಂತು, ಕ್ರೂರಪ್ರಾಣಿಗಳೊಂದಿಗೆ ನಿತ್ಯ ಬದುಕನ್ನು ಸಾಗಿಸುತ್ತಾರೆ. ನಗರ ಭಾಗದಲ್ಲೂ ಸಹ ಇದ್ದುದು ಹೆಚ್ಚಾಗಿ ಕಂಡುಬರುತ್ತದೆ. ಹೀಗೆ ವಲಸೆ ಹೋದವರು ಗುಂಪು-ಗುಂಪಾಗಿ ಒಂದೇ ಕಡೆ ಜೀವನ ಸಾಗಿಸುವರು.

ಜನನ : ಸಾಂಸಾರಿಕ ಜೀವನಕ್ಕೆ ಈ ಜನಾಂಗದ ಪ್ರತಿಯೊಬ್ಬರು ಸಾಮಾಜಿಕವಾಗಿ ತುಂಬಾ ಮಹತ್ವ ನೀಡುವುದು ಸಂತಾನಕ್ಕಾಗಿ. ಊರು-ಗ್ರಾಮಗಳಿಂದ ದೂರವಾಗಿ ಬದುಕುವ ಈ ಜನರು ಪ್ರಸವದ ವೇಳೆ ಯಾವುದೇ ವೈದ್ಯರ ಸಂಪರ್ಕ ಇಲ್ಲದೇ ಜೀವನ ಸಾಗಿಸುತ್ತಾರೆ. ತಮ್ಮ ತಾಂಡಾಗಳಲ್ಲಿ ವಾಸವಾದ ಹಿರಿಯ ಮಹಿಳೆಯೇ ಜನನದ ಕಾರ್ಯವಿಧಾನಗಳನ್ನು ಅಚ್ಚುಕಟ್ಟಾಗಿ ನೆರವೇರಿಸುವರು. ಆದರೆ ಈಚೆಗೆ ಈ ಜನರು ಸಹ ಪಕ್ಕದೂರಿನ ವೈದ್ಯರ ಸಲಹೆ ಸಹಕಾರದೊಂದಿಗೆ ಹೆರಿಗೆ ಮಾಡಿಸಿಕೊಳ್ಳುವರು. ಏಕೆಂದರೆ ಚಿಕ್ಕ ವಯಸ್ಸಿನಲ್ಲಿ ವಿವಾಹವಾದ ಬಳಿಕ ಹೆಚ್ಚಾಗಿ ಹೇರಿಗೆಯ ವೇಳೆಯಲ್ಲಿ ಮರಣ ಹೊಂದಿರುವ ಘಟನೆಗಳು ಜರುಗಿವೆ. ಈ ಕುರಿತಾಗಿ ವೈದ್ಯರ ಇಲ್ಲವೇ ದಾದಿ ಅಥವಾ ಅಂಗನವಾಡಿ ಕೇಂದ್ರದ ಸಹಾಯಕಿಯರಿಂದ ಮಾಹಿತಿ ಪಡೆದು ಅವರು ನೀಡಿದ ಸೂಚನೆಯಂತೆ ಶುಶ್ರೂಷೆ ಮಾಡಿಕೊಳ್ಳುತ್ತಾರೆ. ಪ್ರತಿ ತಿಂಗಳು ವೈದ್ಯರನ್ನು ಭೇಟಿಯಾಗಿ ಅವರು ತಿಳಿಸಿದಂತೆ ಮಗುವನ್ನು ಬೆಳೆಸುತ್ತಾರೆ.

ತಾಂಡಾಗಳಲ್ಲಿ ಮಗು ಜನನ ಆದ ಬಳಿಕವೇ ಅವರಲ್ಲಿ ಆದ ಸಂತಸಕ್ಕೆ ಪಾರವೇ ಇರುವುದಿಲ್ಲ. ಗಂಡು ಹುಟ್ಟಿದರೆ ನಗಾರಿಯನ್ನು ಬಾರಿಸುತ್ತಾರೆ. ಹೆಣ್ಣುಮಗು ಜನಸಿದರೆ ಕಂಚಿನ ಗಂಗಾಳವನ್ನು ಬಾರಿಸುವರು. ಗಂಡು ಮಗು ಹುಟ್ಟಿದಾಕ್ಷಣವೇ ಆ ಮನೆಯ ವಂಶ ಅಭಿವೃದ್ಧಿಗಾಗಿಯೇ ಜನಿಸಿದರೆಂಬ ಸಂತಸದಿಂದ ತಾಂಡಾದ ಜನರಿಗೆ ಸಿಹಿ ಹಂಚಿ ಸಂಭ್ರಮಿಸುತ್ತಾರೆ. ಹುಟ್ಟಿದ ದಿನದಂದು ಆ ಮನೆಯಲ್ಲಿ ಮೈಲಿಗೆಯಾದರೂ ಸಹ ಸೂಲಿಗಿತ್ತಿ ಹಾಗೂ ಆ ಗ್ರಾಮದ ಇಲ್ಲವೇ ಹಟ್ಟಿಯ ಜನರಿಗೆ ಮಧ್ಯಪಾನ ನೀಡುವುದು ಸಾಮಾನ್ಯವಾಗಿದೆ. ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿ ಲಂಬಾಣಿ ಸಮುದಾಯದವರು ಜನಿಸಿದ ಮಗುವಿಗೆ ಈ ಹಿಂದೆ ಅವರ ಏರಿಯಾದಲ್ಲಿ ನಿತ್ಯವೂ ಒಂದೊಂದು ಕಾರ್ಯಾಚರಣೆ ಜರುಗಿಸುವರು.

ಮಗು ಜನಿಸಿದ ದಿನದಂದೆ ತಾಂಡದ ಎದುರಿಗೆ ಬಾಣಂತಿಗೆ ಸ್ನಾನ ಮಾಡಿಸುವುದು ಕಂಡುಬರುತ್ತದೆ. ಪ್ರತಿಮನೆಯವರು ಬಿಸಿಮಾಡಿಕೊಂಡು ಬಂದ ನೀರನ್ನು ಬಾಣಂತಿಗೆ ಎರೆಯುತ್ತಾರೆ. ಮಗು ಜನಿಸಿದ ಮೂರನೆಯ ದಿನದಿಂದ ವಿವಿಧ ಆಚರಣೆಗಳನ್ನು ನಡೆಸುವರು.

ಮಗು ದೊಡ್ಡದಾಗಿ ಬೆಳೆಯುವವರೆಗೂ ವಿವಿಧ ರೀತಿಯ ಸಂಸ್ಕಾರಗಳನ್ನು ಮಾಡಲಾಗುತ್ತದೆ. ಮಗು ಜನನದ ಸಂಭ್ರಮ, ಸೂತಕ ನಿವಾರಣ ಹಂತ, ನಾಮಕರಣ, ಮಗುವಿನ ಜವುಳ ತೆಗೆಯಿಸುವುದು ಹಾಗೂ ಆ ಮಗುವಿನ ಹುಟ್ಟು ಹಬ್ಬದ ವೇಳೆ ಲಂಬಾಣಿಗರು ವೈವಿಧ್ಯಮಯವಾದ ಪದಗಳನ್ನು ಹಾಡುವುದು ಕಂಡುಬರುತ್ತದೆ.

ಯಾವುದೇ ಗ್ರಾಮಗಳಲ್ಲಿ ಇಂದಿಗೂ ಮಗುವು ಜನನದಿಂದ ಆತನ ಬೆಳೆಸಿ ವಿವಾಹ ಕಾರ್ಯನೆರವೇರಿ ಸುವವರೆಗೂ ತಂದೆಯ ಕರ್ತವ್ಯ ಹೆಚ್ಚಾಗಿ ಕಾಣಸಿಗುತ್ತದೆ. ಆ ಬಳಿಕ ವಿವಾಹದ ಬಳಿಕೆ ಆತನದು ಒಂದು ಪ್ರತ್ಯೇಕ ಸಂಸಾರವಾಗುತ್ತದೆ. ಆಗ ಸಂಸಾರದ ಹೊಣೆ ಮತ್ತು ಕೌಟುಂಬಿಕ ಹೊರೆಯನ್ನು ಹೊತ್ತು ಸಾಗಬೇಕಾಗುತ್ತದೆ.

ಆಯಾ ತಂದೆ ತಾಯಿಗಳು ಮಗುವಿನ ಉತ್ತಮ ಭವಿಷ್ಯ ಅರಿಯಲು ಜ್ಯೋತಿಷ್ಯರನ್ನು ಸಂಪರ್ಕಿಸುವುದು ವಾಡಿಕೆಯಾಗಿದೆ. ಇದರೊಂದಿಗೆ ಆಯಾ ತಾಂಡದಲ್ಲಿರುವ ಗುರು ಹಿರಿಯರಿಂದಲೇ ಹಲವು ರೀತಿಯ ಸಂಸ್ಕಾರಗಳನ್ನು ಮಾಡಿಸಲಾಗುತ್ತದೆ. ಲಂಬಾಣಿ ಸ್ತ್ರೀಯರು ಹೆಚ್ಚಾಗಿ ಮಕ್ಕಳ ಹಾರೈಕೆಯಲ್ಲಿ ಗೀತೆಗಳನ್ನು ಹಾಡುವರು. ಈ ಗೀತೆಗಳನ್ನು ಜನನೋತ್ತರದ ಗೀತೆ ಎನ್ನುವರು. ಲಂಬಾಣಿಗರು ಏಕಳ ಪೋಯೊರೋಗಿದ ಎಂಬ ಹೆಸರಿನಿಂದ ಕರೆಯುವರು. ತಾಂಡಾಲ್ಲಿದ್ದ ನೆಂಟರಿಷ್ಟರೆಲ್ಲರೂ ಸಾಗಿ ಬಂದು ಮಗುವನ್ನು ನೋಡಿ ಸಂಭ್ರಮಿಸಿ ತೆರಳುವರು. ಹಿರಿಯ ಮಹಿಳೆಯರೆಲ್ಲರೂ ಸೇರಿ ಮಗುವಿನ ಶ್ರೇಯೋಭಿಲಾಷೆಗಾಗಿ ಆ ಹಟ್ಟಿಯ ಪ್ರಮುಖ ದೇವತೆಗೆ ಮೊರೆ ಇಟ್ಟು ಮಗುವನ್ನು ಹರಸುವಂತೆ ಪ್ರಾರ್ಥನೆ ಗೀತೆಗಳನ್ನು ಹಾಡುವರು.

ಜಿಲ್ಲೆಯಲ್ಲಿ ನಗರಕ್ಕೆ ಸಮೀಪವಿರುವ ತಾಂಡಾಗಳಲ್ಲಿ ನಗರೀಕರಣ ಸಂಸ್ಕೃತಿಯು ಆಕ್ರಮಿಸಿದರೂ ಸಹ ಮೂಲ ಸಂಪ್ರದಾಯಗಳನ್ನು ವಿಧಿವತ್ತಾಗಿ ಜರುಗಿಸುವರು. ಹೆಣ್ಣು ಮಗುವಿಗಿಂತ ಗಂಡು ಮಗುಜನನವಾದರೆ ಸಾಕು ಬರೀ ಪಾಲಕ-ಪೋಷಕರಷ್ಟೇ ಅಲ್ಲ ಇಡೀ ತಾಂಡಾದ ಜನರಿಗೆ ಎಲ್ಲಿಲ್ಲದ ಸಂತಸ, ಏಕೆಂದರೆ ತಾಂಡಗಳ ಜನರಿಗೆಲ್ಲಾ ಅಂದು ಸಾರಾಯಿ ಇಲ್ಲವೆ ಮಧ್ಯಪಾನವನ್ನು ಕೊಡಿಸುವರೆಂಬ ಭಾವನೆಯಿಂದ ಸಂಭ್ರಮದಲ್ಲಿ ತಲ್ಲೀನರಾಗುವುದು ಕಂಡುಬರುತ್ತದೆ.

ಹುಟ್ಟಿದ ಮಗುವೆಗೆ ಹೆಸರಿಡುವಶಾಸ್ತ್ರ ಜರುಗಿಸಲು ಈಚೆಗೆ ಜೋಯಿಸರನ್ನು ಕರೆಸಿ ಭವಿಷ್ಯದ ಕುಂಡಲಿ ಬರೆಸುತ್ತಾರೆ. ಆದರೆ ಈ ಹಿಂದೆ ನಡೆದುಕೊಂಡ ಪ್ರಕ್ರಿಯೆಯೇ ಬೇರೆಯದಾಗಿರುತ್ತದೆ. ಆ ತಾಂಡಾದ ಯಜಮಾನನ ಮಾತಿನಂತೆ ಎಂದಿಗೂ ಎದುರು ಮಾತಾಡದೇ ಸಂಪ್ರದಾಯಾಚರಣೆಯನ್ನು ಚಾಚುತಪ್ಪದೇ ಪಾಲಿಸುವರು. ಕೆಲವು ಮನೆಗಳಲ್ಲಿ ತಾಂಡಾದ ಅರ್ಚಕರ ಮಾತಿನಂತೆ ೩ ಇಲ್ಲವೇ ೬ ತಿಂಗಳಲ್ಲೇ ಹೆಸರಿಡುವ ಶಾಸ್ತ್ರ ಪೂರೈಸುವರು. ಈ ಆಚರಣೆಯ ವೇಳೆ ಅವರ ನೆಂಟರನ್ನು ಕರೆಸಿ ಸಿಹಿ ಭೋಜನಕೂಟ ಜರುಗಿಸುವರು. ಈಚೆಗೆ ತಾಂಡಾದ ಗ್ರಾಮದೇವತೆ ಹಾಗೂ ಅಲ್ಲಿಯ ಅರ್ಚಕರ ಮಾತನ್ನು ಕೇಳದೆ ಇರುವವರ ಸಂಖ್ಯೆ ಇದೆ. ಆದರೆ ಜವುಳ ಶಾಸ್ತ್ರವನ್ನು ಧರ್ಮಸ್ಥಳದ ಮಂಜುನಾಥನಿಗೆ, ತಿರುಪತಿಯ ಶ್ರೀ ವೆಂಕಟೇಶ್ವರ ಇಲ್ಲವೆ ಮಂತ್ರಾಲಯದ ರಾಘವೇಂದ್ರಸ್ವಾಮಿ ಅಥವಾ ಮೊಹರಂ ಪಂಜಾದೇವರುಗಳ ಸ್ಥಳಕ್ಕೆ ತೆರಳಿ ಕಾರ್ಯ ಪೂರೈಸುವರು. ಕೆಲವರು ಮಾತ್ರ ತಮ್ಮ ತಾಂಡದ ದೈವದ ಸನ್ನಿಧಿಯಲ್ಲಿ ಆಚರಿಸುವರು.

ಜಿಲ್ಲೆಯಲ್ಲಿ ಲಂಬಾಣಿಗರು ಹೆಚ್ಚಾಗಿ ಸಾಮರಸ್ಯ ಪ್ರತೀಕವಾದ ಮೊರಹಂ ದೈವಕ್ಕೂ ಸಹ ತಮ್ಮ ಕುಲದೈವದ ಆರಾಧನೆಯಂತೆ ಜರುಗಿಸುವರು. ಇನ್ನು ಕೆಲವರು ಆಯಾ ಊರಿನ ಅಸುಪಾಸಲ್ಲೇ ಇರುವ ಗಾಳೆಮ್ಮ ಸ್ತ್ರೀ ದೇವತೆ ದೇವಾಲಯದ ಬಳಿಗೆ ತೆರಳಿ ಜವುಳಕಾರ್ಯ ಪೂರೈಸುವುದು ಕಾಣಸಿಗುತ್ತದೆ.

ಇನ್ನು ಕೆಲವರು ಈಚೆಗೆ ಬಹುತೇಕ ಮನೆಯಲ್ಲಿ ಆಧುನಿಕ ತೆಕ್ಕೆಯ ಸಂಭ್ರಮಾಚರಣೆಯಾದ ಹುಟ್ಟುಹಬ್ಬದ ಆಚರಣೆಯನ್ನು ಜರುಗಿಸುವರು. ಆಯಾ ಮನೆಯ ಮಕ್ಕಳ ಹುಟ್ಟಿದ ದಿನಾಂಕವನ್ನು ನಿಗದಿಪಡಿಸಿಕೊಂಡು ಆ ದಿನದಂದು ಪಾಶ್ಚಾತ್ಯರ ಶೈಲಿಯಂತೆ ಮನೆಯಲ್ಲಿ ಕೇಕ್ ತರಿಸಿ ಆಚರಿಸುವುದು

ಕಂಡುಬರುತ್ತದೆ. ತೀರಾ ಕೆಳಸ್ತರದ ಜನರಲ್ಲಿ ಈ ಆಚರಣೆಯಿಲ್ಲ. ಬಹುತೇಕವಾಗಿ ಉಳ್ಳವರು ಅಂದರೆ ಸರ್ಕಾರಿ ನೌಕರಿಯಲ್ಲಿರುವ ವ್ಯಕ್ತಿಗಳು ಈ ಆಚರಣೆಯನ್ನು ಪಾಲಿಸುವರು. ಇಂತಹವರು ಕೆಲವರು ತಾಂಡದ ಸಂಪರ್ಕ ಕಳೆದುಕೊಂಡು ಬಡವಾಣೆಗಳಲ್ಲಿ ವಾಸಿಸುವರೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಇವರು ಕೇವಲ ನಾಮಕಾವಸ್ಥೆಯಾಗಿ ಸಂಪ್ರದಾಯದ ಆಚರಣೆಗಳನ್ನು ರೂಢಿಸಿಕೊಂಡಿರುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಜಾಗತೀಕರಣ ತೆಕ್ಕೆಗೆ ಬಿದ್ದು ಆಧುನಿಕ ಕಾಲದ ಬಹುತೇಕ ಆಚರಣೆಗಳು ಇವರ ಮನೆಗಳನ್ನು ಪ್ರವೇಶಿ ಬಿಟ್ಟಿವೆ.

**ಮದುವೆ :** ಲಂಬಾಣಿಗರು ಜನನದ ಶಾಸ್ತ್ರಕ್ಕೆ ನೀಡಿದ ಮಹತ್ವದಷ್ಟೇ ಮದುವೆ ಆಚರಣೆಗೂ ಮಹತ್ವ ನೀಡುತ್ತಾರೆ. ಈ ಆಚರಣೆಯು ಪ್ರತಿಯೊಬ್ಬ ಲಂಬಾಣಿ ಜನಾಂಗದ ಆಯಾ ಕುಟುಂಬದ ಯಜಮಾನನಿಗೆ ತಿರುವು ಇದ್ದಂತೆ. ತನ್ನಂತೆ ತನ್ನ ಮಕ್ಕಳು ಕೌಟುಂಬಿಕ ವ್ಯವಸ್ಥೆಯಲ್ಲಿ ತೊಡಗಿಸಿಕೊಳ್ಳಬೇಕೆಂಬ ಹಿನ್ನೆಲೆಯಲ್ಲಿ ವಿವಾಹಕಾರ್ಯವನ್ನು ಪೂರೈಸುವರು.

ವೈವಾಹಿಕ ಆಚರಣೆಗಳು ಇತರೆ ಜನಾಂಗದವರಿಗಿಂತಲೂ ಭಿನ್ನ. ಈ ಹಿಂದೆ ಮದುವೆಕಾರ್ಯಗಳನ್ನು ಕನಿಷ್ಟ ಪಕ್ಷ ಮೂರು ತಿಂಗಳವರೆಗಾದರೂ ಸಂಭ್ರಮಾಚರಣೆಗಳೊಂದಿಗೆ ಜರುಗಿಸುತ್ತಿದ್ದರು. ಈಗ ಕೇವಲ ಎರಡು ಇಲ್ಲವೇ ಮೂರೇ ದಿನಗಳಿಗೆ ಸೀಮಿತಗೊಳಿಸಲಾಗಿದೆ. ಲಂಬಾಣಿ ಸಮುದಾಯದಲ್ಲಿ ಬಹುತೇಕವಾಗಿ ಎಂತಹ ಬಡವರ್ಗದವರಾದರೂ ತಾಳಿಕಟ್ಟುವ ಸಂಪ್ರದಾಯ ಮಾತ್ರ ಹೆಣ್ಣಿನ ಮನೆಯ ಬಳಿ ಜರುಗಿಸುವರು. ಈ ಹಿಂದೆ ತಾಂಡಗಳಲ್ಲೇ ವಿಜೃಂಭಣೆಯಿಂದ ಹಮ್ಮಿಕೊಳ್ಳುತ್ತಿದ್ದರು. ಆದರೆ ಇಂದಿನ ಜಾಯಮಾನಕ್ಕೆ ಹೊಂದಿಕೊಂಡಂತೆ ಆರ್ಥಿಕವಾಗಿ ಸಬಲರಾದವರು ಮದುವೆಯನ್ನು ಕಲ್ಯಾಣಮಂಟಪಗಳಲ್ಲಿ ಜರುಗಿಸುತ್ತಾರೆ. ಆದರೆ ಶಾಸ್ತ್ರೋಕ್ತ ಕಾರ್ಯಗಳನ್ನೆಲ್ಲಾ ಮನೆಯಲ್ಲಿ ಪೂರ್ಣಗೊಳಿಸಿದ ಬಳಿಕ ಮದುವೆಯ ಮಂಟಪದ ಛತ್ರಗಳಿಗೆ ತೆರಳಿ ತಾಳಿಕಟ್ಟುವಶಾಸ್ತ್ರ ಪೂರೈಸುವರು. ಇಲ್ಲಿಯೂ ಮದುವೆಯಶಾಸ್ತ್ರಗಳು ಕೇವಲ ನಾಮಕಾವಸ್ಥೆ ಯಲ್ಲಿ ಜರುಗುವುವು.

ಈ ವಿವಾಹ ಶಾಸ್ತ್ರಕ್ಕೆ ಸಂಬಂಧಿಸಿದ ಗೀತೆಗಳು ಲಂಬಾಣಿಗರಲ್ಲಿ ಜನಜನಿತ. ಶೃಂಗಾರ, ಹಾಸ್ಯ, ಕರುಣರಸವು ವಿವಾಹದ ದಿನದಲ್ಲಿ ಬೆರೆತಿರುತ್ತದೆ. ನಿಶ್ಚಯ ಶಾಸ್ತ್ರ(ಸಗಾಯಿರ ಕಡಿ) ದೀಕ್ಷಾಶಾಸ್ತ್ರ(ವದಾಯಿರ ಕಡಿ) ವರನನ್ನು ಬೀಳ್ಕೊಡುವುದು(ವಳಾಯೇರ್‌ಗೀದ)ಗಳನ್ನು ಇಂದಿಗೂ ಹಟ್ಟಿಯಲ್ಲಿ ಜರುಗಿಸುವರು.

ಬಡತನದ ಬವಣೆಯನ್ನು ಎದುರಿಸುತ್ತಿದ್ದರೂ ಸಹ ಲಂಬಾಣಿಗರು ಅತ್ಯಂತ ಚಿಕ್ಕ ವಯಸ್ಸಿನಲ್ಲಿ ವೈವಾಹಿಕಕಾರ್ಯವನ್ನು ಪೂರೈಸಿಕೊಳ್ಳುವುದು ಕಂಡುಬಂದಿದೆ. ಒಮ್ಮೊಮ್ಮೆ ಒಂದೇ ಮಂಟಪದಲ್ಲಿ ಎರಡೆರಡು ಅಂದರೆ ಇಬ್ಬರು ಮಕ್ಕಳ ವಿವಾಹಕಾರ್ಯವನ್ನು ಪೂರೈಸುವುದು ಸರ್ವೇಸಾಮಾನ್ಯ. ಹೀಗೆ ಮಾಡುವುದರಿಂದ ಈ ಜನಾಂಗದ ಯಜಮಾನನಿಗೆ ತಗಲುವ ವೈವಾಹಿಕಖರ್ಚು ಕಡಿಮೆಯಾಗಲಿದೆ ಎಂಬ ಭಾವನೆಯಿದೆ.

ಪ್ರಮುಖವಾಗಿ ಹೆಣ್ಣಿಗೆ ಗಂಡನ್ನು, ಗಂಡಿಗೆ ಹೆಣ್ಣನ್ನು ಗೊತ್ತು ಮಾಡುವ ಕಾರ್ಯವು ಆ ಊರಿನ ಯಜಮಾನನ ಮೂಲಕ ನಡೆಯುತ್ತದೆ. ಈ ರೀತಿಯ ಶಾಸ್ತ್ರವನ್ನು ಆಯಾಯ ತಾಂಡಾಗಳಲ್ಲಿದ್ದ ಡಾಢಿವೃತ್ತಿ ಗಾಯಕರಿಂದಲೇ ಪೂರೈಸುವರು.

ನಿಶ್ಚತಶಾಸ್ತ್ರವನ್ನು "ಗೋಳ ಖಾಯರೋ" ಎಂದು ಕರೆಯಾಲಾಗುವುದು. ತಮ್ಮ ಕುಟುಂಬದ ಸದಸ್ಯರು ಹಾಗೂ ಹಟ್ಟಿಯ ಸಂಬಂಧೀಕರುಗಳು ಈ ಆಚರಣೆಯಲ್ಲಿ ಸ್ವಯಂಪೂರ್ಣರಾಗಿ ತೊಡಗಿಕೊಳ್ಳುವರು. ನಿಶ್ಚಯ ಶಾಸ್ತ್ರದ ವೇಳೆ ಮೋಜು, ಮಸ್ತಿಗೆ ಅವಕಾಶವುಂಟು. ಗಂಡಿನ ರೂಪದ ಬಗ್ಗೆ ಹೆಣ್ಣಿನ ಕಡೆಯ ಯುವ ಸಮೂಹವು ಪರಿಹಾಸ್ಯ ಮಾಡುವ ಪ್ರಸಂಗವನ್ನು ಜರುಗಿಸುವರು. ಈ ಆಚರಣೆಯ ವೇಳೆ ಪ್ರಮುಖವಾಗಿ ಹುಡುಗಿ-ಹುಡುಗನ ಒಪ್ಪಿಗೆ ಬಳಿಕವೇ ಸಕ್ಕರೆಯನ್ನು ವಿನಿಮಯ ಮಾಡಿಕೊಳ್ಳುವರು. ಇದು ಎಲ್ಲ ಧರ್ಮದಲ್ಲಿದೆ. ಆ ಬಳಿಕ ನೆರೆದ ಸಮಸ್ತರಿಗೆ ವೀಳ್ಯೆ ಅಡಿಕೆ ನೀಡಿ (ಪಾನಸುಪಾರೀರ ನುಡಿ) ವೈವಾಹಿಕ ಶಾಸ್ತ್ರಕ್ಕೆ ನಾಂದಿ ಹಾಡುವರು. ನಿಶ್ಚಯಶಾಸ್ತ್ರಕ್ಕೆ ಸಂಬಂಧಪಟ್ಟ ಗೀತೆಗಳನ್ನು ಲಂಬಾಣಿ ಮಹಿಳೆಯರು ಹಾಡುವರು. ಕೆಲವು ತಾಂಡಗಳಲ್ಲಿ ಪುರುಷರೂ ಸಹ ಹಾಡುಗಳನ್ನು ಹಾಡುವುದು ಕಂಡುಬಂದಿದೆ.

ನಿಶ್ಚಯಶಾಸ್ತ್ರ ತುಂಬಾ ಪ್ರಮುಖ ಘಟ್ಟವಾಗಿರುತ್ತದೆ. ಇದು ಕೇವಲ ಮೋಜಿಗಾಗಿ ಜರುಗಿಸುವ ಆಚರಣೆಯಲ್ಲ, ಎರಡು ಮನೆತನಗಳ ನಡುವೆ ಬೆಸೆಯುವ ಸಂಬಂಧದ ದ್ಯೋತಕವಾಗಿದೆ. ನಿಶ್ಚಯ ಶಾಸ್ತ್ರದ ಬಳಿಕ ಹೆಣ್ಣಿನ ತಂದೆ ತಾಯಿಗಳು ಗಂಡಿಗೆ ಕೊಡುವ ತೆರಗಳನ್ನು ಗಂಡಿನವರು ಹೆಣ್ಣಿಗೆ ನೀಡುವ ಆಭರಣಗಳ ಬಗ್ಗೆ ಚರ್ಚಿಸಿ ಒಮ್ಮತಕ್ಕೆ ಬರುವುದು ವಾಡಿಕೆಯಾಗಿದೆ. ಮದುವೆಶಾಸ್ತ್ರದ ವೇಳೆ ಗೀತೆಗೆಳನ್ನು ಹಾಡುವರು. ಈ ಗೀತೆಗಳಲ್ಲಿ ಎರಡು ಕುಟುಂಬದವರು ವಿವಾಹಶಾಸ್ತ್ರದ ವೇಳೆ ಒಪ್ಪಿಕೊಂಡ ಬಗ್ಗೆ ಸುಶ್ರಾವ್ಯವಾಗಿ ಹಾಡುವ ಧಾಟಿ ಕಂಡುಬರುತ್ತದೆ. ಇದನ್ನು ಹೆಚ್ಚಾಗಿ ಮಹಿಳೆಯರು ಹಾಡುವರು. ಇಡೀ ಸಂಸಾರದ ತುಂಬೆಲ್ಲಾ ಹೇಗೆ ಸಂಬಂಧಿಕರು ಇರಬೇಕೆಂಬ ಹಿತನುಡಿಯು ಗೀತೆಯಲ್ಲಿ ವ್ಯಕ್ತವಾಗುತ್ತದೆ.

ಇದಾದ ಬಳಿಕವೇ ವಿವಾಹಕಾರ್ಯಕ್ಕೆ ಆಗಮಿಸಿದ ಬೀಗರು ಮತ್ತು ಅವರ ಜೊತೆ ಬಂದವರು ಹಾಗೂ ಸ್ನೇಹಿತರಿಗೆ ಊಟ ಬಡಿಸುವ ಕಾರ್ಯಕ್ಕೆ ಚಾಲನೆ ನೀಡುವರು. ಊಟದ ಮುಂಚೆ ಕೆಲವರು ನಿಶೆ ಬರಿಸುವ ಪೇಯ ಸ್ವೀಕರಿಸುವುದು ಸರ್ವೇಸಾಮಾನ್ಯ. ವಿವಾಹಕಾರ್ಯದಲ್ಲಿ ಇದು ಬೇಕೆ ಬೇಕು. ಹೆಣ್ಣಿನ ಗಂಡಿನ ಸಂಬಂಧಿಕರು ಇದಕ್ಕಾಗಿಯೇ ವಿವಾಹ ಪೂರೈಸುವರಿಂದ ಹಣಪಡೆದು ಮಧ್ಯಪಾನ ಸ್ವೀಕರಿಸಿಕೊಂಡು ಬರುವರು. ಮದುವೆಯ ವೇಳೆ ತಯಾರಿಸಿದ ಊಟದ ಮಹತ್ವದ ಬಗ್ಗೆ ಗೀತೆಗಳ ಮೂಲಕ ವರ್ಣಿಸಲಾಗುವುದು. ಈ ಗೀತೆಗಳು ಎರಡು ಗುಂಪುಗಳಿಗೆ ನುಡಿಮುತ್ತುಗಳಾಗಿ ಪರಿಣಮಿಸುತ್ತವೆ.

ವಿವಾಹಕ್ಕೆ ಮುನ್ನ ಮದುವೆ ಮಂಟಪಕ್ಕೆ ಹೋಗುವ ಪೂರ್ವದಲ್ಲಿ ಗಂಡಿನ ಮನೆಯವರು ವಧುವಿಗೆ ದೀಪಾಶಾಸ್ತ್ರ ಪೂರೈಸುವರು. ಸಂಸಾರದ ಬಂಧನದಲ್ಲಿ ಸಿಲುಕಲಿರುವ ಗಂಡಿಗೆ ನುಡಿಮುತ್ತಿನ ಮೂಲಕ ಹಿತೋಪದೇಶ ನೀಡುವರು. ಆಗ ಕಾದಸೂಜಿಯಿಂದ ವರನ ಬಲಭಜಕ್ಕೆ ಅಡ್ಡಗೆರೆ ಹಾಕಿ ಕಿವಿಯ ಮೂಲಕ

ಹಿತವಚನ ಹೇಳುವರು. ಸಂಸಾರ ಬಂಧನದಲ್ಲಿ ಮಾಯಾ ಪ್ರಪಂಚಕ್ಕೆ ಸಿಲುಕಿ ಯಾರಾದರೂ ತೊಂದರೆ ಅನುಭವಿಸಿದರೆ ತಮ್ಮ ವಂಶದ ಬಾಬಾ ಗುರುವಿನ ಸ್ಮರಣೆ ಮಾಡಿದರೆ ಸಾಕು ಕಷ್ಟಕೋಟಲೆಗಳು ದೂರಾಗುತ್ತವೆ ಎಂದು ಬೋಧಿಸುವರು.

ಇದಾದ ಬಳಿಕ ತುಂಬಾ ಮಹತ್ವದ ಮನೆಯಲ್ಲಿ ಜರುಗುವ ಕೊನೆಯದಾದ ಆಚರಣೆಯೆಂದರೆ ವರನ ಬೀಳ್ಕೊಡುವುದು. ಇಲ್ಲಿ ವರನನ್ನು ಬೀಳ್ಕೊಡುವ ಮುಂಚೆ ಹಿತೋಪದೇಶವನ್ನು ಹೇಳಲಾಗುತ್ತದೆ. ಈ ಹಿಂದೆ ಮದುವೆ ಎಂಬುದು ಒಂದು ಯುದ್ಧ ರೀತಿಯಲ್ಲಿ ಜರುಗುತ್ತಿತ್ತು. ಹೆಣ್ಣಿನ ಕುಟುಂಬದ ಸದಸ್ಯರೊಂದಿಗೆ ಕಾದಾಟ ಮಾಡಿ ವಧುವನ್ನು ಗೆದ್ದು ಹೋಗಬೇಕಾದ ಪ್ರಸಂಗ ಇತ್ತು. ಈಗ ಕೆಲವು ಆಚರಣೆಗಳ ಮೂಲಕ ವರನಲ್ಲಿರುವ ಧೈರ್ಯತನವನ್ನು ಗುರುತಿಸುವುದು ಕಂಡುಬರುತ್ತದೆ. ಬಿಸಿಲಲ್ಲೇ ವರನನ್ನು ನಿಲ್ಲಿಸುವುದು. ವರನ ಅತ್ತೆಯು ಅಳಿಯನಾಗುವವನಿಗೆ ಕೈಗೊಳ್ಳುವ ಕೆಲವು ಕಠಿಣವಾದ ಆಚರಣೆಗಳಿಂದ ತಿಳಿಯಬಹುದಾಗಿದೆ.

ಇದೇ ರೀತಿಯಾಗಿ ಮದುವೆ ದಿನದ ತಯಾರಿ ದಿನದಿಂದ ವಧುವಿನ ಮನೆಯಲ್ಲಿ ವಧುವಿಗೆ ಹಲವು ರೀತಿಯ ಸಾಂಪ್ರದಾಯಿಕವಾದ ಆಚರಣೆ ಏರ್ಪಡಿಸುವರು. ವಧುವಿಗೆ ತಿಲಕ, ಅರಿಶಿಣ ಹಚ್ಚುವುದು, ಎಣ್ಣೆ ಸ್ನಾನ ಮಾಡಿಸುವುದು, ಬಳೆ ತೊಡಿಸಿ, ಮೆಹಂದಿ ಹಚ್ಚುವುದು, ಸಪ್ತಪದಿ ಮತ್ತು ಕೊನೆಗೆ ವಧುವಿನ ಮನೆಯಿಂದ ಗಂಡನ ಮನೆಗೆ ಬೀಳ್ಕೊಡುವ ತುಂಬಾ ವಿಶಿಷ್ಟವಾದ ಕೊನೆಯ ಆಚರಣೆ 'ಹವೇಲಿ' ಗೀತೆಯಾಗಿದೆ. ಇದು ಬೇರೆ ಬೇರೆ ಜನಾಂಗದಲ್ಲಿದ್ದರೂ ಸಹ ಲಂಬಾಣಿಗರಲ್ಲಿ ತುಂಬಾ ಭಿನ್ನವಾಗಿ ಕಾಣಿಸುತ್ತದೆ. ಯಾವುದೇ ಜನಾಂಗದಲ್ಲಿ ಗಂಡಿನಮನೆಗೆ ವಧುವನ್ನು ಕಳಿಸುವಾಗ ದುಃಖ ಮಡುಗಟ್ಟಿರುತ್ತದೆ. ಇದೊಂದು ಕಣ್ಣೀರ ಧಾರೆಯೊಂದಿಗೆ ಪನ್ನೀರ ಪ್ರಸಂಗ ವ್ಯಕ್ತವಾಗಿರುತ್ತದೆ. ಜೊತೆಗೆ ಗಂಡಿನ ಮನೆಯಲ್ಲಿ ಹೇಗೆ ಬಾಳಬೇಕೆಂದು ತಾಂಡಾದ ಹಿರಿಯರು ಮತ್ತು ಸಂಬಂಧಿಕರು ತಮ್ಮ ತಾಂಡಾಕ್ಕೆ ಗೌರವ ತರುವಂತಹ ಕೆಲಸ ಪೂರೈಸು ಎಂಬ ನೀತಿಯೂ ಹವೇಲಿಗೀತೆಯಿಂದ ವ್ಯಕ್ತವಾಗುತ್ತದೆ.

**ಮರಣ :** ಮರಣ ಸಂಭವಿಸಿದಾಗಲೂ ಸಹ ವಿಧಿವತ್ತಾಗಿ ಶವಸಂಸ್ಕಾರಗಳನ್ನು ನೆರವೇರಿಸುವುದು ಒಂದು ಆಚರಣೆಯಾಗಿ ಪರಿಣಮಿಸಿದೆ. ಇದನ್ನು ಸಾಮಾಜಿಕ ಆಚರಣೆಗಳಲ್ಲಿ ಸೇರ್ಪಡೆ ಮಾಡಲಾಗಿದೆ. ಈ ಸಂದರ್ಭವು ಪರತಿಮನೆ ಹಾಗೂ ಅನ್ಯ ಜನಾಂಗದವರಲ್ಲಿ ಮೂಡಿಬರುವ ಸಂಗತಿಯಾಗಿದೆ. ಮಾನವನಿಗೆ ಜನನ ಹೇಗೆ ಆಕಸ್ಮಿಕವೋ ಮರಣವೂ ಸಹ ಅನಿವಾರ್ಯವಾಗಿ ಬರುವುದಾಗಿದೆ. ಆಯಾ ಕುಟುಂಬದಲ್ಲಿ ಮರಣ ಸಂಭವಿಸಿದ ವೇಳೆ ರೋಧಿಸುವುದು ಮುಗಿಲಿಗೆ ತಾಗಿರುವಂತೆ ಬಾಸವಾಗಿರುತ್ತದೆ. ಶೋಕವು ಮಡುಗಟ್ಟಿರುತ್ತದೆ. ಮರಣ ಹೊಂದಿದ ವ್ಯಕ್ತಿಯ ಗುಣಗಾನ ಮಾಡಿ ಆತನೊಂದಿಗೆ ಇರುವಂತಹ ಭಾವನಾತ್ಮಕ ಸಂಬಂಧಗಳನ್ನು ಅಳುವ ದಾಟಿಯ ಮೂಲಕ ವ್ಯಕ್ತಪಡಿಸುವುದು ಕಂಡುಬರುತ್ತದೆ. ಶವದ ಮುಂದೆ ಗೋಲಾಡಿ ಅಳುವ ಪ್ರಸಂಗವು ಹೃದಯ ವಿದ್ರಾಕವಾಗಿ ಪರಿಣಮಿಸಿರುತ್ತದೆ. ಮನೆಯ ಯಾವುದೇ ಒಬ್ಬ ಸದಸ್ಯ ಮರಣ ಹೊಂದಿದರೆ ಆಯಾ ತಾಂಡಾದಲ್ಲಿ ಯಾರೇ ಆಗಲೀ ಕೆಲಸಕ್ಕೆ ತೆರಳುವುದಿಲ್ಲ. ಶೋಕ ಸಾಗರದಲ್ಲಿ ತಾವು ತೊಡಗಿಸಿಕೊಳ್ಳುವರು. ಸತ್ತ ಮೊದಲ ದಿನ ಮತ್ತು ಮೂರನೆಯ ದಿನದಂದು ಲಂಬಾಣಿ

ಜನಾಂಗದಲ್ಲಿ ಮರಣ ಸಂಸ್ಕಾರವನ್ನು ವಿಧಿವತ್ತಾಗಿ ಜರುಗಿಸುವ ಈ ಎರಡು ದಿನದಂದು ಯಾರು ಕೆಲಸಕ್ಕೆ ಹೋಗುವುದಿಲ್ಲ. ಎಂಬುದು ಕ್ಷೇತ್ರಕಾರ್ಯದ ಅಧ್ಯಯನದಿಂದ ತಿಳಿದುಬಂದ ಸಂಗತಿಯಾಗಿದೆ.

ಶವಸಂಸ್ಕಾರಕ್ಕೆ ಕೈಗೊಳ್ಳುವ ಕ್ರಿಯೆಗಳನ್ನು ಮಾಡುವಾಗ ಆಯಾ ತಾಂಡಾದ ಹಿರಿಯ ವ್ಯಕ್ತಿಯ ಸೂಚನೆಯಂತೆ ನಡೆಸಲಾಗುತ್ತದೆ. ಮರಣ ಹೊಂದಿದ ವ್ಯಕ್ತಿಯನ್ನು ಭಕ್ತಿ ಭಾವದಿಂದ ಪೂಜಿಸಲಾಗುತ್ತದೆ. ಏಕೆಂದರೆ ತಮ್ಮ ಕುಟುಂಬದ ಯಾವುದೇ ಸದಸ್ಯರಿಗೆ ತೊಂದರೆ ನೀಡದೆ ಸುಖ ಸಂಸಾರಕ್ಕೆ ನೆರವಾಗಲಿ ಎಂಬ ಭಾವದಿಂದ ಪೂಜಾ ವಿಧಾನವನ್ನು ಕೈಗೊಳ್ಳುವರು. ಮೃತ ವ್ಯಕ್ತಿಯು ಮಾರನೆಯ ದಿನದಂದು ಆಯಾ ಕುಟುಂಬದ ಮನೆಗೆ ಹಿಂತಿರುಗಿ ಬರುವನೆಂಬ ಭೀತಿಯಿಂದ ಬಹುತೇಕ ಹಟ್ಟಿಗಳ ಜನರು ಕೆಲಸಕಾರ್ಯಕ್ಕೆ ಹೋಗದೆ ಮನೆಯಲ್ಲೇ ಇರುತ್ತಾರೆ. ಇದು ಬಳ್ಳಾರಿ ಜಿಲ್ಲೆಯ ಬಹುತೇಕ ತಾಂಡಾದಲ್ಲಿ ಕಂಡುಬರುವ ದೃಶ್ಯವಾಗಿದೆ. ಇದಾದ ಬಳಿಕ ಆ ಮನೆಯಲ್ಲಿದ್ದ ದುಃಖದ ಸನ್ನಿವೇಶವು ದಿನಕಳೆದಂತೆ ಸಹಜ ಸ್ಥಿತಿಗೆ ತಲುಪುತ್ತದೆ. ಎಂದಿನಂತೆ ದೈನಂದಿನ ಕಾರ್ಯಾಚರಣೆಗಳನ್ನು ಜರುಗಿಸಲು ಅಣಿಯಾಗುತ್ತಾರೆ.

**ಧಾರ್ಮಿಕ ಆಚರಣೆಗಳು :** ಅನಾದಿ ಕಾಲದಿಂದಲೂ ಮಾನವನು ಧಾರ್ಮಿಕ ಆಚರಣೆಗಲನ್ನು ರೂಡಿಸಿಕೊಂಡಿದ್ದಾನೆ. ಇಡೀ ಜೀವಮಾನವೆಲ್ಲ ಧರ್ಮದಿಂದಲೇ ನಡೆದುಕೊಂಡು ಸಾಗಿರುವುದು ಕಾಣಸಿಗುತ್ತದೆ. ಈ ಮೊದಲು ಪ್ರಾಕೃತಿಕವಾಗಿ ತನಗೆ ಗೋಚರಿಸಿದ ವಿಶಿಷ್ಟವಸ್ತುಗಳನ್ನು ಭಕ್ತಿಭಾವದಿಂದ ನಮಿಸಿ ಅವುಗಳ ಆರಾಧನೆಗೆ ತೊಡಗಿದನು. ತುಂಬಾ ವಿಸ್ಮಯವಾದ ಆ ವಸ್ತುಗಳೇ ಪಂಚಭೂತಗಳಾಗಿ ಪರಿಣಮಿಸಿವೆ. ಭೂಮಿ, ನೀರು, ಗಾಳಿ, ಆಕಾಶ, ಅಗ್ನಿ ಎಂಬುವುಗಳಿಂದ ತಮಗೆ ಕೆಡುಂಟಾಗದಿರಲಿ ಎಂಬ ಕಾರಣದಿಂದ ಭಕ್ತಿಭಾವದಿಂದ ನಮಿಸಿ ಆರಾಧಿಸತೊಡಗಿದನು.

ಹೀಗೆ ಪ್ರಾಕೃತಿಕ ವಿಸ್ಮಯಗಳಾದ ಪಂಚಭೂತಗಳಿಗೆ ಒಂದು ರೂಪಕೊಟ್ಟು ಅವುಗಳನ್ನು ಪೂಜಿಸಲು ತೊಡಗಿರುವುದು ಸರ್ವೆಸಾಮಾನ್ಯವಾದ ಸಂಗತಿ. ಮೂಲತಃ ಬುಡಕಟ್ಟು ವಾಸಿಗಳಾದ ಲಂಬಾಣಿಗರು ತಮ್ಮದೇ ಆದ ನಿಟ್ಟಿನಲ್ಲಿ ದೈವಭಕ್ತಿಗೆ ಪ್ರಾಧಾನ್ಯತೆಯನ್ನು ನೀಡಿರುವುದು ಕಂಡುಬರುತ್ತದೆ. ಪ್ರತಿಯೊಬ್ಬರು ಅನೇಕ ದೇವರುಗಳಿಗೆ ಭಕ್ತಿಭಾವದಿಂದ ಪೂಜೆ ಸಲ್ಲಿಸುತ್ತಾ ಬರುತ್ತಿರುವುದನ್ನು ಕಾಣಬಹುದಾಗಿದೆ.

ತಾವು ಬೆಳೆದ ಬೆಳೆ, ಸಾಕುವ ಪ್ರಾಣಿ, ಪಕ್ಷಿ ಹಾಗೂ ತಮ್ಮನ್ನು ಆ ದಿವ್ಯಶಕ್ತಿ ದೈವವು ಕಾಪಾಡುವುದೆಂಬ ಕಾರಣದಿಂದ ಪೂಜಾಚರಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಗಮನಾರ್ಹ ಸಂಗತಿಯೇ ಸರಿ. ಹೀಗೆ ಪೂಜೆಗೊಳಗಾದ ದೇವರುಗಳ ಪಟ್ಟಿಯೇ ಇಂದು ಬೆಳೆಯುತ್ತಾ ಸಾಗುತ್ತದೆ. ಸುಖ-ದುಃಖ ನಿವಾರಣೆಗಾಗಿ ದೈವಗಳಿಗೆ ಮೊರೆ ಹೋಗುವುದು ಕಂಡುಬರುತ್ತದೆ. ಹೀಗಾಗಿ ಪ್ರತಿಯೊಬ್ಬರು ಮನೆದೇವರು, ಮನದೇವರು, ಕುಲದೇವರು, ಊರದೇವರು, ನಾಡದೇವರು, ಕಾಡದೇವರು, ಪಿತೃದೇವರುಗಳೆಂದು ನಾನಾ ವಿಧಗಳ ದೇವರುಗಳ ಆರಾಧನೆಯಲ್ಲಿ ತೊಡಗುವರೆಂದು ಡಾ.ಡಿ.ಬಿ.ನಾಯಕರವರು ತಮ್ಮ ಸಂಶೋಧನಾ ಗ್ರಂಥದಲ್ಲಿ ತಿಳಿಸಿರುವರು. ಇದರೊಂದಿಗೆ ಆಯಾ ಜನಾಂಗದಲ್ಲಿ ಪ್ರಮುಖ ದೈವಗಳೊಂದಿಗೆ ಇಂದು

ಸಹಜವಾಗಿ ಪೂಜಾರ್ಹಗೊಳಗಾದ ಆಧುನಿಕ ದೈವಗಳಿಗೂ ಆರಾಧನೆ ಮಾಡುತ್ತಾ ಬರಲಾಗುತ್ತಿದೆ. ಈಚೆಗೆ ಮಾರಿದೈವಗಳ ಆರಾಧನೆಯ ಸಾಲಿನಲ್ಲಿ 'ಏಡ್ಸ್ ಅಮ್ಮ' ಎಂಬ ದೇವತೆಯು ಭಕ್ತರ ದೈವರಾಧನೆಯ ಸಾಲಲ್ಲಿ ಸ್ಥಾನ ಪಡೆದಿದ್ದಾಳೆಂದರೆ ಅದು ವಿಸ್ಮಯ ಸಂಗತಿಯೇ ಸರಿ. ಅನೇಕ ರೋಗರುಜಿನಗಳು ಬಾರದಿರಲಿ ಎಂದು ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿ ಗಾಳೆಮ್ಮ ದೇವತೆಗೆ ಹರಕೆ ಹೊತ್ತು ಭಕ್ತಿಯಿಂದ ಆಚರಣೆ ಮಾಡುತ್ತಿರುವುದು ಇಂದಿಗೂ ಗಮನಾರ್ಹ. ಹೀಗೆ ಆಚರಣೆ ಮಾಡಿದ ಗಾಳೆಮ್ಮ ದೈವದ ಆರಾಧನೆಗೆ ನಿಗದಿತ ಸಮಯವಿರುವುದಿಲ್ಲ. ತಮಗೆ ಅನುಕೂಲ ಆದಾಗ ಉತ್ತಮ ಬೆಳೆ ಬಂದಾಗ, ಇಲ್ಲವೇ ಸಂತಸದ ವೇಳೆ ಈ ದೇವಿಯ ದೇವಾಲಯ ಇರುವಲ್ಲಿಗೆ ಹೋಗಿ ಭಕ್ತಿಭಾವದಿಂದ ಪೂಜಿಸಿ, ಕಾಣಿಕೆ ಸಮರ್ಪಿಸಿ, ದೇವಿಯನ್ನು ಸಂಪ್ರೀತಗೊಳಿಸಲು ಕೋಳಿಬಲಿಯನ್ನು ಸಮರ್ಪಿಸುವುದು ಕಂಡುಬರುತ್ತದೆ.

ಇದೇ ರೀತಿಯಾಗಿ ಲಂಬಾಣಿ ಸಮುದಾಯದವರು ಹಬ್ಬ-ಹರಿದಿನಗಳಲ್ಲಿ ಆಯಾ ದೇವರುಗಳ ಆರಾಧನೆ ಮಾಡುತ್ತಾ ಬರುತ್ತಿದ್ದಾರೆ. ಈ ಹಿಂದಿನ ಸಂಪ್ರದಾಯದೊಂದಿಗೆ ಶಿಷ್ಟ ದೇವರುಗಳನ್ನು ಪೂಜಿಸತೊಡಗಿರುವರು. ಈ ಜನಾಂಗದಲ್ಲಿ ದೇವರುಗಳನ್ನು ಪೂಜಿಸುವ ಪದ್ಧತಿ ತುಂಬಾ ವಿಶಿಷ್ಟವಾಗಿದೆ. ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುವ ದೇವರುಗಳ ಜೊತೆಗೆ ಹಿಂದೂಗಳು ಆಚರಿಸುವ ಹಬ್ಬಗಳನ್ನು ಆಚರಿಸುವುದು ಕಂಡುಬರುತ್ತದೆ.

ಈ ಕಾರಣಕ್ಕಾಗಿ ಲಂಬಾಣಿಗರು ಹೆಚ್ಚಾಗಿ, ತಮಗೆ ಬರುವ ರೋಗರುಜಿನೆಗಳನ್ನು ನಿವಾರಣೆ ಮಾಡುವ ಶಕ್ತಿ ದೇವತೆಗಳಿಗಿವೆ ಎಂದು ನಂಬಿರುವರು. ಇದರಿಂದಾಗಿಯೇ ವರ್ಷಕ್ಕೊಮ್ಮೆ ಶಕ್ತಿದೇವತೆಗೆ ನಡೆದುಕೊಳ್ಳುತ್ತಿರುವುದು ಕಂಡುಬರುತ್ತದೆ. ಪ್ರತಿವರ್ಷವೂ ಆಯಾ ಗ್ರಾಮದಲ್ಲಿರುವ ಗ್ರಾಮದೇವತೆಯಾದ ಗಾಳೆಮ್ಮ ದೇವಿಯನ್ನು ಆರಾಧಿಸುವರು. ಈ ದೇವತೆಯೊಂದಿಗೆ ತಾವು ವಾಸವಾಗಿರುವ ಹಟ್ಟಿಗಳ ಹೊರವಲಯದಲ್ಲಿರುವ ಬೇವಿನ ಮರ, ಇಲ್ಲವೆ ಆಲದ ಮರಕ್ಕೆ ಪೂಜೆ ಸಲ್ಲಿಸಿ, ಅಲ್ಲಿ ಸಾತಿಸತ್ತಿ ಎಂಬ ದೇವತೆಯು ಇರುವಳೆಂಬ ನಂಬಿಕೆ ಈಗಲೂ ಇದೆ.

ಲಂಬಾಣಿಗರು ಪುರುಷ ದೈವಗಳಿಗಿಂತ ಸ್ತ್ರೀ ದೇವರುಗಳನ್ನು ಆಚರಿಸುವ ಹಿನ್ನೆಲೆಯಿಂದ ಅವರಲ್ಲಿ ಮಾತೃಪ್ರಧಾನ ಸಂಸ್ಕೃತಿ ಬೇರೂರಿದೆ. ಲಂಬಾಣಿ ಸಮುದಾಯದವರು ನಿತ್ಯಕಾಯಕವನ್ನು ರೂಢಿಸಿಕೊಂಡರೂ, ಆತ್ಮತೃಪ್ತಿ ಹಾಗೂ ಜೀವನ ಮುಕ್ತಿಗಾಗಿ ದೇವರ ಮೊರೆ ಹೋಗುವುದು ಕಾಣಸಿಗುತ್ತದೆ. ದೈವಾರಾಧನೆ ವೇಳೆಯಲ್ಲಿ ಪಾವಿತ್ರ್ಯತೆಯನ್ನು ಅನುಸರಿಸುತ್ತಾ ಆರಾಧಿಸುವುದು ಕಂಡುಬರುತ್ತದೆ. ದೇವರುಗಳ ಇರುವಿಕೆಯನ್ನು ತಿಳಿಸುವ ವ್ಯಕ್ತಿಯಾದ ಗುರುವಿನ ಮೇಲೆ ಅವರಿಗೆ ಅಪಾರ ಭಕ್ತಿಯಿದೆ. ತಮ್ಮ ಸಮಾಜದ ಗುರುಗಳನ್ನು ಸ್ಮರಿಸುವ ವಿಶಿಷ್ಟ ಗೀತೆಗಳನ್ನು ಇವರಲ್ಲಿ ಕಾಣಬಹುದಾಗಿದೆ.

ಈ ಸಮಾಜದಲ್ಲಿ ತಮ್ಮ ಮೂಲವಂಶಸ್ಥರಾದ ವ್ಯಕ್ತಿಗಳು ಜೀವನದಲ್ಲಿ ಅನೇಕ ಸಂಕಷ್ಟಕ್ಕೆ ಒಳಗಾಗಿ ಹೇಗೆ ದೈವತ್ವ ಸೇರಿದವರೆಂಬುದನ್ನು ತಿಳಿದು ಅವರ ವ್ಯಕ್ತಿತ್ವವು ಶಕ್ತಿಯಾಗಿ ಪರಿಣಮಿಸಿದರಿಂದ ಅವರನ್ನು

ಯಾವುದೇ ಹಬ್ಬ-ಹರಿದಿನಗಳ ಸಮಯದಲ್ಲಿ ಹಾಗೂ ನಿತ್ಯವೂ ಪೂಜೆ ಸಲ್ಲಿಸುವುದು ಅನೇಕ ತಾಂಡಾಗಳಲ್ಲಿ ಕಾಣಸಿಗುತ್ತದೆ.

ಹೀಗೆ ಪೂಜೆಗೆ ಅರ್ಹರಾದವರಲ್ಲಿ ಸೇವಾಲಾಲ್, ಮೀಟೂಬುಕ್ಯಾ ಡರ್ಕಿಭನ್ಕಿ, ಸಾತಿಸತ್ತಿ, ಶೀತಲ ಮಾತಾ ಮುಂತಾದ ದೇವರನ್ನು ಗುರುತಿಸಬಹುದಾಗಿದೆ. ಇವರೊಂದಿಗೆ ಆಧುನಿಕ ದೇವರುಗಳಾದ ಶ್ರೀರಾಮ, ಸೀತೆ, ವೆಂಕಟೇಶ್ವರ, ಶ್ರೀಕೃಷ್ಣ ಪರಮಾತ್ಮ, ಆಂಜನೇಯ, ಗಣೇಶ, ಮಂಜುನಾಥ, ಪಂಡರಾಪುರದ ಪಾಂಡುರಂಗ, ಮಂತ್ರಾಲಯದ ರಾಘವೇಂದ್ರಸ್ವಾಮಿ ಹಾಗೂ ಸಾಮರಸ್ಯ ಪ್ರತೀಕದ ಮೊಹರಂ ದೇವರುಗಳನ್ನು ಸಮಾನವಾಗಿಯೇ ಪೂಜಿಸುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಸಂಗತಿಯಾಗಿದೆ.

ಈ ರೀತಿಯ ದೈವಗಳ ಆಚರಣೆಯೊಂದಿಗೆ ಪ್ರತಿವರ್ಷಕ್ಕೆ ಒಮ್ಮೆ ಬರುವ ದಸರಾ ಹಬ್ಬ, ತೀಜ್ ಹಬ್ಬ, ದೀಪಾವಳಿ(ದವಾಳಿ) ಹಬ್ಬ, ಹೋಳಿಹಬ್ಬ ಹಾಗೂ ಶೀತಲ ಮಾತಾ(ಅಷಾಡ ದೇವತೆ) ಇವುಗಳನ್ನು ಲಂಬಾಣಿಗರು ಪ್ರಮುಖವಾಗಿ ಆಚರಿಸುವರು. ಇವುಗಳೊಂದಿಗೆ ನಾಗಚೌತಿ, ಯುಗಾದಿ, ಬಸವಜಯಂತಿ, ಗಣೇಶ ಹಬ್ಬಗಳನ್ನು ಜರುಗಿಸುವರು. ಹೀಗೆ ಸಾಂಪ್ರದಾಯಿಕವಾಗಿ ಆಚರಿಸುವ ಆಚರಣೆಗಳು ಇಂದು ನೆನ್ನೆ ಮೊನ್ನೆ ಜಾರಿಗೆ ಬಂದವುಗಳಲ್ಲ. ಅವುಗಳಿಗೆ ತನ್ನದೇ ಆದ ಹಿನ್ನೆಲೆಯಿದೆ. ಆದ್ದರಿಂದ ಅವುಗಳು ನಮ್ಮನ್ನು ಬಿಟ್ಟು ಹೋಗಲಾರವು. ಇದರಿಂದಲೇ ''ನಮ್ಮ ಜನರ ನಂಬಿಕೆ-ವಿಧಿವಿಧಾನ, ಆಚರಣೆಗಳು ಅಷ್ಟು ಸುಲಭವಾಗಿ ಕಳಚಿ ಬೀಳುವಂಥವುಗಳಲ್ಲ ಎಂಬ ಚಕ್ಕರೆ ಶಿವಶಂಕರರವರ ಮಾತು ಒಪ್ಪ ತಕ್ಕುದಾಗಿದೆ." ಈ ದೃಷ್ಟಿಯಿಂದ ಇಂದು ಮನುಷ್ಯ ಎಷ್ಟೇ ವೈಜ್ಞಾನಿಕ ಮನೋಭಾವನೆಗಳನ್ನು ರೂಢಿಸಿಕೊಂಡಿದ್ದರೂ ಸಹ ದೈವಾರಾಧನೆಯನ್ನು ಮಾತ್ರ ತೊರೆಯುವ ಸ್ಥಿತಿಯಲ್ಲಿಲ್ಲ. ಏಕೆಂದರೆ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಗುಳೇ ಲಕ್ಕಮ್ಮ ದೇವಿಯ ಜಾತ್ರೆಯ ವೇಳೆ ಗ್ರಾಮದ ಸಮಸ್ತರು ಊರಿಂದ ದೂರಕ್ಕೆ ಅಂದರೆ ಗುಳೇಲಕ್ಕಮ್ಮ ದೇವಾಲಯ ಸ್ಥಳಕ್ಕೆ ಬಂದು ಶ್ರದ್ಧೆಯಿಂದ ಆಚರಣೆಯನ್ನು ಕೈಗೊಳ್ಳುವರು. ಇದು ಇಂದಿಗೂ ಕಾಣಬಹುದಾಗಿದೆ.

ಈ ರೀತಿಯ ಸಾಂಪ್ರದಾಯಿಕ ಆಚರಣೆಗಳೊಂದಿಗೆ ಅವರ ಕುಲದೈವವಾದ ಸೇವಾಲಾಲ್ ದೈವದ ಆರಾಧನೆಯೇ ಲಂಬಾಣಿಗರಿಗೆ ಮುಖ್ಯವಾದರೂ ಸಹ ಹಿಂದೂ ಧರ್ಮದ ಅನೇಕ ದೇವರುಗಳು ಹಾಗೂ ಅವರು ಆಚರಿಸುವ ಆಚರಣೆಗಳನ್ನು ಆಚರಿಸುವರು.

ಲಂಬಾಣಿಗರು ಹಬ್ಬ-ಜಾತ್ರೆಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾರೆ. ಕೂಡ್ಲಿಗೆ ತಾಲ್ಲೂಕಿನ ಬಂಡೀಬಾಸಾಪೂರ ತಾಂಡದಲ್ಲಿ ಬಂಡೀ ಚೌಡಮ್ಮನ ಜಾತ್ರೆಯನ್ನು ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಹಡಗಲಿ ತಾಲ್ಲೂಕಿನ ಮೈಲಾರಲಿಂಗ ದೇವರಿಗೆ ಹರಕೆಯನ್ನು ನೆರವೇರಿಸುತ್ತಾರೆ. ಹಾಗೂ ಕೊಟ್ಟೂರಿನ ಬಸವೇಶ್ವರ ಜಾತ್ರೆಯನ್ನು ಸಹ ಅಲ್ಲಿನ ತಾಂಡಗಳು ಆಚರಿಸುತ್ತಾರೆ. ಹೊಸಪೇಟೆ ತಾಲೂಕಿನ ಜಂಬೂನಾಥ ಜಾತ್ರೆಯಲ್ಲಿ ಕಲ್ಲಹಳ್ಳಿ, ರಾಜಾಪುರ, ಚಿಲಕನ ಹಟ್ಟಿ, ಸಿದ್ದಾಪುರ ಏರಿಯಾದ ಲಂಬಾಣಿ ಸಮುದಾಯದವರು ತೇರನ್ನು ಎಳೆಯುವುದು ಇಂದಿಗೂ ಕಂಡುಬರುತ್ತದೆ. ಇದರಿಂದ ಹಬ್ಬ-ಜಾತ್ರೆಗಳಿಗೆ ಅವರು ಹೆಚ್ಚು ಮಹತ್ವವನ್ನು ನೀಡುತ್ತಾ ಬರುತ್ತಿರುವುದು ಗಮನಾರ್ಹ.

ಹಬ್ಬ ಎಂಬ ಪದವನ್ನು Festival ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಆರ್.ಎಸ್.ಭಾಗ್ಯ ರವರು ಹಬ್ಬವನ್ನು ಈ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ. ''Festival is Complex unit of customs and other tolkeose to celberate'' ಎಂದಿದ್ದಾರೆ. ಒಟ್ಟಾರೆಯಾಗಿ ಲಂಬಾಣಿ ಸಮಾಜದವರು ಸಾಂಘಿಕವಾಗಿಯೂ ಸಾರ್ವತ್ರಿಕವಾಗಿಯೂ ಹಬ್ಬ ಜಾತ್ರೆಗಳನ್ನು ನಡೆಸುವುದು ಕಂಡುಬರುತ್ತದೆ. ಎಲ್ಲ ಸಮಾಜದ ಜನರು ಆಚರಿಸುವ ಹಬ್ಬಗಳನ್ನು ಸಹ ವಿಧಿ ವಿಧಾನಗಳಂತೆ ರೂಢಿಸಿಕೊಂಡರು ಪ್ರತ್ಯೇಕವಾಗಿ ಹಟ್ಟಿಯಲ್ಲಿ ರಾಷ್ಟ್ರೀಯ ಹಬ್ಬಗಳ ವೇಳೆ ತಮ್ಮ ಕುಲಗುರುವಾದ ಸೇವಾಲಾಲ್‌ನನ್ನು ಆಚರಣೆ ಮಾಡುವುದು ವಾಡಿಕೆಯಾಗಿದೆ. ಕೆಲವು ಹಬ್ಬಗಳ ಆಚರಣೆಯ ವೇಳೆ ಜಾತ್ರೆ ಅಂದರೆ ತೇರನ್ನು ಈ ಭಾಗದಲ್ಲಿ ಎಳೆಯುವರು ಈ ಜಾತ್ರೆಯ ಸಮಯದಲ್ಲಿ ಆಯಾ ಊರಿನ ಹೊರ ವಲಯದಲ್ಲಿ ವಾಸಿಸುವ ಲಂಬಾಣಿ ಜನರು ಹೋಗಿ ಜಾತ್ರಿಯಲ್ಲೆ ಪಾಲ್ಗೊಳ್ಳುವರು. ಜಲ್ಲೆಯ ಬಳ್ಳಾರಿ ದುರ್ಗಮ್ಮ, ಹಂಪಿ ಜಾತ್ರೆ, ಸಂಡೂರಿನ ಕುಮಾರಸ್ವಾಮಿ ಜಾತ್ರೆ, ಹೊಸಪೇಟೆಯ ಜಂಬೂನಾಥ, ಅನಂತಶಯನ ಗುಡಿ, ಸಣ್ಣಕ್ಕಿ ವೀರಭದ್ರೇಶ್ವರ, ಚಿತ್ತವಾಡ್ಗೆಪ್ಪ, ಉಜ್ಜಿನಿಯ ಮರುಳಸಿದ್ದೇಶ್ವರ, ಮೈಲಾರ ಜಾತ್ರೆ, ಎಮ್ಮಿಗನೂರು ಜಡಿತಾತನ ಜಾತ್ರೆಗಳಲ್ಲು ಲಂಬಾಣಿ ಸಮುದಾಯದವರು ಪಾಲ್ಗೊಂಡು ತಮ್ಮ ಭಕ್ತಿಯನ್ನು ಸಮರ್ಪಿಸುವರು. ಜಾತ್ರೆಯ ಆಚರಣೆಗಳು ಕೇವಲ ಸಾಂಪ್ರದಾಯಿಕವಾಗಿ ಜರುಗಿಸುವರು. ಹೀಗಾಗಿ ''ಸಾಂಪ್ರದಾಯಿಕ ಪೂಜೆ-ಪುನಸ್ಕಾರಾದಿ ಆಚರಣೆಗಳಿಂದ ನಡೆದುಕೊಳ್ಳುವುದು ಜಾತ್ರೆ ಎಂದು ಹೇಳಿರುವುದು ಸರಿಯಿದೆ. ಒಟ್ಟಿನಲ್ಲಿ ಜಾತ್ರೆಯ ವೇಳೆ ಜನ ಸೇರಿದರೆ ಮಾತ್ರ ಜಾತ್ರೆ ಎನ್ನುವಂತೆ ಎಲ್ಲಾ ಸಮುದಾಯದವರು ಪಾಲ್ಗೊಂಡು ಭಕ್ತಿಭಾವದಿಂದ ನಡೆದುಕೊಳ್ಳುವುದು ಮುಖ್ಯವೆನಿಸಿದೆ.

ಇಂತಹ ವೈಶಿಷ್ಟ್ಯ ಪೂರ್ಣವಾಗಿ ಆಚರಿಸುವ ಜಾತ್ರೆ ಎಂಬ ಪದವನ್ನು 'ಯಾತ್ರಾ' ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಏಕೆಂದರೆ ಯಾತ್ರೆಯ ಮೂಲಕ ಸಾಗಿ ಜಾತ್ರೆಗಳನ್ನು ನೋಡಿ ಬರುತ್ತಿದ್ದರು ಎಂಬುದು ಗಮನಾರ್ಹ. ಇಂದಿಗೂ ಬಹುತೇಕ ಜಿಲ್ಲೆಯ ಹಲವು ತಾಂಡಾಗಳ ಜನರು ಆಧುನಿಕ ದೈವವಾದ ತುಳಜಾಭವಾನಿ, ಶ್ರೀ ಪಾಂಡುರಂಗನಾಥನ ದರ್ಶನ ಭಾಗ್ಯ ಪಡೆಯಲು ಪಾದಯಾತ್ರೆ ಮೂಲಕ ತೆರಳುತ್ತಾರೆ. ಪ್ರತಿ ವರುಷವೂ ಜಿಲ್ಲೆಯ ಹಲವು ತಾಂಡಾಗಳ ಜನರು ವರ್ಷಕ್ಕೆ ಒಮ್ಮೆ ಶ್ರೀಪಾಂಡುರಂಗನಾಥನ ಭಾವಚಿತ್ರ ಹಿಡಿದುಕೊಂಡು ಕಾಲ್ನಡಿಗೆ ಮೂಲಕ ಪಂಡರಾಪುರಕ್ಕೆ ತೆರಳುತ್ತಾರೆ. ಇದು ಇಂದಿಗೂ ನಡೆಯುತ್ತದೆ. ಏಕೆಂದರೆ ಮನುಷ್ಯ ಮುಕ್ತಿಯ ಮಾರ್ಗ ಬಯಸುವುದರಿಂದ ಅನ್ಯ ಧರ್ಮಗಳ ದೇವರುಗಳ ಉಪಾಸನೆ ಮಾಡುತ್ತಾ ಅದರ ನೀತಿ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಪ್ರಯಾಸದಾಯಕವಾದರೂ ಯಾತ್ರೆ ಮಾಡಿ ಬರುವರು. ಇದಕ್ಕೆ ದಿನಗಳ ಗಣನೆಯಿಲ್ಲ. ಈ ಯಾತ್ರೆಯಲ್ಲಿ ಹಿರಿಯರಾದಿಯಾಗಿ ಚಿಕ್ಕ ಮಕ್ಕಳನ್ನು ಸಹ ಕರೆದೊಯ್ಯುತ್ತಾರೆ. ಆಯಾ ಊರಿನ ತಾಂಡಾಗಳಲ್ಲಿ ತಂಗಿ, ಅಲ್ಲಿ ಸತ್ಕಾರಗಳನ್ನು ಸ್ವೀಕರಿಸಿ ಬೆಳಗಿನ ಜಾವದ ವೇಳೆ ಪ್ರಯಾಣಕ್ಕೆ ಸಿದ್ಧರಾಗುತ್ತಾರೆ. ಹೀಗೆ ಅವರು ಭಜನೆ ಮಾಡುತ್ತಾ ಸಾಗುವುದು ತುಂಬಾ ವಿಶೇಷವಾಗಿದೆ. ಇದರಲ್ಲಿ ಪುರುಷರು ಮತ್ತು ಸ್ತ್ರೀಯರು ಪಾಲ್ಗೊಂಡಿರುತ್ತಾರೆ.

ರಾಷ್ಟ್ರೀಯ ಹಬ್ಬಗಳನ್ನು ತುಂಬಾ ವಿಭಿನ್ನವಾಗಿ ಈ ಜನ ಸಮೂಹದಲ್ಲಿ ಆಚರಿಸುವುದು ಕಂಡುಬರುತ್ತದೆ. ಜಿಲ್ಲೆಯ ಬಹುತೇಕ ತಾಂಡಾಗಳಲ್ಲಿ ಹಿಂದೂಗಳು ಆಚರಿಸುವ ಹಬ್ಬಗಳ ದಿನದಂದೆ ತಮ್ಮ ಹಟ್ಟಿಗಳಲ್ಲಿ ಜರುಗಿಸುವರು. ಆದರೆ ಅವರಿಗಿಂತ ತುಂಬಾ ಭಿನ್ನವಾಗಿ ಹಬ್ಬಗಳನ್ನು ನಡೆಸುವುದು ಜಿಲ್ಲೆಯಲ್ಲಿ ಕಂಡುಬಂದಿದೆ. ಹಬ್ಬಗಳಲ್ಲಿ ದಸಾರಾ, ದೀಪಾವಳಿ ಮತ್ತು ಹೋಳಿಹಬ್ಬಗಳು ಹಿಂದೂಗಳಿಗಿಂತಲೂ ಯುಗಾದಿ ವಿಭಿನ್ನವಾಗಿ ಆಚರಿಸುವರು.

ಕೆಲವು ಹಬ್ಬಗಳ ಆಚರಣೆಯ ವೇಳೆ ಜಾತ್ರೆಯನ್ನು ಜರುಗಿಸುವರು. ಹಬ್ಬಗಳ ಆಚರಣೆಯು ವ್ಯಷ್ಠಿಯಾಗದೆ ಸಮಷ್ಠಿ ಪ್ರಜ್ಞೆಯನ್ನು ಬಿಂಬಿಸುತ್ತದೆ. ಹಬ್ಬಗಳ ವೇಳೆ ಜರುಗುವ ಜಾತ್ರೆಗಳಲ್ಲಿ ಎಲ್ಲಾ ಸಮುದಾಯದವರೂ ಪಾಲ್ಗೊಂಡು ಆಚರಿಸುವುದು ಕಂಡುಬರುತ್ತದೆ. ಬಹುತೇಕವಾಗಿ ಜಾತ್ರೆಗಳು ಮಳೆಗಾಲಕ್ಕಿಂತ ಬೇಸಿಗೆಯ ಕಾಲದಲ್ಲಿ ಆಚರಿಸುವುದು ಕಾಣಸಿಗುತ್ತದೆ. ಈ ರೀತಿಯ ಜಾತ್ರೆ-ಹಬ್ಬ ಆಚರಣೆಗಳನ್ನು ಕೃಷಿಕ ಸಮುದಾಯದವರು ಹೆಚ್ಚಾಗಿ ಜರುಗಿಸುವರು. ಹಬ್ಬ-ಜಾತ್ರೆಗಳೊಂದಿಗೆ ಜಿಲ್ಲೆಯಲ್ಲಿ ವರ್ಷಕ್ಕೆ ಒಮ್ಮೆ ಅದರಲ್ಲೂ ಮಳೆಗಾಲದಲ್ಲಿ ಮಳೆಬಂದಿದ್ದರೆ ಅಮ್ಮನನ್ನು ಕಳಿಸುವ ಈ ಆಚರಣೆಯನ್ನು ಹಮ್ಮಿಕೊಳ್ಳುವರು. ಹೊಸಪೇಟೆ ತಾಲೂಕಿನ ಕಲ್ಲಹಳ್ಳಿ-ರಾಜಾಪುರ ಗ್ರಾಮದ ಜನರು ಹೊಸಪೇಟೆ ಹೊರವಲಯದಲ್ಲಿ ಗಾಳೆಮ್ಮನ ಮೂರ್ತಿಯನ್ನು ತಂದುಬಿಡುತ್ತಾರೆ. ಈ ಮೂರ್ತಿಯೊಂದಿಗೆ ಹೊಸಪೇಟೆಯ ಮುದಿಯಪ್ಪನ ಗುಡಿಯಲ್ಲಿ ಕೂಡಿಸಿದ್ದ ಗಾಳೆಮ್ಮನ ಉತ್ಸವಮೂರ್ತಿಯನ್ನು ಹೊತ್ತು ಅನಂತಶಯನ ಗುಡಿಯ ಭಾಗದವರೆಗೂ ಗಾಳೆಮ್ಮನ ಮೂರ್ತಿಯನ್ನು ಇಟ್ಟುಬರುತ್ತಾರೆ. ಅಷ್ಟೊತ್ತಿಗಾಗಲೇ ಆ ಏರಿಯಾದಿಂದ ಜನರು ಸಿದ್ಧರಾಗಿ ಅಲ್ಲಿಂದ ಗಾಳೆಮ್ಮ ದೇವಿಗೆ ನೀಡಿದ ಕಾಣಿಕೆ, ಹಣ್ಣು ಹಂಪಲು ಹಾಗೂ ಮೂರ್ತಿಯನ್ನು ಸಾಗಿಸುತ್ತಾರೆ. ಹೀಗೆ ಸಾಗಿದ ಮೂರ್ತಿಯನ್ನು ಗಾಳೆಮ್ಮನಗುಡಿ ಗ್ರಾಮಕ್ಕೆ ತೆಗೆದುಕೊಂಡು ಹೋಗುವರು. ಅಲ್ಲಿಂದ ಮುಂದಕ್ಕೆ ಒಯ್ಯುವುದಿಲ್ಲ. ಏಕೆಂದರೆ ಗಾಳೆಮ್ಮಗುಡಿ ಏರಿಯಾದಲ್ಲಿ ಗಾಳೆಮ್ಮ ದೇವಿಯ ವಾಸಸ್ಥಳ ಎಂಬ ಪ್ರತೀತಿಯಿಂದ ಆ ಸ್ಥಳದಿಂದ ಮುಂದಕ್ಕೆ ಗಾಳೆಮ್ಮನನ್ನು ಸಾಗಿಸುವುದಿಲ್ಲ ಎಂಬುದು ಪ್ರತೀತಿ. ಇದು ಒಂದು ರೀತಿ ಭಕ್ತಿಭಾವ ಸಂಭ್ರಮೋತ್ಸವವಾಗಿ ಪರಿಣಮಿಸಿದೆ.

**ದಸರಾ ಹಬ್ಬ :** ಹಬ್ಬಗಳಲ್ಲಿ ತುಂಬಾ ಪ್ರಸಿದ್ಧವಾದ ಹಬ್ಬವೆಂದರೆ ದಸರಾ ಹಬ್ಬವಾಗಿದೆ. ಈ ಹಬ್ಬವು ನಾಡಹಬ್ಬವಾಗಿ ಆಚರಣೆ ಮಾಡಲಾಗುತ್ತದೆ. ಬಹುತೇಕ ಹಿಂದೂಗಳು ದಸರಾ ಹಬ್ಬವನ್ನು ಆಚರಿಸುವರು. ದಸರಾ ಹಬ್ಬವನ್ನು ಗ್ರಾಮೀಣ ಭಾಗದಲ್ಲಿ ಮಾರ್ನಾಮಿ, ನವರಾತ್ರಿ, ವಿಜಯ ದಶಮಿ ಎಂತಲೂ ಕರೆಯುವರು. ಈ ಹಬ್ಬವನ್ನು ವೈಶಿಷ್ಟ್ಯ ಪೂರ್ಣವಾಗಿ ಆಗಿನ ವಿಜಯನಗರ ಸಾಮ್ರಾಜ್ಯದ ಅರಸರುಗಳು ಹಂಪೆಯಲ್ಲಿ ಆಚರಿಸುತ್ತಿದ್ದರೆಂದು ವಿದೇಶಿ ವಿದ್ವಾಂಸರು ತಮ್ಮ ಕೃತಿಗಳಲ್ಲಿ ನೀಡಿದ ದಾಖಲೆಯಿಂದ ತಿಳಿದುಬರುತ್ತದೆ.

ಅಶ್ವಿನ ಮಾಸ ಶುಕ್ಲಪಕ್ಷದ ನವಮಿ ದಿನದಂದು ಆಚರಣೆ ಮಾಡುವ ಈ ಹಬ್ಬವನ್ನು ನವರಾತ್ರಿಯೆಂದು ಹೆಸರು. ದೇವಿಪುರಾಣದ ಪ್ರಕಾರ ದುರ್ಗಾದೇವಿಯು ಚಂಡಮುಂಡ ರಕ್ಕಸರನ್ನು ೧೦ ದಿನಗಳ ಕಾಲ

ಹೋರಾಡಿ ಅವರನ್ನು ಸಂಹಾರ ಮಾಡುತ್ತಾಳೆ. ಇದರಿಂದ ದಶಹರ ಎಂಬುದೇ ದಸರಾ ಎಂಬ ಪದವು ಬಳಕೆ ಮಾಡಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಇಂದಿಗೂ ಮಹಾನವಮಿ ಅಮವಾಸೆ ಆದ ದಿನದಿಂದ ೯ ದಿನ ಅತ್ಯಂತ ಶ್ರದ್ಧೆ ಹಾಗೂ ಭಕ್ತಿಪೂರ್ವಕವಾಗಿ ದೇವಿಯ ಅಂದರೆ ದುರ್ಗಾದೇವಿಯ ಆರಾಧನೆ ಮಾಡುವರು. ಆಯಾ ಊರಿನ ಇಲ್ಲವೆ ತಾಂಡಾಗಳಲ್ಲಿರುವ ಬನ್ನಿಮರದ ಬಳಿಗೆ ತೆರಳಿ ಪೂಜೆಸಲ್ಲಿಸುವರು.

"ದಸರಾಹಬ್ಬ"ವು ಪೌರಾಣಿಕವಾಗಿಯೂ ಹಾಗೂ ಐತಿಹಾಸಿಕವಾಗಿ ತುಂಬಾ ಮಹತ್ವ ಹೊಂದಿದೆ. ಜನಪದರ ಉಲ್ಲೇಖದಂತೆ ಬನ್ನಿಮರದಲ್ಲಿ ದೇವಿಯು ನೆಲೆಸಿರುವಳೆಂದು ಆಯಾ ಹಟ್ಟಿಯ ಬಳಿಯಲ್ಲಿ ಬನ್ನಿಮರಕ್ಕೆ ಸೀರೆಯನ್ನು ತೊಡಿಸಿ ಇಲ್ಲವೆ, ಗಿಡದ ಸುತ್ತಲೂ ಗೋಡೆ ಕಟ್ಟಿಸಿ ದುರ್ಗಾದೇವಿಯ ಭಾವ ಚಿತ್ರ ಇಲ್ಲವೇ ತಾಮ್ರದ ಬಿಂದಿಗೆಯನ್ನಿಟ್ಟು ಪೂಜಿಸುವರು. ಅಲ್ಲದೆ ಮಹಾಭಾರತದ ಸಂದರ್ಭದ ವೇಳೆ ಪಾಂಡವರು ಅಜ್ಞಾತವಾಸಕ್ಕೆ ಹೋಗುವ ಮುಂಚೆ ತಮ್ಮ ಆಯುಧಗಳನ್ನು ಬನ್ನಿಮರದಲ್ಲಿ ಇಟ್ಟಿದ್ದರೆಂಬ ಕಾರಣದಿಂದಲೂ ಬನ್ನಿಗಿಡಕ್ಕೆ ಪೂಜೆ ಸಲ್ಲಿಸತೊಡಗಿದ್ದಾರೆ. ಈ ಚಿತ್ರಣವನ್ನು ಬಿಂಬಿಸಲು ಜನಪದರ ತ್ರಿಪದಿಯೊಂದು ಬಳಕೆಯಾಗಿದೆ.

"ಬನ್ನಿಗಿಡದಾಗ ಬಾಣ ಇಟ್ಟೇವಿ ತಾಯಿ|
ಯಾರೂ ಬಂದರೂ ಕೊಡಬೇಡ| ಹಡದಮ್ಮ
ಅರ್ಜುನ ಬಂದರೆ ಕೊಡಬೇಕು||"

ಎಂಬುದು ಜನಪದ ಸಾಹಿತ್ಯದಿಂದ ಕಂಡುಬರುತ್ತದೆ. ಇದೇ ಕಾರಣಕ್ಕಾಗಿ ಹೊಸಪೇಟೆ ತಾಲೂಕಿನ ನಾಗೇನಹಳ್ಳಿ ಪಕ್ಕದ ಧರ್ಮದಗುಡ್ಡೆ ಎಂಬ ಗ್ರಾಮದಲ್ಲಿರುವ ಬನ್ನಿಮರದಲ್ಲಿ ಪಾಂಡವರು ಅಜ್ಞಾತವಾಸಕ್ಕೆ ಬಂದಾಗ ಆಯುಧಗಳನ್ನು ಇಟ್ಟು ಇದರ ಎದುರಿಗೆ ಇರುವ ಗುಡ್ಡದ ಗುಹೆಯಲ್ಲಿ ವಾಸವಾಗಿದ್ದರೆಂದು ಅಲ್ಲಿನ ಸ್ಥಳಪುರಾಣದಿಂದ ತಿಳಿಯುತ್ತದೆ. ಆದ್ದರಿಂದ ಇಂದಿಗೂ ಪ್ರತಿವರ್ಷ ದಸರಾ ಹಬ್ಬದ ೯ನೇ ದಿನದಂದು ಊರಬನ್ನಿಗೆ ಮುಂಚೆ ಗುಡ್ಡದಬನ್ನಿ ಎಂದು ಜರುಗಿಸುವರು. ಈ ಗ್ರಾಮದ ಸುತ್ತಲೂ ವಾಸವಾಗಿರುವ ಲಂಬಾಣಿ ಜನರು ಗುಡ್ಡದಬನ್ನಿ ಆಚರಣೆಯಲ್ಲಿ ಪಾಲ್ಗೊಳ್ಳುವರು.

ಈ ಹಬ್ಬದ ದಿನದಂದು ಲಂಬಾಣಿ ಜನಾಂಗದ ಮಹಿಳೆಯರು ಹಿಂದೂಗಳು ಕೈಗೊಳ್ಳುವ ೯ ದಿನಗಳ ಪೂಜೆಯನ್ನು ಶ್ರದ್ಧಾ ಭಕ್ತಿಯಿಂದ ಕೈಗೊಳ್ಳುತ್ತಾರೆ. ಬೆಳಗಿನ ಜಾವ ಮಡಿಯಿಂದಲೇ ಬನ್ನಿಮರ ಇರುವಲ್ಲಿಗೆ ತೆರಳಿ ನಿತ್ಯವು ಪೂಜೆ ಸಲ್ಲಿಸುತ್ತಾರೆ. ಈ ಎಲ್ಲಾ ಪೂಜೆಗಳನ್ನು ಮುಗಿಸಿದ ಬಳಿಕವೇ ೧೦ನೇ ದಿನದಂದು ತಮ್ಮ ತಮ್ಮ ತಾಂಡಾಗಳಲ್ಲಿ ದಸರಾ ಹಬ್ಬವನ್ನು ಆಚರಿಸುವರು.

ದಸರಾ ಹಬ್ಬದ ವೇಳೆಯೂ ಸಹ ತಮ್ಮ ತಾಂಡಾದಲ್ಲಿರುವ ದುರ್ಗಮ್ಮಾ, ಸೇವಾಬಾಯ, ಮಿಟುಭುಕ್ಯಾ, ಮರಿಯಮ್ಮ ಮುಂತಾದವರ ದೇವಾಲಯಗಳಿಗೆ ಸಾಗಿ ಪೂಜೆ ಕೈಗೊಳ್ಳುವರು. ಇವರೊಂದಿಗೆ ತಮ್ಮ ತಮ್ಮ ಮನೆಯಲ್ಲಿ ಹಿಂದುಗಳು ಪಿತೃದೇವತಾರಾಧನೆ ಕೈಗೊಂಡಂತೆ ಇವರು ಸಹ ತಮ್ಮ

ಪೂರ್ವಜರಿಗೆ, ಕುಲದೇವತೆಗಳಿಗೆ ಭಕ್ತಿಯಿಂದ ಪೂಜೆ ಜರುಗಿಸಿ ಅಂದು ಮಾಡಿದ ಸಿಹಿ ಅಡುಗೆಯನ್ನು ದೇವಿಗೆ ಎಡೆ ನೀಡುತ್ತಾರೆ. ಅಲ್ಲದೆ ಕೆಲವು ತಾಂಡಾಗಳಲ್ಲಿ ತಾಂಡದ ಎಲ್ಲರೂ ಜನರು ಸೇರಿ ಹಣ ನೀಡಿ ಕುರಿಬಲಿಯನ್ನು ನೀಡಿ ಮಾಂಸದ ನೈವೇದ್ಯ ಮಾಡಿ ಸಾಮೂಹಿಕವಾಗಿ ಭೋಜನ ಕೈಗೊಳ್ಳುವರು.

ಸೇವಾಲಾಲ್ ದೇವಾಲಯಕ್ಕೆ ಸುಣ್ಣ-ಬಣ್ಣದಿಂದ ಸಿಂಗರಿಸಿಕೊಂಡು ತಮ್ಮ ಮನೆಗಳಿಗೂ ಸುಣ್ಣಬಣ್ಣದಿಂದ ಸಿಂಗಾರ ಮಾಡಿಕೊಳ್ಳುತ್ತಾರೆ. ಏಕೆಂದರೆ ಈ ಹಬ್ಬವು ನಾಡಹಬ್ಬವಾಗಿ ಪರಿಣಮಿಸಿದೆ ಎನ್ನಬಹುದು. ಆಯಾ ತಾಂಡಾದ ಯಜಮಾನನ ಮಾತಿನಂತೆ ಪೂಜೆ-ಪುನಸ್ಕಾರಗಳನ್ನು ಜರುಗಿಸುವರು. ಜಿಲ್ಲೆಯ ಸಂಡೂರು ತಾಲೂಕಿನ ಹಲವು ಗ್ರಾಮಗಳಲ್ಲಿ ಲಂಬಾಣಿ ಜನಸಮೂಹವೇ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿರುವುದು ಕಾಣಸಿಗುತ್ತದೆ. ಏಕೆಂದರೆ ಮೂಲತಃ ಗುಡ್ಡಗಾಡಿನಲ್ಲಿ ವಾಸಿಸುವ ಈ ಜನಸಮೂಹವು ಗುಡ್ಡಗಾಡುಗಳ ತಪ್ಪಲಲ್ಲೇ ಇಂದಿಗೂ ಜೀವಿಸುತ್ತಿರುವುದು ಕಂಡುಬರುತ್ತದೆ. ಸಂಡೂರಿನ ಕುಮಾರಸ್ವಾಮಿ ಬೆಟ್ಟ ಹಾಗೂ ಸುಶೀಲಾನಗರ ಮತ್ತು ಕಲ್ಲಹಳ್ಳಿ ಎಂಬ ಗ್ರಾಮಗಳು ಬೆಟ್ಟ ಗುಡ್ಡಗಳ ತಪ್ಪಲಲ್ಲಿ ಇವೆ. ಈ ಗ್ರಾಮಗಳಲ್ಲಿರುವ ಯಾವುದೇ ತಾಂಡಾಗಳಲ್ಲಿ ಬನ್ನಿಮರದ ದೇವಾಲಯವು ಇದೆ.

ಕೆಲವು ತಾಂಡಾಗಳಲ್ಲಿ ಮಾರಿಯಮ್ಮ ದೇವಾಲಯದಲ್ಲಿ ಕಲ್ಲಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಈ ದೇವಾಲಯದಲ್ಲಿಯೇ ದಸರಾ ಹಬ್ಬದ ವೇಳೆ ವಿಶಿಷ್ಟವಾಗಿ ಪೂಜೆ ಕೈಂಕಾರ್ಯಗಳನ್ನು ಜರುಗಿಸುವುದು ಕಂಡುಬರುತ್ತದೆ. ಆದರೆ ಹೊಸಪೇಟೆಯ ತಾಲೂಕಿನ ಪಟ್ಟಣಕ್ಕೆ ಸಮೀಪವಾಗಿರುವ ಕಡೆ ವಾಸವಾಗಿರುವ ಕೆಲವು ತಾಂಡಾಗಳಿಗೆ ಹೆಸರಿವೆ. ಇನ್ನೂ ಕೆಲವು ಆಯಾ ಗ್ರಾಮದ ಹೆಸರಲ್ಲೇ ವಿಲೀನವಾಗಿದ್ದರೂ ಆ ಏರಿಯಾದ ಹೊರವಲಯದಲ್ಲಿ ತಮ್ಮ ಜನಾಂಗದವರೆಲ್ಲರೂ ಸೇರಿ ವಾಸವಾಗಿರುವುದು ಕಂಡುಬರುತ್ತದೆ.

ಅನಂತಶಯನಗುಡಿಯ ಪಾಂಡುರಂಗ ಕಾಲೋನಿಯಲ್ಲಿರುವ ಲಂಬಾಣಿ ಜನರು ಪ್ರತ್ಯೇಕವಾಗಿ ಮಾರಿಯಮ್ಮ ದೇವಾಲಯವನ್ನು ಕಟ್ಟಿಕೊಂಡಿದ್ದಾರೆ. ಈ ದೇವಾಲಯದ ಬಳಿ ದಸರಾ ಹಬ್ಬದ ವೇಳೆ ೯ ದಿನದ ವಿಶೇಷಪೂಜೆ ಕೈಗೊಳ್ಳುವರು. ಜೊತೆಗೆ ಶ್ರೀಮಾರಿಯಮ್ಮ ದೇವಾಲಯದ ವಾರ್ಷಿಕೋತ್ಸವವನ್ನು ಅತ್ಯಂತ ಅದ್ದೂರಿಯಾಗಿ ಜರುಗಿಸುವರು.

ದಸರಾ ಹಬ್ಬವು ವಿಶಿಷ್ಟವಾಗಿ ತಮ್ಮದೇ ಆದ ಹಿನ್ನೆಲೆಯಲ್ಲಿ ಜರುಗಿಸುವರು. ಕೆಲವು ತಾಂಡಗಳಲ್ಲಿ ತಮ್ಮ ಸಾಂಪ್ರದಾಯಿಕ ಉಡುಗೆಗಳನ್ನು ಉಟ್ಟುಕೊಂಡು ದೇವಿಯನ್ನು ಪ್ರಾರ್ಥಿಸುವ ಗೀತೆಗಳನ್ನು ಹಾಡುವರು. ದುರ್ಗಾದೇವಿಯನ್ನು ಭಕ್ತಿಯಿಂದ ಆರಾಧಿಸುವ ಸ್ತುತಿ ಗೀತೆಯನ್ನು ಹೇಳುವುದು ವಾಡಿಕೆಯಾಗಿದೆ. ಈ ದೇವಿಯು ಸೇವಾಲಾಲ್‌ನಿಂದ ಪೂಜಿಸಲ್ಪಟ್ಟಿದ್ದಾಳೆಂದು ದುರ್ಗಾದೇವಿಯ ಹಾಡಿನಲ್ಲಿ ವ್ಯಕ್ತವಾಗಿದೆ.

**ದೀಪಾವಳಿ(ದವಾಳಿ) ಹಬ್ಬ:** ಹಿಂದೂಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ದೀಪಾವಳಿ ಹಬ್ಬವು ಪ್ರಮುಖವಾದುದಾಗಿದೆ. ಹೆಸರೆ ಸೂಚಿಸುವಂತೆ ಇದು ದೀಪಗಳ ಹಬ್ಬವಾಗಿದೆ. ಈ ಹಬ್ಬವನ್ನು ಲಂಬಾಣಿ ಸಮಾಜದವರು ತುಂಬಾ ವಿಭಿನ್ನವಾಗಿ ಆಚರಿಸುವರು. ಈ ಹಬ್ಬವು ಅಕ್ಟೋಬರ್ ತಿಂಗಳ ಕೊನೆಯವಾರ

ಅಂದರೆ ಅಶ್ವಿನಿ ಮಾಸದ ಕೊನೆ ಇಲ್ಲವೆ ಕಾರ್ತಿಕ ಮಾಸದ ಮೊದಲ ವಾರದಲ್ಲಿ ಈ ಹಬ್ಬವನ್ನು ಜರುಗಿಸುವರು. ಅಜ್ಞಾನದ ಅಂಧಕಾರವು ಜ್ಞಾನದ ಬೆಳಕಿನಿಂದ ದೂರುವುದರ ಸಂಕೇತವೇ ದೀಪಾವಳಿಯಾಗಿದೆ. ಈ ಹಬ್ಬವನ್ನು ಗ್ರಾಮೀಣ ಭಾಗದಲ್ಲಿ 'ಹಟ್ಟಿಹಬ್ಬ' ಎಂತಲೂ ಕರೆಯುತ್ತಾರೆ. ಲಂಬಾಣಿ ಸಮುದಾಯದವರು ತಾಂಡಾಗಳಲ್ಲಿ ವಾಸಿಸುವರು. ತಾಂಡಾಗಳಲ್ಲಿ ಹೆಚ್ಚಾಗಿ ಗುಡಿಸಲುಗಳಲ್ಲಿ ವಾಸವಾಗಿರುವರು. ಗುಡಿಸಲು ಎಂದರೆ ಹಟ್ಟಿ ಎನ್ನುವರು. ಇದರಿಂದಲೇ 'ಹಟ್ಟಿಹಬ್ಬ' ಎಂಬುದೂ ಸಹ ಎಲ್ಲಾ ಧರ್ಮದವರು ಬಳಸಿದ್ದು ಮಹತ್ವದ ವಿಚಾರವಾಗಿದೆ.

'ದೀಪಾವಳಿ' ಹಬ್ಬದಾಚರಣೆಯೂ ಐತಿಹಾಸಿಕವಾಗಿಯೂ, ಪೌರಾಣಿಕವಾದ ಅಂಶಗಳಿಂದ ಬಿಂಬಿತ ವಾಗಿದೆ. ಐತಿಹಾಸಿಕವಾಗಿ ಬಲಿಚಕ್ರವರ್ತಿ ಚಿತ್ರಣ ಕಂಡುಬರುತ್ತದೆ. ಇದಕ್ಕೆ ಬಲಿಪಾಡ್ಯಮಿ ಎಂದು ಆಚರಿಸು ವರು. ಪುರಾಣಗಳ ಪ್ರಕಾರ ನರಕಾಸುರನನ್ನು ಶ್ರೀಕೃಷ್ಣನು ಸಂಹರಿಸಿದ್ದರಿಂದ ನರಕ ಚತುರ್ಧಶಿ ಎನ್ನುವರು. ಮತ್ತೊಂದು ದಿನ ದೀಪಾವಳಿ ಹಬ್ಬವಾಗಿ ಆಚರಿಸುವರು. ಹೀಗೆ ದೀಪಾವಳಿ ಹಬ್ಬವು ಮೂರು ದಿನಗಳ ಕಾಲ ಜರುಗಿಸುವರು. ಈ ಹಬ್ಬವು ಕೃಷಿಗೆ ಸಂಬಂಧಿಸಿದುದಾಗಿದೆ ಎನ್ನಲೂ ಲಂಬಾಣಿಗರು ಈ ಹಬ್ಬದಲ್ಲಿ ಬೆಳೆಸುವ ತೀಜ್(ಗೋದಿಸಸಿ)ವಾಗಿ ಆಚರಿಸುವ ಆಚರಣೆ ವಿಶೇಷವಾಗಿದೆ.

ಲಂಬಾಣಿಗರು ದೀಪಾವಳಿಯನ್ನು 'ದವಾಳಿ' ಎಂದು ಕರೆಯುವರು. ಕೆಲವು ಕಡೆ ಕಾಳಿಮಾಸ ಎನ್ನುವುದುಂಟು. ಕಾಳಿ ಎಂದರೆ ಪರ್ವಕಾಳಿ ಎಂದರ್ಥವಿದೆ. ಹಿಂದೂಗಳು ಆಚರಿಸುವ ಪದ್ಧತಿಯಂತೆ ಕೈಗೊಂಡರೂ ಸಹ ಇವರಲ್ಲಿ ಭಿನ್ನತೆ ಕಂಡುಬರುತ್ತದೆ.

ದೀಪಾವಳಿ ಹಬ್ಬಕ್ಕೆ ಮುಂಚೆ ಮನೆಯನ್ನೆಲ್ಲಾ ಸಿಂಗರಿಸಿಕೊಂಡು ಆಯಾ ತಾಂಡಾಗಳಲ್ಲಿರುವ ದೇವಾಲಯಗಳಲ್ಲಿ ಸುಣ್ಣ-ಬಣ್ಣ ಹಚ್ಚಿ ದೇವಾಲಯದ ಮೂರ್ತಿಗಳನ್ನು ಶುಭ್ರಗೊಳಿಸುತ್ತಾರೆ. ದೀಪಾವಳಿ ಹಬ್ಬದ ವೇಳೆ ಜರುಗಿಸುವ ಲಕ್ಷ್ಮಿಪೂಜೆ ತುಂಬಾ ಮುಖ್ಯ. ಹಿಂದೂಗಳಲ್ಲಿ ವರ್ತಕರ ಈ ಹಬ್ಬಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿರುತ್ತಾರೆ. ಏಕೆಂದರೆ ಲಕ್ಷ್ಮಿಯು ತಮ್ಮಲ್ಲಿಯೇ ನೆಲೆಗೊಳ್ಳಲಿಯೆಂದು ದೀಪಾವಳಿ ಅಮವಾಸೆಯ ದಿನದಂದು ಮಧ್ಯರಾತ್ರಿಯ ವೇಳೆ ಬಲಿಯ ಆಚರಣೆ ಮಾಡುತ್ತಾರೆ. ಆದರೆ ಲಂಬಾಣಿಗರು ಮಾತ್ರ ಲಕ್ಷ್ಮಿಯನ್ನು ಆರತಿ ಗೀತೆಯೊಂದಿಗೆ(ಮೇರಾ ಗೀತೆ) ಆಹ್ವಾನಿಸುತ್ತಾರೆ. ಅಂದು ಪ್ರತಿಯೊಂದು ಮನೆಯವರು ದೀಪವನ್ನು ಸಿದ್ಧಪಡಿಸಿಕೊಂಡು ಹಟ್ಟಿಯ ನಾಯಕನ ಮನೆಗೆ ತೆರಳಿ ದೀಪಾವಳಿ ಹಬ್ಬದ ಆರತಿ ಬೆಳಗುವುದಕ್ಕಾಗಿ ಅನುಮತಿ ಪಡೆದು ಬರುವ ವಿಶಿಷ್ಟ ಸಂಪ್ರದಾಯವಿದೆ. ಯಜಮಾನನ ಅಪ್ಪಣೆ ಪಡೆದೆ ಯಾವುದೇ ಆಚರಣೆ-ಉತ್ಸವಗಳನ್ನು ಜರುಗಿಸುವುದು ತಾಂಡಾದ ನಾಯಕನಲ್ಲಿರುವ 'ಯಜಮಾನಿಕೆ' ಎಷ್ಟೆಂದು ತಿಳಿದುಬರುತ್ತದೆ. ಆಗ ಇಡೀ ತಾಂಡದ ಮನೆಮನೆಗೆ ತೆರಳಿ ತಾವು ತಂದ ಆರತಿಗಳಿಂದಲೇ ಆರತಿ(ಮೇರಾ) ಮಾಡುವರು. ಇದರಿಂದ ಕೇವಲ ತಮ್ಮ ಮನೆಗೆ ಲಕ್ಷ್ಮಿ ಬರುವುದಿಲ್ಲ ಎಲ್ಲರ ಮನೆಯಲ್ಲೂ ಸುಖ-ಸಂಪತ್ತು, ಸಂಮೃದ್ಧಿಯಾಗಲೀ ಎಂಬ ಉದ್ದೇಶವು ಇಲ್ಲಿ ವ್ಯಕ್ತವಾಗುತ್ತದೆ. ತಮ್ಮ ತಮ್ಮ ಮನೆಗೆ ಧಾವಿಸಿ ಬಂದ ಲಂಬಾಣಿ ಮಹಿಳೆಯರು ಮನೆಯ ಹೊಸ್ತಿಲಲ್ಲಿ ಆರತಿ ಮಾಡಿದ ಬಳಿಕ ತಾವು ಮನೆಯಲ್ಲಿಟ್ಟ

ಲಕ್ಷ್ಮಿಯ ಭಾವಚಿತ್ರ ಇಲ್ಲವೆ ತಂಬಿಗೆಯನ್ನು ತೆಂಗಿನ ಕಾಯಿ ಇಟ್ಟು ಸಿಂಗರಿಸಿ ಅದನ್ನೇ ಲಕ್ಷ್ಮಿಯ ಸಾಂಕೇತಿಕ ರೂಪವಾಗಿಸಿಕೊಂಡು ಭಕ್ತಿಭಾವದಿಂದ ಪೂಜೆ ಸಲ್ಲಿಸುವರು. ಕೆಲವರು ಬೆಳ್ಳಿಯ ಮುಖವಾಡ ಇಟ್ಟರೆ ಇನ್ನು ಕೆಲವರು ಅದಕ್ಕೆ ಹೊಸಬಟ್ಟೆ ಹಾಕಿ ಹೆಂಗಸರು ಧರಿಸಿದ ಆಭರಣಗಳು ಇಲ್ಲವೇ ಅಂದೆ ಕೊಂಡುತಂದ ತಾಳಿಯನ್ನು ಅದಕ್ಕೆ ಹಾಕಿ ಪೂಜಿಸುವುದು ವಾಡಿಕೆಯಾಗಿದೆ. ಈ ಅರಚಣೆ ಕುರಿತಾಗಿರುವ ಹಾಡುಗಳನ್ನು ಹಾಡುತಾರೆ. ಈ ಹಾಡಿನಲ್ಲಿ ಲಕ್ಷ್ಮಿಯ ಸ್ತುತಿಯು ಕಂಡುಬರುತ್ತದೆ. ಈ ಆಚರಣೆಯಿಂದ ಅವರಲ್ಲಿದ್ದ ಸೌಹಾರ್ದತೆ ಎಷ್ಟೆಂದು ವ್ಯಕ್ತವಾಗುತ್ತದೆ. ಈ ವೇಳೆ ತಮ್ಮ ಮನೆಯ ಎತ್ತು ಹಸುಗಳನ್ನು ದೀಪದ ಆರತಿ ಮೂಲಕ ಪೂಜೆ ಮಾಡಿ ಶುಭ ಕೋರುವರು. ರಾತ್ರಿ ಲಕ್ಷ್ಮೀಪೂಜೆಯ ಸಮಯಕ್ಕೆ ತಾಂಡದ ಕೋರು ಹುಡುಗಿಯರು ಶೃಂಗರಿಸಿಕೊಂಡು ತಟ್ಟೆಯಲ್ಲಿ ಹರಳೆಣ್ಣೆದೀಪ ಹಚ್ಚಿಕೊಂಡು ತಾಂಡದ ನಾಯಕನ ಮನೆಗೆ ಮೊದಲು, ನಂತರ ಎಲ್ಲರ ಮನೆಗಳಿಗೆ ಹೋಗಿ ಹಾಡು ಹಾಡುತ್ತಾರೆ. ಇದನ್ನು ಲಂಬಾಣಿಗರು ಮಾರಾ ಎನ್ನುತ್ತಾರೆ.

''ವರ್ಷೇರ ದವಾಳಿ ಖೋಟ ದವಾಳಿ
ಬಾಪು ತೋನ ಮೇರಾ
ವರ್ಷೇರ ದವಾಳಿ ಖೋಟದವಳಿ
ಯಾದಿ ತನ ಮೇರಾ''[೬]

ಹೀಗೆಯೇ ಕುಲದೇವರುಗಳಾದ ಸೇವಾಭಾಯಾ, ಮಿಟುಭುಕ್ಯಾ, ದರುಗಮ್ಮ, ಮಲಿಯಮ್ಮರ ಹೆಸರುಗಳನ್ನು ಹಾಗೂ ಮನೆಯಲ್ಲಿರುವ ಬಂಧು ಬಳಗದವರ ಹೆಸರುಗಳನ್ನು ಹೇಳುತ್ತಾ ಮೀರಾ ಮಾಡುತ್ತಾರೆ. ಹೀಗೆ ಕೋರ ಹುಡುಗಿಯರು ಮೇರಾ ಮಾಡಿದ ಮೇಲೆ ತಾಂಡದ ಬಂಧು ಬಳಗದವರು ತಮ್ಮ ಶಕ್ತ್ಯಾನುಸಾರ ಕಾಣಿಕೆ ಸಲ್ಲಿಸುತ್ತಾರೆ. ಬಹುಶಃ ಆ ಯುವತಿಯರು ಪುನಃ ದೀಪಾವಳಿ ಬರುವುದರೊಳಗಾಗಿ ಮದುವೆಯಾಗಿ ಹೋಗುವರೆಂಬ ಭಾವನೆ ಇದೆ.

ಈ ರೀತಿಯಾಗಿರುವ ಆರತಿ ಆಚರಣೆಯು ಮಲೆನಾಡು ಮತ್ತು ಬಯಲು ಸೀಮೆಯಲ್ಲಿ ಕಾಣಸಿಗುತ್ತದೆ. ಅಲ್ಲಿಯೂ ದೀಪ ಹಿಡಿದು ಮನೆ ಮನೆಗೂ ತೆರಳಿ ಎಲ್ಲರಿಗೂ ಶುಭವಾಗಲೆಂದು ಕೋರುವರು. ಅಲ್ಲಿ ಆರತಿ ಆಚರಣೆಗೆ ಅಂಟಿಕೆ-ಪಂಟಿಕೆಯೆಂದು ಬಳಸುವರು. ಅವರು ಸಹ ದೀಪದ ಆರತಿ ಹಿಡಿದು ಗುಂಪು ಹಾಡನ್ನು ಹಾಡುತ್ತಾರೆ.

ಇನ್ನು ದೀಪಾವಳಿಯ ಪ್ರಮುಖ ದಿನ ಬಲಿಪಾಡ್ಯಮಿ. ಇದೇ ದಿನದಂದು ಬಲಿ ಚಕ್ರವರ್ತಿಯಲ್ಲಿದ್ದ ಅಹಂಕಾರವನ್ನು ತೊಲಗಿಸಲು ಶ್ರೀಕೃಷ್ಣ ಪರಮಾತ್ಮ ಭೂಮಿಗೆ ವಾಮನಮೂರ್ತಿಯಾಗಿ ಅವತರಿಸಿ ಬಲಿಗೆ ಪಾತಾಳ ಲೋಕದಲ್ಲಿ ಇಂದ್ರಲೋಕ ಸೃಷ್ಟಿಮಾಡಿದ್ದು, ಸರ್ವವಿಧಿತ. ಸುದೀರ್ಘವಾದ ಯಾಗ ಮಾಡುವು ದರೊಂದಿಗೆ ಇಂದ್ರಲೋಕ ಸೃಷ್ಟಿಗಾಗಿ ಯಜ್ಞ ಜರುಗಿಸುತ್ತಾನೆ. ಆಗ ವಾಮನ ರೂಪದಲ್ಲಿ ಬಂದ ಶ್ರೀಕೃಷ್ಣ ಪರಮಾತ್ಮನು ಬಲಿಗೆ ಮೂರು ಪಾದವಿಡುವಷ್ಟು ಜಾಗ ನೀಡೆಂದು ಕೇಳುತ್ತಾನೆ. ಅದಕ್ಕೆ ಮರುಮಾತನಾಡದೇ

ಬಲಿ ಸಮ್ಮತಿ ನೀಡುತ್ತಾನೆ. ಮೊದಲಪಾದ ಇಡೀ ಭೂಮಂಡಲ ವ್ಯಾಪಿಸುತ್ತದೆ. ಎರಡನೆಯ ಪಾದವು ಇಡೀ ದೈವಲೋಕ ಆವರಿಸುತ್ತದೆ. ಮೂರನೆಯ ಪಾದಕ್ಕೆ ಸ್ಥಳವಿಲ್ಲದುದಾಗಿ ಬಲಿಯು ಇನ್ನುಳಿದಿರುವುದು ತಾನು ಮಾತ್ರ ಎಂದು ತಿಳಿಸುತ್ತಾನೆ. ಆಗ ಬಲಿಯನ್ನು ಪಾತಾಳಕ್ಕೆ ತುಳಿದು ಬಿಡುತ್ತಾನೆ. ಪಾತಾಳದಲ್ಲಿ ಬಲಿ ಚಕ್ರವರ್ತಿಗಾಗಿ ಇಂದ್ರಲೋಕ ಸೃಷ್ಟಿಮಾಡಿದನಂತೆ. ಆದ್ದರಿಂದಲೇ ಬಲಿಯ ನೆನಪಲ್ಲೇ 'ಬಲಿ ಪಾಡ್ಯಮಿ' ಜರುಗಿಸುವುದು ಮಹತ್ವದ ಆಚರಣೆಯಾಗಿದೆ.

ಆದರೆ ಲಂಬಾಣಿಗರು ಬಲಿಪಾಡ್ಯಮಿಯ ದಿನದಂದು ವಿಶಿಷ್ಟ ಆಚರಣೆ ನೆರವೇರಿಸುವರು. ಅಂದು ಬೆಳಿಗ್ಗೆ ತಾಂಡಾದ ಯುವತಿವರು ಶುಚಿಭೂತರಾಗಿ ಹೊಸಬಟ್ಟೆಗಳನ್ನು ತೊಟ್ಟು ಬಿದಿರಿನಪುಟ್ಟಿಗಳನ್ನು ಹಿಡಿದು ಗದ್ದೆಗಳಿಗೆ ಸಾಗಿ ವಿಧವಿಧವಾದ ಹೂಗಳನ್ನು ಕಿತ್ತು ಪುಟ್ಟಿಯಲ್ಲಿಟ್ಟುಕೊಂಡು ಗುಂಪು-ಗುಂಪಾಗಿ ಹಾಡುಗಳನ್ನು ಹಾಡುತ್ತಾ ನೃತ್ಯ ಮಾಡುತ್ತ ಬರುವ ದೃಶ್ಯ ಮನಮೋಹಕವಾಗಿರುತ್ತದೆ. ಈ ಎಲ್ಲಾ ಯುವತಿಯರು ಸಾಂಪ್ರದಾಯಿಕ ಶೈಲಿಯ ಉಡುಗೆ ತೊಟ್ಟುಕೊಂಡೆ ಬರುತ್ತಿದ್ದರು. ಆದರೆ ಈಚೆಗೆ ಲಂಬಾಣಿ ಸಮುದಾಯದ ಉಡುಗೆಯನ್ನು ಬಿಟ್ಟು ಸಹಜವಾಗಿ ಸೀರೆ ಕುಪ್ಪಸ ತೊಟ್ಟು ಬರುತ್ತಾರೆ. ಇದು ಪಟ್ಟಣಕ್ಕೆ ಸಮೀಪವಿರುವ ತಾಂಡಾಗಳಲ್ಲಿ ಮಾತ್ರ ಕಾಣಸಿಗುತ್ತದೆ. ಗ್ರಾಮೀಣ ಭಾಗದಲ್ಲಿ ಮಾತ್ರ ಅವರುಗಳು ವಿಶಿಷ್ಟವಾಗಿ ಉಡುಗೆ ಯನ್ನು ತೊಟ್ಟು ಸಾಗಿಬರುತ್ತಾರೆ. ತಂದ ಹೂಗಳನ್ನು ತಮ್ಮ ಹಟ್ಟಿಯಲ್ಲಿರುವ ಎಲ್ಲಾ ದೇವಾಲಯಗಳಿಗೂ ತೆರಳಿ ಹೂವಿನ ಪೂಜೆ ನೆರವೇರಿಸುವರು. ಆ ಸಮಯದಲ್ಲಿ ಹಾಡುಗಳನ್ನು ಹಾಡುವರು. ಮನೆ ಮನೆಗೂ ತೆರಳಿ ಅವರ ಸಾಕುಪ್ರಾಣಿಗಳಾದ ದನಕರುಗಳ ಕೊಟ್ಟಿಗೆಯ ಸಗಣಿಯನ್ನು ಕುಪ್ಪೆ ಮಾಡಿ ಮನೆಯ ಅಂಗಳದಲ್ಲಿಟ್ಟು ಅದರ ಮೇಲೆ ಹೂವುಗಳನ್ನು ಹಾಕಿ ಪೂಜಿಸಿ ಸಾಮೂಹಿಕವಾಗಿ ಹಟ್ಟಿಯ ಜನರಿಗೆ ಪ್ರಾಣಿ-ಪಕ್ಷಿಗಳಿಗೆ ಒಳಿತಾಗಲೆಂದು ಪ್ರಾರ್ಥಿಸುವರು. ಈ ಆಚರಣೆಯನ್ನು ಹಿಂದೂಗಳು ಸಹ ಮನೆಯ ಅಂಗಳದ ಮುಂದೆ ಸಗಣಿಯ ೫ ಆಕಾರಮಾಡಿ ಅದರ ಮೇಲೆ ಹೂವು ಗಜ್ಜರಿ, ಕಬ್ಬು ಇಟ್ಟು ಪೂಜಿಸುವರು. ಈ ರೀತಿಯ ಆಚರಣೆಗೆ ಕೊಂತಿ ಪೂಜೆ ಎನ್ನುವರು. ಏಕೆಂದರೆ ೫ ಆಕಾರಗಳು ಪಂಚಪಾಂಡವರು ಎನ್ನಲಾಗುತ್ತದೆ. ಆದರೆ ಮೂಲತಃ ಐದು ಅಕಾರದ ಗೊಂಬೆಮಾಡಿದ ಕಲ್ಪನೆ ಪಂಚಭೂತಗಳ ಆರಾಧನೆಯನ್ನು ವ್ಯಕ್ತಪಡಿಸುತ್ತದೆ. ಕೃಷಿಕ ಸಮಾಜವು ಪಂಚಭೂತಗಳಿಂದ ತಮಗೆ ಒಳಿತಾಗಲೆಂದು ಆರಾಧಿಸುವುದು ವ್ಯಕ್ತವಾಗಿದೆ. ಆದರೆ ಪಾಂಡೋರ ಮೂರ್ತಿಗಳೆಂದು ಕರೆದಿರುವುದು ಸಹ ವನವಾಸದ ವೇಳೆ ಪಟ್ಟಪಾಡು ನೆನಪಿಸುವ ಆಚರಣೆ ಇದಾಗಿದೆ. ಪಾಂಡವರಿಗೆ ಒದಗಿದ ಕಷ್ಟವು ಯಾರಿಗೂ ಬರದೆಂದು ಪೂಜೆ ಸಲ್ಲಿಸುವರೆಂದು ಕೆಲವರು ತಿಳಿಸಿದ್ದಾರೆ.

ಅದೇ ದಿನದಂದು ಗೋಪೂಜೆ ಜರುಗಿಸುವರು. ಗೋವುಗಳು ಲಂಬಾಣಿಗರಿಗೆ ಸಹಾಯಕಾರಿಯಾಗಿರುವವು ಎಂಬ ಹಿನ್ನೆಲೆಯಲ್ಲಿ ಅವುಗಳಿಗೂ ಆರತಿ ಬೆಳಗಿಸಿ ವಿಶಿಷ್ಟವಾದ ಹೂಗಳನ್ನು ಇಟ್ಟು ಪೂಜಿಸುವುದು ವಾಡಿಕೆಯಿದೆ. ಇದೇ ರೀತಿಯಾಗಿ ಇಂದಿಗೂ ಪ್ರತಿಯೊಬ್ಬರು ಗೋವುಗಳಿಲ್ಲದ ಹಿಂದೂಗಳು ತಮ್ಮ ಮನೆಯ ಬಳಿ ಬಂದ ಗೋವುಗೆ ಪೂಜೆ ಸಲ್ಲಿಸಿ ಅದಕ್ಕೆ ಅಕ್ಕಿ-ಬೆಲ್ಲ ವಿವಿಧ ಧಾನ್ಯಗಳ ಮಿಶ್ರಣ ಮಾಡಿ

ಮೊರದಲ್ಲಿಟ್ಟುಕೊಂಡು ಬಂದು ತಿನ್ನಿಸುತ್ತಾರೆ. ಈ ರೀತಿ ಗೋವುಗೆ ಅಹಾರ ಧಾನ್ಯ ನೀಡಿದರೆ ಆಯಾ ಮನೆಗಳಲ್ಲಿ ಸಂಪತ್ತು ವೃದ್ಧಿಯಾಗಲಿದೆ ಎಂಬ ಭಾವನೆಯಿದೆ.

ತಮ್ಮ ಜಾನುವಾರಗಳಿಗೆ ಒಳಿತಾಗಲೆಂದು ತಮ್ಮ ತಾಂಡದ ಒಳಗಿರುವ ದೇವರುಗಳಿಗೆ ಹಾಡಿನ ಮೂಲಕ ನಿವೇದಿಸಿಕೊಳ್ಳುವರು.

''ಡುಂಗರ್ ಖೋಳಾ ಲಾವೋಲ ಲಸ್ಕರೇನ|
ಘಣ ಘಣೋ ದೇಸ್ ದ ವಾಳಿ ಮಾತಾ|
ಘಣ ಘಣೋ ದೇಸ್ ಮೀಟು ಭುಕ್ಯಾ|
ಘಣ ಘಣೋ ದೇಸ್ ಸೇವಾಭಾಯ|''[೬]

ಲಂಬಾಣಿಗರು ತಾವು ಸಾಕುವ ಸಾಕುಪ್ರಾಣಿಗಳು, ಬೆಟ್ಟದ ತಪ್ಪಲಲ್ಲಿ ಮೇಯಲು ತೆರಳಿದಾಗ ಯಾವುದೇ ರೀತಿಯ ತೊಂದರೆ ಆಗದಂತೆ ತಾಂಡಾದ ಪ್ರಮುಖ ದೈವಗಳಾದ ಮೀಟುಭುಕ್ಯಾ, ಸೇವಾಭಾಯರವರುಗಳು ರಕ್ಷಣೆ ಮಾಡಬೇಕು ಎಂದು ಇಡೀ ತಾಂಡಾದ ಪ್ರತಿಯೊಬ್ಬರಿಗೂ ಒಳಿತಾಗಲೆಂದು ಹಾಡುವ ಹಾಡಿನಲ್ಲಿ ಮಹತ್ವದ ದೈವಿಕ ವಿಚಾರ ಅಡಗಿದೆ.

**ಹೋಳಿಹಬ್ಬ :** 'ಹೋಳಿ ಹಬ್ಬ'ಕ್ಕೆ ತನ್ನದೇ ಆದ ಹಿನ್ನೆಲೆಯಿದ್ದರೂ ಸಹ ಹಲವು ವಿದ್ವಾಂಸರ ಪ್ರಕಾರ ಲಂಬಾಣಿಗರಲ್ಲಿ ಈ ಆಚರಣೆಯೂ ತುಂಬಾ ಪುರಾತನ ಕಾಲದಿಂದಲೂ ಇತ್ತೆಂಬುದಕ್ಕೆ ದಾಖಲೆಗಳಿಲ್ಲ. ಆದರೆ ಈ ಹಬ್ಬದಲ್ಲಿ ಲಂಬಾಣಿಗರು ತೊಡಗಿಸಿಕೊಳ್ಳುವ ಪರಿ ನೋಡಿದರೆ ಅವರ ಪ್ರಾಚೀನವಾದ ಹಬ್ಬದಾಚರಣೆಗಳಲ್ಲಿ ಇದು ಒಂದಾಗಿ ಕಾಣಸಿಗುತ್ತದೆ. ಅದರಲ್ಲೂ ಬಳ್ಳಾರಿ ಜಿಲ್ಲೆಯ ಯಾವುದೇ ಗ್ರಾಮದಲ್ಲಿರುವ ಲಂಬಾಣಿಗರು 'ಹೋಳಿಹಬ್ಬ'ದಲ್ಲಿ ತಮ್ಮನ್ನು ತೊಡಗಿಸಿಕೊಂಡು ಪಾಲ್ಗೊಳ್ಳುವುದು ತುಂಬಾ ವಿಶಿಷ್ಟವಾಗಿ ಗೋಚರಿಸುತ್ತದೆ.

ಹೋಳಿಹಬ್ಬಕ್ಕೆ 'ಕಾಮನಹಬ್ಬ' ಕಾಮಣ್ಣನ ಹಬ್ಬ ಎಂತಲೂ ಕರೆಯುವುದು ವಾಡಿಕೆ. ಈ ಹಬ್ಬವು ಪಾಲ್ಗುಣ ಮಾಸದ ಹುಣ್ಣಿಮೆಯ ದಿನದಂದು ಜರುಗುವುದು. ಇದೊಂದು ಸಾಮರಸ್ಯ ಪ್ರತೀಕವಾದ ಹಬ್ಬವಾಗಿ ಪರಿಣಮಿಸಿದೆ. ಈಚೆಗೆ ಹಿಂದೂ-ಮುಸ್ಲಿಂ ಜನಾಂಗದವರು ಪರಸ್ಪರವಾಗಿ ಬಣ್ಣ ಎರಚಾಡಿ ಸಂಭ್ರಮಿಸುವ ಹಬ್ಬ ಇದಾಗಿದೆ. ಆದರೆ ಲಂಬಾಣಿ ಜನಸಮುದಾಯ ಮಾತ್ರ ಈ ಹಬ್ಬಕ್ಕೆ ತುಂಬಾ ಮಹತ್ವ ನೀಡುತ್ತಾರೆ.

ಕಾಮನ ಹಬ್ಬದ ಒಂದು ವಾರ ಮುಂಚೆ ಲಂಬಾಣಿಯ ಮಹಿಳೆಯರು ಸಾಂಪ್ರದಾಯಿಕ ಉಡುಗೆಗಳೊಂದಿಗೆ ಸಾಗಿ ಕೈಯಲ್ಲಿ ಕೋಲಾಟದ ಕೋಲನ್ನು ಹಿಡಿದು ಆಯಾ ಏರಿಯಾದ ಮನೆ ಮನೆಗೂ ಸಾಗಿ ಸುತ್ತುಗಟ್ಟಿ ನಿಂತು ಕೈ ಕೈ ಹಿಡಿದು ನೃತ್ಯ ಮಾಡುವ ಈ ಸಂದರ್ಭವು ತುಂಬಾ ವಿಶಿಷ್ಟವಾಗಿರುತ್ತದೆ. ಇದೇ ವೇಳೆಗಾಗಲೇ ಕೆಲವು ಸ್ಥಳಗಳಲ್ಲಿ ಕಾಮನ ಹಬ್ಬದ ಹಿನ್ನೆಲೆಯಲ್ಲಿ ರತಿ-ಮನ್ಮಥ ಇಲ್ಲವೇ ಕಾಮನ ಮಣ್ಣಿನ ಮೂರ್ತಿಯನ್ನು ಪ್ರತಿಷ್ಠಾಪಿಸಿರುತ್ತಾರೆ. ಈ ಹಬ್ಬದ ದಿನಗಳ್ಲಲಿ ನೃತ್ಯ ಪ್ರದರ್ಶಿಸಿದ ಹೆಂಗಸರಿಗೆ ಸಾಂಪ್ರದಾಯಿಕವಾಗಿ ಜನರು

ನೀಡುವ ಕಾಣಿಕೆಗಳನ್ನು ಪಡೆದು ಮನೆಗಳಿಗೆ ಸಾಗಿಬರುತ್ತಾರೆ. ಇದು ಈಚೆಗೆ ಕಡಿಮೆಯಾದರೂ ಸಹ ಲಂಬಾಣಿ ಸಮುದಾಯದ ಒಂದು ಗುಂಪು ಮಾತ್ರ ನಗರದ ಹಲವು ಏರಿಯಾಗಳಿಗೆ ತೆರಳಿ ನಯನ ಮನೋಹರವಾದ ನೃತ್ಯ ಪ್ರದರ್ಶಿಸುತ್ತಾ ಆಯಾ ಕುಟುಂಬದವರಿಗೆ ಒಳ್ಳೆಯದಾಗಲಿ ಎಂದು ಗೀತೆಗಳ ಮೂಲಕ ಹಾರೈಸುವುದು ಕಂಡುಬರುತ್ತದೆ. ಇತ್ತೀಚಿನ ಜನರು ಈ ರೀತಿ ಮನೆ ಮನೆಗೂ ತೆರಳಿ ಜನರಿಂದ ಕಾಣಿಕೆ ಪಡೆದು ಬರುವುದರ ಬಗ್ಗೆ ಕಟುವಾಗಿ ಟೀಕಿಸುತ್ತಾರಾದರೂ ಇದೊಂದು ಮೋಜಿನ ಹಬ್ಬವಾಗಿ ಪರಿಣಮಿಸಿದೆ.

ಹೋಳಿ ಹಬ್ಬಕ್ಕೆ ತನ್ನದೇ ಆದ ಹಿನ್ನೆಲೆಯಿದೆ. ಹೋಳಿ ಹಬ್ಬ ಆಚರಿಸುವುದರ ಹಿಂದೆ ಶಿವನ ತಪೋಭಂಗವನ್ನು ಮನ್ಮಥನು ಮಾಡಿದ್ದರಿಂದ ಶಿವನ ಹಣೆಗಣ್ಣಿನ ತಾಪಕ್ಕೆ ಗುರಿಯಾಗಿ ಮನ್ಮಥನು ಸುಟ್ಟು ಬೂದಿಯಾಗುತ್ತಾನೆ. ಕಾಮದೇವ(ಮನ್ಮಥ)ನನ್ನು ದಹಿಸುವುದರಿಂದ ಕಾಮನಮೂರ್ತಿಯನ್ನು ಮಾಡಿ ಈ ಭಾಗದಲ್ಲಿ ಸುಡಲಾಗುತ್ತದೆ. ಈ ಕುರಿತಾಗಿ ಮಹಾಕವಿ ಹರಿಹರನು ತನ್ನ ಗಿರಿಜಾ ಕಲ್ಯಾಣದಲ್ಲಿ ತುಂಬಾ ಸುಂದರವಾಗಿ ವಿವರಿಸಿದ್ದಾನೆ. ಈ ಘಟನೆ ಜರುಗಿದ್ದು ಸಹ ಹಂಪಿಯಲ್ಲಿ ಎಂದು ತಿಳಿಸಿರುವುದು ಹೋಳಿ ಹಬ್ಬಕ್ಕೆ ಇನ್ನಷ್ಟು ಪುಷ್ಟಿ ದೊರೆತಂತಾಗಿದೆ. ಕಾಮದಹನದ ಬಳಿಕ ರತಿಯು ಪ್ರಲಾಪಗೊಂಡು ಗಂಡನ ಸಾವಿಗೆ ಕಾರಣನಾದ ಶಿವನಿಂದ ತನ್ನ ಪತಿಯನ್ನು ಬದುಕಿಸಲು ಪಾರ್ವತಿಯನ್ನು ಕೇಳುತ್ತಾಳೆ. ಮನ್ಮಥನು ಕೃಷ್ಣನ ಮಗನಾಗಿ ಪ್ರದ್ಯುಮ್ನನಾಗಿ ಜನಿಸುವನು ಎಂದು ಶಿವ ತಿಳಿಸುತ್ತಾನೆ. ಇದರ ಹಿಂದೆ ಶಿವ-ಪಾರ್ವತಿಯರಿಗೆ ಹುಟ್ಟಿದ ಮಗನಿಂದಲೇ ರಾಕ್ಷಸನನ್ನು ಕೊಲ್ಲಬೇಕಾಗಿತ್ತು. ಆದ್ದರಿಂದ ಈ ಕಥೆ ಬೆಳೆಯಲು ಕಾರಣವಾಯಿತು.

ಈ ದೃಷ್ಟಿಯಿಂದ ಈಗಲೂ ಹಂಪಿಯ ಅಲ್ಲವೇ ಇಡೀ ಜಿಲ್ಲೆಯ ಯಾವುದೇ ತಾಂಡಾಗಳಲ್ಲಿ ಹೋಳಿ ಹಬ್ಬವನ್ನು ಸೌಹಾರ್ದದ ಪ್ರತೀಕವಾಗಿ ಆಚರಿಸುವರು. ಆದರೆ ಲಂಬಾಣಿ ಸ್ತ್ರೀಯರು ಮಾತ್ರ ತಮ್ಮ ಸಾಂಪ್ರದಾಯಿಕವಾದ ಉಡುಗೆತೊಟ್ಟು ವೃತ್ತಾಕಾರದ ಭಂಗಿಯಲ್ಲಿ ನೃತ್ಯ ಪ್ರದರ್ಶಿಸುವರು. ಈ ಕಾರ್ಯವನ್ನು ಕಾಮದೇವನನ್ನು ಪ್ರತಿಷ್ಠಾಪಿಸಿದ ದಿನದಿಂದಲೇ ಜರುಗಿಸುವರು. ಕಾಮನ ಮೂರ್ತಿ ದಹನಗೊಳಿಸಿದ ನಂತರದ ದಿನದಲ್ಲಿ ಪರಸ್ಪರವಾಗಿ ಸಹೋದರರನ್ನು ಬಿಟ್ಟು ಮಾವ, ಅತ್ತೆ, ಅಳಿಯ, ಸೊಸೆ ಇಲ್ಲವೆ ಹೆಂಡತಿ ಹಾಗೂ ಸ್ನೇಹಿತರಿಗೆ ಮಾತ್ರ ಬಣ್ಣ ಎರಚಾಟ ನಡೆಸುವರು. ಈ ಬಣ್ಣದಾಟವನ್ನು ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರೊಂದಿಗೆ ಆಡಿದ ಬಗ್ಗೆ ಪುರಾಣ ಹಾಗೂ ಇಂದಿಗೂ ದೇವಾಲಯದ ಉಬ್ಬುಶಿಲ್ಪಗಳಲ್ಲಿ ಕಾಣಸಿಗುತ್ತವೆ. ಈ ಆಚರಣೆಯ ಹಿನ್ನೆಲೆಯನ್ನು ಗಮನಿಸಿದರೆ ಪುರುಷ ಪ್ರಧಾನವಾದರೂ ಸಹ ಸ್ತ್ರೀಯರ ಪಾತ್ರವೂ ಪ್ರಮುಖವಾಗಿ ಕಾಣಸಿಗುತ್ತದೆ. ಕಾಮನನ್ನು ದಹಿಸಿದ ಬೂದಿಯನ್ನು ಕೃಷಿಕರಾದ ಲಂಬಾಣಿಗರು ತಮ್ಮ ಹೊಲ-ಗದ್ದೆಗಳಲ್ಲಿ ಚೆಲ್ಲಾಡುತ್ತಾರೆ. ಹೀಗೆ ಮಾಡುವುದರಿಂದ ಉತ್ತಮ ಬೆಳೆ ಬರುವುದೆಂಬ ಕಲ್ಪನೆಯಿದೆ.

ಈಚೆಗೆ ಹೋಳಿ ಹಬ್ಬಕ್ಕೆ ರಾಷ್ಟ್ರಮನ್ನಣೆಯು ದೊರಕಿದೆ. ಈ ಹಬ್ಬದಲ್ಲಿ ಪರಸ್ಪರವಾಗಿ ಬಣ್ಣ ಎರಚಾಟದೊಂದಿಗೆ ವಿಶೇಷವಾಗಿ ಯುವಕರು ಮುಖಕ್ಕೆ ಕೆಲವರು ವಾರ್ನಿಸ್, ಆಯಿಲ್ ಮಿಶ್ರಣದ ಬಣ್ಣ ಇಲ್ಲವೆ ತತ್ತಿಗಳನ್ನು ಕೊಂಡು ತಲೆಯ ಮೇಲೆ ಒಡೆಯುವ ದುಷ್ಟ ಸಂಪ್ರದಾಯವನ್ನು ರೂಢಿಸಿಕೊಂಡಿದ್ದಾರೆ.

ಇದೇ ದಿನದಂದು ಈ ಹೋಳಿ ಆಟದ ವೇಳೆ ಆಕಸ್ಮಿಕವಾಗಿ ಕೆಲವರಿಗೆ ಬಣ್ಣ ಹಾಕುವ ವಿಚಾರದಲ್ಲಿ ಜಗಳವಾಗಿ ಒಮ್ಮೊಮ್ಮೆ ಸಾವಿನಲ್ಲೂ ಅಂತ್ಯವಾದ ಘಟನೆಗಳು ಇಂದಿನ ಯುವ ಪೀಳಿಗೆಯವರಲ್ಲಿ ಜರುಗುತ್ತದೆ. ಹಳೆಯ ದ್ವೇಷವನ್ನು ಮುಂದಿಟ್ಟುಕೊಂಡು ಸಂಘರ್ಷಕ್ಕೆ ಇಳಿದು ಕೆಲವೊಮ್ಮೆ ಅನಾಹುತಕ್ಕೂ ಕಾರಣವಾಗಿವೆ.

ಲಂಬಾಣಿಗರ ತಾಂಡಾಗಳಲ್ಲಿ ಹಲಗೆ, ಡೋಲುಗಳ ಧ್ವನಿಯು ಕೇಳಿಸಿದರೆ ಸಾಕು, ಹೋಳಿ ಹಬ್ಬ ಬಂದಿದೆ ಎಂಬ ನಂಬಿಕೆ. ಹೋಳಿ ಹಬ್ಬದಲ್ಲಿ ಲಂಬಾಣಿ ಸ್ತ್ರೀಯರು ಹಾಡುವ ಹಾಡುಗಳಿಗೆ ತುಂಬಾ ಮಹತ್ವವಿದೆ. ಈ ರೀತಿಯ ವಿಶಿಷ್ಟವಾದ ಸಂಪ್ರದಾಯವು ಯಾವ ಜನಾಂಗದಲ್ಲಿಯೂ ಕಂಡುಬರುವುದಿಲ್ಲ. ಈ ಗೀತೆಗಳನ್ನು ಮೂರು ರೀತಿಯಾಗಿ ವಿಂಗಡಿಸಲಾಗಿದೆ.

೧. ಪ್ರೇಮಗೀತೆ(ಲೇಂಗಿ ಗೀದ)

೨. ಶುಭಕಾಮನೆಯ ಗೀತೆ(ವಾಂಜಣಾಗೀದ)

೩. ನೃತ್ಯಗೀತೆ(ನಾಚೇರ ಗೀದ)

ಈ ಹಿಂದೆ ಸೂಚಿಸಿದಂತೆ ತಾವು ವಾಸವಿರುವ ಏರಿಯಾ ಇಲ್ಲವೆ ನಗರ ಪ್ರದೇಶಗಳ ಅಂಗಡಿ-ಮುಂಗಟ್ಟುಗಳ ಮುಂದೆ ಈ ರೀತಿಯ ಹಾಡುಗಳನ್ನು ಹೇಳಿ ಭಾವತನ್ಮಯರಾಗಿ ನರ್ತಿಸುತ್ತಾ ತಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವರು.

**ಪ್ರೇಮಗೀತೆ:** ಲಂಬಾಣಿ ಮಹಿಳೆಯರು ತಮ್ಮ ಸಾಂಪ್ರದಾಯಿಕ ಉಡುಗೆಯೊಂದಿಗೆ ಮನೆಮನೆಗೆ ತೆರಳಿ ಹೋಳಿ ಹಬ್ಬದ ಶುಭಕಾಮನೆಗಳನ್ನು ತಿಳಿಸಿ, ಒಬ್ಬರಿಗೊಬ್ಬರು ಪರಸ್ಪರವಾಗಿ ಕೈ ಇಟ್ಟುಕೊಂಡು ವೃತ್ತಾಕಾರವಾಗಿ ನರ್ತಿಸುತ್ತಾ ಒಮ್ಮೆ ಕೈಗಳನ್ನು ಮೇಲಕ್ಕೆ ಇನ್ನೊಮ್ಮೆ ಕೆಳಗೆ ಹಾಕುತ್ತಾ ನಾದಕ್ಕೆ ತಕ್ಕಂತೆ ನರ್ತಿಸುವ ಈ ದೃಶ್ಯ ನೋಡುಗರಿಗೆ ಮುದ ನೀಡುತ್ತದೆ. ಈ ರೀತಿ ನರ್ತಿಸುತ್ತಾ ಹಾಡುವ ಹಾಡುಗಳಿಗೆ ಪ್ರೇಮಗೀತೆ (ಲೇಂಗಿ ಗೀದ) ಎಂದು ಕರೆಯುವರು. ಹಗಲು ವೇಳೆ ದುಡಿದು ಬಂದ ಮಹಿಳೆಯರು ಅತ್ಯಂತ ಸಹಜವಾಗಿ ಪಾಲ್ಗೊಳ್ಳುವರು. ಭಾವತನ್ಮಯರಾಗಿ ನರ್ತನ ಮಾಡುವ ಈ ನೃತ್ಯ ನೋಡಿದ ಇತರೆ ಲಂಬಾಣಿ ಮಹಿಳೆಯರು ನೃತ್ಯದಲ್ಲಿ ಸೇರಿಕೊಳ್ಳುತ್ತಾರೆ. ಈ ನರ್ತನದ ನೃತ್ಯ ಗಮನಿಸಿದರೆ ಅವರಲ್ಲಿರುವ ಐಕ್ಯತೆ ಎಷ್ಟೆಂದು ತಿಳಿಯುತ್ತದೆ. ''ಖಾರೋ ಪಾಣಿ, ಭೂಲಿಯಾ ವೇರಜ ಕಾಟಲಾ'' ಎಂದು ಲೇಂಗಿ ಗೀದ ಹಾಡಲು ಇತರರನ್ನು ಆಹ್ವಾನಿಸುತ್ತಾರೆ. ಮನಸ್ಸಿನ ದುಃಖಗಳನ್ನು ಮರೆಯೋಣ, ವೈರತ್ವವನ್ನು ತೊರೆಯೋಣ ಎಂದು ಕರೆಯುವ ಈ ಹಾಡಿಗೆ ಎಲ್ಲರೂ ಸೇರಿಕೊಳ್ಳುತ್ತಾರೆ. ಒಮ್ಮೆಮ್ಮೆ ಮಹಿಳೆಯರೊಂದಿಗೆ ಪುರುಷರು ಸೇರಿ ಕುಣಿತಕ್ಕೆ ಸಾಥ್ ನೀಡುವುದುಂಟು. ಆದರೆ ವಾದ್ಯ ಮಾತ್ರ ಪುರುಷರೇ ಬಾರಿಸುತ್ತಾರೆ. ಇದೇ ವೇಳೆ ನೃತ್ಯಕ್ಕೆ ಹೆಚ್ಚಿನ ಮಹತ್ವ ಬರಲಿ ಎಂದು ಕೋಲಾಟದ ಮೂಲಕವು ನರ್ತನಗೈಯುವರು.

ಹೋಳಿಹಬ್ಬದ ವೇಳೆ ಮನೆಮನೆಗೂ ತೆರಳಿ ನೃತ್ಯ ಪ್ರದರ್ಶಿಸಿ ಮಂಗಳಕರವಾದ ಗೀತೆಗಳನ್ನು ಹಾಡುವುದಕ್ಕೆ ಶುಭ ಕಾಮನೆಯ ಗೀತೆ(ವಾಂಜಣಾ ಗೀದ) ಎನ್ನುವರು. ವಾಂಜಣಾ ಗೀದಗಳನ್ನು ಆಯಾಯ ತಾಂಡಾಗಳಲ್ಲಿ ಮಗು ಜನನದ ವೇಳೆ ಇಲ್ಲವೆ ಸಂಭ್ರಮಾಚರಣೆಗಳ ದಿನದಂದು ನರ್ತಿಸಿ ಜನರ ಮನತಣಿಸುವರು. ಈ ರೀತಿಯ ಹಾಡುಗಳನ್ನು ಹುಟ್ಟುಹಬ್ಬದ ಗೀತೆಗಳು(ದೂಂಡಗೀದ) ಎನ್ನುತ್ತಾರೆ.

೨. ಹೋಳಿಹಬ್ಬಕ್ಕೂ ಮುನ್ನ ಇಲ್ಲವೆ ಅದೇ ವರ್ಷ ಜನಿಸಿದ ಗಂಡು ಮಗುವನ್ನು ಹೋಳಿಯ ದರ್ಶನ ಮಾಡಿಸಿ ಆತನ ಕೃಪೆ ಒದಗಲಿ ಎಂದು ಶುಭ ಕೋರುತ್ತಾರೆ. ಈ ರೀತಿಯಾಗಿ ಹಾಡುವ ಗೀತೆಗಳಿಗೆ 'ದೂಂಡ್' ಗೀದ ಎನ್ನುವರು.

ಪ್ರತಿಯೊಂದು ತಾಂಡಾದಲ್ಲಿ ನಾಯಕನು ಇರುತ್ತಾನೆ. ತಾಂಡಾದ ನಾಯಕ(ಕಾರಬಾರಿ)ನ ಮನೆಗೆ ಕಾಮನನ್ನು ಸುಡುವ ಮುನ್ನ ಹೋಗಿ ಹೋಳಿ ಹಬ್ಬದ ಶುಭಾಶಯ ಕೋರುವುದು ವಾಡಿಕೆಯಲ್ಲಿದೆ. ಹೋದ ತಂಡಕ್ಕೆ ನಾಯಕ ಕಾಣಿಕೆಯನ್ನು ಕೊಟ್ಟು ಕಳುಹಿಸುತ್ತಾನೆ. ನಾಯಕನಿಗೆ ಶುಭವಾಗಲೆಂದು ಹಾಡುವ ಗೀತೆಗಳಿಗೆ ವಾಂಜಣಾಗೀದ ಎಂದು ಹೆಸರಿಸಲಾಗಿದೆ. ಹೀಗೆ ನಾಯಕನ ಮನೆಗೆ ಹೋಗುತ್ತಿದ್ದ ಈ ವಾಡಿಕೆಯೇ ಇಂದಿಗೂ ತಮಗಷ್ಟೇ ಅಲ್ಲ ಇತರ ಜನಸಮುದಾಯಕ್ಕೂ ಆ ದೈವ ಒಳ್ಳೆಯದು ಮಾಡಲಿ ಎಂದು ಹೋಳಿ ಗೀತೆಯನ್ನು ಆಯಾಯ ಮನೆಯ ಮುಂದೆ ಹಾಡುತ್ತಾ ಭಾವತನ್ಮಯರಾಗಿ ನೃತ್ಯಮಾಡಿ ಕಾಣಿಕೆ ಪಡೆದು ಬರುವುದು ಕಾಣಸಿಗುತ್ತದೆ. ಈ ಪದ್ಧತಿಯನ್ನು ಇಂದಿನ ಯುವಸಮಾಜವು ಒಪ್ಪುವುದಿಲ್ಲ. ಆದರೆ ಸಾಂಪ್ರದಾಯಿಕವಾದಿಗಳು ಮಾತ್ರ ಇಂದಿಗೂ ಚಾಚುತಪ್ಪದೇ ನಡೆಸಿಕೊಂಡು ಬರುತ್ತಿದ್ದಾರೆ.

ಇವರಲ್ಲಿ ರಚನೆಯಾದ ಗೀತೆಗಳಲ್ಲಿ ಕಾಮದೇವನ ಪ್ರಸ್ತಾಪಕ್ಕಿಂತ ಹೋಳಿ ಮಾತೆ ಎಂಬುದಾಗಿ ಬಳಸಲಾಗಿದೆ. ವಾಂಜಾಣ ಗೀತದ ಕೆಲವು ಸಾಲುಗಳು ಹೀಗಿವೆ.

''ಅನವಜೀಯ ನಾಯಕೇನ ದಿನೇರ ಹಾಂಸದೋ |
ಅನವಜೀಯ ನಾಯಕೇನ ದಿ ನೇರ ರಾಜಕೀರೋ ಮಂದಡೋ|
ಹೊನ್ನಾಬಾಯಿ ಆಡಾನಾ ತೇಡಾ ತೀವೋ ಗೇರಿಯಾ ವೂತರೇ|[೮]

(ನಾಯಕನಿಗೆ ರಾಜಪದವಿ ದೊರೆಯಲಿ, ನಾಯಿಕಾಳ ಸೌಭಾಗ್ಯವು ನೂರು ವರ್ಷ ಇರುವಂತಾಗಲಿ, ನಾಯಕನ ಸರ್ವ ಸಂಪತ್ತು ವೃದ್ಧಿಯಾಗುವಂತೆ ಹೋಳಿ ಮಾತೆಯು ಕೃಷ್ಣಾಶೀರ್ವಾದ ನೀಡಲಿ ಎಂದು ಸ್ತುತಿಸುವರು).

**ನೃತ್ಯ ಗೀತೆಗಳು :** ಹೋಳಿ ಸಂಭ್ರಮಾಚರಣೆಯಲ್ಲಿ ಈ ಭಾಗದ ಹಲವು ತಾಂಡಾಗಳಲ್ಲಿ ಯುವಕರು ಅಲ್ಲಲ್ಲಿ ಯುವಕ ಸಂಘಗಳನ್ನು ಕಟ್ಟಿಕೊಂಡು ಸಂಪ್ರದಾಯಿಕವಾಗಿ ರೂಢಿಸಿಕೊಂಡು ಬಂದ ಕೋಲಾಟದ ಹಾಡುಗಳನ್ನು ಹಾಡುತ್ತಾ, ಹಾಡಿಗೆ ತಕ್ಕಂತೆ ನೃತ್ಯ ಮಾಡುವರು. ಆದರೆ ಎಲ್ಲಾ ತಾಂಡಾಗಳಲ್ಲಿ ಪುರುಷರೂ ಕೋಲಾಟದಲ್ಲಿ ಆದರಲ್ಲಿ ನೃತ್ಯ ಗೀತೆಗಳಲ್ಲಿ ಪಾಲ್ಗೊಳ್ಳಲಾರರು. ಆದರೆ ಅಲ್ಲಿರುವ ಸ್ತ್ರೀಯರು ಮಾತ್ರ ತಮ್ಮ ಕಲಾ

ಪ್ರದರ್ಶನಗೊಳಿಸಿ ವಾದ್ಯದ ತಾಳಕ್ಕೆ ತಕ್ಕಂತೆ ನರ್ತಿಸುವ ಬಗ್ಗೆಯು ಮನಮೋಹಕ. ಈ ನೃತ್ಯಗೀತೆಗಳನ್ನು ಪುರುಷರು ವೀಕ್ಷಿಸುತ್ತಾರೆ. ಇಂತಹ ನೃತ್ಯಗಳನ್ನು ಗಮನಿಸಿದ ಬಾಲಕರು ತಾವು ಸಹ ಅನುಕರಿಸಿ ಮುಂದೆ ಕಲೆಯನ್ನು ಉಳಿಸಿಬೆಳೆಸಲು ಕಾರಣಕರ್ತರಾಗುತ್ತಾರೆ. ತಾಂಡಾಗಳಲ್ಲಿ ನೃತ್ಯ ಗೀತೆಗಳೇ ಪ್ರಮುಖ ಆಕರ್ಷಣೆ, ನಗರಭಾಗದ ತಾಂಡಾಗಳಲ್ಲಿ ಸಹ ನೃತ್ಯ ಗೀತೆಗಳು ಮೈಳೈಸಿರುತ್ತವೆ.

**ಶ್ರಮಗೀತೆಗಳು :** ಲಂಬಾಣಿಗರು ಮೂಲತಃ ಶ್ರಮಜೀವಿಗಳು. ಇವರುಗಳು ಯಾವುದೇ ರೀತಿಯ ಕೆಲಸವನ್ನಾದರೂ ಮಾಡುವವರಾಗಿದ್ದಾರೆ. ವ್ಯಾಪಾರಿ ಮನೋಭಾವವುಳ್ಳ ಇವರುಗಳ ಯಾವುದೇ ಯಂತ್ರಗಳ ಸಹಾಯವಿಲ್ಲದೆ ತಮ್ಮ ದೇಸಿಯ ಸಾಧನೆಗಳ ಮೂಲಕ ತಾಂಡಾಗಳಲ್ಲಿ ನಗರಗಳ ಪ್ರವೇಶದಿಂದ ಅನತಿದೂರದಲ್ಲಿ ವಾಸವಾಗಿರುವವರು ಜೋಳ, ರಾಗಿ, ಇಲ್ಲವೆ ಭತ್ತವನ್ನು ಕುಟ್ಟುವ ಇಲ್ಲವೆ ಬೀಸುವ ಕಾರ್ಯವನ್ನು ಮಾಡುವರು. ಈ ರೀತಿಯ ಶ್ರಮದಾಯಕ ಕೆಲಸಗಳನ್ನು ಮಾಡುವಾಗ ಹಾಡುವ ಹಾಡುಗಳು ತುಂಬಾ ಶ್ರೇಷ್ಠವಾಗಿವೆ. ಇಲ್ಲಿ ಕೇವಲ ಗಾಯನ ಮಾತ್ರ ಇರುತ್ತದೆ. ನೃತ್ಯಕ್ಕೆ ಆಸ್ಪದವಿಲ್ಲ.

ಶ್ರಮಗೀತೆಗಳನ್ನು ಅಧ್ಯಯನ ದೃಷ್ಟಿಯಿಂದ ೧. ದೇವ-ದೇವತೆಗೆ ಸಂಬಂಧಿಸಿದ ಗೀತೆಗಳು ೨. ಕೌಟುಂಬಿಕ ವಿಷಯಗಳಿಗೆ ಸಂಬಂಧಿಸಿದ ಗೀತೆಗಳು ೩. ಇತರೆ ವಿಷಯಗಳಿಗೆ ಸಂಬಂಧಿಸಿದವುಗಳನ್ನು ವಿಂಗಡಿಸಲಾಗಿದೆ. ಒಟ್ಟಾರೆಯಾಗಿ ಲಂಬಾಣಿಗರು ಅದರಲ್ಲೂ ಮಹಿಳೆಯರು ಅಪಾರ ಜನಪದ ಸಾಹಿತ್ಯವನ್ನು ತಮ್ಮ ಒಡಲಲ್ಲಿ ಇಟ್ಟುಕೊಂಡಿದ್ದಾರೆ. ಇವುಗಳನ್ನು ಉಳಿಸಿ ಬೆಳೆಸಬೇಕಾಗಿದೆ.

**ನಾಗಪಂಚಮಿ**

ಲಂಬಾಣಿಗರು ಆಚರಿಸುವ ಹಬ್ಬಗಳಲ್ಲಿ ನಾಗಪಂಚಮಿ ಒಂದು. ನಾಗಚೌತಿ ಇಲ್ಲವೇ ಪಂಚಮಿಯ ದಿನದಂದು ಕೆಲವು ಲಂಬಾಣಿ ಜನರು ಹುತ್ತಿಗೆ ಇಲ್ಲದಿದ್ದರೆ ನಾಗನಮೂರ್ತಿಗಳಿದ್ದಲ್ಲಿಗೆ ತೆರಳಿ ಹಾಲು ಹಾಕಿ ಬರುವ ಆಚರಣೆಯೇ ನಾಗಪಂಚಮಿಯಾಗಿದೆ.

ಈ ನಾಗಪಂಚಮಿ ಹಬ್ಬವು ಹಿಂದೂಗಳಿಂದಲೇ ಆಚರಣೆಗೆ ಬಂದಿರಬೇಕೆನಿಸುತ್ತದೆ. ಹಿಂದೂಗಳಂತೆ ಇವರು ಸಹ ಆ ತಿಂಗಳಲ್ಲಿ ಬರುವ ಸೋಮವಾರ ಇಲ್ಲವೇ ಶನಿವಾರದ ದಿನದಂದು ನಾಗರಾಧನೆ ಮಾಡುತ್ತಾರೆ. ತಮ್ಮ ತಮ್ಮ ಮನೆಗಳ ಅಂಗಳ ಸಿಂಗರಿಸಿಕೊಂಡು ನಾಗನ ರಂಗೋಲಿ ಬಿಡಿಸಿ ಮನೆಗಳಲ್ಲಿ ನಾಗರಹಬ್ಬದ ವಿಶೇಷ ಅಡುಗೆಯನ್ನು ತಯಾರಿಸಿ ಆಚರಿಸುವುದು ವಾಡಿಕೆಯಾಗಿದೆ.

ಲಂಬಾಣಿಗರು ಅತ್ತ ತೀರಾ ಬುಡಕಟ್ಟು ಜನರ ಮಧ್ಯೆ ವಾಸಿಸದೇ ಈ ಕಡೆ ನಗರ ಪ್ರದೇಶದ ಜನರೊಂದಿಗೆ ವಾಸಿಸದೇ ಊರ ಹೊರಗೆ ತಾಂಡಗಳನ್ನು ಕಟ್ಟಿಕೊಂಡು ಜೀವಸುತ್ತಿದ್ದರೂ ಸಹ ಊರಿನಲ್ಲಿ ಆಚರಿಸುವ ಬಹುತೇಕ ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆ ಎನ್ನಬಹುದು.

ನಾಗಪ್ಪನಿಗೆ ಹಾಲು ಹಾಕುವ ಈ ಹಬ್ಬದಂದು ಪಂಚಭೂತಗಳ ಪ್ರತೀಕವಾದ ೫ ಉಂಡೆಗಳನ್ನು ಮಾಡಿ ನಾಗರಾಧನೆಗೆ ತಮ್ಮ ಹಟ್ಟಿ ಇಲ್ಲವೆ, ಇಡೀ ಊರ ಜನರು ಯಾವ ಸ್ಥಳಕ್ಕೆ ಹೋಗಿ ಹಾಲು ಹಾಕಿ

ಬರುವರು. ಏಕೆಂದರೆ ಊರ ಹೊರಗಿದ್ದ ಬಹುತೇಕ ತಾಂಡಾಗಳು ಇಂದು ನಗರ ಭಾಗದ ಮಧ್ಯೆದಲ್ಲಿವೆ. ಕಾರಣ ಊರಿನ ಜನಸಂಖ್ಯೆ ಬೆಳೆದಂತೆಲ್ಲಾ ತಾಂಡಾಗಳೇ ನಗರಪ್ರದೇಶದ ಮಧ್ಯದಲ್ಲಿವೆ ಎಂದೆನಿಸುತ್ತದೆ.

ಹತ್ತಿರದ ತಮ್ಮ ನೆಂಟರಿಷ್ಟರನ್ನು ಹಾಗೂ ಮಗಳು ಅಳಿಯರನ್ನು ಹಬ್ಬಕ್ಕೆ ಕರೆದುತಂದು ಸಂಭ್ರಮದಿಂದ ಆಚರಿಸುವರು. ಆದರೆ ಈ ಹಬ್ಬಕ್ಕೆ ಅಷ್ಟೇನು ಪ್ರಾಧಾನ್ಯತೆ ನೀಡುವುದಿಲ್ಲ. ಲಂಬಾಣಿಗರು ನಿಸರ್ಗದ ಆಸುಪಾಸಲ್ಲೇ ಜೀವನ ಸಾಗಿಸಿದ್ದರೂ ಸಹ ನಾಗರಹಬ್ಬಕ್ಕೆ ನೀಡುವ ಮಹತ್ವ ಕಡಿಮೆ. ಜಿಲ್ಲೆಯ ಬಹುತೇಕ ತಾಂಡಾಗಳ ಜನರು ಈ ಹಬ್ಬವನ್ನು ಆಚರಿಸುವರು.

ನಾಗಪಂಚಮಿ ಇಲ್ಲವೇ ಚೌತಿಯ ದಿನದಂದು ಆಚರಿಸದಿದ್ದರೆ ಕನ್ನಡಿಗರು ಆಚರಣೆ ಮಾಡುವ ಆ ತಿಂಗಳಿನ ಸೋಮವಾರ ಇಲ್ಲವೇ ಶನಿವಾರ ಹಬ್ಬ ಆಚರಿಸುವರು. ಈ ಹಬ್ಬದ ವೇಳೆ ಸಾಮೂಹಿಕ ಸಹಭಾಗಿತ್ವ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತದೆ.

**ಯುಗಾದಿ :** ಲಂಬಾಣಿಗರು ಆಚರಿಸುವ ಮತ್ತೊಂದು ಹಬ್ಬವೆಂದರೆ ಯುಗಾದಿ ಹಬ್ಬವಾಗಿದೆ. ಈ ಹಬ್ಬವನ್ನು ಕನ್ನಡಿಗರು ಆಚರಿಸುವುದನ್ನು ಕಂಡು ಇವರು ಆಚರಿಸಲು ತೊಡಗಿದ್ದಾರೆ ಎನಿಸುತ್ತದೆ. ಈ ಹಬ್ಬಕ್ಕೆ ಅಷ್ಟೇನು ಮಹತ್ವ ನೀಡದಿದ್ದರೂ ಸಹ ಸಾಂಪ್ರದಾಯಿಕ ವಿಧಿವಿಧಾನಗಳೊಂದಿಗೆ ತಮ್ಮ ತಾಂಡಾದಲ್ಲಿರುವ ಪ್ರಮುಖ ದೇವಾಲಯಗಳಾದ ಸೇವಾಲಾಲ್, ಮಾರಿಯಮ್ಮ ದೇವಾಲಯಗಳನ್ನು ಶುಭ್ರಗೊಳಿಸಿ ಹಬ್ಬವನ್ನು ಆಚರಿಸುವರು. ನೈಸರ್ಗಿಕವಾಗಿ ಆಗತಾನೆ ಮರಗಳಲ್ಲಿ ಚಿಗುರು ಮೂಡಿರುತ್ತದೆ. ಮೂಲತಃ ನಿಸರ್ಗವಾಸಿಯಾದ ಲಂಬಾಣಿಗರು ಪಟ್ಟಣದವಾಸಿಗಳು ಆಚರಿಸುವ ವಿಧಿ-ವಿಧಾನವನ್ನು ರೂಢಿಸಿಕೊಂಡಿದ್ದಾರೆ.

ಕೆಲವು ತಾಂಡಾಗಳಲ್ಲಿ ದಸರಾಹಬ್ಬದ ವೇಳೆ ಭಜನಾಕಾರ್ಯಕ್ರಮವನ್ನು ಪೂರೈಸದಿದ್ದರೆ ಯುಗಾದಿಯ ಹಬ್ಬದ ಸಮಯದಲ್ಲಿ ಬೇರೆ ತಾಂಡಾಗಳಲ್ಲಿ ಸಾಂಪ್ರದಾಯಿಕವಾಗಿ ಭಜನೆಯನ್ನು ಕೈಗೊಳ್ಳುತ್ತಾರೆ. ಭಜನಾ ತಂಡವನ್ನು ಕರೆಸಿ ಸೇವಾಲಾಲ್ ಇಲ್ಲವೆ ಸಂತರ ಜೀವನ ಅವರು ಕೈಗೊಂಡ ಪವಾಡಗಳ ಕುರಿತಾಗಿ ರಾತ್ರಿ ಇಡೀ ಎಚ್ಚರವಾಗಿದ್ದು ಕೇಳುತ್ತಾರೆ. ಬೆಳಗಿನ ಜಾವದ ವೇಳೆಯಲ್ಲಿ ಆಯಾಯ ತಾಂಡಾದ ನಾಯಕನ ಅನುಮತಿಯಂತೆ ಭಜನಾಮೇಳದ ತಂಡದವರಿಗೆ ಬೋಜನದ ವ್ಯವಸ್ಥೆ ಮಾಡುತ್ತಾರೆ.

ಯುಗಾದಿಯು ಹಿಂದೂಗಳಿಗೆ ನವವರುಷವಾಗಿ ಪರಿಣಮಿಸಿದರೆ ಹಲವು ತಾಂಡಾಗಳಲ್ಲಿಯ ಮಹಿಳೆಯರು ಹೊಸ ಹೊಸ ಬಟ್ಟೆಗಳನ್ನು ತೊಟ್ಟು ಸುಣ್ಣ ಬಣ್ಣದಿಂದ ಸಿಂಗರಿಸಿದ ಸೇವಾಲಾಲ್ ದೇವಾಲಯಕ್ಕೆ ತೆರಳಿ ಭಕ್ತಿ ಭಾವದಿಂದ ಪೂಜೆ ಸಲ್ಲಿಸುವರು. ತುಂಬಾ ವಿಶಿಷ್ಟವಾದ ಸಾಂಪ್ರದಾಯಿಕ ಉಡುಗೆ ತೊಟ್ಟು ತಾಂಡಾದ ದೇವಾಲಯಗಳ ಬಳಿ ಸಾಗಿ ವಾದ್ಯಕ್ಕೆ ತಕ್ಕಂತೆ ಭಾವತನ್ಮಯರಾಗಿ ನರ್ತಿಸುತ್ತಾರೆ. ಹಿಂದೂಗಳು ಯುಗಾದಿಯನ್ನು ಹೇಗೆ ಸಂಭ್ರಮದಿಂದ ಆಚರಿಸುವರೋ ಅದೇ ರೀತಿಯಾಗಿ ತಾಂಡಾದಲ್ಲಿಯೂ ತುಂಬ ಸೊಗಸಾಗಿ ಆಚರಿಸುವರು. ಸೇವಿಗೆಯಂತಹ ಸಿಹಿ ಪದಾರ್ಥ ಈ ಸಂದರ್ಭದ ಆಹಾರ ಪದ್ಧತಿಯಾಗಿದೆ.

**ಮೊಹರಂ ಆಚರಣೆ :** ಲಂಬಾಣಿಗರು ತಮ್ಮ ಹಟ್ಟಿಗಳಲ್ಲೇ ಇಲ್ಲವೇ ನಗರದ ಹಲವು ಏರಿಯಾಗಳಲ್ಲಿ ಕೂಡಿಸುವ ಪಂಜಾಗಳ ಸ್ಥಳಗಳಿಗೆ ತೆರಳಿ ಮೊಹರಂ ದೇವರುಗಳನ್ನು ಪೂಜಿಸುವುದು ಸರ್ವೆ ಸಾಮಾನ್ಯ ಸಂಗತಿಯಾಗಿದೆ. ಮೊಹರಂ ಹಬ್ಬವು ಮುಸ್ಲಿಂ ಬಾಂಧವರಿಗೆ ಶೋಕಾಚರಣೆಯಾದರೆ ಹಿಂದೂ ಮತ್ತು ಲಂಬಾಣಿ ಸಮುದಾಯದವರಿಗೆ ಶ್ರದ್ಧಾಭಕ್ತಿಯ ಆಚರಣೆಯಾಗಿದೆ. ಅಂದು ಭಕ್ತಿಯೊಂದಿಗೆ ಸಂಭ್ರಮ ಪಡುವುದು ಜಿಲ್ಲೆಯ ಬಹುತೇಕ ತಾಂಡಾಗಳಲ್ಲಿ ಕಾಣಸಿಗುತ್ತದೆ.

ಮೊಹರಂ ಹಬ್ಬವನ್ನು ಅಲಾವೊ ಅಥವಾ ಪೀರ್ಲಹಬ್ಬ ಎಂತಲೂ ಕರೆಯುವುದು ವಾಡಿಕೆಯಲ್ಲಿದೆ. ಹಲವು ತಾಂಡಾಗಳಲ್ಲಿ ಮೊಹರಂ ಆಚರಣೆಯನ್ನು ತಮ್ಮ ಹಬ್ಬ ಎನ್ನುವಂತೆ ಸಾಮೂಹಿಕವಾಗಿ ಪಾಲ್ಗೊಂಡು ವಿಶಿಷ್ಟವಾಗಿ ಆಚರಿಸುತ್ತಾರೆ. ಇದೊಂದು ಸಾಮರಸ್ಯಕ್ಕೆ ಪ್ರತೀಕವಾದ ಮಹತ್ವದ ಹಬ್ಬವಾಗಿದೆ.

ಮೊಹರಂ ಪಂಜಾಗಳು ಪ್ರತಿಷ್ಠಾಪಿಸಿದ ದಿನದಿಂದಲೂ ನಿಗದಿತ ಸ್ಥಳಕ್ಕೆ ತೆರಳಿ ತಾವು ಕೋರಿಕೊಂಡ ಬೇಡಿಕೆ ಈಡೇರಿದ ಕಾರಣದಿಂದ ಅನೇಕ ಕಾಣಿಕೆಯನ್ನು ಸಮರ್ಪಿಸಿ ಬರುತ್ತಾರೆ. ಹಲವು ತಾಂಡಾಗಳಲ್ಲಿ ಮೊಹರಂ ಆಚರಣೆಯನ್ನು ಅತಿ ಹೆಚ್ಚು ಸಂಖ್ಯೆಯಲ್ಲಿ ಪಾಲ್ಗೊಂಡು ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಕೆಲವು ಕಡೆ ಪಂಜಾಗಳು ಕೂಡಿಸಿದ ಸ್ಥಳದಲ್ಲಿ ಅಗ್ನಿಕುಂಡದ ಸುತ್ತಲೂ ಅಲಾಮಿ ಕುಣಿತವನ್ನು ಅತ್ಯಂತ ಸುಂದರವಾಗಿ ನರ್ತಿಸುತ್ತಾರೆ.

ಮೊಹರಂ ಹಬ್ಬದ ವೇಳೆ ಹಲವು ಲಂಬಾಣಿಗರು ವೇಷತೊಟ್ಟು ಮನೆ ಮನೆಗೂ ತೆರಳಿ ಕಾಸು ಪಡೆಯುವರು. ಇದು ಅವರುಗಳ ಭಕ್ತಿಯ ಪರಾಕಾಷ್ಠತೆಯನ್ನು ಬಿಂಬಿಸುತ್ತದೆ. ಅಲಾಯಿಸುತ್ತಲೂ ತುಂಬಾ ಮನಮೋಹಕವಾಗಿ ಭಾವತನ್ಮಯರಾಗಿ ನರ್ತಿಸುವುದು ಈ ಭಾಗದಲ್ಲಿ ಕಾಣಸಿಗುತ್ತದೆ.

ಜಿಲ್ಲೆಯ ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ ತಾಲೂಕಿನ ಬಹುತೇಕ ಗ್ರಾಮಗಳ ಲಂಬಾಣಿಗರು ತಮ್ಮದೇ ಆಚರಣೆ ಎಂಬಂತೆ ಮೊಹರಂ ಹಬ್ಬ ಆಚರಿಸುತ್ತಿರುವುದು ವ್ಯಕ್ತವಾಗಿದೆ. ಈ ಭಾಗದ ಕಲ್ಲಹಳ್ಳಿ, ರಾಜಾಪುರ, ಸಿದ್ದಾಪುರ, ಸುಶೀಲಾನಗರ, ಗರಗನಾಗಲಾಪುರ, ಸುಶೀಲಾನಗರದಿಂದ ಹಾಗೂ ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿಯ ಅತಿಹೆಚ್ಚು ಸಂಖ್ಯೆಯ ತಾಂಡಾದ ನಿವಾಸಿಗಳು ಮೊಹರಂ ಆಚರಣೆಯ ಏಳನೆಯ ದಿನದಂದು 'ರಾಮಾಲಿಸ್ವಾಮಿ'ಯ ಸ್ಥಳಕ್ಕೆ ತೆರಳಿ ಆಚರಣೆಯಲ್ಲಿ ಪಾಲ್ಗೊಳ್ಳುವರು.

ಐತಿಹಾಸಿಕ ಪ್ರಸಿದ್ಧಿ ಪಡೆದ 'ರಾಮಘಡವು' ಇಂದು 'ರಾಮಾಲಿಸ್ವಾಮಿ' ಎಂಬ ಹೆಸರಲ್ಲಿ ಧಾರ್ಮಿಕ ಕೇಂದ್ರವಾಗಿದೆ. ಮೊಹರಂ ಆಚರಣೆಯ ದಿನದಲ್ಲಿ ಏಳನೆಯ ದಿನ ಮಾತ್ರ ತುಂಬಾ ವಿಶಿಷ್ಟವಾಗಿ ಹಿಂದೂ-ಮುಸ್ಲಿಂ ಬಾಂಧವರಿಗಿಂತಲೂ ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುವುದು ತುಂಬಾ ವಿಶೇಷವಾಗಿದೆ.

'ರಾಮಾಲಿಸ್ವಾಮಿ' ಎಂಬ ದೈವದ ಹೆಸರಲ್ಲಿ ಹಲವರು 'ರಾಮಾಲೆಪ್ಪ' ಎಂದು ಕರೆಯುತ್ತಾರೆ. ಬೆಟ್ಟದ ಎತ್ತರದ ಭಾಗದಲ್ಲಿ ನೆಲೆಸಿರುವ ಈ ಸ್ಥಳವನ್ನು ಕಂಪಲಿ ಅರಸು ಮನೆತನದವರು ಕುಮ್ಮಟದುರ್ಗವನ್ನು

ರಾಜಧಾನಿಯಾಗಿ ಮಾಡಿಕೊಂಡಂತೆ 'ರಾಮಘಡ'ವನ್ನು ಎರಡನೆಯ ರಾಜಧಾನಿಯಾಗಿ ಮಾಡಿಕೊಂಡಿದ್ದ ರೆಂಬುದಕ್ಕೆ ಶಾಸನ ಹಾಗೂ ಸ್ಥಳಪುರಾಣ, ಐತಿಹ್ಯಗಳಿಂದ ತಿಳಿದುಬರುತ್ತದೆ. ಇವೇ ಸ್ಥಳಕ್ಕೆ ಕುಮಾರರಾಮನ ತಂದೆ ಕಂಪಲಿರಾಯ ಹುಲಿ ಬೇಟೆಗಾಗಿ ಬರುತ್ತಿದ್ದನೆಂದು ಇದರಿಂದ ಈ ಸ್ಥಳವು ಹುಲಿಗಳ ತಾಣವಾಗಿತ್ತೆಂದು ತಿಳಿದುಬರುತ್ತದೆ.

ಈ ಸುದೀರ್ಘವಾದ ಬೆಟ್ಟದ ಪ್ರದೇಶದಲ್ಲಿ ಹಿಂದೆ ಹುಲಿಗಳನ್ನು ಕಂಡ ಲಂಬಾಣಿಗರು ಇದ್ದಾರೆ. ಆ ವೇಳೆಗೆ ಎದುರಾದ ಹುಲಿಗಳು ರಾಮಾಲಿಸ್ವಾಮಿ ದೈವದ ನಾಮ ಉಚ್ಚರಿಸಿದ ಬಳಿಕ ಸಾಗಿಬಿಡುತ್ತಿದ್ದವೆಂದು ಆ ಭಾಗದ ನಿವಾಸಿಗಳು ತಿಳಿಸುತ್ತಾರೆ. ಈಗ ಮೊಹರಂ ದೇವರು ಕೂಡಿಸುವ ರಾಮಾಲಿಸ್ವಾಮಿ ಗುಡಿಯೊಳಗೆ ಅದೆಷ್ಟೋ ಸಲ ಲಂಬಾಣಿಗರು ಹುಲಿಯನ್ನು ನೋಡಿರುವುದಾಗಿ ಕ್ಷೇತ್ರಕಾರ್ಯದ ವೇಳೆ ತಿಳಿಸಿದ್ದಾರೆ.

ಕುಮ್ಮಟ ದುರ್ಗದ ಅರಸರು ಆಳಿದ ಬಹುತೇಕ ಸ್ಥಳಗಳ ಹೆಸರುಗಳನ್ನು ಇಲ್ಲಿ ತಿಳಿಸುವರು. ಕುಮಾರರಾಮನನ್ನು ಕೊಂದ ಬಳಿಕ ಆತನ ರುಂಡವನ್ನು ರಾಮಘಡದಲ್ಲಿ ತಂದು ಇಟ್ಟಿದ್ದರಂತೆ. ಆ ರುಂಡವು ಕೇಕೆ ಹಾಕಿದಾಗ ಜನರೆಲ್ಲಾ ಆತಂಕಕ್ಕೊಳಗಾದರೆಂಬ ನಂಬಿಕೆ ಈಗಲೂ ಹಲವು ಜನರಲ್ಲಿ ಹುದುಗಿದೆ. ಇದೇ ಸ್ಥಳದ ಅನತಿ ದೂರದಲ್ಲಿ ವಿಜಯನಗರದ ಅರಸರು ನಿರ್ಮಿಸಿರುವ ಕುಮಾರರಾಮನ ದೇವಾಲಯವಿದೆ. ಈ ದೇವಾಲಯದ ಸ್ಥಳದ ಬಳಿಯಲ್ಲಿ ಕುಮಾರರಾಮನಿಗೆ ಸಂಬಂಧಿಸಿದ ವೀರಗಲ್ಲು ದೊರೆತಿದೆ. ಅಲ್ಲದೆ ದೇವಾಲಯ ಕಟ್ಟಿಸಿದ ಬಗ್ಗ ಶಾಸನವೊಂದು ಈಗಲೂ ಸುರಕ್ಷಿತವಾಗಿ ದೇವಾಲಯದ ಎದುರಿಗೆ ಕಂಡುಬರುತ್ತದೆ.

ಈ ಸ್ಥಳದ ಬಳಿ ಇರುವ ರಾಮಾಲಿಸ್ವಾಮಿ ಆಚರಣೆಯು ಮೊಹರಂ ಹಬ್ಬದ ಆಚರಣೆಯ ಜೊತೆಗೆ ಹೊಂದಿರುವ ಸಂಬಂಧದ ಕುರಿತಾಗಿ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ. ಇದೇ ಹೆಸರಿನ ದೈವಗಳು ಹೊಸಪೇಟೆಯಲ್ಲಿ ಅನೇಕ ಕಡೆಗೆ ಕಂಡುಬರುತ್ತವೆ. ರಾಮಾಚಿತ್ರಮಂದಿರದ ಬಳಿಯಲ್ಲಿ ರಾಮಾಲಿಸ್ವಾಮಿ, ಇದರ ಪಕ್ಕದಲ್ಲೇ ಕಳ್ಳಿ ರಾಮಾಲಿಸ್ವಾಮಿ ಹಾಗೂ ಚಿತ್ತವಾಡ್ಗಿ ರಾಮಾಲಿಸ್ವಾಮಿಯ ಆಚರಣೆ ಮೊಹರಂ ಹಬ್ಬದಲ್ಲಿ ಮೊಹರಂ ಪಂಜಾಗಳ ರೀತಿಯಲ್ಲಿ ಕೂಡಿಸಿ ಆಚರಿಸುವರು. ವಿಶೇಷವಾಗಿ ಚಿತ್ತವಾಡ್ಗಿ ರಾಮಾಲಿಸ್ವಾಮಿಯ ಪಂಜಾದಲ್ಲಿ ಹಿಂದೂ ಧರ್ಮದ ವ್ಯಕ್ತಿಯೇ ಪಂಜಾ ಹಾಗೂ ಕೊಂಡ ಪವಾಡ ಜರುಗಿಸುವುದು ಕಂಡುಬರುತ್ತದೆ. ಈ ರಾಮಾಲಿಸ್ವಾಮಿಗಳು ಗುಡ್ಡದ ಸ್ಥಳದಲ್ಲಿರುವುದರಿಂದ ರಾಮಘಡದ ಗುಡ್ಡದ ರಾಮಲಿಸ್ವಾಮಿ ಎಂದು ಕರೆಯಿಸಿಕೊಳ್ಳುವ ಸ್ವಾಮಿಯು ಇವರೆಗೆಲ್ಲಾ ಅಣ್ಣನೆಂಬುದಾಗಿ ಈಗಲೂ ನಂಬುತ್ತಾರೆ.

ಈ ರಾಮಾಲಿಸ್ವಾಮಿ ಆಚರಣೆಯ ವೇಳೆ ಲಂಬಾಣಿಗರು ಅತ್ಯಂತ ವಿಜೃಂಭಣೆಯಿಂದ ಹೊಸ ಬಟ್ಟೆ ಗಳನ್ನು ತೊಟ್ಟು ಭಕ್ತಿಯಿಂದ ಕಾಣಿಕೆ ಸಮರ್ಪಿಸಿ ಕುರಿ ಬಲಿ ನೀಡುವುದು ಇಂದಿಗೂ ಕಾಣಸಿಗುತ್ತದೆ. ಸಾಮೂಹಿಕವಾಗಿ ಆಚರಿಸುವ ಸಾಮರಸ್ಯ ಪ್ರತೀಕದ ಈ ಮೊಹರಂ ಹಬ್ಬದ ವೇಳೆ ಆಚರಣೆ ಮಾಡುವ

ರಾಮಾಲಿಸ್ವಾಮಿಯ ದೈವರಾಧನೆಯ ಬಗ್ಗೆ ಇನ್ನೂ ಹೆಚ್ಚಿನ ರೀತಿಯ ಸಂಶೋಧನಾತ್ಮಕ ಅಧ್ಯಯನ ನಡೆಸಬೇಕಾಗಿದೆ.

ಈ ಹಿಂದೆ ಹಬ್ಬದ ಸಂದರ್ಭದಲ್ಲಿ ಮಾತ್ರ ಲಂಬಾಣಿಗರು ಅತಿ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಿದ್ದರು. ಕಳೆದ ೫೦-೬೦ ವರ್ಷದ ಹಿಂದೆ ಸಾಂಪ್ರದಾಯಿಕ ಉಡುಗೆ-ತೊಟ್ಟು ಬರುತ್ತಿದ್ದ ಲಂಬಾಣಿಗರು ತಮ್ಮ ಸಾಂಪ್ರದಾಯಿಕ ಉಡುಗೆ-ತೊಡುಗೆ ಬಿಟ್ಟು ಈ ಆಚರಣೆ ದಿನದಂದು ಆಧುನಿಕ ನವನಾಗರಿಕತೆಯ ವೇಷಭೂಷಣ ತೊಟ್ಟು ಬರುವರು. ಇದರಿಂದ ಅವರು ಲಂಬಾಣಿಗರು ಹೌದೆ ಅಲ್ಲವೇ ಗುರುತಿಸುವುದು ಕಷ್ಟ. ಈ ಸ್ಥಳವಷ್ಟೇ ಅಲ್ಲ ಕಲ್ಲಹಳ್ಳಿ-ರಾಜಾಪುರ, ಸುಶೀಲಾನಗರ, ಸಿದ್ದಾಪುರ, ಗುಂಡಾ, ದಶಮಾಪುರ, ಇನ್ನಿತರೆ ಸ್ಥಳಗಳಲ್ಲಿ ಮೊಹರಂ ಆಚರಣೆಯಲ್ಲಿ ಹಲವು ಜನ ಲಂಬಾಣಿಗರು ಪಾಲ್ಗೊಳ್ಳುವರು.

### ೩.೪. ಲಂಬಾಣಿಗರ ಒಗಟುಗಳು

ಲಂಬಾಣಿ ಜನಾಂಗದ ವಿಶಿಷ್ಟ ಸಾಹಿತ್ಯ ಪ್ರಕಾರಗಳಲ್ಲಿ ಒಗಟಿಗೂ ತನ್ನದೇ ಆದ ಸ್ಥಾನವಿದೆ. ಗಾದೆಗಳಂತೆ ಒಗಟುಗಳ ಬಳಕೆ ಎಲ್ಲಾ ಸಂದರ್ಭದಲ್ಲಿ ಬಳಕೆ ಆಗೋಲ್ಲ. ಸೀಮಿತ ಪ್ರಸಂಗಗಳಲ್ಲಿ ಮಾತ್ರ ಒಗಟುಗಳ ಬಳಕೆಯಾಗುವುದು ಕಂಡುಬರುತ್ತದೆ. ಹುಡುಗರಿಂದ ಹಿಡಿದು ಮುದುಕರ ವರೆಗೂ ಒಗಟುಗಳನ್ನು ಬಳಸುವುದನ್ನು ಕಾಣಬಹುದಾಗಿದೆ. ಇವರಲ್ಲಿ ಒಗಟು ಗೊತ್ತಿರುವವನಿಗೆ ವಿಶೇಷ ಸ್ಥಾನಮಾನ ನೀಡಲಾಗುತ್ತದೆ.

ಒಗಟುಗಳಿಗೆ 'ಫೋಡೇರ ಸಾಕಿ' ಎಂದು ಹೆಸರಿದೆ. ಸಾಕಿ ಎಂಬ ಪದವು ಕತೆ ಎಂದು ಅರ್ಥೈಸಿದರೂ ಒಡಗತೆ (ಫೋಡೇರಸಾಕಿ) ಗೆಲ್ಲುವಕತೆ(ಜೀತೇರ ಸಾಕಿ) ಎಂಬುದಾಗಿ ಬಳಸಲಾಗುತ್ತಿದೆ. ಇವುಗಳನ್ನು ಸ್ತ್ರೀಯರಷ್ಟೇ ಅಲ್ಲ ಪುರುಷರೂ ಸಹ ಅನೇಕ ಸಂದರ್ಭಗಳಲ್ಲಿ ಬಳಕೆ ಮಾಡುವರು. ಹೆಚ್ಚಾಗಿ ಸ್ತ್ರೀಯರು ಸಾಂಪ್ರದಾಯಿಕವಾಗಿ ಅದರಲ್ಲೂ ಮದುವೆ, ಇಲ್ಲವೆ ಯಾವುದೇ ಶುಭಕಾರ್ಯದ ವೇಳೆ ಉಪಯೋಗಿಸುವರು. ಒಗಟು ಮೂಲತಃ ಪ್ರಶ್ನೆ ಮತ್ತು ಉತ್ತರದ ಮಾದರಿಗಳಂತಿರುತ್ತವೆ. ಅವರಲ್ಲಿ ಹೆಚ್ಚಾಗಿ ಒಗಟಿಗೆ ಸಂವಾದಿಯಾಗಿ ಕಲದ್ ಇಲ್ಲವೇ ಕಲಮೆ ಎಂತಲೂ ಬಳಸುತ್ತಾರೆ. ಇಂತಹ ಒಗಟುಗಳಲ್ಲಿ ಅವರ ಸಂಪ್ರದಾಯಿಕ ಆಚರಣೆಗಳ-ವಿಧಿವಿಧಾನ, ಸಂಸ್ಕೃತಿ ಹಾಗೂ ನೀತಿ ಧರ್ಮದ ಪ್ರಸಂಗಗಳಲ್ಲಿ ವ್ಯಕ್ತವಾಗುತ್ತದೆ. ಈ ರೀತಿಯ ಒಗಟುಗಳು ಸಾಮಾಜಿಕ ಬದುಕು ಮತ್ತು ಸಾಂಸ್ಕೃತಿಕ ಬದುಕಿಗೆ ಹಿಡಿದ ಕನ್ನಡಿಯಂತಿವೆ.

ಕನ್ನಡದಲ್ಲಿ ಬಳಸುವ ಒಗಟು ಎಂಬ ಪದವನ್ನು ಇಂಗ್ಲಿಷಿನ Ridal(ರೀಡಾಲ್) ಎಂಬ ಪದದ ಸಂವಾದಿ ಯಾಗಿ ಬಳಸಲಾಗುತ್ತಿದೆ. ಒಗಟು ಎಂಬ ಪದದ ಅರ್ಥವು ಲಸೆ(tothrew) ಎಂದಾಗಿದೆ. ಅಂದರೆ ಒಗಟನ್ನು ಹೇಳುವವನಿಗೆ ಅದರ ನಿಗೂಢಾರ್ಥವು ತಿಳಿದಿರಬೇಕಾಗುತ್ತದೆ. ಇದು ಒಂದು ರೀತಿಯ ಬೌದ್ಧಿಕ ಕಸರತ್ತಿನ ಪ್ರದರ್ಶನವಾಗಿದೆ. ಒಗಟುಗಳು ಮೇಲ್ನೋಟಕ್ಕೆ ಅಶ್ಲೀಲ ಪದಗಳಾಗಿ ಬಳಕೆಯಾದರೂ ನಿಗೂಢವಾಗಿ ನೀತಿಯನ್ನು ಹೊರಸೂಸುತ್ತವೆ. ಇದು ಚುಟುಕಾಗಿ ಇಡೀ ವಿಶಾಲಾರ್ಥವನ್ನು ಒಳಗೊಂಡಿರುತ್ತವೆ. ಕೃಷ್ಣನ ಬಾಯಲ್ಲಿ ಬ್ರಹ್ಮಾಂಡ ಅಡಗಿದಂತೆ ಒಗಟು ಎಂಬ ಪದದಲ್ಲಿ ವಿಶಾಲತೆ ಅಡಗಿರುತ್ತದೆ.

ಒಗಟನ್ನು ಪ್ರಾಕೃತ ಭಾಷೆಯಲ್ಲಿ ವಡ್ಡಕತ ಎಂದು ಬಳಸಿದರೆ ಇದನ್ನೇ ಸಂಸ್ಕೃತ ಭಾಷೆಯಲ್ಲಿ ವಡ್ಡ ಕಥಾವಾಗಿ ಬಳಸಲಾಗಿ ಬೃಹತ್ಕಥವಾಗಿ ಉಪಯೋಗಿಸಿದೆ. ಒಗಟಿನ ಬಗ್ಗೆ ಏಕಾಭಿಪ್ರಾಯವಿಲ್ಲ. ಭಿನ್ನ ಭಿನ್ನ ವಿದ್ವಾಂಸರು ಭಿನ್ನ ಭಿನ್ನ ಹೇಳಿಕೆಗಳನ್ನೂ ನೀಡುತ್ತಾರೆ. ಒಟ್ಟಿನಲ್ಲಿ ಒಗಟುಗಳನ್ನು ತಿಳಿದವನು ಚಮತ್ಕಾರವಾಗಿ ಮಾತಿನ ಮಧ್ಯೆದಲ್ಲಿ ಬಳಸಿ ಅವರ ಬೌದ್ಧಿಕ ಮಟ್ಟ ಎಷ್ಟಿದೆ ಎಂದು ಪ್ರದರ್ಶಿಸುವರು. ಒಗಟು ಕಾಲ ಕಳೆಯುವ ಸಾಧನವಾಗಿದೆ ಎಂದು ಉಲ್ಲೇಖವಾದರೂ ಅದರಲ್ಲಿ ತಾರ್ಕಿಕತೆ, ಬೌದ್ಧಿಕತೆ ಸ್ವರೂಪ ವ್ಯಕ್ತವಾಗಿರುತ್ತದೆ. ಬದುಕೆ ಒಂದು ರೀತಿಯ ಒಗಟು ಎಂದು ಜನಪದರು ಮಾತಾಡಿಕೊಳ್ಳುತ್ತಾರೆ. ಇದೊಂದು ಸೋಮಾರಿಗಳ ಸಾಧನದಂತೆ ಪರಿಣಮಿಸಿದೆ ಎಂದು ಹಲವು ವಿದ್ವಾಂಸರು ಚರ್ಚಿಸಿದರೆ, ಇನ್ನು ಕೆಲವರು ಇದರ ಮಹತ್ವವು ತುಂಬಾ ಇದೆ ಎಂದು ತಿಳಿಸುತ್ತಾರೆ. ಮಹಿಳೆಯರು ಹಬ್ಬ-ಹರಿದಿನ, ಸಾಂಪ್ರದಾಯಿಕ ವಿಧಿ-ವಿಧಾನದ ವೇಳೆ ಒಬ್ಬರು ಇನ್ನೊಬ್ಬರ ಬೌದ್ಧಿಕ ಕಸರತ್ತು ಪರೀಕ್ಷಿಸುವುದೇ ಒಗಟಾಗಿ ಪರಿಣಮಿಸಿರುತ್ತದೆ.

ಒಗಟು ಹೆಚ್ಚಾಗಿ ಇಂತಹ ಸಂದರ್ಭಗಳಲ್ಲೇ ಬಳಸಬೇಕೆಂಬ ನಿಯಮವಿಲ್ಲ. ಆದರೂ ಲಂಬಾಣಿಗರು ಹೆಚ್ಚಾಗಿ ಹುಡುಗರು ದನ ಮೇಯಿಸುವಾಗ ಹೆಚ್ಚಾಗಿ ಬಳಕೆ ಮಾಡುವರು. ಅಲ್ಲದೆ ಮಳೆಗಾಲ ಮತ್ತು ಬೇಸಿಗೆಯ ಬೆಳದಿಂಗಳ ರಾತ್ರಿಯಲ್ಲಿ ಪರಸ್ಪರವಾಗಿ ಹರಟೆಯೊಡೆಯುವ ವೇಳೆ ಒಗಟುಗಳ ಪ್ರಯೋಗವಾಗುತ್ತವೆ. ಇವು ಒಬ್ಬರಿಗೊಬ್ಬರು ಸ್ಪರ್ಧಾತ್ಮಕವಾಗಿ ಬಳಸುವಂತೆ ಕಾಣಸಿಗುತ್ತದೆ. ಹೆಚ್ಚಾಗಿ ಹಿರಿಯರು ನ್ಯಾಯ ಪಂಚಾಯ್ತಿ ಬಗೆಹರಿಸುವ ವೇಳೆಯಲ್ಲಿ ಒಗಟುಗಳನ್ನು ಬಳಸುವರು. ಮಹಿಳೆಯರು ಹಬ್ಬ ಹರಿದಿನ ಜೊತೆಗೆ ಕಸೂತಿ ಕೆಲಸ, ಮದುವೆ ಪ್ರಸಂಗದಲ್ಲಿ ವಿನೋದಕ್ಕಾಗಿ ಒಗಟುಗಳನ್ನು ಬಳಸುವುದು ಕಾಣಸಿಗುತ್ತದೆ.

ಎಲ್ಲಾ ಭಾಷೆಗಳಂತೆ ಒಗಟುಗಳು ಪ್ರಶ್ನೆ ಮತ್ತು ಉತ್ತರ ಎಂದು ಎರಡು ಭಾಗಗಳಾಗಿ ವಿಂಗಡನೆಯಾಗಿದೆ. ಪ್ರಶ್ನಾರ್ಥ ಭಾಗವನ್ನು ಕೇಳುಗನಿಂದ ಹೊರಹೊಮ್ಮಿದರೆ ಆ ಒಗಟಿನ ನಿಗೂಢಾರ್ಥವನ್ನು ಉತ್ತರಿಸುವವನು ಸರಿಯಾಗಿ ಹೇಳಬೇಕು. ಈ ರೀತಿ ಹೇಳಿದರೆ ಉತ್ತರಿಸುವವನು ಸ್ಪರ್ಧಾ ವಿಜಯಿಯಾಗುತ್ತಾನೆ. ಅಲ್ಲದೆ ಕೇಳುಗನಿಗಿಂತಲೂ ತಾನು ಹೆಚ್ಚು ಬುದ್ಧಿವಂತ ಎಂದು ನಿರೂಪಿಸುವ ಪ್ರಸಂಗವು ಜರುಗುತ್ತದೆ. ಒಗಟುಗಳು ಒಮ್ಮೊಮ್ಮೆ ಕೇವಲ ಒಂದೇ ಎಸಾಳಲ್ಲಿ ಬಳಕೆಯಾಗುವುವು. ಇನ್ನು ಕೆಲವು ಸಂದರ್ಭಗಳಲ್ಲಿ ಎರಡಕ್ಕಿಂತ ಹೆಚ್ಚು, ಅಲ್ಲದೆ ಕೆಲವು ಒಗಟುಗಳು ಹಾಡಿನ ದಾಟಿಯಂತೆ ಬಳಸಲಾಗುತ್ತವೆ. ಒಟ್ಟಾರೆಯಾಗಿ ಇವುಗಳು ಕಾಲಕಳೆಯುವ ಸಾಧನಗಳಾಗಿ ಬಳಕೆಯಾಗಿರಬಹುದಾಗಿವೆ. ''ನ್ಯಾಯ ಸಮ್ಮತವಾದ ತೀರ್ಪುಕೊಡುವಲ್ಲಿ ಇವರದು ಎತ್ತಿದ ಕೈ. ಸಭೆ ಸಮಾರಂಭಗಳಲ್ಲಿ ಎಂತಹ ಜಟಿಲ ಸಮಸ್ಯೆಯನ್ನಾದರೂ ಲಂಬಾಣಿಗರು ಒಗಟು ಗಾದೆಗಳನ್ನು ಬಳಸುವುದರ ಮೂಲಕ ಸುಲಭವಾಗಿ ಬಗೆಹರಿಸಬಲ್ಲ ಲಂಬಾಣಿಗರ ಚಾತುರ್ಯ ಅಪ್ರತಿಮವಾದುದು''ಎಂಬ ಸಿದ್ಧರಾಮರವರ ಮಾತು ಸರಿಯಿದೆ. ಈ ಕಾರಣಕ್ಕಾಗಿ ಅವರ ಬದುಕು ಇತರ ಧರ್ಮದವರಿಗಿಂತಲೂ ಮಾದರಿಯೆನಿಸಿದರೂ ಸಹ ಕಲಾಮಯವಾಗಿಯೇ ಪರಿಣಮಿಸಿದೆ.

ಒಗಟು ತುಂಬಾ ವ್ಯಾಪಕವಾಗಿ ಆವರಿಸಿದೆ. ಇದು ಆವರಿಸಿದ ವಸ್ತುಗಳೇ ಇಲ್ಲವೆಂದರೆ ತಪ್ಪಾದೀತು. ಎಲ್ಲಾ ಕ್ಷೇತ್ರಗಳಲ್ಲೂ ಒಗಟು ಬಳಕೆಯಾಗಿವೆ. ಅವರವರ ದೃಷ್ಟಿಯಂತೆ ಒಗಟುಗಳು ಸೃಷ್ಟಿಯಾಗಿವೆ. ಈ

ಕಾರಣಕ್ಕಾಗಿ ವೇದದ ಸೂಕ್ತಿಯು ಇದಕ್ಕೆ ಒಪ್ಪುತ್ತದೆ. "ಯಥಾದೃಷ್ಟಿ ತಥಾಸೃಷ್ಟಿ" ಎಂಬುದು ಸರ್ವಕಾಲಕ್ಕೂ ಇವು ನಿತ್ಯ ಸತ್ಯಗಳಾಗಿ ಬಳಸಲ್ಪಟ್ಟಿವೆ ಎಂದು ತಿಳಿದುಬರುತ್ತವೆ.

**ಒಗಟುಗಳ ಪ್ರಕಾರಗಳು**

೧. ಪ್ರಶ್ನೆ ರೂಪದ ಒಗಟುಗಳು

೨. ಒಂದೇ ವಾಕ್ಯದ ಹೇಳಿಕೆ ಒಗಟುಗಳು

೩. ಎರಡು ಹಾಗೂ ಮೂರು ವಾಕ್ಯದ ಒಗಟುಗಳು

೪. ನಾಲ್ಕು ಹಾಗೂ ಐದು ವಾಕ್ಯದ ಒಗಟುಗಳು

೫. ಪದ್ಯ ರೂಪದ ಒಗಟುಗಳು

೬. ಸಂಖ್ಯಾ ರೂಪದ ಒಗಟು ಹಾಗೂ ಭಾಷಿಕ ಒಗಟುಗಳು

ಒಗಟುಗಳಲ್ಲಿ ಸರ್ವವಿಷಯವು ಪ್ರಸ್ತಾಪವಾಗಿರುತ್ತವೆ. ಇವುಗಳು ವಿನೋದಾತ್ಮಕವಾಗಿ ರಚನೆಗೊಂಡರೂ ಆಂತರಿಕವಾಗಿ ನಿಗೂಢಾರ್ಥಗಳನ್ನು ಒಳಗೊಂಡಿರುತ್ತವೆ. ಮೇಲ್ನೋಟಕ್ಕೆ ಅಶ್ಲೀಲ ಪದಗಳ ಬಳಕೆಯಾದರೂ ಸಹ ಅದರ ತಿರುಳು ಮಾತ್ರ ತುಂಬಾ ಅರ್ಥವಂತಿಕೆ ಪಡೆದುಕೊಂಡಿರುತ್ತವೆ. ಒಗಟುಗಳನ್ನು ಹಲವಾರು ಸಂದರ್ಭಗಳಲ್ಲಿ ಬಳಸಿದರೂ ಸಾಮಾನ್ಯವಾಗಿ ಮದುವೆ, ಪ್ರಣಯ, ವಿನೋದ, ಜೂಜು ಮುಂತಾದ ಪ್ರಸಂಗಗಳಲ್ಲಿ ಮೇಲೆ ಬಳಕೆಯಾಗಿರುವುದು ಗಮನಾರ್ಹ.

**೧. ಪ್ರಶ್ನೆ ರೂಪದ ಒಗಟುಗಳು :** ಈ ರೀತಿಯ ಒಗಟುಗಳು ಉತ್ತರ ಬಿಡಿಸುವವನಿಗೆ ಸಂದಿಗ್ಧವಾಗುತ್ತದೆ. ಮೇಲ್ನೋಟಕ್ಕೆ ಒಂದರ್ಥ ನೀಡುತ್ತಿದ್ದರೆ ಒಳಗಿನ ಶ್ಲೇಷೆ ಇನ್ನೊಂದಾಗಿರುತ್ತದೆ. ಪ್ರಶ್ನೆ ಎಂದಾಕ್ಷಣ, ಅದು ಏನು, ಏಕೆ, ಹೇಗೆ, ಏನದು, ಹೆಸರೇನು ಮೂಂತಾದ ಪ್ರಶ್ನೆಗಳು ಕೊನೆಗೆ ಇರುತ್ತವೆ. ಆದರೆ ಪ್ರಶ್ನಾರ್ಥಕ ಚಿಹ್ನೆ ಹಾಕುವಂತಿಲ್ಲ. ಇವುಗಳನ್ನು ಸಾಮಾನ್ಯವಾಗಿ ವಿವಾಹ, ವಿನೋದ, ಜೂಜಾಡುವ ವೇಳೆಯಲ್ಲೂ ಬಳಸಿರುವುದು ಕಂಡುಬರುತ್ತದೆ.

ಉದಾ : ಪ್ರಶ್ನೆ "ಧೋಳ್ ಗುಡೀರ್ ; ಬಾಗಲೊ ಭೇನಿ" ಕೂಣ್
(ಸುತ್ತ ಸುಣ್ಣದ ಗ್ಯಾಡಿ ಎತ್ತ ನೋಡಿದರೂ ಬಾಗಿಲು)
ಉತ್ತರ : ತತ್ತಿ

೨. "ಬೀರೇರ್‌ವಾಲೋ ಚೀಜ್ ಕೂಣಸೋವೀಯ"
(ಹೆಣ್ಣಿಗೆ ಪ್ರೀತಿಯ ವಸ್ತು ಯಾವುದು)
ಉತ್ತರ : ಸೂಜಿ)

೩. ಪ್ರಶ್ನೆ : ಝಾಡೇ ಝಾಡೇನರ; ದಾಂತ್ನಾಭಂದೇಚ
(ಗಿಡಗಿಡಕ್ಕೆ ಕುಡುಗೋಲು ಕಟ್ಟಿದೆ ಏನು)
ಉತ್ತರ : ಹುಣಸೆ ಕಾಯಿ

೪. ಪ್ರಶ್ನೆ : ಘಾಲೇನ್ ಆವಚ ಪಣ್; ಕಾಡೇನ್ ಆಯೇನಿ

(ಹಾಕಾಕ ಬರತ್ಯೆತಿ ಆದರೆ ತೆಗೆಯಾಕ ಬರೊಲ್ಲ ಯಾವುದು)

ಉತ್ತರ : ಹಚ್ಚೆ

**ಒಂದೇ ವಾಕ್ಯದ ಹೇಳಿಕೆ ಒಗಟುಗಳು :** ಒಂದೇ ವಾಕ್ಯದಲ್ಲಿ ಪ್ರಸ್ತಾಪಿಸಲ್ಪಟ್ಟ ಒಗಟುಗಳು ಹೆಚ್ಚಾಗಿ ಕಾಣಸಿಗುತ್ತವೆ. ಇವು ಸರಳ ರೂಪದಲ್ಲಿರುತ್ತವೆ. ಅಧಿಕ ವಾಕ್ಯಗಳಲ್ಲಿ ಬಳಸಿರುವ ಒಗಟುಗಳನ್ನು ಸಂಯುಕ್ತ ರೂಪದ ಒಗಟುಗಳೆನ್ನಲಾಗುತ್ತದೆ.

ಹಜಾರ ಗಾವಡೀರ ಎಕ್ಕ.ಜ ಪೋಟಾ

(ಸಾವಿರ ಆಕಳುಗಳದ್ದು ಒಂದೇ ಹೆಂಡಿರಾಶಿ)

ಇಲ್ಲಿ ಬಳಸಲ್ಪಟ್ಟ ವಾಕ್ಯದಲ್ಲಿ ಮೇಲ್ನೋಟಕ್ಕೆ ಆಕಳುಗಳ ಹೆಂಡಿ ರಾಶಿ ಎಂದು ಬಳಸಿದ್ದು ಗಮನಿಸಿ ಉತ್ತರ ಹೇಳಲು ತಡವರಿಸಬಹುದು. ಪ್ರಶ್ನೆ ಹೇಳುವವನಿಗೆ ಆ ಒಗಟಿನ ಗೂಢಾರ್ಥ ತಿಳಿದಿರಬೇಕು. ಇಲ್ಲದಿದ್ದರೆ ತನಗೆ ಗೊತ್ತಿಲ್ಲವೆಂದು ಉತ್ತರಿಸುವವ ಪ್ರತ್ಯುತ್ತರ ನೀಡಿದಾಗ ಅದಕ್ಕೆ ಸ್ಪಷ್ಟನೆ ನೀಡಬೇಕಾಗುತ್ತದೆ. ಈ ಒಗಟಿನ ಅರ್ಥವು (ಮಂಗಾಳೊ) ಅಂದರೆ ಜೇನುಹುಟ್ಟು ಎಂದಾಗಿದೆ.

**೩. ಎರಡು ಹಾಗೂ ಮೂರು ವಾಕ್ಯದ ಒಗಟುಗಳು**

ಎರಡು ಅಥವಾ ಮೂರು ಸಾಲುಗಳಲ್ಲೂ ಒಗಟುಗಳನ್ನು ಬಳಸಲಾಗಿದೆ. ಈ ರೀತಿ ಬಳಸಿರುವ ಒಗಟುಗಳು ಬಿಡಿಸಲು ಸ್ವಲ್ಪ ಕಷ್ಟವಾಗುತ್ತದೆ. ಎರಡು ಸಾಲು ಒಗಟುಗಳು ದ್ವಿಪದಿಯಾದರೆ ಮೂರು ಸಾಲಿನ ತ್ರಿಪದಿಗಳಾಗಿ ಬಳಕೆಯಾಗಿವೆ.

ಉದಾ : ೧. ಹಿಡಿದರೆ ಹಿಡಿತುಂಬ

ಬಿಟ್ಟರೆ ಮನೆ ತುಂಬ

(ಚಾಪೆ)

೨. ಆಡೋ ಧೇಡೂ ವಡಚ ಪಣೆಲಾವಿ ಕಾವ

ಧೀಸಿಂಗ್ ಥ ಫಣೆ ಬಳದ್ ಕಾವ

ಪೂಚಡೀ ಥ ಪಣೆ ಹನುಮಾನ ಕಾವ

(ಅಡ್ಡತಿಡ್ಡ ಹಾರುತ್ತದೆ ಆದರೆ ಹಕ್ಕಿಯಲ್ಲ ಎರಡು ಕೊಂಬುಗಳಿವೆ ಆದರೆ ಎತ್ತಲ್ಲ; ಬಾಲವಿದೆ ಆದರೆ ಹನುಮಂತ ಅಲ್ಲ)

(ನವಿಲು)

**೪. ನಾಲ್ಕು ಮತ್ತು ಐದು ಸಾಲಿನ ಒಗಟುಗಳು:** ವಿಶಾಲಾರ್ಥವನ್ನು ಒಳಗೊಂಡಿರುತ್ತವೆ. ನಾಲ್ಕು ಸಾಲುಗಳಿಗಿಂತಲೂ ಐದನೆಯ ಸಾಲು ಲಂಬಾಣಿಗರಲ್ಲಿ ವಿಶೇಷವಾಗಿ ಬಳಕೆಯಾಗಿದೆ ಎನಿಸುತ್ತದೆ.

೧. ಧರತಿ ಅವಡಿ ವೇಲ

ಆಗೇಸ ಅವಡಾ ಪೂಲ

ಊಫಳ ಝುಡಜಾವಜನಾ

ವಾರ ತಿಥಿ ಪೂಚೇನಿ

(ಭೂಮಿಯಗಲದ ಬಳ್ಳಿ, ಆಗಸದಗಲದ ಹೂವು, ಅದು ಬಿದ್ದು ಹೋಗುವಾಗ ವಾರ, ತಿಥಿ ಕೇಳೊಲ್ಲ)

(ಹೃದಯ)

೨. ಕವತಿರೋ ಕಸನಜಿ ಭುಕಿಯಾ ಕಜ

ಸರಬೋಟಾ ಪುಚಡ ವೋಟಾ

ಮಸತ ಲಕಮೇ ಲೇಚ ಜಕೋ ಅಂಕ

ಮರ ಜೀವತೋ ಕೋನಿ ಸಂಪುಟ ಜಕೋಪಾಂಕ

ಕಾಯಿ ಚಚೆರೋನಾಮ

ತಲೆ ಸಣ್ಣದು, ಬಾಲ ದೊಡ್ಡದು, ಕಣ್ಣೂ ದೊಡ್ಡವು, ಎಲ್ಲೆಲ್ಲೂ ತಿರುಗುತ್ತೆ ದೇಸಾನ

(ಭಾಣೆಯಾ-ಮಳೆಹುಳ)

### ೩.೫. ಲಂಬಾಣಿಗರ ಗಾದೆಗಳು

ವೇದಕ್ಕೆ ಸಮಾನವಾದ ಗಾದೆಗಳ ಪ್ರಸ್ತುತತೆ ಇಂದಿಗೂ ಇದೆ. ಇವುಗಳನ್ನು ಈಗಲೂ ಬಹುತೇಕವಾಗಿ ಎಲ್ಲಾ ಸಮುದಾಯದವರು ಬಳಸುತ್ತಾರೆ. ಗಾದೆಯನ್ನು ನಾಣ್ಣುಡಿಯೆಂತಲೂ ನಮ್ಮ ಜನಪದರು ಬಳಸುವರು. ವೇದದಲ್ಲಿ ಅನೇಕ ಸೂಕ್ತಗಳನ್ನು ಗಾದೆಗಳಂತೆ ಉಪಯೋಗಿಸಲಾಗಿದೆ. ಪರಸ್ಪರವಾಗಿ ಇಬ್ಬರು ಮಾತನಾಡುವಾಗ ಅವರ ಬುದ್ಧಿಮತ್ತೆಯ ಆಳ ಎಷ್ಟಿದೆ ಎನ್ನಲು ಇಂತಹ ಸಾಲು ಬಳಸುವರು. ಕೆಲವರಿಗೆ ಗಾದೆ ತಟ್ಟನೆ ಹೊಳೆಯದಿದ್ದರೆ, ಅದೇನೊ ಹೇಳ್ತಾರಲ್ಲಾ ಅಂಗೆ ಎಂದು ಜಾರಿಕೊಳ್ಳುತ್ತಾರೆ.

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಗಾದೆಗೆ ತನ್ನದೇ ಸ್ಥಾನವಿದೆ. ಗಾದೆ ಎಂಬ ಪದವು ಸಂಸ್ಕೃತದ "ಗಾಥಾ" ಪದದಿಂದ ಬಂದಿದೆ. ಗಾದೆಗೆ ಸಂವಾದಿಯಾದ ಶಬ್ದವನ್ನು ಲೋಕೋಕ್ತಿ ಎಂತಲೂ ಕರೆಯಲಾಗುತ್ತಿದೆ.

ಗಾದೆಗಳು ಗತಕಾಲದ ಸಂಗತಿಗಳನ್ನು ತಿಳಿಯಪಡಿಸುತ್ತವೆ. ಗಾದೆಗಳಲ್ಲಿ ಕಾಣುವುದು ಜನಜೀವನದ ಪ್ರತಿಬಿಂಬಗಳಾಗಿ ಗೋಚರಿಸುತ್ತವೆ. "ಗಾದೆಗಳು ಬಹುತೇಕವಾಗಿ ಹೇಳುವವನಿಗೆ ರುಚಿ ಎನಿಸಿದರೂ, ಕೇಳಿಸಿಕೊಂಡವನಿಗೆ ಮಾತ್ರ ಜೋರಾಗಿ ಕಾಣುತ್ತದೆ ಎಂದು ವಿದ್ವಾಂಸರಾದ ವೀರಣ್ಣ ದಂಡೆಯವರ ಅಭಿಪ್ರಾಯವಾಗಿದೆ. ಇದರ ಪ್ರಸ್ತಾಪದಲ್ಲಿ ಹೊಗಳಿಕೆಗಿಂತ ಆಯಾ ಮನುಷ್ಯ, ಪ್ರಾಣಿ, ವಸ್ತುಗಳ ದೋಷ ವನ್ನು ಎತ್ತಿ ತೋರಿಸುವ ಸಹಜ ಸಂಗತಿಗಳಾಗಿವೆ. ಇದರಿಂದ ಅಡುಮುಟ್ಟದ ಸೊಪ್ಪಿಲ್ಲ ಗಾದೆ ಹೇಳದ ಕೇಳದ ವ್ಯಕ್ತಿ ಇಲ್ಲ ಎಂದರೆ ತಪ್ಪಾಗಲಾರದು.

ಗಾದೆಗಳು ಗ್ರಾಮೀಣ ಭಾಗದ ಜನರು ಸಹಜವಾಗಿ ಪರಸ್ಪರರೊಂದಿಗೆ ಮಾತಾಡುವಾಗ, ಬುದ್ಧಿವಾದ ಹೇಳುವಾಗ ಅವರನ್ನು ಸರಿದಾರಿಗೆ ತರಬೇಕಾದ ವೇಳೆ ಇಂತಹ ಗಾದೆಗಳನ್ನು ಬಳಸುವುದು ವಾಡಿಕೆ. ಗಾದೆಗಳಲ್ಲಿ ಕಿಚ್ಚುರೊಚ್ಚು, ಚುಚ್ಚುಗಳಲ್ಲದೆ, ಮೆಚ್ಚಿಕೆಗಳ ಪ್ರಸಂಗವು ಘಟಿಸಿರುವುದು ಕಂಡುಬರುತ್ತದೆ. ಹೀಗೆ ಬಳಕೆಗೊಂಡ, ಬಳಕೆಯಾಗುತ್ತಿರುವ ಗಾದೆಗಳ ಮೂಲಕ ಚಕಣರೆಂದು ಗುರುತಿಸುವುದು ಬಹಳ ಕಷ್ಟ. ಇವು ವಂಶಪಾರಂಪರ್ಯವಾಗಿ ಒಬ್ಬರಿಂದ ಒಬ್ಬರಿಗೆ ಸಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳದೇ ಉಳಿದುಕೊಂಡು ಬಂದಿವೆ. ಅಷ್ಟೆ ಅಲ್ಲದೆ, ಕೇವಲ ಚುಟುಕಾಗಿ ಒಂದೇ ಸಾಲಲ್ಲಿ ಬಳಸುವ ಗಾದೆಗಳ ಸ್ವರೂಪವನ್ನು ಒಂದೇ ವ್ಯಾಖ್ಯೆಯಲ್ಲಿ ಹೇಳಲಿಕ್ಕಾಗದು. ಇದರ ಅರ್ಥವೂ ವಿಶಾಲತೆಯನ್ನು ರೂಢಿಸಿಕೊಂಡಿರುತ್ತದೆ. ಪ್ರಸಿದ್ಧ ಆಂಗ್ಲ ತಜ್ಞರಾದ ಲಾರ್ಡ್‌ಜಾಹನ್ ರಸೈಲ್ ರವರು ಗಾದೆಯನ್ನು ಹಲವರ ಜ್ಞಾನ, ಒಬ್ಬನ ವಿವೇಕ ಎಂದು ವ್ಯಾಖ್ಯಾನಿಸಿದ್ದಾರೆ. ಹಾಗೇನೆ ಸಾಮಾನ್ಯವಾಗಿ ಸೂತ್ರಪ್ರಾಯವಾಗಿ ಅಥವಾ ಬುದ್ಧಿಪೂರ್ವಕವಾಗಿ ಅಭಿವ್ಯಕ್ತಿಸಿದ ಜನಪದರಲ್ಲಿ ಬಳಕೆಯಲ್ಲಿರುವ ಒಂದು ಹೇಳಿಕೆಯೆ ಗಾದೆ ಎಂಬುದು ಎನ್ ಸೈಕ್ಲೋಪಿಡಿಯಾ ಆಫ್ ಪೊಯಟ್ರಿ ಆ್ಯಂಡ್ ಪೊಯಟಿಕ್ಸೆಯಲ್ಲಿ ಉಲ್ಲೇಖವಾಗಿದೆ. ದೇವುಡು ನರಸಿಂಹಶಾಸ್ತ್ರಿಯವರ ಪ್ರಕಾರ ಜ್ಞಾತ ಅಜ್ಞಾತವಾಗಿ ಅದನ್ನು ಸಾಧ್ಯವಾದಂತೆಲ್ಲಾ ಅವರಿವರೆನ್ನದೆ ತಿದ್ದಿ ಹೊಳಪಿಕ್ಕುವುದು. ಹೀಗೆ ಸಿದ್ಧವಾದ ವಾಕ್ಯವೇ ಗಾದೆ ಎಂದಿದ್ದಾರೆ. ಅಲ್ಲದೆ ಎಸ್.ಎಂ.ನಾಯಕರವರು ಗಾದೆಗಳು ಆಕಾರದಲ್ಲಿ ಚಿಕ್ಕದು ಕೇಳಿಕೆಯಲ್ಲಿ ಪ್ರಾಸಬದ್ಧವಾದುದು ಸಮಾಸೋಕ್ತಿ ಅದರ ಜೀವಾಳ. ಸನ್ನಿವೇಶದ ಅನುಭವಕ್ಕೆ ಅದೊಂದು ಅಳತೆಗೋಲಾಗಿದೆ ಎಂಬ ಅಭಿಪ್ರಾಯ ನೀಡಿದ್ದಾರೆ.[೧೦] ಅಂತೆಯೇ ಕು.ಶಿ.ಹರಿದಾಸಭಟ್ಟರವರು ಗಾದೆಗಳು ಅಥವಾ ಲೋಕೋಕ್ತಿಗಳು ಜನತಾ ಜನಾರ್ಧನ ಉಕ್ತಿಗಳಾಗಿವೆ ಎಂದಿದ್ದಾರೆ. ಡಾ.ಹಾ.ಮಾ.ನಾಯಕ ವಿಶಾಲವಾದ ಜೀವನಾನುಭವದ ಆಧಾರದಿಂದ ರೂಪುಗೊಂಡ ಸಂಕ್ಷಿಪ್ತ ಅಭಿವ್ಯಕ್ತಿಯೇ ಗಾದೆಗಳೆಂದಿದ್ದಾರೆ.[೧೧] ಹಾಗೇನೆ ಜೀ.ಶಂ.ಪ.ರವರು ಸಾಮಾನ್ಯವಾಗಿ ಹಾಸ್ಯದ ಹೊರ ಮೈಯಲ್ಲಿ ಪ್ರತಿಗಾದೆಯೂ ವಿಶಿಷ್ಟ ಅರ್ಥದಿಂದ ಕೂಡಿದ್ದು, ಜನರ ನಡೆ, ನುಡಿ, ರೀತಿ-ನೀತಿಗಳನ್ನು ತಿದ್ದಿ ನಡೆಸುವ ಮಂತ್ರಶಕ್ತಿಯನ್ನು ಪಡೆದಿದೆ ಎಂದು ವಿಸ್ತಾರವಾದ ಅರ್ಥವನ್ನು ನೀಡಿದ್ದಾರೆ. ಹೀಗೆ ಹಲವಾರು ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿದ್ದರೂ ಅದೇ ಅಂತಿಮ ಆಗಲಾರದು. ಈ ಕಾರಣಕ್ಕಾಗಿ ಜನಪದರ ಯಾವುದೇ ಕಲಾಪ್ರಕಾರ, ಅವರು ಬಳಸುವ ಸಾಹಿತ್ಯದ ಬಗೆಗಳು ಸ್ವರೂಪ ಲಕ್ಷಣಗಳ ಬಗ್ಗೆ ನಿಖರವಾದ ಉತ್ತರ ದೊರಕುವುದು ಕಷ್ಟ.

ಒಟ್ಟಿನಲ್ಲಿ ಜನಪದರು ಬಳಸುವ ಗಾದೆಗಳಿಗೆ ತನ್ನದೇ ಆದ ಮಹತ್ವ ಹಾಗೂ ಪ್ರಾಮುಖ್ಯತೆಯಿದೆ. ಇದರಿಂದ ಗಾದೆಗಳ ಪ್ರಮುಖ ಲಕ್ಷಣಗಳನ್ನು ಪ್ರಸಿದ್ಧ ವಿದ್ವಾಂಸರಾದ ಜೆ.ಎ.ಕೆಲ್ಲೋರವರು ಈ ರೀತಿ ಗುರುತಿಸಿದ್ದಾರೆ. ಗಾದೆಗಳು ಸಂಕ್ಷಿಪ್ತತೆ, ವಿವೇಕ ಪೂರ್ಣತೆ, ತೀಕ್ಷ್ಣತೆ ಹಾಗೂ ಜನಪ್ರಿಯತೆ ಅಂಶಗಳು ಒಳಗೊಂಡಿರುತ್ತವೆ ಎಂದಿದ್ದಾರೆ.

ಹೀಗೆ ಜನಪ್ರಿಯವಾಗಿ ಬಳಕೆಗೊಂಡ ಗಾದೆಗಳು ಒಂದರಂತೆ ಇನ್ನೊಂದು ಕಾಣುವುದು ಸಹಜ. ಆದರೆ ಒಂದು ಗಾದೆಯ ಹುಟ್ಟಿಗೆ ಮತ್ತೊಂದು ಗಾದೆಯೇ ಮೂಲ ಕಾರಣ. ಇಲ್ಲವೇ ಪ್ರೇರಣೆ ಆಗುವುದಿಲ್ಲ.

ಅವುಗಳ ಹುಟ್ಟಿನ ಮೂಲವು ಒಂದೇ ಆಗಿರಲೂಬಾರದು. ಏಕೆಂದರೆ ಮನುಷ್ಯನ ಮನಸ್ಸು ಸಂಕೀರ್ಣವಾದುದಾಗಿದೆ. ಇದರಿಂದ ಆತನ ಸಂಕೀರ್ಣ ಬದುಕಿನಲ್ಲಿ ಗಾದೆಗಳ ಬಳಕೆ ತೀರಾ ಪ್ರಮುಖ ಸಂಗತಿಯಾಗಿದೆ. ಸಂಸ್ಕೃತದಲ್ಲಿ ಗಾದೆಗಳಿಗೆ ಸುಭಾಷಿತಗಳ ಇಲ್ಲವೇ ಸೂಕ್ತಿ ಎನ್ನುವರು. ''ಸೂಕ್ತಿ ಎಂಬ ಶಬ್ದವು'' ಉಕ್ತಿ ಎಂಬ ಶಬ್ದದಿಂದ ಬಂದಿದೆ. ಸಾಧಾರಣ ಜನತೆಯು ಇದರ ರೂಪವನ್ನು ಗಾದೆಯಲ್ಲಿ ಬದಲಾಯಿಸಿದ್ದಾರೆ ಎಂಬ ಮೋಹನಕೃಷ್ಣಧರರವರ ಅಭಿಪ್ರಾಯವಾಗಿದೆ. ಇಷ್ಟೆಲ್ಲಾ ಆದರೂ ಲೋಕೋಭಿನ್ನರುಚಿ ಎನ್ನುವಂತೆ ಅವರವರ ಭಾವಕ್ಕೆ ತಕ್ಕಂತೆ ವಿದ್ವಾಂಸರು ಅಭಿವ್ಯಕ್ತಿಸಿರುವರು. ಇದರಿಂದ ಜನಪದ ಸಾಹಿತಿ ರಾಗೌರವರು ಈ ಕಾರಣಕ್ಕಾಗಿ ''ಗಾದೆ ನೂರು ಭಾವದ ನೂರು ವಿಷಯದ ನೂರು ಅಭಿವ್ಯಕ್ತಿಯಾಗಿದೆ ಎಂದು ಹೇಳುವರು''.[೧೨]

ಗಾದೆಗಳು ಮನುಷ್ಯನ ವೈಚಾರಿಕ ನೆಲೆಗಟ್ಟಿನಲ್ಲಿ ರೂಪುಗೊಂಡಿವೆ. ಒಂದೊಂದು ಗಾದೆಯು ತನ್ನದೇ ವೈಶಿಷ್ಟ್ಯತೆಯಿಂದ ಕೂಡಿರುತ್ತದೆ. ಅಲ್ಲದೆ ಕಥಾ ಹಂದರವನ್ನು ಹೊಂದಿರುತ್ತದೆ. ಈ ನಿಟ್ಟಿನಲ್ಲಿ ಇಂದಿಗೂ ಜನಸಾಮಾನ್ಯರೂ ಬಳಸುವ "ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡು" ಎಂಬ ಗಾದೆಯೂ ಅನೇಕಾನೇಕ ನಿದರ್ಶನಗಳಿಗೆ ಕಾರಣೀಭೂತವಾಗುತ್ತದೆ ಇಲ್ಲಿ.

ಆದ್ದರಿಂದ ಗಾದೆಗಳೂ ಹಲವಾರು ವ್ಯಕ್ತಿಗಳ ಅನುಭವಗಳಾಗಿ ಮೂಡಿವೆ. ಇವು ವ್ಯಷ್ಟಿಗಳಾದರೂ ಸಮಷ್ಟಿ ಭಾವನೆಯನ್ನು ಹೊಂದಿವೆ. ಗಾದೆಗಳು ಕೇವಲ ಒಬ್ಬರ ಸೊತ್ತಲ್ಲ. ಶ್ರೀಸಾಮಾನ್ಯರಿಂದ ಹಿಡಿದು ಉಳ್ಳವರು ಸಹ ಇವುಗಳನ್ನು ಆಯಾ ಸಂದರ್ಭಕ್ಕೆ ತಕ್ಕಂತೆ ಬಳಸುವುದು ಕಾಣಸಿಗುತ್ತದೆ. ಗಾದೆಗಳು ಹೆಚ್ಚಾಗಿ ಹಿತವಚನ ಹೇಳುವಾಗ ಹೆಚ್ಚಾಗಿ ಬಳಕೆಯಾಗುತ್ತವೆ. ಇದರಿಂದ ಗಾದೆಗಳು ವಾಸ್ತವವಾದಿಗಳಾಗಿರುವವೇ ಹೊರತು ಆದರ್ಶ ವಾದಿಗಳಲ್ಲ. ಈ ಹಿನ್ನೆಲೆಯಲ್ಲಿ ''ಗಾದೆಗಳು ಪ್ರಚಾರಕ್ಕಾಗಿ ಬಳಸಿಕೊಂಡ ಮಾಧ್ಯಮಗಳಲ್ಲ. ಇವುಗಳ ಹಿಂದೆ ಯಾವುದೇ ಸೀಮಿತ ಉದ್ದೇಶ ಇರುವುದಿಲ್ಲ. ಜೀವನಾನುಭವ ಇರುತ್ತದೆ. ಗಾದೆಗಳೂ ಬಳಕೆಯಿಂದ ತಪ್ಪಿ ಹೋಗುತ್ತವಾದರೂ ಅನೇಕ ಶತಮಾನಗಳ ದೀರ್ಘಾಯುಷ್ಯವನ್ನು ಪಡೆದಿರುತ್ತವೆ)''[೧೩] ಎಂಬ ಮಾತು ಸಮ್ಮತವಾಗಿದೆ. ಈ ಕಾರಣಕ್ಕಾಗಿ ನಿತ್ಯವೂ ಜೀವನದಲ್ಲಿ ಅಳವಡಿಸಿಕೊಂಡು ಸಾಗುವ ಸಂದರ್ಭ ಹಾಗೂ ಆಯಾ ಕಾಲಘಟ್ಟಗಳಲ್ಲಿ ಜರುಗುವ ಆಚರಣೆ-ಸಂಪ್ರದಾಯ, ವಿಧಿ ನಿಷೇಧ ಹಾಗೂ ನಂಬಿಕೆಗಳು ಗಾದೆಗಳಾಗಿ ಮಾರ್ಪಾಡುಗೊಂಡಿವೆ. ಇದರಿಂದ ಸಮಕಾಲೀನತೆ ಗಾದೆಗಳಲ್ಲಿ ಆಳವಾಗಿ ಬೇರೂರಿರುತ್ತದೆ.

ಗಾದೆಗಳು ಮಾನವನ ಚರಿತ್ರೆಯನ್ನು ನೆನಪಿಸುತ್ತವೆ. ಇದರಲ್ಲಿ ಸಹಜವಾಗಿ 'ಉಂಡು ಹೋದ ಕೊಂಡು ಹೋದ' ಎಂಬ ಗಾದೆಯೂ ಈ ಭಾಗದ ವಿಜಯನಗರ ಸಾಮ್ರಾಜ್ಯದ ಪತನಕ್ಕೆ ಕಾರಣರಾದವರನ್ನು ನೆನಪಿಸುತ್ತವೆ. ಹಾಗೇನೆ ದಿಲ್ಲಿಯಿಂದ ದೇವಗಿರಿಗೆ, ದೇವಗಿರಿಯಿಂದ ದಿಲ್ಲಿಗೆ ರಾಜಧಾನಿ ವರ್ಗಾಯಿಸಿದ ತುಘಲಕನ ಇತಿಹಾಸವನ್ನು ನೆನಪಿಸುತ್ತವೆ.

ಕೆಲವು ಗಾದೆಗಳು ಕೌಟುಂಬಿಕ ವಾತಾವರಣವನ್ನು ಹೊದಿವೆ. ಇವುಗಳನ್ನು ಆಧಾರವಾಗಿ ಸೂಚಿಸಿ ಜೀವನ ಸಾಗಿಸಿರುವ ಎಷ್ಟೋ ನಿದರ್ಶನಗಳನ್ನು ಕಾಣಬಹುದು. ಈಗಲೂ ಕೆಲವೊಮ್ಮೆ ಮಾತನಾಡುವಾಗ ಗಾದೆಗಳು ನೆನಪಾಗದಿದ್ದರೆ 'ಅದೇನೋ ಹಾಗಾಯಿತು' ಎಂದು ಜಾರಿಕೊಳ್ಳುವ ಜಾಣರು ನಮ್ಮಲ್ಲಿದ್ದಾರೆ. ಇನ್ನು ಕೆಲವರು ಆಯಾ ಪ್ರಸಂಗಕ್ಕೆ ಅನುಗುಣವಾಗಿ ಗಾದೆಗಳನ್ನು ಬಳಸುವುದು ಕಂಡುಬರುತ್ತವೆ. "ಹೆತ್ತವರಿಗೆ ಹೆಗ್ಗಣ ಮುದ್ದು" ಎಂಬಲ್ಲಿ ತಾಯಿ ಮಕ್ಕಳ ಸಂಬಂಧ ನೆನಪಿಸುತ್ತವೆ. ಅಲ್ಲದೆ ಮಗ ಉಂಡ್ರು ಕೇಡಲ್ಲ, ಮಳಿ ಬಂದ್ರು ಕೇಡಲ್ಲ, ಮಗನ ಮೇಲಿನ ಮಮತೆ ಹೆಚ್ಚಾಗಿದ್ದು ವ್ಯಕ್ತವಾದರೆ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗ' ಎಂಬ ಗಾದೆಯೂ ಜೀವನದ ಮತ್ತೊಂದು ಅನುಭವವನ್ನು ನೀಡುತ್ತದೆ. ಈ ರೀತಿಯ ಕನ್ನಡ ಗಾದೆಗಳನ್ನು ಸಹ ಲಂಬಾಣಿಗರು ಆಯಾ ಕಾಲಕ್ಕೆ ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ.

ಹಾಗೇನೆ ಊರಿದ್ದಲ್ಲಿ ಹೊಲಗೇರಿ

ಊರುಸುಟ್ರು ಹನುಮಪ್ಪ ಹೊರಗೆ

ಎಂಬುದು ನೋಡಿದಾಗ ಪ್ರತಿ ಊರಲ್ಲಿ ಹೊಲಗೇರಿ ಇರುತ್ತಿತ್ತು. ಅಲ್ಲದೆ ಆಯಾ ಊರಲ್ಲಿ ಹನುಮಪ್ಪನ ಗುಡಿಯೂ ಊರಾಚೆ ಇರುತ್ತದೆ. ಹೀಗೆ ಊರಾಚೆ ಇರುವ ಹನುಮಪ್ಪನು ಜನರನ್ನು ಕಾಪಾಡುತ್ತಾನೆಂಬ ನಂಬಿಕೆ ಈಗಲೂ ನಮ್ಮ ಜನಪದರಲ್ಲಿದೆ.

ಲಂಬಾಣಿಗರು ಅನೇಕ ಕನ್ನಡ ಗಾದೆಗಳನ್ನು ಬಳಸುತ್ತಿರುವುದು ಕಂಡುಬರುತ್ತವೆ. ಅರು ಬಳಸಿದ ಗಾದೆಗಳ ಬಗ್ಗೆ ಸಣ್ಣರಾಮ ಎಂಬ ಲೇಖಕರು ತುಂಬಾ ವಿಶೇಷವಾಗಿ ಅಧ್ಯಯನ ಕೈಗೊಂಡಿದ್ದಾರೆ. ಅವುಗಳಲ್ಲಿ ಉಪದೇಶದ ಮಾತುಗಳು, ಸಂಭಾಷಣೆಗಳು ಗಾದೆಗಳಾಗಿ ಪರಿವರ್ತಿಸಿಕೊಂಡಿದ್ದಾರೆ.

೧. ದೇವದೋಕೆ-ಬನಾದಯಾ ಮಳೇನಿ
ರಾಬೇ ಬನಾ ಜರಮಜೂರಿ ಮಳೇನಿ
(ದೇವರಿಗೆ ಪೂಜಿಸದೆಂದಯೆ ಸಿಗುವುದಿಲ್ಲ; ಕೆಲಸ ಮಾಡದೆ ಕೂಲಿ ಸಿಗುವುದಿಲ್ಲ.)

೨. ಮುರ್ಗಾನ ಪೂಚನ ಛರಿ ಅಳಾವಚಕ
(ಕೋಳಿ ಕೇಳಿ ಕತ್ತಿ ಮಸೆಯೊಲ್ಲ)

೩. ಪೇಲೋದಾಡ ಪಾಮಣೋ
ಲಾರೆದಾಡ ಪೈ
ತೀಸರೇ ದಾಡ ಕೋಕಾಯಿ
(ಮೊದಲನೆ ದಿವಸ ಅತಿಥಿ; ಮರುದಿವಸ ಮನೆಯವ; ಮೂರನೆಯ ದಿವಸ ಅರಿಯದವ)

೪. ಚಿತ್ತೋ ಕಾಮ ಚಾಲೇನಿ
ಮಾಂಗೋ ರಾಜ ಮಳೇನಿ
(ಬಯಸಿದ್ದು ಸಿಗೊಲ್ಲ; ಬೇಡಿದ ರಾಜ್ಯ ದೊರಕುವುದಿಲ್ಲ)

೫. ಪಾಮಣೋ ಪಾಮಣೋ ಚೋರಮಾರಕತೋ

ಘರೇರ ಗಾವಡೀನ ಮಾರನಟಾಂಗ ತೋಡೋತೋಕಚ್

(ಬೀಗನೇ, ಬೀಗನೇ ಕಳ್ಳರನ್ನು ಹೊಡೆಯೆಂದು ಹೇಳಿದರೆ ಮನೆಯ ಆಕಳಿಗೆ ಹೊಡೆದು ಕಾಲು ಮುರಿದನಂತೆ) ಇಂತಹ ಗಾದೆಗಳಲ್ಲಿ ಹಾಸ್ಯ ಪ್ರಸಂಗದಿಂದ ಮೂಡಿದೆ.

ಲಂಬಾಣಿಗರು ಬಳಸುವ ಕೆಲವು ಗಾದೆಗಳು ಪುನರಾವರ್ತನೆಯಾಗಿರುತ್ತವೆ. ಇಂತಹ ಗಾದೆಗಳನ್ನು ಹೆಚ್ಚಾಗಿ ಬಳಸುವುದು ಕಾಣಸಿಗುತ್ತವೆ. ಈ ರೀತಿಯ ಗಾದೆಗಳು ಹಿತವಚನಗಳ ರೀತಿಯಲ್ಲಿ ಬಳಕೆಗೊಂಡಿರುತ್ತವೆ. ಅವುಗಳಲ್ಲಿ

೧. ಊಟಕ್ಕೆ ಮೊದಲು ಒಂದು ತುತ್ತನ್ನು ನಾಯಿಗೆ ಹಾಕು.

೨. ನೆರೆದಲ್ಲಿ ಹೋಗು ಕರೆದಲ್ಲಿ ಉಣ್ಣು

೩. ಊರನಾಯಿ ಊರಿಗೆ ತಾಂಡಾದ ನಾಯಿ ತಾಂಡಾಕ್ಕೆ

(ಗಾಮೇರ ಕುತ್ರಿ ಗಾಮೇನ

ತಾಂಡೇರ ಕುತ್ರಿ ತಾಂಡೇನ)

ಇಂತಹ ಗಾದೆಗಳಿಂದ ಲಾಭ ಆಗುತ್ತದೋ ಇಲ್ಲವೋ ಎನ್ನುವುದಕ್ಕಿಂತ ಒಳ್ಳೆಯದಾಗುತ್ತದೆಂಬ ಆಶಾ ಭಾವನೆ ನಮ್ಮ ಜನರಲ್ಲಿರುತ್ತದೆ. ಈ ಕಾರಣಕ್ಕಾಗಿ ಪರಸ್ಪರವಾಗಿ ಕಿರಿಯರು ಇಲ್ಲವೆ ಕಿರಿಯರೊಂದಿಗೆ ಮಾತನಾಡುವಾಗ ಇವುಗಳ ಬಳಕೆಯಾಗುತ್ತವೆ.

ಆದರೆ ಇತ್ತೀಚೆಗೆ ಅಲ್ಲಲ್ಲಿ ಗಾದೆಗಳು ಬಳಕೆ ಮಾಡುತ್ತಿದ್ದರೂ ಕೆಲವು ಕಡೆ ಅವುಗಳು ಸವಕಲು ನಾಣ್ನುಡಿಗಳಾಗಿವೆ. ಕಾರಣ ಲಂಬಾಣಿಗರ ಜನಜೀವನದ ಸ್ಥಿತಿ ಬದಲಾದಂತೆಲ್ಲಾ ಅವರ ರೀತಿ-ನೀತಿ, ಆಚಾರ-ವಿಚಾರಗಳು, ರೂಢಿ ಸಂಪ್ರದಾಯಗಳು ನಾಗರಿಕತೆ ಬೆಳೆದಂತೆಲ್ಲಾ ಅವು ಸಂಪರ್ಕವನ್ನು ಕಳೆದುಕೊಂಡಂತೆ ಎನಿಸುತ್ತವೆ. ಕೆಲವರು ಗತಕಾಲದ ಗಾದೆಗಳನ್ನು ಬಳಸುವುದು ಬಿಟ್ಟು, ಆಧುನಿಕ ಕಾಲಘಟ್ಟದ ಸಂದರ್ಭದ ಜೀವನಕ್ಕೆ ಹಾಸು ಹೊಕ್ಕಾಗುವ ಗಾದೆಗಳನ್ನು ಬಳಸುತ್ತಿರುವುದು ಕಂಡುಬರುತ್ತವೆ. ಇದಕ್ಕೆ ಆಯಾ ಜನಾಂಗದ ಪರಿವರ್ತನೆಗೆ ಒಂದು ಮೈಲುಗಲ್ಲು ಎನಿಸಿದರೂ ಸಹ ಗತಕಾಲದ ಪ್ರಸಂಗಗಳ ಗಾದೆಗಳೇ ಉತ್ತಮವಾದವು ಗಳೆನಿಸುತ್ತವೆ. ಜನಸಾಮಾನ್ಯರಲ್ಲಿ ಬಳಕೆಯಾಗುತ್ತಿದ್ದ ಕೆಲವು ಗಾದೆಗಳನ್ನು ನೋಡಬಹುದು. ಅವುಗಳಲ್ಲಿ ಪೌರಾಣಿಕ ಗಾದೆಗಳು ಇಂತಿವೆ.

ಬೆಳ್ ತನ ರಾಮಾಯಣ ಕೇಳಿ; ಬೆಳಗಾಗಣ ರಾಮ ಸೀತೆಗೆ ಏನಾಗ್ಬೇಕು ಎಂದನಂತೆ.

ತಪಸ್ಸಿಗೆಹ್ಹಾದೂ, ಮಾಯಿ ಬೋಳಿ ಶಂಕರ್ನ ಬಿಡಲಿಲ್ಲ

ರಾಮೇಶ್ವರಕ್ಕೆ ಹೋದ್ರು ಶನೇಶ್ವರ ಕಾಟ ತಪ್ಪಲಿಲ್ಲ.

ಇಂತಹ ಹಲವು ಗಾದೆಗಳು ಇಂದಿಗೂ ಪ್ರಸ್ತುತ ಅನಿಸುತ್ತವೆ. ಇವುಗಳ ಅಂತರ್ಯದಲ್ಲಿರುವ ನೀತಿ ಮಾತ್ರ ಜೀವನದ ಮೌಲ್ಯವನ್ನು ಹೆಚ್ಚಿಸಿಕೊಳ್ಳುವಲ್ಲಿ ಸಹಕಾರಿಯಾಗುತ್ತವೆ.

ಕೆಲವು ಗಾದೆಗಳು ಅವನ ವೃತ್ತಿ ಜೀವನವನ್ನು ನೆನಪಿಸುತ್ತವೆ. ಲಂಬಾಣಿಗರು ಹೆಚ್ಚಾಗಿ ಬಳ್ಳಾರಿ ಜಿಲ್ಲೆಯಲ್ಲಿ ಕೃಷಿಯನ್ನು ಅವಲಂಬಿಸಿದ್ದಾರೆ. ಹೊಲ, ಗದ್ದೆಗಳಲ್ಲಿ ಉತ್ತುವಾಗ, ಇಲ್ಲವೆ ರಂಟೆ ಹೊಡೆಯುವಾಗ, ಕಳೆ ತೆಗೆಯುವಾಗ, ರಾಶಿ ಮಾಡುವಾಗ ತಮ್ಮ ಶ್ರಮವನ್ನು ದೂರಾಗಿಸಲೂ ಆಯಾ ಸಂದರ್ಭಕ್ಕೆ ತಕ್ಕಂತೆ ಕೃಷಿಗೆ ಸಂಬಂಧಿಸಿದ ಗಾದೆಗಳನ್ನು ಬಳಕೆ ಮಾಡಿದ್ದಾರೆ. ಅವುಗಳಲ್ಲಿ 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಲೇಸು', 'ಉತ್ತು ಬಾಳುವವನ ಬದುಕು ಎತ್ತಲೂಲೇಸು' ಉದಾಹಣೆಯಾಗಿ ಗಮನಿಸಬಹುದು.

ಎಕ್ಕೆಗಿಡ ಮರವಲ್ಲ.
ಒಕ್ಕಲಿಗನು ಓದಲ್ಲ, ಬೆಕ್ಕು ಹೆಬ್ಬುಲಿಯಲ್ಲ
ಆಯ ಹಾಕುವಾಗ ಬೇನ್ಯಾಯ ಬಂತು

ಕೆಲವು ವೇಳೇ ಆಯಾ ಕಸಬನ್ನು ಪ್ರತಿನಿಧಿಸುವ ಜೊತೆಗೆ ಅವರವರ ಕೆಲಸ ಅದೇ ಅತಿಯವರೇ ಮಾಡಬೇಕೆಂಬ ಸಂಗತಿಗಳು ಹಲವು ಗಾದೆಗಳಿಂದ ತಿಳಿದುಬರುತ್ತವೆ.

ಅಗಸ್ಯಾಲ್ಲಾ ಕಿವಿ ಚುಚ್ಚುರ ಬ್ಯಾನಿಲ್ಲ
ಊರಿಗೆ ಬಂತು ಉಗಾದಿ ಅಗಸಗ ಬಂತು ತಗಾದಿ

ಇಂತಹ ಹಲವು ಗಾದೆಗಳು ವಿಡಂಬನಾತ್ಮಕವಾಗಿ ಜಾತಿಯನ್ನು ಕೆಣಕುವಂತೆ ಇದ್ದರೂ ಅವರುಗಳ ಮಹತ್ವವೇನೆಂದು ತಿಳಿದುಬರುತ್ತದೆ.

ಸಮಗಾರ ದೇವರಿಗೆ ಮಚ್ಚಿ ಪೆಟ್ಟ
ಸತ್ತ ಬಳ್ಳೊಳ್ಳಿ ತಿನ್ನಬಣಜಿಗ
ಅಯ್ಯೋಳ್ಳ ಮಾತಲ್ಲ ಅಳಗಾಡ್ಯಾ ಗೂಟಲ್ಲ
ಜಾಡನ ಹೇಣ್ತಿ ಸೀರೆ ಕಾಣ್ಣಾರ್ದ ಸತ್ಯಂತೆ
ಬೆಲ್ಲದಂತಾವಾದ್ರೂ ಬ್ಯಾಡನ್ನ ನಂಬಬಾರ್ದು

ಈ ರೀತಿಯ ಗಾದೆಗಳಲ್ಲಿ ಹೊಗಳಿಕೆಗಿಂತ ತೆಗಳಿಕೆಯೇ ಇಷ್ಟವಾದಂತೆ ಕಾಣಸಿಗುತ್ತವೆ. ಇವುಗಳ ಬಳಕೆಯಲ್ಲಿ ವ್ಯಂಗ್ಯೋಕ್ತಿಯನ್ನು ಕಾಣಬಹುದಾಗಿದೆ. ಇದರಿಂದ ಗಾದೆಗಳು ಎಂತಹ ಸಂದರ್ಭಗಳಲ್ಲಿ ಬಳಕೆಗೊಂಡವುಗಳಾಗಿವೆ. ಈ ಗಾದೆಗಳ ಬಳಕೆಯಿಂದ ಪರಸ್ಪರರು ತಮ್ಮ ಜಾಣತನವನ್ನು ಪ್ರದರ್ಶಿಸುವುದು ವ್ಯಕ್ತಿವಾಗುತ್ತವೆ. ಇದರಿಂದ ''ಗಾದೆಗಳು ನೀತಿಗಳ ಮಾತು ನಿಜ, ಆದರೆ ಮೈದಡವಿ ಮುದಗೊಂಡು ಹೇಳದೆ ಲಿಂಗಮಾಸ್ತರನಂತೆ ಚಾಟಿ ಏಟು ಕೊಟ್ಟು ಹೇಳುತ್ತದೆ'' ಎಂಬ ವೀರಣ್ಣ ದಂಡೆಯವರ ಮಾತು ಸರಿಯೆನಿಸುತ್ತದೆ.

### ೩.೬. ಲಂಬಾಣಿಗರ ಆಹಾರ ಪದ್ಧತಿ

ಲಂಬಾಣಿಗರು ಆಹಾರಕ್ಕೆ ಪ್ರಾತಿನಿಧ್ಯ ನೀಡದೆ ಇದ್ದರೂ ಇತರೆ ಸಮುದಾಯದ ವರಿಗಿಂತಲೂ ತುಂಬಾ ಭಿನ್ನವಾದ ಆಹಾರವನ್ನು ಬಳಸುತ್ತಿರುವ ಬಗ್ಗೆ ಕಾಣಸಿಗುತ್ತದೆ. ಇವರನ್ನು ಹೆಚ್ಚಾಗಿ ಸಸ್ಯಹಾರಿಗಳಿಗಿಂತಲೂ

ಮಾಂಸಹಾರಿಗಳಾಗಿ ಗುರುತಿಸಬಹುದು. ಆದರೆ ಈಚೆಗೆ ಲಂಬಾಣಿ ಜನ ಸಮುದಾಯದ ಕೆಲವರು ಸಮಾಜದ ಮುಖ್ಯವಾಹಿನಿಗೆ ಬಂದವರು ಪಟ್ಟಣದ ಜನ ಜೀವನದ ಶೈಲಿಗೆ ಹೊಂದಿಕೊಂಡಿರುವುದು ಕಂಡುಬರುತ್ತದೆ.

ಇಡೀ ಜಿಲ್ಲೆಯ ಬಹುತೇಕ ಗ್ರಾಮದಲ್ಲಿ ವಾಸಿಸುವ ಲಂಬಾಣಿಗರ ಪ್ರಮುಖ ಆಹಾರವೆಂದರೆ ರೊಟ್ಟಿ, ಮುದ್ದೆ, ಅನ್ನ ಸಾರು ಅದರಲ್ಲೂ ಮಾಂಸಾಹಾರ ಎಂದರೆ ಅವರಿಗೆ ಪಂಚಪ್ರಾಣ. ಹೆಚ್ಚಾಗಿ ಜಲಚರಗಳಾದ ಮೀನಿಗಿಂತ ಏಡಿಯನ್ನೇ ಹೆಚ್ಚಾಗಿ ಬಳಸಿರುವುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದಿದೆ.

ಲಂಬಾಣಿಗರು ಶ್ರಮಜೀವಿಗಳಾಗಿದ್ದರಿಂದ ಗಟ್ಟಿಯಾದ ಆಹಾರವನ್ನೇ ಬಳಸುತ್ತಾರೆ. ನಗರೀಕರಣದ ಕುರುಕಲು ಆಹಾರ, ಪಾನಿಪೂರಿ, ಗೋಬಿ ಮಂಚೂರಿಗಳು ಹಿಡಿಸೊಲ್ಲ. ರೊಟ್ಟಿ ಕೈ ಚಟ್ನಿ ಎಂದರೆ ಪರಮಮೃಷ್ಟಾನ್ನ ಭೋಜನಕ್ಕೂ ಮಿಗಿಲಾದುದು. ಬಹುತೇಕ ಕೃಷಿಕ ಜೀವನವನ್ನೇ ರೂಢಿಸಿಕೊಂಡು ಕೆಲವರು ಬೆಳಗುವ ಮುನ್ನವೇ ಎದ್ದು ಅಡುಗೆಗೆ ಅಣಿಗೊಳಿಸುವರು. ಮನೆಯ ಹೆಂಗಸರು ತಮ್ಮ ಗಂಡಸರು ಕೆಲಸಕ್ಕೆ ಹೋಗುವ ಮುನ್ನವೇ ರೊಟ್ಟಿಯನ್ನು ಸುಟ್ಟು ಕೈಯಿಂದಲೇ ಮಾಡಿದ ಚಟ್ನಿ ಇಲ್ಲದಿದ್ದರೆ ಒಂದೆರಡು ಮೆಣಸಿನ ಕಾಯಿ, ಉಳ್ಳಾಗಡ್ಡೆಯನ್ನು ಇಟ್ಟು ಬಟ್ಟೆಯಲ್ಲಿ ಕಟ್ಟಿಕೊಟ್ಟು ಕಳುಹಿಸುತ್ತಾರೆ. ಇದರೊಂದಿಗೆ ಗೃಹಿಣಿಯು ಸಹ ತಾನು ಬಟ್ಟೆಯಲ್ಲಿ ರೊಟ್ಟಿಯನ್ನು ಕಟ್ಟಿಕೊಂಡು ತಾವಿರುವ ಗ್ರಾಮದ ಅನತಿ ದೂರದಲ್ಲೇ ಇರುವ ಕಾಡಿಗೆ ತೆರಳಿ ಕಟ್ಟಿಗೆ ಕಡಿದುಕೊಂಡು ಬರುತ್ತಾರೆ. ಇಲ್ಲವೇ ತಮ್ಮ ಗಂಡನ ಜೊತೆಗೆ ಕೃಷಿ ಕೆಲಸಕ್ಕಾಗಿ ಅದರಲ್ಲೂ ಕಬ್ಬಿನ ಕಟಾವಿಗಾಗಿ ತೆರಳುವುದು ಕಂಡುಬಂದಿದೆ. ಜಿಲ್ಲೆಯ ಬಹುತೇಕರು ವಲಸೆ ಹೋದವರು ತಮಗಾಗಿ ವಾಸಿಸಲು ಬಾಡಿಗೆ ಮನೆಯನ್ನು ಪಡೆಯುವವರಲ್ಲಿ ಊರ ಹೊರಗೆ ಇರುವ ನಿರ್ಜನ ಪ್ರದೇಶದಲ್ಲಿ ತಾಂಡಾಗಳನ್ನು ನಿರ್ಮಿಸಿಕೊಂಡು ಬದುಕನ್ನು ಸಾಗಿಸುತ್ತಾರೆ. ಅಂತಹ ಮನೆಯಲ್ಲಿ ಸಹ ಹೆಂಗಸರ ಕೆಲಸಗಳು ಮಾತ್ರ ಈ ಹಿಂದೆ ಗ್ರಾಮದಲ್ಲಿ ಬಳಕೆಗೊಂಡಿರುವಂತೆ ಇಲ್ಲಿಯೂ ಬಳಸಲಾಗುತ್ತದೆ. ಇವರುಗಳು ಕಡಿಮೆ ದರದಲ್ಲಿ ಲಭ್ಯವಾಗುವ ಜೋಳದ ಧಾನ್ಯವೇ ಲಂಬಾಣಿಗರಿಗೆ ಆಹಾರ ಧಾನ್ಯವಾಗಿದೆ. ಆದರೆ ತುಂಬಾ ಹೆಚ್ಚಿನ ಧರಕ್ಕೆ ಸಿಗುವ ಅಕ್ಕಿಯ ಬಳಕೆ ಬಹಳ ಕಡಿಮೆ. ಕೆಲವು ಹಳ್ಳಿಗಳಂತಲೂ ಈಗಲೂ ಹೈನುಗಾರಿಕೆಯನ್ನು ಅನುಸರಿಸುವವರೂ ತಮ್ಮ ಕುಟುಂಬದವರಿಗಾಗಿ ಹಾಲು, ಮೊಸರು, ತುಪ್ಪವನ್ನು ಬಳಸಲು ಇಟ್ಟುಕೊಂಡು ಉಳಿದದ್ದನ್ನು ಮಾರಾಟ ಮಾಡುವುದು ಕಾಣಸಿಗುತ್ತದೆ.

### ೩.೭. ಲಾವಣಿಗಳು

ಜನಪದ ಸಾಹಿತ್ಯದಲ್ಲಿ ಲಾವಣಿ ಪ್ರಮುಖ ಪ್ರಕಾರಗಳಲ್ಲಿ ಒಂದಾಗಿದೆ. ಒಂದು ಜನಾಂದ ಸಂಸ್ಕೃತಿಯ ಅಂತರ್ಯದಿಂದ ಮೂಡಿಬರುವ ವೈಶಿಷ್ಟ್ಯಪೂರ್ಣ ಕಲಾ ಪ್ರಕಾರ ಇದಾಗಿದೆ. ಜನಪದ ಗೀತೆಗಳಂತೆ ಲಾವಣಿಗಳು ಸಹ ಅನಕ್ಷರಸ್ಥ ಸಮಾಜದಲ್ಲಿ ಹುಟ್ಟಿ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿರುತ್ತವೆ. ಸಂಪ್ರದಾಯಗಳನ್ನು ಪಾಲಿಸುವ ಜನರೇ ಅವುಗಳ ವಾಹಕರು. ಕಾಲ ಕಾಲಕ್ಕೆ ಅವರು ಅವುಗಳಿಗೆ ಸುಂದರ ಆಕಾರಗಳನ್ನು ಕೊಡುವ ಬದಲಾವಣೆಗೊಳಪಡಿಸುವ, ಘಟನೆ, ಶೈಲಿಗಳನ್ನು ಮಾರ್ಪಾಡಿಸುವ ಕ್ರಿಯೆಗಳಲ್ಲಿ

ತೊಡಗಿರುತ್ತಾರೆ. ಜನಪದ ಸಾಹಿತ್ಯದಲ್ಲಿ ಏನೇ ಬದಲಾವಣೆಗಳಾದರೂ, ಸಮುದಾಯದ ಒಪ್ಪಿಗೆ ಪಡೆದ ಮೇಲೆಯೇ ಚಲಾವಣೆಯಾಗುತ್ತವೆ. ಒಂದು ಜನಾಂಗದಲ್ಲಿ ಪ್ರಚಲಿತವಿರುವ ಲಾವಣಿಗಳು ಆ ಜನಾಂಗದಲ್ಲಿನ ಪ್ರೇಮ, ತ್ಯಾಗ, ಬಲಿದಾನ, ಛಲ, ದ್ವೇಷ, ನೋವು ನಲಿವುಗಳನ್ನು ಮೈಗೂಡಿಸಿಕೊಂಡಿರುತ್ತವೆ. ಆದ್ದರಿಂದ ಜನಾಂಗದ ಸಾಂಸ್ಕೃತಿಕ ಅಧ್ಯಯನದಲ್ಲಿ ಲಾವಣಿಗಳ ಪರಿಶೀಲನೆ ಮಹತ್ವ ಪೂರ್ಣವೆನಿಸುತ್ತದೆ.

ಬಳ್ಳಾರಿ ಜಿಲ್ಲೆಯ ಲಂಬಾಣಿ ತಾಂಡಗಳಲ್ಲಿ ಈಗಲೂ ಲಂಬಾಣಿ ಸ್ತ್ರೀ-ಪುರುಷರೂ ಲಾವಣಿಗಳನ್ನು ಹಾಡುತ್ತಾರೆ. ತಮ್ಮ ಭಾಷೆಯಲ್ಲಿ ಇವುಗಳನ್ನು 'ಗೀದ್ ' ಎಂದು ಕರೆದುಕೊಳ್ಳುತ್ತಾರೆ. ಗೀದ್ ಪದವು ಹಿಂದಿಯ 'ಗೀತಾ'ದಿಂದ ಬಂದಿದೆ. ಹಾಡು ಮತ್ತು ಲಾವಣಿಗಳ ನಡುವಿನ ವ್ಯತ್ಯಾಸ ಅರಿಯದ ಅವರು ಗೀತ ರೂಪದ ಎಲ್ಲಾ ಪ್ರಕಾರಗಳಿಗೂ ಗೀದ್ ಎಂದೇ ಕರೆಯುತ್ತಾರೆ. ಇವರ ಗೀದ್ ಗಳಲ್ಲಿ ಹಾಡು ಮತ್ತು ಲಾವಣಿಯ ಲಕ್ಷಣಗಳು ಭಿನ್ನವಾಗಿ, ಸ್ಪಷ್ಟವಾಗಿ ಗೋಚರಿಸುವುದರಿಂದ ಅವುಗಳನ್ನು ಪ್ರತ್ಯೇಕ ಪ್ರಕಾರದ ಅಡಿಯಲ್ಲಿಯೇ ಅಧ್ಯಯನ ಮಾಡಲಾಗಿದೆ.

ಲಂಬಾಣಿ ಸ್ತ್ರೀ-ಪುರುಷರು ಲಾವಣಿಗಳನ್ನು ಬೇರೆ ಬೇರೆ ಧಾಟಿಯಲ್ಲಿ ಹಾಡುತ್ತಾರೆ. ಪುರುಷರು ತಮ್ಮ ಸಂಪ್ರದಾಯ ವಾದ್ಯಗಳಾದ ಕಂಚಿನ ಗಂಗಾಳ, ಆಧುನಿಕ ವಾದ್ಯ ಡಗ್ಗ, ನಗಾರಿ ಮತ್ತು ತಾಳಗಳನ್ನು ಬಳಸಿ ಲಾವಣಿಗಳನ್ನು ಹಾಡುತ್ತಾರೆ. ಪುರುಷರು ಹಾಡುವ ಲಾವಣಿಗಳಿಗೂ, ಕನ್ನಡದ ಲಾವಣಿಗಳಿಗೂ ನಿರೂಪಣೆಯಲ್ಲಿ ವ್ಯತ್ಯಾಸವಿದೆ. ಲಂಬಾಣಿ ಪುರುಷರು ತಮ್ಮ ದೇವರಾದ ಸೇವಾ ಭಾಯರ ಗುಡಿಯಲ್ಲಿ ಪೂಜಾ ದಿನದಂದು ಕಂಚಿನ ಗಂಗಾಳವನ್ನು ಹಿಡಿದು ವೃತ್ತಾಕಾರವಾಗಿ ಕುಳಿತುಕೊಂಡು ತಮಗೆ ಪ್ರಿಯವಾದ ಲಾವಣಿಯನ್ನು ಹಾಡುತ್ತಾರೆ. ಇದರ ಗುಂಪಿನಲ್ಲಿ ಪ್ರಧಾನ ವಕ್ತ ಒಬ್ಬನಿದ್ದು, ಉಳಿದವರು ಅವನನ್ನು ಅನುಕರಿಸುತ್ತಾರೆ. ಹಾಡುತ್ತಿರುವ ಲಾವಣಿಯು ಒಂದು ಘಟ್ಟ ತಲುಪುತ್ತಿದ್ದಂತೆ ನಿರೂಪಕನು ಥಟ್ಟನೆ ಹಾಡುವುದನ್ನು ನಿಲ್ಲಿಸಿ, ಅದುವರೆಗೂ ಹಾಡಿದ ಕಥಾಭಾಗವನ್ನು ಗದ್ಯದಲ್ಲಿ ಹೇಳುತ್ತಾನೆ. ಉಳಿದವರು ಮಧ್ಯಮಧ್ಯದಲ್ಲಿ ಪ್ರವೇಶಿಸಿ ಅವನೊಂದಿಗೆ ಸಂಭಾಷಿಸುತ್ತಾ ಕತೆಯ ಪಾತ್ರ. ಸನ್ನಿವೇಶ ಇವುಗಳನ್ನು ಗಮನದಲ್ಲಿಟ್ಟುಕೊಂಡು ಹಾಸ್ಯ ಚಟಾಕಿಯನ್ನು ಹಾರಿಸುತ್ತಾರೆ. ಕತೆಯಲ್ಲಿ ಅರ್ಥವಾಗದ ಜಟಿಲ ಭಾಗಗಳನ್ನು ಸರಳವಾಗಿ ಬಿಡಿಸಿ ಶೋತ್ರಗಳಿಗೆ ಸುಲಭವಾಗಿ ಅರ್ಥವಾಗುವಂತೆ ತಿಳಿ ಹೇಳುತ್ತಾರೆ. ಗದ್ಯದಲ್ಲಿ ಲಾವಣಿಯ ವಿವರಣೆ ಮುಗಿದ ಮೇಲೆ ಮತ್ತೆ ಮುಂದಿನ ಭಾಗವನ್ನು ಹಾಡಲು ಪ್ರಾರಂಭಿಸುತ್ತಾರೆ.

ಲಂಬಾಣಿ ಪುರುಷರು ಮತ್ತು ಮಹಿಳೆಯರು ಹಾಡುವ ಲಾವಣಿಗಳನ್ನು ಅವುಗಳ ವಸ್ತು ವೈವಿಧ್ಯತೆಗಳ ಆಧಾರದ ಮೇಲೆ ಮೂರು ಭಾಗಗಳನ್ನಾಗಿ ವಿಂಗಡಿಸಬಹುದು.

೧. ಪುರುಷರ ಲಾವಣಿಗಳು

೨. ವೀರ ಪುರುಷರ ಲಾವಣಿಗಳು

೩. ಹಾಸ್ಯ ಲಾವಣಿಗಳು

**೧. ಪುರುಷರ ಲಾವಣಿಗಳು :** ಲಂಬಾಣಿ ಪುರುಷರು ತಮ್ಮ ಜನಾಂಗದಲ್ಲಿ ಜನಿಸಿ ಪವಾಡವನ್ನು ಮೆರೆದ ದೈವೀಪುರುಷರನ್ನು ಕುರಿತು ಹಾಡುವ ಲಾವಣಿಗಳು ಪ್ರಸಿದ್ಧವಾಗಿದೆ. ಸೇವಾ ಭಾಯ, ಮಿಠುಭುಕ್ಯಾ, ಮೊದಲಾದವರು ಮೆರೆದ ಪವಾಡಗಳನ್ನು ಲಾವಣಿ ರೂಪದಲ್ಲಿ ಹಾಡುವಾಗ ಅವರಿಗೆ ಎಲ್ಲಿಲ್ಲದ ಉತ್ಸಾಹ, ಹುನಾಸತಿ, ಗುಜಾಸತಿ, ಸೀತಾಸತ್ತಿ, ಮೊದಲಾದ ಸತಿಯರ ಪವಾಡ ಸದೃಶ ಬದುಕನ್ನು ಲಾವಣಿಯ ರೂಪದಲ್ಲಿ ಹಾಡುತ್ತಾರೆ. ದೈವೀಪುರುಷರ, ಲಾವಣಿಗಳಲ್ಲಿ ಅವರ ಆಚಾರ-ವಿಚಾರ, ಆ ಕಾಲದ ಅವರ ಸ್ಥಿತಿ-ಗತಿಗಳನ್ನು ಗುರುತಿಸಬಹುದಾಗಿದೆ. ಏಳು ಸತ್ತಿಯರ ಲಾವಣಿಗಳಲ್ಲಿ ಲಂಬಾಣಿ ಜನಾಂಗದ ಮದುವೆ ಪದ್ಧತಿ, ಸತಿತ್ವದ ಪರಿಕಲ್ಪನೆ ಮೊದಲಾದ ವಿಚಾರಗಳನ್ನು ಗುರುತಿಸಬಹುದಾಗಿದೆ.

ಲಂಬಾಣಿ ಮಹಿಳೆಯರು ದೈವೀಪುರುಷರ ನೂರಾರು ಲಾವಣಿಗಳನ್ನು ಹಾಡುತ್ತಾರೆ. ವೃತ್ತಾಕಾರವಾಗಿ ನಿಂತು ನರ್ತಿಸುತ್ತ ಮಧುರವಾಗಿ, ಪರಿಣಾಮಕಾರಿಯಾಗಿ ಲಾವಣಿಗಳನ್ನು ಹಾಡುತ್ತಾರೆ. ಪುರುಷರಂತೆ ಇವರುಗಳು ಸಹಿತ ದೈವೀಪುರುಷ ಸತ್ತಸತಿ ಇನ್ನು ಮುಂತಾದವರ ಲಾವಣಿ ಹಾಡುಗಳನ್ನು ಹಾಡಿ ತಮ್ಮ ನೃತ್ಯವನ್ನು ಪ್ರಾರಂಭಿಸುತ್ತಾರೆ. ಅವರ ಲಾವಣಿಯ ಹಾಡುವಿಕೆಯು ಏನಿದ್ದರೂ ನರ್ತನದ ಸಂದರ್ಭದಲ್ಲಿ ಮಾತ್ರ.

**೨. ವೀರ ಪುರುಷರ ಲಾವಣಿಗಳು :** ಲಾವಣಿ ಸ್ತ್ರೀ-ಪುರುಷರು ನೂರಾರು ವೀರಪುರುಷರ ಲಾವಣಿಗಳನ್ನು ಹಾಡುತ್ತಾರೆ. ಲಂಬಾಣಿ ಭಾಷೆಯಲ್ಲಿ ವೀರಪುರುಷರನ್ನು 'ಸಿರಾಳು' ಎಂದು ಕರೆಯುತ್ತಾರೆ. ಪುರುಷರಲ್ಲಿ ದೇಸಲ್ಜಿ, ಸೂಪಲ್ಜಿ, ಹೀರಾಮಣಿ, ಕೊಡಿದಜರಾಜ, ಆಲಾನಿಲ, ಧರ್ಮಿರಾಜ ಮೊದಲಾದ ವೀರ ಪುರುಷರ ಲಾವಣಿಗಳು ಜನಪ್ರಿಯವಾಗಿವೆ. ವೀರರಾಜರು ಮೆರೆದ ಪ್ರತಾಪ, ನ್ಯಾಯ ಪರಿಪಾಲಿಸಿ, ಧರ್ಮನಿಷ್ಠ ಪ್ರೇಮಸಲ್ಲಾಪ ಮೊದಲಾದವುಗಳು ಈ ಲಾವಣಿಗಳ ವಸ್ತುವಾಗಿರುತ್ತದೆ.

ಸ್ತ್ರೀಯರು ಹಾಡುವ ಆಲಾ-ನಿಲ ಲಾವಣಿಯು ಚಿಕ್ಕಮ್ಮಳ ದ್ವೇಷ, ಅಸೂಯಾ ಪ್ರವೃತ್ತಿಯನ್ನು ಮನೋಜ್ಞವಾಗಿ ಚಿತ್ರಿಸುತ್ತದೆ. ಈ ಲಾವಣಿಯು ಕನ್ನಡದ ಕುಮಾರರಾಮನ ಕಾವ್ಯವನ್ನು ಹೋಲುತ್ತದೆ. ಈ ಲಾವಣಿಯನ್ನು ಸಂಗ್ರಹಿಸಿ ತುಲನಾತ್ಮಕ ಅಧ್ಯಯನ ಮಾಡಿದರೆ ಕುಮಾರರಾಮನ ಕಾವ್ಯಕ್ಕೆ ಸಂಬಂಧಿಸಿದ ಅನೇಕ ಹೊಸ ವಿಷಯಗಳು ಬೆಳಕಿಗೆ ಬರಬಹುದು. ಈ ಲಾವಣಿಯನ್ನು ಆಧುನಿಕ ದಿನಗಳಲ್ಲಿ ಲಂಬಾಣಿ ಮಹಿಳೆಯರು ತಮ್ಮ ತಾಂಡದ ಹಬ್ಬ ಹರಿದಿನಗಳಲ್ಲಿ ತಮ್ಮ ದಾಟಿಯಲ್ಲಿ ಮನ ಮಿಡಿಯುವಂತೆ ಹಾಡುತ್ತಾರೆ.

**೩. ಹಾಸ್ಯ ಲಾವಣಿಗಳು:** ಲಂಬಾಣಿ ಮಹಿಳೆಯರಲ್ಲಿ ಹಾಸ್ಯ ಲಾವಣಿಗಳು ಕಡಿಮೆ. ಆದರೆ ಪುರುಷರಲ್ಲಿ ಹಲವಾರು ಹಾಸ್ಯ ಲಾವಣಿಗಳು ಪ್ರಚಲಿತವಿದೆ. ಅವುಗಳಲ್ಲಿ ಡಬ್ಬಲ್ ಮಿಂಡಕಿ, ಬಾಂಗಾಳೆ ಕುಕಡೋ, ನಸಲ್ಡೊ ಸಾಳ್ಯಾ ಮೊದಲಾವುಗಳು ಪ್ರಸಿದ್ಧವಾಗಿವೆ. ಡಬ್ಬಲ್ ಮಿಂಡಕಿ ಲಾವಣಿಯಲ್ಲಿ ಕಪ್ಪೆಯೊಂದು ಸಿಹಿ ಅಡುಗೆಯನ್ನು ಮಾಡಿ ತನ್ನ ಅತ್ತೆ ಮಾವಂದಿರಿಗೆ ಉಣಬಡಿಸಿದ ಅತ್ಯಂತ ಹಾಸ್ಯ ಭರಿತ ಸಂದರ್ಭವನ್ನು

ರಸವತ್ತಾಗಿ ವರ್ಣಿಸುತ್ತಾರೆ. ಬಂಗಾಳೋಕುಕಡೋ ಲಾವಣಿಯಲ್ಲಿ ಅಹಂಕಾರ ಮೆರದ ಕೋಳಿಯು ನರಿಯ ಪಾಲಗುವ ದೃಶ್ಯವನ್ನು ಮನ ಮುಟ್ಟುವಂತೆ ವರ್ಣಿಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಬಳ್ಳಾರಿ ಜಿಲ್ಲೆಯ ಕೆಲವು ತಾಂಡಗಳಲ್ಲಿ ಹಾಸ್ಯಲಾವಣಿಗಳು ತುಂಬಾ ಜನಪ್ರಿಯವಾಗಿವೆ. ಸಂಪ್ರದಾಯನಿಷ್ಠ ಲಾವಣಿಗಳಿಗಿಂತ ಭಿನ್ನವಾಗಿ ನಿರೂಪಿತವಾಗುವ ಈ ಲಾವಣಿಗಳಲ್ಲಿ ಸಾಮಾಜಿಕ ವಸ್ತುಗಳು ಪ್ರಧಾನವಾಗಿರುತ್ತವೆ. ಮಹಿಳೆಯರು ಮತ್ತು ಸ್ತ್ರೀಯರು ಪ್ರತ್ಯೇಕವಾಗಿ ಹಾಡುವ ಈ ಬಗೆಯ ಲಾವಣಿಗಳು ಬಳ್ಳಾರಿ ಜಿಲ್ಲೆಯ ಎಲ್ಲಾ ತಾಂಡಗಳ ಲಂಬಾಣಿ ಸಮುದಾಯವನ್ನು ಹೆಚ್ಚು ಹೆಚ್ಚು ಆಕರ್ಷಿಸುತ್ತವೆ. ಲಂಬಾಣಿ ಜನಪದ ಸಾಹಿತ್ಯದಲ್ಲಿ ಲಾವಣಿಯು ಅಪೂರ್ವ ಕಲಾಪ್ರಕಾರವಾಗಿದೆ. ಪುರುಷರು ವಾದ್ಯಗಳೊಂದಿಗೆ, ಮಹಿಳೆಯರು ನರ್ತಿಸುತ್ತ ಹಾಡುವ ಲಾವಣಿಗಳು ಈ ಜನಾಂಗದ ಸಂಸ್ಕೃತಿಯ ಸಾರಭೂತಗಳಾಗಿವೆ. ಲಂಬಾಣಿ ಜನಾಂಗದಲ್ಲಿ ಅತ್ಯಂತ ಜನಪ್ರಿಯ ಪ್ರಕಾರವಾದ ಲಾವಣಿಗಳ ಸಂಗ್ರಹ ಕಾರ್ಯವು ನಡೆದಿರುವುದಿಲ್ಲ. ಬುಡಕಟ್ಟು ಜನಾಂಗವೊಂದರ ನೋವು-ನಲಿವುಗಳನ್ನು ಬಿತ್ತರಿಸುವ ಲಾವಣಿಗಳ ಸಂಗ್ರಹ ಕಾರ್ಯ ತ್ವರಿತಗತಿಯಲ್ಲಿ ನಡೆಯಬೇಕಾಗಿದೆ. ಈಗಾಗಲೇ ಲಂಬಾಣಿ ಸ್ತ್ರೀ ಮತ್ತು ಪುರುಷರಲ್ಲಿ ಲಾವಣಿಗಳನ್ನು ಹಾಡುವ ಕಲೆ ಕ್ಷೀಣಿಸುತ್ತಿದೆ. ಮಹಿಳೆಯರು ಯಾವ ಲಾವಣಿಗಳನ್ನು ಪೂರ್ಣವಾಗಿ ಹಾಡುವ ನೆನಪಿನ ಶಕ್ತಿಯನ್ನು ಉಳಿಸಿಕೊಂಡಿರುವುದಿಲ್ಲ. ಪೂರ್ಣವಾಗಿ ಹಾಡುವಂತೆ ಒತ್ತಾಯ ಮಾಡಿದರೆ ಒಂದೊಂದೇ ಸಾಲುಗಳನ್ನು ನೆನಪು ಮಾಡಿಕೊಂಡು ಹಾಡುತ್ತಾರೆ. ಪರಿಸ್ಥಿತಿ ಹೀಗೆಯೇ ಮುಂದುವರೆದರೆ ಇನ್ನು ಕೆಲವೇ ವರ್ಷಗಳ್ಲಲಿ ಲಂಬಾಣಿ ಸಮಾಜದಲ್ಲಿ ಅಮೂಲ್ಯವಾದ ಲಾವಣಿಗಳು ಕಣ್ಮರೆಯಾಗುವುದರಲ್ಲಿ ಸಂದೇಹವಿಲ್ಲ.[೧೯]

### ೩.೮. ಲಂಬಾಣಿಗರ ವೇಷ-ಭೂಷಣಗಳು

ನಮ್ಮ ಮುಖ ನಮ್ಮ ಮನಸ್ಸಿನ ಕನ್ನಡಿ ಇದ್ದಂತೆ. ಅಂತೆಯೇ ನಾವು ಧರಿಸುವ ವೇಷ-ಭೂಷಣಗಳು ತಮ್ಮ ಸಂಸ್ಕೃತಿಯ ಪ್ರತಿಬಿಂಬ. ಇಂತಹ ಸಂಸ್ಕೃತಿಯ ಪ್ರತಿಬಿಂಬಗಳಾದ ವೇಷ-ಭೂಷಣಗಳಿಗೆ ಭಾರತೀಯ ಸಂಸ್ಕೃತಿಯಲ್ಲಿ ಮಹತ್ತರವಾದ ಸ್ಥಾನವಿದೆ. ಈ ವೇಷ-ಭೂಷಣಗಳು ಗುಪ್ತಾಂಗಗಳಲ್ಲಿ ಮರೆಮಾಚಲು ಅವರು ನಡೆಸಿದ ಪ್ರಯತ್ನವನ್ನು ಸಂಸ್ಕೃತಿಕ ಆಚರಣೆಯನ್ನು ಪರಿಸರದ ಪ್ರಭಾವವನ್ನು ಹಾಗೂ ಆ ಜನರ ಮನೋಭಾಷೆಯನ್ನು ಅಭಿವ್ಯಕ್ತ ಪಡಿಸುತ್ತವೆ.

ಇತರೆ ಸಮುದಾಯದ ಮಹಿಳೆಯರಿಗಿಂತ ಭಿನ್ನವಾಗಿ ಕಾಣುವ ಲಂಬಾಣಿ ಮಹಿಳೆಯರು ತಮ್ಮ ಉಡುಪುಗಳಿಂದ ಹೆಚ್ಚು ಆಕರ್ಷಣೀಯವಾಗಿ ಕಾಣುತ್ತಾರೆ. ಈ ವೇಷಭೂಷಣಗಳು ಇವರ ವೃತ್ತಿ ಮನೋ ಧರ್ಮದ ಹಿನ್ನಲೆಯಲ್ಲಿ ರೂಪಿತವಾದವುಗಳಾಗಿವೆ. ಲಂಬಾಣಿಗಳು ಒಳ್ಳೆಯ ಮೈಕಟ್ಟಿನ ಜನರು. ಇವರು ಸಾಮಾನ್ಯವಾಗಿ ಎತ್ತರವಾದ ನೀಳವಾದ ಮೈಕಟ್ಟಿನ ಕ್ರೂರದ್ರೂಪಿಗಳು. ಕಪ್ಪು ಅಥವಾ ನಸುಗಂಪು ಮುಖ ವುಳ್ಳವರು. ಗಂಡಸರು ಮತ್ತು ಹೆಂಗಸರು ದೃಢಕಾಯರಾದ ಕಷ್ಟ ಸಹಿಷ್ಣುಗಳು ಲಂಬಾಣಿ ಸ್ತ್ರೀಯರು ಲವಲವಿಕೆಯಾಗಿ ನೋಡಲು ಸುರದ್ರೂಪಿಗಳಾಗಿದ್ದರು ಈ ಅವರ ಕಷ್ಟ ತಮವಾದ ದಿನದಿತ್ಯದ ಜೀವನದಿಂದ

ತಮ್ಮ ಸೌಂದರ್ಯವನ್ನು ಕಳೆದುಕೊಳ್ಳುತ್ತಾರೆ. ಈ ಹೇಳಿಕೆಯಿಂದ ಲಂಬಾಣಿಗಳು ನೈಸರ್ಗಿಕವಾಗಿಯೇ ಸೌಂದರ್ಯ ಉಳ್ಳವರು ಹಾಗೂ ದೈಹಿಕವಾಗಿ ಹೆಚ್ಚು ದೃಢಕಾಯ ಉಳ್ಳುವರು ಎಂಬುದನ್ನು ಸ್ಪಷ್ಟಪಡಿಸಬಹುದು. ಇಂತಹ ಸೌಂದರ್ಯವುಳ್ಳ ಲಂಬಾಣಿ ಮಹಿಳೆಯರ ವೇಷ-ಭೂಷಣಗಳ ಬಗ್ಗೆ ದಂತಕಥೆಯನ್ನು ಕಾಣಬಹುದಾಗಿದೆ.

ಲಂಬಾಣಿಗಳ ಪೂರ್ವಜರಲ್ಲೊಬ್ಬನು ಯುದ್ಧದಲ್ಲಿ ಮರಣವನ್ನಪ್ಪಿದನು. ಈ ಮರಣದ ವಾರ್ತೆಯನ್ನು ತಿಳಿದ ಅವನ ಸತಿಯು ಆತ ತಾನೇ ತನ್ನ ಪ್ರೋಕ್ಷಕುಗಳನ್ನು ಕಲಾತ್ಮಕವಾಗಿ ಕಸೂತಿ ಕೆಲಸದಿಂದ ಸಿದ್ಧಪಡಿಸಿಕೊಳ್ಳುತ್ತಿದ್ದಳು. ಅವಳು ಈ ವಾರ್ತೆಯನ್ನು ಕೇಳಿ ದಿಗ್ಭ್ರಾಂತಳಾಗಿ ಕೈಯಲ್ಲಿದ್ದ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಪತಿಯ ಸಾವಿಗೆ ಪ್ರತಿಯಾಗಿ 'ಚಿತೆ' ಏರಿ ಸಹಗಮನ ಹೊಂದಿದಳು. ಆ ಸಮಯದಲ್ಲಿ ಈ ಮಹಿಳೆಯು ಬಿಟ್ಟುಹೋದ ಅಪೂರ್ಣ ಬಟ್ಟೆಗಳನ್ನು ಮುಂದಿನ ಪೀಳಿಗೆ ಕೈಗೆತ್ತಿಕೊಂಡು ಪೂರ್ಣಬಟ್ಟೆಗಳೆಂದು ಧರಿಸಿಕೊಂಡರು ಎಂಬ ದಂತೆ ಕತೆ ಇದರಲ್ಲಿ ರೂಢಿಯಲ್ಲಿದೆ. ಲಂಬಾಣಿ ಮಹಿಳೆಯರು ಧರಿಸುವ 'ಲಂಗ ' ಮತ್ತು 'ಕುಪ್ಪಸ' ಈ ಎರಡು ಅಪೂರ್ಣವಾಗಿ ಧರಿಸುವ ಬಟ್ಟೆಗಳ ಕುರಿತು ಬಳ್ಳಾರಿ ಜಿಲ್ಲೆಯ ಹಲವು ಲಂಬಾಣಿ ಮಹಿಳೆಯರನ್ನು ವಿಚಾರಿಸಿದಾಗ ಈ ಮೇಲಿನ ದಂಥಕತೆಯನ್ನು ಹೇಳುತ್ತಾರೆ.

ಲಂಬಾಣಿ ಹೆಂಗಸರು ಬಳಸುವ ಬಟ್ಟೆಗಳಲ್ಲಿ ಕೆಂಪು ಬಣ್ಣದ ಬಟ್ಟೆಗಳು ಹೆಚ್ಚು ಪ್ರಮುಖವಾಗಿರುತ್ತವೆ. ನಿಸರ್ಗದ ಮಂಡಲಲ್ಲಿ ಹುಟ್ಟಿ ಬೆಳೆದಿರುವ ಲಂಬಾಣಿಗರಿಗೆ ಕೆಂಪು ಬಣ್ಣವೆಂದರೆ ಬಹಳ ಇಷ್ಟ. ಇಂದು ಎಷ್ಟು ಬದಲಾವಣೆಗಳು ತಮ್ಮ ಉಡುಪುಗಳಲ್ಲಿ ಕಂಡು ಬರುತ್ತವೆ. 'ಸೂಜಿ ಲಂಬಾಣಿಗರ ಒಡನಾಡಿ' ಎನ್ನುವ ಗಾದೆಗೆ ತಕ್ಕದಾಗಿ ಹೆಂಗಸರಿಗೆ ಸೂಜಿಯೇ ಬದುಕಿನ ಜೀವನಾಡಿ. ದನಕರುಗಳನ್ನು ಮೇಯಿಸುವಾಗ ಕುರಿ-ಮೇಕೆಗಳನ್ನು ಕಾಯುವಾಗ ಮನೆಯಲ್ಲಿ ಬಿಡುವಾದ ಸಂದರ್ಭಗಳಲ್ಲಿ ವ್ಯರ್ಥ್ಯ ಸಮಯ ಕಳೆಯದೆ ಕಸೂತಿ ಕೆಲಸದಲ್ಲಿ ತೊಡಗುತ್ತಾರೆ. ಶುಭ್ರವಾದ ವಿವಿಧ ಬಣ್ಣದ ಬಟ್ಟೆಗಳ ಮೇಲೆ ನಯವಾದ ಬಣ್ಣ-ಬಣ್ಣದ ದಾರಗಳಿಂದ ತಮ್ಮದೇ ಆದ ವಿನ್ಯಾಸಗಳಿಂದ ಕಸೂತಿ ಹಾಕುತ್ತಾರೆ. ಲಂಬಾಣಿಗಳಲ್ಲಿ ಕೆಂಪು ಬಣ್ಣದ ವಸ್ತ್ರಗಳನ್ನು ಬಳಸಲು ಕಾರಣಗಳನ್ನು ವಿದ್ವಾಂಸರು ತಿಳಿಸುತ್ತಾ "ಕೆಂಪು ಬಣ್ಣಕ್ಕೆ ಆಕರ್ಷಣೆ ಹೆಚ್ಚು". ಲಂಬಾಣಿ ಮಹಿಳೆಯರಲ್ಲಿ ಕೆಂಪು ಬಣ್ಣ ಶುಭ ಸೂಚಕವೆಂದು ಹೇಳುತ್ತಾರೆ. ಇಲ್ಲಿ ಕೆಂಪು ಬಣ್ಣದ ಆಕರ್ಷಣೆಗಿಂತ ಹೆಚ್ಚಾಗಿ ಹಬ್ಬ ಹರಿದಿನಗಳಲ್ಲಿ ದೇವರ ಪೂಜೆಯ ಸಂದರ್ಭದಲ್ಲಿ ಮಹಿಳೆಯರು ತಮ್ಮ ಸುಮಂಗಲಿಯ ಪ್ರವೇಶವಾಗಿ ಶುಭ ಸಂಕೇತದ ಪ್ರತೀಕವಾಗಿ ಕೆಂಪು ಬಣ್ಣದ ಬಳಕೆಯನ್ನು ಕಾಣಬಹುದು. ಆದುದರಿಂದ ಲಂಬಾಣಿಗಳು ತಮ್ಮ ವ್ಯಾಪಾರ ಸುಗಮವಾಗಿ ಸಾಗಲಿ ಎಂಬ ಉದ್ದೇಶದಿಂದ ಕೆಂಪುಬಣ್ಣದ ವೇಷಗಳನ್ನು ತೊಟ್ಟಿರಬಹುದೆಂದು ಊಹಿಸಬಹುದು.

ಹೆಂಗಸರು ತಾವು ತಯಾರಿಸುವ ಉಡುಪುಗಳಿಗೆ ಅಲ್ಲಲ್ಲಿ ಗಾಜಿನ ಬಿಲ್ಲೆಗಳನ್ನು ಜೋಡಿಸಿ ಹೋಲಿ ದಿರುತ್ತಾರೆ. ನೋಡಿದವರಿಗೆ ವಿಚಿತ್ರವೆನಿಸಿದರೂ ಅದಕ್ಕೆ ಹಿನ್ನೆಲೆಯಾಗಿ ಅವರನ್ನು ವಿಚಾರಿಸಿದಾಗ ಪುರಾತನ ಕಾಲದಲ್ಲಿ ತಮ್ಮ ಪೂರ್ವಜರು ಅಲೆಮಾರಿಗಳಾಗಿದ್ದು ವ್ಯಾಪಾರಕ್ಕಾಗಿ ಬಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಕಾಡು-ಮೇಡುಗಳ ಮಾರ್ಗವಾಗಿ ತಮ್ಮ ದನಕರುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು

ಸಂಚರಿಸುವ ಅಗತ್ಯವಿತ್ತು. ಆದಿನಗಳಲ್ಲಿ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಈ ಬಗೆಯ ಉಡುಪುಗಳು ಅವಶ್ಯವಾಗಿದ್ದವು. ಸಿಂಹ, ಹುಲಿ, ಚಿರತೆ ಮುಂತಾದ ಕ್ರೂರ ಪ್ರಾಣಿಗಳು ತಮ್ಮ ಮೈಮೇಲೆ ಎಗರಿದರೆ ಅವು ತಮ್ಮ ಪ್ರತಿಬಿಂಬಕ್ಕೆ ತಾವೇ ಹೆದರಿ ಭಯಗ್ರಸ್ತವಾಗಿ ಓಡಿ ಹೋಗಬೇಕೆನ್ನುವ ಆಶಯದಿಂದ ಗಾಜಿನ ಬಿಲ್ಲೆಗಳನ್ನು ಬಳಸಿದ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದರಂತೆ. ಅದು ಇಂದಿಗೂ ರೂಢಿಗತವಾಗಿ ಬೆಳೆದು ಬಂದಿದೆ ಎಂದು ಹೇಳುತ್ತಾರೆ. ಈ ಅಂಶ ಅವರ ವೈಜ್ಞಾನಿಕ ಚಿಂತನೆಗೆ, ಸಮಯ ಪ್ರಜ್ಞೆಗೆ ನಿದರ್ಶನ.[೧೫]

ಈಗಿನ ಬೆಲೆಗೆ ತಕ್ಕಂತೆ ೨೦೦೦ ರೂಪಾಯಿಯಿಂದ ೨೫೦೦ ರೂಪಾಯಿ ಬೆಲೆ ಬಾಳುವ ಕುಪ್ಪಸ, ಲಂಗ ಮತ್ತು ಮೇಲುಡುಗೆ ಸಿದ್ಧಪಡಿಸಲು ಕನಿಷ್ಟ ಬೇಕಾಗುವ ಕಾಲಾವಧಿ ೫ ರಿಂದ ೬ ತಿಂಗಳುಗಳು. ಮೊದಲು ಬಿಡಿ ಬಿಡಿ ಭಾಗಗಳನ್ನು ಕಸೂತಿಯಿಂದ ತಯಾರಿಸಿ ಕೊನೆಯಲ್ಲಿ ಕಸೂತಿ ಹಾಕಿದ ಬಟ್ಟೆಗಳನ್ನು ಸಿದ್ಧಪಡಿಸುತ್ತಾರೆ. ಇದು ತುಂಬಾ ವೆಚ್ಚದಾಯಕ ಮತ್ತು ಕಷ್ಟದಾಯಕವಾಗಿದೆ.

ಸಾಮಾನ್ಯವಾಗಿ ಲಹಂಗ(ಪೇಟಿಯಾ)ವನ್ನ ತಯಾರಿಸಲು ಒಂದು ಗೇಣು ಅಗಲಳತೆಯ ೧೨ ಮಾಳ ಉದ್ದ ಕರಿಯ ಬಣ್ಣದ ಬಟ್ಟೆ(ಕಾಳೊ ಛಾಂಟಿಯಾರ್ ಘೋರೊ) ಒಂದು ಗೇಣು ಅಗಲಳೆತೆಯು ೧೨ ಮೊಳ ಉದ್ದ ಕೆಂಪು ಬಟ್ಟೆ(ರಾತಡೊ ಛಾಂಟಿಯರ್ ಘೋರೊ), ಒಂದು ಮಾಳ ಅಗಲಳತೆಯ ೧೨ ಮೊಳ ಉದ್ದದ ಯಾವುದಾದರೂ ಬಣ್ಣದ ಬಟ್ಟೆ ಹಾಗೂ ೨ ಅಂಗುಲಳತೆಯು ೧೨ ಮೊಳ ಉದ್ದ ಪಟ್ಟಿ(ಲಾವಣ) ಹಾಗೂ ಮೇಲೊಂದು ದಪ್ಪನೆಯ ನಡುಪಟ್ಟಿ, ಅಲ್ಲದೇ ನಡುನಡುವೆ ತುಂತು-ತುರುಟಿಗಳನ್ನು ಚಿಕ್ಕ ಚಿಕ್ಕ ಕನ್ನಡಿಗಳನ್ನು ಹಾಕಿ ಕಸೂತಿ ಮಾಡುತ್ತಾರೆ.

**ಕುಪ್ಪಸ :** ಲಂಬಾಣಿ ಮಹಿಳೆಯರು ಕುಪ್ಪಸವನ್ನು 'ಕಾಂಚಳಿ' ಎಂಬುದಾಗಿ ಕರೆಯುತ್ತಾರೆ. ಇದು ಒಂದು ಮೊಳದಷ್ಟು ಉದ್ದವಿದ್ದು ಎದೆ, ಎರಡು ತೋಳು ಮತ್ತು ಹೊಟ್ಟೆಯ ಭಾಗವನ್ನು ಮುಚ್ಚಿದ್ದು ಬೆನ್ನು ತೆರೆದಿರುತ್ತದೆ ಕಾಂಚಳಿಯನ್ನ ಎರಡು ಪಕ್ಕದ ಹುರಿಗಳಿಂದ ಬೆನ್ನಿಗೆ ಬಿಗಿದು ಕಟ್ಟಿರುತ್ತಾರೆ. ಕಾಂಚಳಿಯ ಎರಡು ತೋಳುಗಳ ಮೇಲೆ ಅರ್ಧ ಅಡಿ ಚೌಕಾಕಾರದ ತುಂಡು ಬಟ್ಟೆಯನ್ನು ಜೋಡಿಸಿರುತ್ತಾರೆ. ಅವುಗಳನ್ನು 'ಖವ್ಯಾ'ಗಳೆಂದು ಕರೆದಿರುತ್ತಾರೆ. ಕುಪ್ಪಸದ ತುಂಬೆಲ್ಲಾ ಅಲ್ಲಲ್ಲಿ ಚಿಕ್ಕ ಚಿಕ್ಕ ಕನ್ನಡಿ, ತಗಡಿನ ಗುಂಡಿ, ಉಣ್ಣೆಯಗೊಂಡ(ಪುಂದಾ) ಹಾಗೂ ಕಸೂತಿ ಕೆಲಸದ ಅಲಂಕಾರದ ಜೊತೆಗೆ ಅದರ ಅಂಚಿನಲ್ಲಿ ಚಿಕ್ಕ ಚಿಕ್ಕ ಗೆಜ್ಜೆ ಸರಗಳನ್ನು ಜೋಡಿಸುತ್ತಾರೆ.

**ಛಂಟಿಯಾ(ಮೇಲ್ಮುಸುಕು) :** ಇದನ್ನ ತಯಾರಿಸಲು ೫ ಅಥವಾ ೬ ಮೊಳ ಕೆಂಪು ಇಲ್ಲವೆ ಹಸಿರು ಬಟ್ಟೆ, ಅದರ ಮೇಲೆ ಕನ್ನಡಿ ಹಾಕಿ ಕಸೂತಿ ಮಾಡಿದ ೫ ಚೌಕಾಕಾರದ ಒಂದೇ ಪ್ರಮಾಣದ ಹೂವುಗಳು(ಪಾಂಚ ಪೂಲ್) ೨ ಅಂಗುಲ ಅಗಲಳತೆಯು ೨ ಪಟ್ಟಿ (ಪಾಟಾ) ಹಾಗೂ ಒಂದು ಭಾರವಾದ ದಪ್ಪನೆಯ 'ಘುಂಗಟೋ'ವನ್ನು ಜೋಡಿಸುತ್ತಾರೆ. ಇದನ್ನು ಅತ್ಯಂತ ಕಲಾತ್ಮಕವಾಗಿ ಕನ್ನಡಿ ಹಾಕಿ ಕಸೂತಿ ಮಾಡಿರುತ್ತಾರೆ. ಜೊತೆಗೆ ಅಲ್ಲಲ್ಲಿ ಗುಂಡಿ, ಗೊಂಡೆ, ಬೆಳ್ಳಿಸರ ಹಾಗೂ ಹಳೆಯ ನಾಣ್ಯದ ಬಿಲ್ಲೆಗಳನ್ನು ಸಾಲು ಸಾಲಾಗಿ

ಜೋಡಿಸಿ ಭಾರವಾಗುವಂತೆ ಮಾಡಿರುತ್ತಾರೆ. ಬಹುಶಃ ತಲೆಯ ಮೇಲಿರುವ ಈ ಸೆರಗು ಕೆಳಗೆ ಜಾರಿ ಬೀಳ ಬಾರದೆಂಬುದೇ ಆಶಯವಾಗಿದೆ. ಮೇಲ್ಮುಸುಕಿನ ಒಡಲೊಳಗೆ ಅಲಂಕಾರಕ್ಕಾಗಿ ಅಲ್ಲಲ್ಲಿ ಬಣ್ಣ ಬಣ್ಣದ ತ್ರಿಕೋನಾಕಾರದ ತುಂಡು ತುಕುಡಿಗಳನ್ನು (ಖಾಲಪಿ) ಹಚ್ಚುತ್ತಾರೆ.ಲಂಬಾಣಿಗಳು ನಾಗರೀಕ ಸಮಾಜದಿಂದ ದೂರವಿದ್ದು ತಾತ್ಕಾಲಿಕ ಬಿಡಾರಗಳನ್ನು ಹಾಕಿಕೊಂಡು ಜೀವನ ನಡೆಸುತ್ತಿದ್ದರು. ಅಂತಹ ದಿನಗಳಲ್ಲಿ ತಮ್ಮ ಉಡುಪುಗಳನ್ನು ದರ್ಜಿಗಳಿಗೆ ಕೊಟ್ಟು ಸಿದ್ಧಪಡಿಸಿಕೊಳ್ಳಲು ಸಾಧ್ಯವಿರಲಿಲ್ಲವಾದ್ದರಿಂದ ತಮ್ಮ ಉಡುಪುಗಳನ್ನು ತಾವೇ ಸಿದ್ಧಪಡಿಸಿಕೊಳ್ಳಲು ಅನುಕೂಲವಾಗುವ ರೀತಿಯಲ್ಲಿ ರಚನಾವಿನ್ಯಾಸಗಳನ್ನು ಅನುಸರಿಸಿರುವುದು ಈ ಬಟ್ಟೆಗಳ ರಚನೆಯ ಹಿಂದಿರುವ ಸರಳ ಸತ್ಯವಾಗಿದೆ ಎಂದರೆ ತಪ್ಪಾಗಲಾರದು.

''ಇತ್ತೀಚಿನ ಪೀಳಿಗೆಯು ೨೧ನೇ ಶತಮಾನಕ್ಕೆ ಕಾಲಿಟ್ಟಿರುವುದರಿಂದ ಹಿಂದಿನವರ ಉಡುಪುಗಳನ್ನು ಅವರು ಇಷ್ಟಪಡುವುದಿಲ್ಲ. ಕಾರಣ ಅವರ ಉಡುಪು ಬದಲಾವಣೆಯಾಗಿರುವುದು, ಅನ್ಯ ಜಾತಿಯರು ಉಡುವ ಉಡುಪನ್ನು ಈಗಿನ ಲಂಬಾಣಿ ಮಹಿಳೆಯರು ಇಷ್ಟ ಪಡುತ್ತಾರೆ. ಯಾಕೆಂದರೆ ಲಂಬಾಣಿ ಉಡುಪನ್ನು ತಯಾರಿಸಲು ಸಾಕಷ್ಟು ಸಮಯವಕಾಶ ಬೇಕಾಗುತ್ತದೆ ಮತ್ತು ಅದಕ್ಕೆ ತಗಲುವ ಖರ್ಚು ಬಹಳಷ್ಟು ಆಗಿರುವುದರಿಂದ ಆಧುನಿಕ ಮಹಿಳೆಯರು ತಮ್ಮ ಉಡುಪುಗಳನ್ನು ನಿರಾಕರಿಸುತ್ತಾರೆ. ಅವರುಗಳು ಸೀರೆಯನ್ನು ಇಷ್ಟುಪಡುತ್ತಾರೆ.''[೧೬]

**ತೊಡುಗೆಗಳು/ಭೂಷಣಗಳು :** ಶೃಂಗಾರ ಪ್ರಿಯರಾದ ಲಂಬಾಣಿ ಮಹಿಳೆಯರು ದೇಹದ ಅಂಗಾಗಳನ್ನು ವಿವಿಧ ಬಗೆಯ ಆಭರಣಗಳಿಂದ ಕಲಾತ್ಮಕವಾಗಿ ಅಲಂಕರಿಸಿಕೊಂಡಿರುತ್ತಾರೆ. ಕಿವಿ, ಮೂಗು, ತಲೆ, ಕೊರಳು, ಕೈ-ಕಾಲುಗಳು ಹಾಗೂ ಇವುಗಳ ಬೆರಳುಗಳನ್ನು ಆಭರಣಗಳಿಂದ ಶೃಂಗರಿಸಿಕೊಳ್ಳುತ್ತಾರೆ. ಇವರು ಧರಿಸುವ ಆಭರಣಗಳನ್ನು ಕಂಡು ಎಡ್ಗರ್ ಥರ್ಸ್ಟನ್ ಅವರ ''ಉಡುಗೆ ವಿಚಿತ್ರವಾಗಿರುತ್ತದೆ. ಮತ್ತು ಅವರ ಆಭರಣಗಳು ಅಸಾಧರಣವಾದ ಆಯ್ಕೆಯಾಗಿರುತ್ತವೆ. ನನ್ನ ಕ್ಷೇತ್ರಕಾರ್ಯದ ಸಂದರ್ಭಗಳಲ್ಲಿ ಲಂಬಾಣಿ ಮಹಿಳೆಯರು ೫ ರಿಂದ ೧೦ ಪೌಂಡ್ ತೂಕದ ಲೋಹದ ಅಥವಾ ದಂತದ ಆಭರಣಗಳನ್ನು ತೋಳು ಮತ್ತು ಕಾಲುಗಳಲ್ಲಿ ಧರಿಸಿಕೊಂಡಿದ್ದರು'' ಎಂದು ಅಶ್ಚರ್ಯವನ್ನು ವ್ಯಕ್ತಿಪಡಿಸಿದ್ದಾರೆ.

ಅಲಂಕಾರಿಕವಾಗಿ ಬಳಕೆಯಾಗುವ ಆಭರಣಗಳೆಂದರೆ ಕಸ್ಸ, ಮಾಟ್ಗಿ, ಜೋಡಿ, ಕಡ್ಡಿ, ಸಾಂಕ್ಕಿ, ಹಾಂಗ್ಲಿ, ವಾಂಕ್ಡಿ, ಕೋಲ್ಡಾ, ಚಾಂಚ್ರಾ, ರಪ್ಯಾರ್ ಹಾರ್, ಪಾವ್ಲಾರ್ ಹಾರ್, ಅಂದೇಲಿ ಹಾರ್, ಚಟಕಿ, ಅಂಗುತ್ಲ, ಟಾಂಗೇರ್ ವೀಟಿ, ಹಾತೇರಿ ವಿಂಟಿ, ಬುರಿಯಾ, ಲಾಲ್ಡಿ ಕಸೂಟ್ಯ, ಫುಗರಾರ್ ಜೋಡಿ ಪಡಿಯಾ ಇತ್ಯಾದಿ ಹಳೆಯ ಕಾಲದ ನಾಲ್ಕಾಣೆ, ಎಂಟಾಣ, ರೂಪಾಯಿ ನಾಣ್ಯಗಳಿಗೆ ಕೊಂಡಿ ಮಾಡಿಸಿ ದಾರಿಗಳಲ್ಲಿ ಹೆಣೆದು ಹಾರಗಳ ರೂಪದಲ್ಲಿ ಧರಿಸಿಕೊಳ್ಳುತ್ತಾರೆ. ಆಧುನಿಕ ಲಂಬಾಣಿ ಮಹಿಳೆಯರು ಈ ಮೇಲಿನ ಆಭರಣಗಳನ್ನು ಧರಿಸಲು ಇಚ್ಛೆ ಪಡುವುದಿಲ್ಲ. ಅವರು ಆಧುನಿಕ ಯುಗಕ್ಕೆ ಬದಲಾವಣೆಯಾಗಿರುವುದು ಅವರು ಈ ಮೇಲಿನ ತೊಡುಗೆಯನ್ನು ಧರಿಸುವುದಿಲ್ಲ.

ಲಂಬಾಣಿ ಮಹಿಳೆಯರ ಕೈಗಳು ದಂತದ ಬಳೆಗಳಿಂದ ಶೃಂಗರಿಸಲ್ಪಟ್ಟಿರುತ್ತವೆ. ಪ್ರಾರಂಬದ ದಿನಗಳಲ್ಲಿ ದಂತಗಳನ್ನು ಬಳೆಗಳ ತಯಾರಿಕೆಯಲ್ಲಿ ಬಳಸುತ್ತಿದ್ದರು. ಇದನ್ನು 'ಬಲ್ಯ' ಎಂಬುದಾಗಿ ಕರೆಯುತ್ತಿದ್ದರು. ಇಂದಿನ ದಿನಗಳಲ್ಲಿ ದಂತವು ಅಲಭ್ಯವಾಗಿರುವುದರಿಂದ ಪ್ಲಾಸ್ಟಿಕ್ ಬಳೆಗಳನ್ನು ದಂತದ ಬಳೆ ಆಕಾರದಲ್ಲಿಯೇ ಮಾಡಿಕೊಂಡು ಧರಿಸಿಕೊಳ್ಳುತ್ತಾರೆ. ನಾಲ್ಕು ಮೂಲೆಗಳಲ್ಲಿಯೂ ಗೆಜ್ಜೆಗಳಿರುವಂತಹ ಉಂಗುರಗಳನ್ನು ಮಾಡಿಸಿ ಕೈಬೆರಳುಗಳಿಗೆ ಧರಿಸಿಕೊಳ್ಳುತ್ತಾರೆ.

ಕಾಲುಗಳಿಗೆ ಬೆಳ್ಳಿಯ ಇಲ್ಲವೇ ಗಟ್ಟಿಲೋಹದ ಕಡಗವನ್ನು ಧರಿಸಿಕೊಳ್ಳುತ್ತಾರೆ. ಇದನ್ನು 'ಕೋಲ್ಡ' ಎಂಬುದಾಗಿ ಕರೆಯುತ್ತಾರೆ. ಡೊಂಕು ಡೊಂಕಾದ ವಾಂಕಟಿ ಹಿತ್ತಾಳೆಯ ಕಪ್ಪೆ, ಬೆಳ್ಳಿ ಅಥವಾ ಲೋಹದ ಚೈನು ಧರಿಸಿಕೊಂಡಿರುತ್ತಾರೆ. ಕಾಲಿಗೆ ಅಂದರೆ ಬೆರಳಿಗೆ 'ಚಟಕಿ' ಎಂದು ಕರೆಯುವ ಉಂಗುರವನ್ನು ಧರಿಸಿರುತ್ತಾರೆ. ಅಲ್ಲದೇ ಹಿತ್ತಾಳೆಯ 'ಅಂಗುತ್ಲಾ' ಮತ್ತು 'ಕರಬರಿ'ಗಳನ್ನು ಹಾಗೂ 'ವಿಂಚೋವಾ' ಆಭರಣಗಳನ್ನು ಧರಿಸಿಕೊಳ್ಳುತ್ತಾರೆ.

ಮೂಗಿನಲ್ಲಿ ವೃತ್ತಾಕಾರದ 'ಬುರಿಯಾ' ಎಂದು ಕರೆಯುವ ಮೂಗಿನ ನತ್ತನ್ನು ಧರಿಸುತ್ತಾರೆ. ಇದರ ಮೇಲೆ ಸೂಕ್ಷ್ಮವಾಗಿ ಕೆತ್ತಿರುವ ಹಲವಾರು ಕಸೂರಿ ಕೆಲಸಗಳನ್ನು ಕಾಣಬಹುದು. ಕಿವಿಗಳಿಗೆ 'ಕಡ್ಡಿ', 'ಕನ್ಯಾ', ಅಡಿ ಸಾಂಕ್ಸ್ ಗಳನ್ನು ತಲೆಯ ಇಕ್ಕೆಲೆಗಳಿಗೆ ಫುಗರಿಯೊಂದಿಗೆ ಹೆಣೆದಿರುವ ಟೊಪ್ಪಿಗಳಿರುತ್ತವೆ. ಜಡೆಯನ್ನು ಕವಡೆಯಿಂದ ಮಾಡಿದ ಅಂಟಿಯನ್ನು ಬಳಸಿ ಹೆಣೆದುಕೊಂಡಿರುತ್ತಾರೆ. ಇದು ಜಡೆ ಸಡಿಲವಾಗದಂತೆ ತಡೆಯಲು ಸಹಾಯಕವಾಗಿರುತ್ತದೆ.

ಈ ಮೇಲಿನ ಅಲಂಕಾರಿಕ ಭೂಷಣಗಳಲ್ಲದೆ ಲಂಬಾಣಿ ಮಹಿಳೆಯರು ಕೆಲವಾರು ಸಾಂಪ್ರದಾಯಿಕ ಭೂಷಣಗಳನ್ನು ತೊಡುತ್ತಾರೆ. ಇವುಗಳಲ್ಲಿ ತಲೆಯ ಇಕ್ಕಡೆಗಳಲ್ಲಿಯೂ ಧರಿಸಿಕೊಳ್ಳುವ 'ಫುಗರಿ' ಹಾಗೂ ತೋಳುಗಳಿಗೆ ಧರಿಸುವ 'ಚೋಡೋ'ಗಳು ಪ್ರಮುಖವಾಗಿವೆ. ಈ ಎರಡು ಬಗೆಯ ಆಭರಣಗಳು ಮುತ್ತೈದೆಯ ಸೂಚಕವಾಗಿದ್ದು ಮದುವೆಯ ಸಂದರ್ಭದಲ್ಲಿ ಶಾಸ್ತ್ರೋಕ್ತವಾಗಿ ತೋಡಿಸಲಾಗುತ್ತದೆ. ದಂತ ಬಳೆಗಳಾದ ಚೋಡೋಗಳನ್ನು ವರನ ಕಡೆಯವರು ತೊಡಿಸಿದರೆ ಫುಗಲಿಗಳನ್ನು ತಾಯಿಯ ಮನೆಯವರು ತೋಡಿಸುತ್ತಾರೆ. ಗಂಡನು ಗತಿಸಿದಾಗ ಫುಗರಿ ಮತ್ತು ಜೋಡೋಗಳನ್ನು ತೆಗೆದುಹಾಕುತ್ತಾರೆ. ಲಂಬಾಣಿಗರು ಈ ಉಡುಗೆಗಳನ್ನು ಸಿದ್ಧಪಡಿಸಲು ಲಂಬಾಣಿಗರಲ್ಲೇ ಪ್ರತ್ಯೇಕವಾದ ಒಂದು ವರ್ಗವಿದೆ. ಅವರನ್ನು 'ಭರಾವ' ಹಾಗೂ ರಾಂಗ್ ಪಾರಿ'ಗಳೆಂದು ಕರೆಯುತ್ತಾರೆ.

ಭಾರಾವಗಳು ಬಂಗಾರ, ಬೆಳ್ಳಿ, ಅರಗು ಮೊದಲಾದ ಲೋಹಗಳನ್ನು ಕರಣಿಸಿ ಅಚ್ಚಿನಲ್ಲಿ ಎರಕ ಹೊಯ್ದು ಚೊಕಾದ ಆಕಾರದ ವಸ್ತುಗಳನ್ನು ತಯಾರಿಸಿಕೊಡುತ್ತಾರೆ. ಇವರು ಸುಮಾರು ೧೦೩ ವಿವಿಧ ಬಗೆಯ ವಸ್ತುಗಳನ್ನು ತಯಾರಿಸುತ್ತಿದ್ದು ಇವುಗಳಲ್ಲಿ ಜೊಡೆಲ್ ಫಾಗರ, 'ಕಣದೋರಿರ್ ಹಾರ'(ಸೊಂಟದ ಪಟ್ಟಿ) ಗುಂಗಘೋರ್ ಫುಗರ್, ಚೂಡೇರ್ ಫುಗರ, ಫುಗರಿ ಮುಂತಾದವುಗಳು ಪ್ರಮುಖವಾಗಿರುತ್ತವೆ.

ಇವರು ಲಂಬಾಣಿ ಜನಾಂಗದ ವ್ಯಾಪಾರ ವೃತ್ತಿಯಲ್ಲಿ ತೊಡಗಿದಾಗ ಅವರೊಂದಿಗೆ ಮನೆ ಮಾಡಿಕೊಂಡು ಅಲಂಕಾರದ ವಸ್ತುಗಳನ್ನು ತಯಾರಿಸಿಕೊಡುತ್ತಿದ್ದರು. ಇಂತಹ ವಿಶಿಷ್ಟವಾದ ವೇಷ-ಭೂಷಣಗಳನ್ನು ತೊಡುವ ಲಂಬಾಣಿ ಮಹಿಳೆಯರೇ ಇಂದು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಈ ಬಗೆಯ ವೇಷ-ಭೂಷಣಗಳಿಂದ ದೂರವಾಗುತ್ತಿರುವುದು ವಿಷಾಧನೀಯ ಸಂಗತಿ.

ಲಂಬಾಣಿ ಪುರುಷರ ಉಡುಪಿನಲ್ಲಿ ಅಂತಹ ವಿಶೇಷತೆ ಏನೂ ಕಂಡುಬರುವುದಿಲ್ಲ. ಇವರ ತಲೆಯ ಮೇಲೆ ಪೇಟ ಇರುತ್ತದೆ. ಇದನ್ನು 'ಪಾಗಡಿ' ಎಂಬುದಾಗಿ ಕರೆಯುತ್ತಾರೆ. ಕೆಲವು ಮುಖಂಡರ ಕಿವಿಯಲ್ಲಿ 'ಕನ್ಯಾ' ಇರುತ್ತದೆ. ಅದು ಬಂಗಾರದಾಗಿರುತ್ತದೆ. ಇದಕ್ಕೆ ವಿಶೇಷ ಗೌರವವಿದ್ದು ಸಭೆ-ಸಮಾರಂಭಗಳಲ್ಲಿ ತಲೆಯ ಮೇಲಿನ ಪಾಗಡಿಯನ್ನು ಬಿಚ್ಚುವಂತಿಲ್ಲ. ಮನೆಯ ಯಜಮಾನ ಧವಸ ಧಾನ್ಯಗಳನ್ನು ಅಳೆಯುವಾಗ, ಪರಸ್ಪರರು ಮಾತು ಪ್ರಾರಂಭಿಸುವ ಮುನ್ನ 'ರಾಂ ರಾಮ'ಯನ್ನು ಹೇಳಬೇಕಾದರೆ 'ಪಾಗಡಿ' ತಲೆಯ ಮೇಲೆ ಇರಲೇಬೇಕೆಂಬ ಸಂಪ್ರದಾಯ ಇವರಲ್ಲಿ ರೂಢಯಲ್ಲಿದೆ. ಉಳಿದಂತೆ ಇತರ ಪುರುಷರಂತೆ ಅಂಗಿ ಮತ್ತು ಬಿಳೀಯ ಪಂಚೆಯನ್ನು ಧರಿಸುತ್ತಾರೆ(ಸಂದರ್ಶನ : ಹನುಮಮತ ನಾಲ್ಕು ತಾಂಡದ ಮುಖಂಡರು. ವಯಸ್ಸು ೭೫, ಚಿಕ್ಕಜೋಗಿಹಳ್ಳಿಪಾಂಡ, ಬಳ್ಳಾರಿ ಜಿಲ್ಲೆ, ದಿನಾಂಕ ೮-೯-೨೦೧೧).

## ೩.೯. ಲಂಬಾಣಿಗರ ಭಾಷೆ

ಯಾವುದೇ ಸಮಾಜದ ಸಂಸ್ಕೃತಿ ಅಧ್ಯಯನವೆಂದರೆ ಅದರ ಭಾಷಿಕ ಅಧ್ಯಯನವೇ ಆಗಿರುತ್ತದೆ. ಕಾರಣ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳು ಅವರ ವಿಚಾರಗಳು, ಧ್ಯೇಯೋದ್ದೇಶಗಳು, ರೂಢಿ, ಸಂಪ್ರದಾಯಗಳು ಹಾಗೂ ಜೀವನ ಮೌಲ್ಯಗಳು ಆ ಜನಾಂಗದ ಭಾಷೆಯಲ್ಲಿ ಅಡಕಗೊಂಡಿರುತ್ತದೆ. ಭಾಷೆ ಮುಖಾಂತರವೇ ಅವು ಪ್ರಕಟಗೊಳ್ಳುತ್ತಿವೆ. ಭಾಷೆ ಹಾಗೂ ಸಂಸ್ಕೃತಿಗಳಲ್ಲಿರುವ ನಿಕಟ ಸಂಬಂಧವನ್ನು ವಿದ್ವಾಂಶರು ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ಒಟ್ಟಿನಲ್ಲಿ ಭಾಷೆಯ ಮೂಲಕ ಆಯಾ ಸಮುದಾಯದ ಸಾಂಸ್ಕೃತಿಕ ಸ್ವರೂಪವನ್ನು ಅಧ್ಯಯನ ಮಾಡಬಹುದು. ಅಂತಹ ಸಮುದಾಯಗಳಲ್ಲಿ ಲಂಬಾಣಿ ಸಮುದಾಯ ಒಂದು. ಲಂಬಾಣಿಗರು ತಮ್ಮನ್ನು ತಾವು ಗೋರಮಾಟಿ, ಗೋರವಲ್, ಗೋರ್, ಗೋರ್ ಬಂಜಾರ್ ಗಳೆಂದು ಕರೆದುಕೊಳ್ಳುತ್ತಾರೆ. ಇವರಾಡುವ ಲಂಬಾಣಿ ಬಂಜಾರಿ/ಸುಗಾಲ/ಲಮಾಣಿ/ಲಂಬಾಣಿ) ಭಾಷೆಯನ್ನು ಅವರು 'ಗೋರ್ ಬೋಲಿ' ಎಂದು ಕರೆದುಕೊಳ್ಳುತ್ತಾರೆ. ಲಂಬಾಣಿ ಭಾಷೆಗೆ ಯಾವುದೇ ಸ್ವಾತಂತ್ರವಾದ ಇತಿಹಾಸವಿಲ್ಲ. ಅದು ಆಡು ಭಾಷೆಯಾಗಿದೆ. ಆಯಾ ಪ್ರಾಂತೀಯ ಭಾಷೆಗಳ ಪ್ರಭಾವದಿಂದಾಗಿ ಇದೊಂದು ಸಮ್ಮಿಶ್ರ ಭಾಷೆಯಾಗಿ ಪರಿಣಮಿಸಿದೆ. ಗೋರ್ ಬೋಲಿ ಭಾಷೆಯು ವಸ್ತು ನಿಷ್ಠವಾಗಿ ಅದೊಂದು ಇಂಡೊ-ಆರ್ಯನ್ ವರ್ಗಕ್ಕೆ ಸೇರಿದ ಭಾಷೆಯಾಗಿರುವುದು ಸ್ಪಷ್ಟ. ಏಕೆಂದರೆ ಅವರು ಬಳಸುವ ದಿನ ಬಳಕೆಯ ಪದಗಳೆಲ್ಲ ಇಂಡೋ ಆರ್ಯನ್ ಪದಗಳೇ ಆಗಿವೆ. ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಹಿಂದಿ, ಸಂಸ್ಕೃತ ಭಾಷೆಗಲೂ ಇದಕ್ಕೆ ಪೂರಕವಾಗಿವೆ. ಗೋರ್ ಬೋಲಿ ಭಾಷೆಯು ಇಂಡೊ-ಆರ್ಯನ್ ಭಾಷೆ ಎನ್ನುವುದಕ್ಕೆ

ಕೆಲವು ಪದಗಳು ನಿದರ್ಶನಗಳಾಗಿವೆ. ಅಧ್ಯಾಯದಲ್ಲಿ ಆ ಪದಗಳು ಅವರಲ್ಲಿ ಲಭ್ಯವಾಗಿರುವುದರಿಂದ 'ಗೋರ್ ಬೋಲಿ' ಭಾಷೆಯು ತನ್ನ ಮೂಲರೂಪವನ್ನು ಬಳಸಿಕೊಂಡು ಬಂದಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

## ೩.೧೦. ಸಾಹಿತ್ಯ

ಕೆಲವು ಜನಾಂಗಗಳಲ್ಲಿ 'ಕಂಠಸ್ಥ ಸಂಪ್ರದಾಯದಲ್ಲಿಯೇ ಉಳಿದುಕೊಂಡು ಬಂದಿರುವ ಸಾಹಿತ್ಯ. ತಮ್ಮ ಪಾಡನೇ ಹಾಡಾಗಿ ನೀಡಿದ ಬಾಳೀನ ನೋವು-ನಲಿವುಗಳನ್ನೇ ಸಾಹಿತ್ಯವನ್ನಾಗಿಸಿಕೊಂಡು, ಒಂದು ಅಪೂರ್ವ ಪ್ರಕಾರವಾಗಿದೆ. ತಲೆ ತಲಾಂತರದಿಂದ ಬಾಯಿಂದ ಬಾಯಿಗೆ ಬೆಳೆದುಬಂದಿರುವ ಇದು ಸಾಮಾನ್ಯ ಜನತೆಯ ವೇದ ಗ್ರಾಮ ಸಂಸ್ಕೃತಿಯ ದರ್ಪಣ, ಹಳ್ಳಿಯ ಸರಳ ಜೀವನದ ವಿವಿಧ ವೇದ, ಗ್ರಾಮ ಸಂಸ್ಕೃತಿಯ ದರ್ಪಣ, ಹಳ್ಳಿಯ ಸರಳ ಜೀವನದ ವಿವಿಧ ಮುಖಗಳು ಅದರಲ್ಲಿ ಮಾರ್ಪೊಳೆಯುತ್ತವೆ. ಸಂಸಾರದ ಕಷ್ಟ-ಕ್ಲೇಶಗಳು ಸುಖ ಸಂತೋಷಗಳು ಬಂಧು-ಮಿತ್ರರ ವಿವಿಧ ಸಂಬಂಧಗಳು. ಜಾತಿಮತ, ಹಬ್ಬ-ಹರಿದಿನ ರೂಢಿ-ಸಂಪ್ರದಾಯಗಳು, ಒಟ್ಟಿನಲ್ಲಿ ಅವರ ಜೀವನವನ್ನು ರೂಪಿಸುವ ಸ್ಫೂರ್ತಿ ವಿಶೇಷಗಳು ಜಾನಪದ ವಾಙ್ಮಯದಲ್ಲಿ ವಿಪುಲವಾಗಿ ದೊರಕುತ್ತದೆ.[೨]

ಯಾವುದೇ ಜನಾಂಗದ ಸಂಸ್ಕೃತಿಯನ್ನರಿಯಲು ಅದರ ಜನಪದ ಸಂಪತ್ತನ್ನು ಕೂಲಂಕಷವಾಗಿ ಅಭ್ಯಸಿಸಬೇಕಾದುದು ಅಗತ್ಯ. ಕಾರಣ ಇವುಗಳು ಆಯಾ ಸಮಾಜದ ಮಾನಸಿಕ ಚೈತನ್ಯದ ಪ್ರತಿಬಿಂಬಗಳಾಗಿವೆ. ಅವು ಸಾಹಿತ್ಯ ಮುಖೇನವೂ ವ್ಯಕ್ತವಾಗುತ್ತವೆ.

ಲಂಬಾಣಿ ಜನಾಂಗದ ಜನಪದ ಸಾಹಿತ್ಯ ಯಾರು ಕೃಷಿ ಮಾಡದ ಕನ್ನೆ ನೆಲ "ಜನಪದ ಕಣಜವೇ" ಆ ಜನಾಂಗದ ಆಚಾರ-ವಿಚಾರ, ನಡೆ-ನುಡಿಗಳಲ್ಲಿ ಅಡಗಿದೆ. ಹಾಡು ಕುಣಿತ, ವೇಷ-ಭೂಷಣ ಮದುವೆ-ಮುಂಜಿವೆ ಜನನ-ಮರಣ ಹಬ್ಬ-ಹರಿದಿನಗಳು ಹಾಗೂ ವಿಶಿಷ್ಟ ಸಂಸ್ಕಾರಾದಿಗಳು ಅವರ ಸಮಾಜ ಮತ್ತು ಸಂಸ್ಕೃತಿಯನ್ನು ಎತ್ತಿ ಹಿಡಿಯಬಲ್ಲ ಕುರುಹುಗಳಾಗಿವೆ. ತಮ್ಮದೇ ಆದ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬಂದಿರುವ ಈ ಜನರಿಗೆ ಅವರದೇ ಆದ ಸಮಾಜ ಸಂಪ್ರದಾಯದ ಜೊತೆಗೆ ಸಂಸ್ಕೃತಿಯನ್ನು ಪೋಷಿಸಿಕೊಂಡು ಹೋಗುವ ಮನೋಭಾವನೆಯೂ ಇದೆ.

ಲಂಬಾಣಿ ಜನಪದ ಸಾಹಿತ್ಯ ಪ್ರಕಾರಗಳನ್ನು ಪ್ರಮುಖವಾಗಿ ನಾಲ್ಕು ರೀತಿಯಿಂದ ವಿಂಗಡಿಸಬಹುದು. ೧. ಗೀತೆ ೨. ಕಥೆ ೩. ಗಾದೆ-ನುಡಿಗಟ್ಟುಗಳು ಹಾಗೂ ೪. ಒಗಟುಗಳು ಇವುಗಳನ್ನು ಒಂದೊಂದಾಗಿ ಕೂಲಂಕಷವಾಗಿ ವಿವೇಚಿಸಿದಲ್ಲಿ ಅವರ ಸಂಸ್ಕೃತಿಯ ಸ್ವರೂಪವನ್ನರಿಯಲು ಸಾಧ್ಯವಾಗುತ್ತದೆ. ದೈನಂದಿನ ಕಷ್ಟ, ಸುಖ ಸಮಸ್ಯೆಯ ಜೀವಂತ ದರ್ಶನ ಇವುಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಲಂಬಾಣಿಗರ ಜನಪದ ಸಾಹಿತ್ಯ ಹೆಚ್ಚಾಗಿ ದೈನಂದಿನ ಬದುಕಿಗೆ ಸಂಬಂಧಿಸಿದುದಾಗಿದ್ದು ಇವರ ಜೀವನ ಕ್ರಮದ ದಿಕ್ಕನ್ನು ಸೂಚಿಸುವಂಥವಾಗಿವೆ. ರಾಗಿ ಬೀಸುವಾಗ, ನಾಟಿ ಮಾಡುವಾಗ, ಕಳೆ ಕೀಳುವಾಗ, ಭತ್ತ ಕಟ್ಟಾವು ಮಾಡುವಾಗ

ಕೊಯ್ಯುವಾಗ, ಕಣದ ಕೆಲಸಮಾಡುವಾಗ ಹೀಗೆ ಬೇರೆ ಬೇರೆ ಸನ್ನಿವೇಶಗಳಲ್ಲಿ ಈ ಸಾಹಿತ್ಯ ಸೃಷ್ಟಿಯಾಗಿದೆ. ಕೃಷಿ ಮಾಡುವ ಸಂದರ್ಭದಲ್ಲಿ ಹಾಡಿದರೆ ದುಷ್ಟ ಶಕ್ತಿಗಳಿಂದ ರಕ್ಷಣೆಯಾಗಿ ಬೆಳೆ ಸಮೃದ್ಧವಾಗುತ್ತದೆ ಎಂಬ ನಂಬಿಕೆ ಇವರ ಈ ಬಗೆಯ ಸಾಹಿತ್ಯ ರಚನೆಗೆ ಕಾರಣವಾಗಿರುವ ಅಂಶಗಳಲ್ಲಿ ಒಂದು. ಲಂಬಾಣಿಗರ ಮೂಲ ಕಸುಬು ವ್ಯಾಪಾರವಾಗಿತ್ತು. ಅನಂತರದಲ್ಲಿ ವ್ಯವಸಾಯವಾದ್ದರಿಂದ ಇವರ ಸಾಹಿತ್ಯವು ವ್ಯಾಪಾರ ಹಾಗೂ ವ್ಯವಸಾಯ ಮಾದರಿಯ ಆರ್ಥಿಕ ವ್ಯವಸ್ಥೆ ಹಾಗೂ ಸಂಸ್ಕೃತಿಗೆ ಹೊಂದಿಕೊಳ್ಳುವಂತೆಯೇ ಸೃಷ್ಟಿಯಾಗಿದೆ. ಬದುಕಿನ ನೈಜಚಿತ್ರಣವನ್ನು ಜೀವನಾನುಭವವನ್ನು ಈ ಜನಪದ ಸಾಹಿತ್ಯ ಪ್ರಕಾರಗಳು ಚಿತ್ರಿಸುತ್ತವೆ. ಪ್ರಸ್ತುತದಲ್ಲಿ ಲಭ್ಯವಿರುವ ಪ್ರಕಟಿತ ಸಂಗ್ರಹಗಳ ಜೊತೆಗೆ ಕ್ಷೇತ್ರಕಾರ್ಯದ ಮಾಹಿತಿಗಳನ್ನು ಬಳಸಿಕೊಂಡು ಇವರ ಮೌಖಿಕ ಸಾಹಿತ್ಯವನ್ನು ವಿವೇಚಿಸುವ ಪ್ರಯತ್ನ ಆಗಬೇಕಾಗಿದೆ.[೧೮]

**ಗೀತೆಗಳು :** ಜನಸಮುದಾಯದ ಮೌಖಿಕ ಪರಂಪರೆಯಲ್ಲಿ ನಿರಂತರವಾಗಿ ಉಳಿದುಕೊಂಡು ಬಂದಿರುವ ಹಾಡುಗಳೆ ಜನಪದ ಗೀತೆಗಳೆನಿಸಿಕೊಳ್ಳುತ್ತವೆ. ಇವು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿದ್ದು ಇವುಗಳನ್ನು ಹಳ್ಳಿಯ ಹಾಡು ಎಂಬುದಾಗಿಯೂ ಕರೆಯಲಾಗುತ್ತದೆ. ಲಂಬಾಣಿ ಜನಪದ ಸಾಹಿತ್ಯದ ಇತರ ಪ್ರಕಾರಗಳಂತೆ ಜನಪದ ಗೀತೆಗಳ ಉಗಮ, ಕಾಲ ಯಾವುದೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಆದರೆ ಅವು ಹುಟ್ಟಿ ಬೆಳೆದುದಂತೂ ಗೀತೆಗಳನ್ನು ರಚಿಸುವ ಹಾಡುವ ನಿಶ್ಚಿತ ಕ್ರಮಗಳಾವೂವೂ ಸಾಮಾನ್ಯವಾಗಿ ಕಂಡುಬರುವುದಿಲ್ಲ. ಕೇಳಿ ನೆನಪಿನಲ್ಲಿಟ್ಟುಕೊಳ್ಳುವುದರಿಂದ ಹಾಡುವವರ ಜೊತೆ ಧ್ವನಿಗೂಡಿಸುವುದರಿಂದ ಅವುಗಳನ್ನು ಕಲಿಯಲಾಗುತ್ತದೆ. ಈ ಮಾದರಿಯಲ್ಲೆ ಅದು ತಲೆಮಾರಿನಿಂದ ತಲೆಮಾರಿಗೆ ಹರಿದುಬಂದಿದೆ. ಹಾಡುವವರ ಕ್ರಿಯೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವುದರ ಮೂಲಕ ಇವುಗಳನ್ನು ಕಲಿಯುತ್ತಾ ಬರುತ್ತಾರೆ. ನಿರ್ದಿಷ್ಟ ಸಂದರ್ಭಗಳಲ್ಲಿ ಬಳಕೆಯಾಗುವ ಇವು ಸಮೂಹಿಕ ಉದ್ದೇಶಗಳನ್ನು ನೆರವೇರಿಸು ವುದರಿಂದಾಗಿಯೇ ಜನಪದ ಸಾಮಾಜಿಕ ಜೀವನದಲ್ಲಿ ಹಾಸು ಹೊಕ್ಕಾಗಿದೆ. ವ್ಯಕ್ತಿಯ ಜೀವನದ ನಿರ್ಣಾಯ, ತಿರುವುಗಳಾದ ಬಾಲ್ಯ, ಯೌವ್ವನ, ಮದುವೆ, ಸಾವು ಇಂತಹ ಸಂದರ್ಭಗಳಲ್ಲಿ ಜನಪದ ಹಾಡುಗಾರಿಕೆ ಜೊತೆಯಾಗುತ್ತದೆ. ಇದು ಜನಸಮುದಾಯದ ಅನೇಕ ಮುಖ್ಯ ಚಟುವಟಿಕೆಗಳ ಭಾಗವಾಗಿದೆ.

ಜನಪದ ಗೀತೆಗಳು ಸಂಸ್ಕೃತಿಯ ಒಂದು ಅಂಗವಾಗಿದ್ದು, ಆಯಾ ಜನಾಂಗದ ಸಂಸ್ಕೃತಿಯನ್ನು ಎತ್ತಿ ಹಿಡಿಯಬಲ್ಲ ಕುರುಹುಗಳಾಗಿವೆ. ಇವುಗಳಲ್ಲಿ ಆ ಜನಾಂಗದ ಸಂಸ್ಕೃತಿಯ ಮೂಲ ತಿರುಳು ಗೀತೆಯ ರೂಪದಲ್ಲಿ ಘನಿಕರಿಸಿರುತ್ತವೆ. ಇವರಲ್ಲಿ ಜಾನಪದ ಬಂಡಾರವೇ ಅಡಗಿದೆ. ಈ ಗೀತೆಗಳಲ್ಲಿ ಸುಖ ದುಃಖಗಳನ್ನು ಬವಣೆಗಳನ್ನು ಹಾಡಾಗಿ ತೊಡಗಿಕೊಳ್ಳುತ್ತಾರೆ. ಇದರಿಂದ ಜನಪದ ಜಡತ್ವ ಕಡಿಮೆಯಾಗುವುದು ಎಂಬುದು ಅವರ ನಂಬಿಕೆ. ''ಒಂದು ಜನಪದ ಗುಂಪಿನ ಬಳಕೆಯಲ್ಲಿರುವ ಹಾಡುಗಳನ್ನು ಸಮಗ್ರವಾಗಿ ಸಂಗ್ರಹಿಸಿ ವಿಶ್ಲೇಷಿಸಿ, ವರ್ಗೀಕರಿಸಿ ನೋಡಿದಾಗ ಆ ಗುಂಪಿನ ಜೀವನ ವಿಧಾನ, ಶ್ರದ್ಧೆ, ನಂಬಿಕೆ, ಆಚರಣೆಗಳು ನೈಜ ಪರಿಚಯ ನಮಗಾಗುತ್ತದೆ.

ಲಂಬಾಣಿಗಳಲ್ಲಿ ಪ್ರಚಲಿತವಿರುವ ಜನಪದ ಗೀತೆಗಳನ್ನು ಸ್ಥೂಲವಾಗಿ

೧. ಧಾರ್ಮಿಕ ಗೀತೆಗಳು

೨. ಮಹಿಳೆಯರ ನೃತ್ಯ ಗೀತೆಗಳು

೩. ಪ್ರಕೃತಿ ಗೀತೆಗಳು

೪. ಪುರುಷರ ಕೋಲಾಟ ಹಾಗೂ ಮೇಳಗೀತೆಗಳು ಎಂಬುದಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಬಹುದಾಗಿದೆ.

**೧. ಧಾರ್ಮಿಕ ಗೀತೆಗಳು :** ಲಂಬಾಣಿಗರು ಇತರರಂತೆ ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ದೇವರು ದೈವ ಶಕ್ತಿಯನ್ನು ಅಪಾರವಾಗಿ ನಂಬುತ್ತಾರೆ. ಶಾಸ್ತ್ರ ವಿಧಿ-ವಿಧಾನಗಳನ್ನು ಪರಂಪರೆಯಿಂದ ಬಂದಂತೆ ಇಂದಿಗೂ ಅಷ್ಟೇ ಭಕ್ತಿಯಿಂದ ಆಚರಿಸುತ್ತಾರೆ.

ಲಂಬಾಣಿ ಧಾರ್ಮಿಕ ಗೀತೆಗಳನ್ನು ಪ್ರಮುಖವಾಗಿ ಎರಡು ಪ್ರಕಾರವಾಗಿ ವಿಂಗಡಿಸಬಹುದು. ೧. ಹಬ್ಬ-ಹರಿದಿನಗಳ ಗೀತೆಗಳು ಹಾಗೂ ೨. ದೇವರ-ದೇವತೆಗಳ ಗೀತೆಗಳು.

**ಹಬ್ಬ ಹರಿದಿನದ ಗೀತೆಗಳು:** ಗೀತೆಗಳು ಆಯಾ ಹಬ್ಬದ ಸಂದರ್ಭಗಳಿಗನುಗುಣವಾಗಿ ಹಾಡಲಾಗುತ್ತದೆ. ಈ ಗೀತೆಗಳು ಹಬ್ಬ ವರ್ಣನೆಯನ್ನು ನೀಡುವುದರ ಜೊತೆಗೆ ಆ ಸಂದರ್ಭವನ್ನು ಯಥಾವತ್ತಾಗಿ ವರ್ಣಿಸಿರುವಂತೆ ರೂಪಿತವಾಗಿರುತ್ತವೆ. ಉದಾಹರಣಗೆ ಗೋಧಿಹಬ್ಬದ ಸಂದರ್ಭದಲ್ಲಿ ಹಾಡುವ ಗೀತೆ ಈ ಕೆಳಗಿನಂತಿವೆ.

ನವಿದಾಡೇದ ತೀಜ್ ಕೊಯಹಟಕೊಮತೊ ಯಾಡಿ ಝುಟಕೊಮತ್
ಮಾರ ನಾಯಕ್ ಬೊರಾಯಜಕೊ ತೀಜ್
ಕೊಯ್ ಹಟ್ ಕೊಮತೊ ಯಾಡಿ ಝುಟಕೊಮತ್
ಸೇವಾ ಭೋರಾಯಿ ಜಕೊ ತೀಜ್ ವೊಲ್ಡಿಮ ಪೇಲಗೆ
ಹರೋ ಭರೋ ದಿಕಾಗೆ, ವೋಲ್ಡಿಮ ಮಾಯೆ ತೀಜ್
ಕಾಯ ಪೇಲಗೇ ಯಾಡಿ ಝುಲರೇಮ ಹಲಗೆ
ಮಾರಿ ಡಾವೀ ಬೋರಾಯಜಕೊ ತೀಜ್
ಝುಲರೇಮ ಪೇಲಗೆ ತಾಂಡೂಸಾರಿ ಹಲಗೂ
ಮಾರಿ ಮಾಭಾಪ್ ಭೋರಾಯ ಜಿಕೊ ತೀಜ್
ಕೊಯಹಟಕೊ ಮತ್ ಯಾಡಿ ಕೊಯಿ
ಜಿಟಕೊ ಮತ್
ಮಾರೋ ವೀರಣ ಭೋರಾಯಿಜಕೊ ತೀಜ್,
ಕೊಯಿ ಹಟಕೊ ಮತ್ ಯಾಡಿ ಕೊಯಿ
ಝುಟಕೊಮತ್

(ಇದರ ಅರ್ಥವನ್ನು ಹೀಗೆ ವಿವರಿಸಬಹುದಾಗಿದೆ. ಒಂಬತ್ತು ದಿನಗಳ ಗೋಧಿ ಸಸಿಯನ್ನು ಯಾರು ಕೀಳಬೇಡಿ, ಹಾಳು ಮಾಡಬೇಡಿ, ನಮ್ಮ ಯಜಮಾನ ಬಿತ್ತಿಸಿದ ಗೋಧಿ ಸಸಿಯನ್ನು ಯಾರು ಕೀಳಬೇಡಿ, ಹಾಳುಮಾಡಬೇಡಿ, ಸೇವಲಾಲರು ಬಿತ್ತಿದ ಗೋಧಿಸಸಿಯನ್ನು ಯಾರು ಕೀಳಬೇಡಿ, ಯಾರು ಹಾಳ ಮಾಡಬೇಡಿ, ಬುಟ್ಟಿ ತುಂಬಿ ಸಸಿಯು ಗುಂಪಿನಲ್ಲಿ ಮೆರೆದು ಹಾಗೆಯೇ ಹಬ್ಬುತ್ತಿವೆ. ಹೀಗೆ ಹಲವಾರು ಹೆಸರುಗಳನ್ನು ಈ ಮೇಲಿನ ಅರ್ಥದಂತೆ ವ್ಯಕ್ತವಾಗುತ್ತದೆ.)

ಹೀಗೆ ಹಬ್ಬ ಹರಿದಿನಗಳಲ್ಲಿ ಆ ಹಬ್ಬಗಳ ಪ್ರಮುಖ ಅಂಶಗಳನ್ನು ಕುರಿತು ಗೀತೆಗಳನ್ನು ರಚಿಸುವುದು ಇವರಲ್ಲಿ ಪ್ರಚಲಿತವಿದೆ.

ಇದೇ ರೀತಿ ಅವರ ದೇವರು, ದೇವತೆಗಳಾದ ಮೀರುಭುಕ್ಯ, ಸೇವಾಭಾಯ, ಮರಿಯಮ್ಮ, ಸಾತಿಯಾಡಿ, ಸಾತಿಭಾವನಿ, ಈ ದೇವತೆಗಳನ್ನು ಕುರಿತು ಹಲವಾರು ಗೀತೆಗಳನ್ನು ಹಾಡುವುದನ್ನು ಕಾಣ ಬಹುದು. ಇದಕ್ಕೆ ನಿದರ್ಶನವಾಗಿ ಇವರ ಪ್ರಮುಖ ದೇವರಾದ ಸೇವಾಲಾಲರ ಪ್ರಾರ್ಥನೆಯನ್ನು ಕಾಣಬಹುದು.

ಸತ್ಯಗುರು, ಸತ್ಯಗುರು, ಸೇವಾಲಾಲ ಬಾಪುತೋನ
ಮಾರ್ ಹತಜೋಡಿರಾಂ ರಾಮಿ
ಬಾವನ ಬರೋಡೆವಾಳೋ ಧೋಳೆ ಘೋಡೊವಾಳೋ
ಸೋನೇರಿ ಕಳಸಶೇವಾಳೋ ಅಖಂಡ ಬ್ರಹ್ಮಚಾರಿ
ಭರೋಸೋಭಾರಿ ಸೇವಾಲಾಲ ಮಲಕೇರಿ ತಪಸ್ವಿರಿ
ಉಂದೆ ತಾಲಾ ಸಮಾಕರ, ಚಿತ್ತೋಕಾಮ ಪಿತ್ತೋಕರ
ಆಸವಾಳೇರಿ ಆಸಾಪೂರಿಕರ್, ಬಾಪುತೋನ ನಮಸ್ಕಾರ
ಭಂಡಾರಿ ಖಾನ ಬರವೊರರ ತಾರ ನಾಮೇರೋಲಾಗೋ ಭೋಗ್
ಲೊಗೋರಪರ ಸಾಯವೇಜೋ ಲಾಲ ತೋನ ನಮಸ್ಕರ
ಹರಘುಡಿ ಹರದೇವನ ಕೆಣು, ಸೂತೇರ ಸಪನೇಮ ರೇಣು
ಆವಜೆ ವಿಗ್ನೇನ ದೂರ ಕಣು ಬಾಪು ತೋನ ನಮಸ್ಕಾರ
ಬಾರ ಬಾರ ಘುಂಟಾ ರಾಮೇರ ಸಾಯಿವೇಣು
ಭರೇ ಪುರೇರ ಸಾಯಿ, ಜೀವ ಜನಗಾನೀರ ಸಾಯಿ
ನಂಗರಿ ಹರಿಭರಿ ಶರಣು ಸೂಕನಂದಿ ಭರಪೊರ ಕರಣು
ಪಂಚ ಬಾಳನ್ ಹಾಥ್ ಜೋಡನ ಅರದಾಸ ಕರಚೇರ
ಬರಿದಾಸ ರಕಾಡುಣು ಸುಖಿ ರಕಾಡುಣು ಸಾಯಿವೇಜೋ
ವರ್ಷ ದಾಡೋರ ಕೋಸಳ ರಕಾಡೋ ತೋನ
ದೀರ್ಘದಂಡ ನಮಸ್ಕಾರ ಬಾಪು

ಇದರ ಅರ್ಥವನ್ನು ಹೀಗೆ ಹೇಳಬಹುದಾಗಿದೆ: ಬಿಳಿಕುದುರೆ, ಬಂಗಾರದ ಕಳಸವನ್ನು ಹೊಂದಿರುವ ಬಾಲ ಬ್ರಹ್ಮಚಾರಿ ಸತ್ಯ ರೂಪವೇ ಆಗಿರುವ ಸೇವಾಲಾಲನೆ ನಿನಗೆ ದೀರ್ಘವಾದ ನಮನಗಳು. ವಿಘ್ನಗಳನ್ನು ದೂರ ಮಾಡಿ ಬೇಡಿದವರ ಬೇಡಿಕೆಗಳನ್ನು ಪೂರೈಸು. ಎಂದೆಂದಿಗೂ ನೆನೆದವರ ಮನದಲ್ಲಿ ನೆಲೆಸಿರುವ ಜೀವ ಜಂತುಗಳೆಲ್ಲಾ ರಕ್ಷಣೆಯನ್ನು ಒದಗಿಸು. ಈ ಎಲ್ಲಾ ಸೇವೆಗಳನ್ನು ಸ್ವೀಕರಿಸಿ ಸರ್ವರಿಗೂ ಸುಖ ಸಂತೋಷಗಳನ್ನು ನೀಡು ತಂದೆ.

ಲಂಬಾಣಿ ಜನಾಂಗದಲ್ಲಿ ಇಂತಹ ಹಲವಾರು ದೇವರು ದೇವತೆಗಳ ಗೀತೆಗಳನ್ನು ಕಾಣಬಹುದು. ಈ ಮೇಲಿನ ಗೀತೆಯಲ್ಲಿ ಇವರು ತಮ್ಮ ಪ್ರಮುಖ ದೇವರಾದ ಸೇವಾಲಾಲನನ್ನು ಪ್ರಾರ್ಥಿಸಿಕೊಳ್ಳುವ ರೀತಿಯು ತುಂಬಾ ಮಾರ್ಮಿಕವಾಗಿದ್ದು ಬಾವಪೂರ್ಣತೆಯ ಎದ್ದು ಕಾಣುತ್ತದೆ. ಇಂತಹ ಹಾಡುಗಳಲ್ಲಿ ಭಕ್ತಿಯೇ ಪ್ರಧಾನವಾಗಿರುತ್ತದೆ. ಈ ಹಾಡಿನ ಮೊದಲ ಹಂತದಲ್ಲಿ ದೇವರ ವರ್ಣನೆ ಕಂಡುಬಂದರೆ, ನಂತರದಲ್ಲಿ ತಮ್ಮ ಬೇಡಿಕೆಗಳನ್ನು ಈಡೇರಿಸುವಂತೆ ದೇವರಲ್ಲಿ ನಮ್ರತೆಯಿಂದ ಪ್ರಾರ್ಥಿಸಿಕೊಳ್ಳುವುದನ್ನು ಕಾಣಬಹುದಾಗಿದೆ.

**೨. ಮಹಿಳೆಯರ ನೃತ್ಯ ಗೀತೆಗಳು :** ಲಂಬಾಣಿಗರು ಅಮೂಲ್ಯವಾದ ನೃತ್ಯ ಗೀತೆಗಳ ಕಣಜವನ್ನು ಹೊಂದಿದ್ದಾರೆ. ಈ ಗೀತೆಗಳು ಎಂತಹ ಕಟು ಹೃದಯದವರಿಗೂ ಮನದೂಗಿಸುವಂತಿರುತ್ತದೆ. ಇವುಗಳು ಸಾಮಾನ್ಯವಾಗಿ ಹಾಸ್ಯ, ಸವಾಲು, ಕಥನ ಕವನಗಳು, ತತ್ವಪದ ಹಾಗೂ ಆಧುನಿಕ ಸಮಾಜವನ್ನು ಕುರಿತು ನಾನಾ ಬಗೆಯ ವಸ್ತು ವಿಷಯಗಳನ್ನು ಒಳಗೊಂಡಿರುತ್ತವೆ. ಸಾಹಿತ್ಯಿಕ ಅಂಶಗಳಿಂದ ಸಮೃದ್ಧಿಗೊಂಡ ಈ ಹಾಡುಗಳಲ್ಲಿ ಪುನರಾವರ್ತನೆ ಅಧಿಕವಾಗಿರುತ್ತದೆ. ತೊಟ್ಟ ಉಡುಗೆ, ತೊಡುಗೆಗಳು, ಝಣತ್ಕಾರ, ಗುಂಪು ಧ್ವನಿ, ಗೆಜ್ಜೆನಾದ ಇವುಗಳ ಜೊತೆಗೆ ಈ ನೃತ್ಯ ಗೀತೆಗಳು ಶ್ರೋತೃಗಳ ಮನಸ್ಸನ್ನು ಸೆರೆ ಹಿಡಿಯುತ್ತದೆ.

ಮಾಪೂರ ಗಡೇತಿ ದಾನಾಯೇ ಅಯೋ
ದಾನಾರೋ ಮತೋಲೀದೇರ ಬಣಜಾರಾ
ಮಾತೋ ಪೋಡನ ಬೀಜೋಯೇ ಕಾಡೇ
ಬೇಜೋರೋ ಸೀಸೂ ಬಣಾಯೇ ಬಣಜಾರಾ
ವಿಜೆ ಖವಿ ವೀಜೆ ಖವಿರ ಬಣಜಾರಾ
ಬೀಜೋಪರ ವಿಜೇಖವಿರ ಬಣಜಾರಾ
ದೂಮ ಮಸಿದೂಮ ಮಸೀರೇ ಬಣ ಜಾರಾ
ಜುಲರೋಪರ ವಿಜೆ ಖವಿರ ಬಣಜಾರಾ

ಮಾವೋ ಘುಡ ಎಂಬ ಪ್ರದೇಶದಿಂದ ಆಗಮಿಸುವ ರಾಕ್ಷಸನಿಂದ ಪ್ರಾರಂಭವಾಗುವ ಈ ಗೀತೆಯು ರಾಕ್ಷಸನ ಸಂಹಾರದೊಂದಿಗೆ ಮನೋಜ್ಞವಾಗಿ ಕೊನೆಗೊಳ್ಳುತ್ತದೆ. ಬಣಜಾರರು ರಾಕ್ಷಸನನ್ನು ಕೊಂದು ಅವನ ತಲೆಯನ್ನು ಹೊಡೆದು ಮುದವನ್ನು ತೆಗೆದು ಆ ಮದದ ಮೇಲೆ ಸಿಡಿಲು ಉಂಟಾಗಿ ರಭಸದ ಮಳೆ ಬಂದಿತು. ಆಗ ಬಂಜಾರರು

ಸಂತೋಷದಿಂದ ನಲಿದಾಡಿದರು. ಈ ಹಾಡಿನಲ್ಲಿ ದುಷ್ಟಶಕ್ತಿಗಳ ನಿಗ್ರಹದಿಂದ ಮಾತ್ರ ಸಮಾಜದ ಒಳಿತು ಸಾಧ್ಯ ಎಂಬುದು ಪ್ರಮುಖ ಸಾರವಾಗಿದೆ. ಈ ಬಗೆಯ ಹಲವಾರು ಹಾಡುಗಳನ್ನು ರಚಿಸಿ ನೃತ್ಯಗಳ ಮೂಲಕ ಜನರ ಮನರಂಜಿಸುತ್ತಾರೆ.

**ಪ್ರಕೃತಿ ಗೀತೆಗಳು :** ಪ್ರಕೃತಿಯ ಮಡಿಲಲ್ಲಿ ಹುಟ್ಟಿ ಬೆಳೆದ ಲಂಬಾಣಿಗರು ತಮ್ಮ ಸುತ್ತಮುತ್ತಲಿನ ಪ್ರಕೃತಿ ಸೌಂದರ್ಯವನ್ನು ಕಣ್ಣಾರೆ ಕಂಡು ಸವೆದು ಅವುಗಳನ್ನು ಗೀತೆಗಳ ರೂಪದಲ್ಲಿ ಅಭಿವ್ಯಕ್ತಿಪಡಿಸುವುದನ್ನು ಕಾಣಬಹುದು. ಈ ಗೀತೆಗಳು ಪ್ರಕೃತಿಯಲ್ಲಿ ಕಾಣುವ ಗಿಡ, ಮರ, ಚಂದ್ರ, ಸೂರ್ಯ, ಮೋಡ ಇತ್ಯಾದಿಗಳ ಮೇಲೆ ಕಟ್ಟಿ ಹಾಡಿದಂತವುಗಳಾಗಿವೆ.

ಬಾನಿನಲ್ಲಿ ಮಳೆ ಬಾರದೆ ಮೋಡಗಳು ದೂರ ಸರಿದಾಗ ಮಳೆಯನ್ನು ಗೀತೆಯ ರೂಪದಲ್ಲಿ ಮಳೆಯನ್ನು ಆಹ್ವಾನಿಸುವ ಬಗೆ ಬಹಳ ಮನೋಜ್ಞವಾಗಿ ಈ ಕೆಳಗಿನಂತೆ ಚಿತ್ರಿಸಿದ್ದಾರೆ.

''ಸಾಳ್ಯ ಸೊಂಕೆ ಗದ್ವಾಭೂಳೆ
ಉಚರಳ ಮಟಕಿ
ಪಾಣಿಬಲಾ ಪಾಣಿ ಬಲಾ''

ಈ ಕಾಡಿನಲ್ಲಿ ಗರಿಕೆ ಹಾಗೂ ಹಸಿರು ಹುಲ್ಲು ಇಲ್ಲದೆ ನರಿಗಳು, ಅದಕ್ಕಾಗಿಯೆ ಎಲ್ಲಿಯೂ ಮೂಸಿ ನೋಡುತ್ತಿದೆ. ಹತ್ತೆಗಳು ಒಂದೆ ಸಮನೆ ನೀರಿಲ್ಲದೆ ಅರಿಸುತ್ತಿದೆ. ಆದ್ದರಿಂದ ಕಪ್ಪೆಯೇ ಕುಪ್ಪಳಿಸಿ, ಕುಪ್ಪಳಿಸಿ ಚರಿಸಿ ಮಳೆರಾಯನನ್ನು ಕರೆಯಿಸು ಎಂಬುದಾಗಿ ಗೀತೆಯ ಮೂಲಕ ಹಾಡಿ ಮಳೆರಾಯನನ್ನು ಆಹ್ವಾನಿಸುತ್ತಾರೆ. ಈ ಗೀತೆಯಲ್ಲಿ ಕಪ್ಪೆಗಳು ಕುಪ್ಪಳಿಸುವುದನ್ನು ಮಳೆರಾಯನ ಆಗಮನದ ಸಾಂಕೇತವಾಗಿ ಬಳಸಲಾಗಿದೆ. ಹಾಗೂ ಕಪ್ಪೆ ಕುಪ್ಪಳಿಸುವುದು ಮತ್ತು ಶಬ್ದಮಾಡುವುದು ಆಗಮನದ ಸಂಕೇತ ಎಂಬ ನಂಬಿಕೆ ಇವರಲ್ಲಿ ರೂಢಿಯಲ್ಲಿದೆ. ಇದೇ ರೀತಿಯಾಗಿ ಮಳೆರಾಯನನ್ನು ಕುರಿತು ಮತ್ತೊಂದು ಹಾಡನ್ನು ಈ ಕೆಳಗಿನಂತೆ ಲಂಬಾಣಿಗಳು ಹಾಡುವರು.

''ಪಾಣಿ ಪಾವಸ ಪಡ ಮಾರ ಜಾ
ಡೊರಿನ ಡೋಕರ ಲಡ್ ಮಾರಾಜ
ಡಾಕಣಿ ಆಟೊ ವಾಜಳ ಪಾಟೋ
ಬುಡೆಸೋ ಡೋಕರ ಖೇತೇನ ದಾಸೋ''

ಈ ಹಾಡಿನಲ್ಲಿಯೂ ಸಹ ಲಂಬಾಣಿಗರು ಮಳೆರಾಯನನ್ನು ಆಹ್ವಾನಿಸುತ್ತಿರುವುದನ್ನು ಇಲ್ಲಿ ನಾವು ಕಾಣಬಹುದಾಗಿದೆ. 'ಡೂಕರಿ ಡೋಕರ ಲಡ್ ಮಾರಾಜ್' ಅಂದರೆ ಗುಡುಗು ಸಿಡಿಲುಗಳನ್ನು ಸಾಂಕೇತಿಸುವ ರೀತಿಯಲ್ಲಿ ಹಾಗೂ 'ಡಾಕಣಿ ಆಟೂವಾಜಳ ಪಾಟೋ'' ಎಂಬ ಪದಗಳು ದಟ್ಟವಾದ ಮೋಡಗಳು ಬಯಲಾಗುವುದನ್ನು ಸೂಚಿಸುವ ಸಂಕೇತಗಳಾಗಿ ಬಳಸಲಾಗಿದೆ. ಗುಡುಗು ಸಿಡಿಲುಗಳ ಆರ್ಭಟದ

ಮಳೆಗೆರೆಯುವಂತೆ ಹಾಗೂ ಈ ರೀತಿಯ ಮಳೆಯಿಂದಾಗಿ ರೈತನು ಬಿತ್ತುವುದಕ್ಕಾಗಿಯೂ ಹೊಲಕ್ಕೆ ಓಡುತ್ತಾನೆ ಎಂದು ಭಾವ ಬರುವಂತ ಈ ಗೀತೆಯನ್ನು ರಚಿಸಿಲಾಗಿದೆ.

೪. **ಗಂಡಸರ ಕೋಲಾಟ ಹಾಗೂ ಮೇಳ ಗೀತೆಗಳು :** ಲಂಬಾಣಿ ಪುರಷರ ಏಕೈಕ ಪ್ರಾಚೀನ ನರ್ತನವೆಂದರೆ ಕೋಲಾಟ. ಈ ಕೋಲಾಟವನ್ನು ಹೋಳಿಹಬ್ಬ ಇಲ್ಲವೆ ಸಂಜೆಯ ವೇಳೆ ಮನೆ ಅಂಗಳದಲ್ಲಿ ತಾಂಡಾದ ಯುವಕರೆಲ್ಲರು ಸೇರಿ ಕೋಲಾಟದ ಜೊತೆಗೆ ಗೀತೆಗಳನ್ನು ಹಾಡುತ್ತಾರೆ.

ಮೇಳಗೀತೆಗಳು ಲಂಬಾಣಿ ಜನಾಂಗದಲ್ಲಿ ಹೆಚ್ಚು ಪ್ರಸಿದ್ಧಿಯಲ್ಲಿವೆ. ಈ ಮೇಳ ಗೀತೆಯ ಕಥನ, ಕವನ, ಪುರಾಣಗಳೂ, ಕಾವ್ಯಗಳೂ, ಲಾವಣಿಗಳ ರೂಪದಲ್ಲಿರುತ್ತವೆ. ಇವುಗಳನ್ನು ಹಬ್ಬ-ಹರಿದಿನಗಳಲ್ಲಿ ದೇವಾಲಯಗಳಲ್ಲಿ ಜಾಗರಣೆ ಮಾಡುವ ಸಂದರ್ಭಗಳಲ್ಲಿ ಹಾಡಲಾಗುತ್ತದೆ. ಈ ಗೀತೆಗಳನ್ನು ಸಾಂಪ್ರದಾಯಿಕ ವಾದ್ಯಗಳಾದ ನಗಾರಿ, ಕಂಚಿನ ಗಂಗಾಳ ಬಾರಿಸುತ್ತಾ ಎತ್ತರವಾದ ಧ್ವನಿಯಲ್ಲಿ ಹಾಡುತ್ತಾರೆ.

''ಇತ್ತೀಚಿನ ದಿನಗಳಲ್ಲಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಹೊಸಪೇಟೆ, ಸಂಡೂರು, ಬಳ್ಳಾರಿ ಮತ್ತು ಸಿರುಗುಪ್ಪದಲ್ಲಿ ಲಂಬಾಣಿ ತಾಂಡಾಗಳಿಲ್ಲ. ತಾಂಡಾಗಳಿಗೆ ಈ ಮೇಳಗಳ ಸದಸ್ಯರನ್ನು ಕರೆಯಿಸಿ ಅವರಿಂದ ಹಾಡುಗಳನ್ನು ಕೇಳಿ ಆನಂದಿಸುತ್ತಾರೆ. ಹೊಸದಾಗಿ ರಚಿಸಲ್ಪಟ್ಟಿರುವ ಮೇಳ ಗೀತೆಗಳ ಹಾಡುಗಳು ಕೇವಲ ಸ್ವಾರಸ್ಯಕರವಾಗಿದ್ದ, ಹಾಸ್ಯವನ್ನು ಒಳಗೊಂಡಿರುತ್ತವೆ. ಈ ಮೇಳ ಗೀತೆಗಳಲ್ಲಿಯೂ ಸಾಂಪ್ರದಾಯಿಕವಾಗಿ ಬಳಸಲ್ಪಡುವ ನಗಾರಿ, ಕಂಚಿನ ಗಂಗಾಳ ಇತ್ಯಾದಿಗಳು ಬಳಸಲ್ಪಡುತ್ತವೆ.'' ಇವಲ್ಲದೆ ಸಂಸ್ಕಾರ ಗೀತೆಗಳು, ರಾಗಿ ಬೀಸುವ ಹಾಡುಗಳು, ಮಕ್ಕಳ ಗೀತೆಗಳು, ಶ್ರಮ ಪರಿಹಾರ ಗೀತೆಗಳು, ಹೀಗೆ ಹಲವಾರು ಗೀತೆಗಳನ್ನು ಲಂಬಾಣಿ ಜನಪದವು ಒಳಗೊಂಡಿರುತ್ತದೆ.[೮]

**ಪಡೆನುಡಿಗಳು:** ಪಡೆನುಡಿ ಎಂಬ ಪದಕ್ಕೆ ಮಾತನ್ನು ಜೋಡಿಸು, ಒಕ್ಕಣೆ, ನುಡಿಗಟ್ಟುಗಳು ಮುಂತಾದ ಅರ್ಥಗಳಿವೆ. ಭಾಷೆಯು ಮಾನಸಿಕ ಅಂತರಾಳವನ್ನು ಅಭಿವ್ಯಕ್ತಿಪಡಿಸುವ ಒಂದು ಸಾಧನವಾಗಿದ್ದು ಇದರ ಪ್ರತಿಯೊಂದು ಶಬ್ದವು ಒಂದು ನಿಶ್ಚಿತವಾದ ಅರ್ಥವನ್ನು ಪಡೆದಿರುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ವಿಶೇಷ ಅರ್ಥವನ್ನು ಪಡೆದುಕೊಳ್ಳುತ್ತದೆ. ನಮ್ಮ ದೈನಂದಿನ ವ್ಯವಹಾರವನ್ನು ಸುಗಮಗೊಳಿಸಲು ಅನೇಕ ವಿಶಿಷ್ಟ ಪದಗಳನ್ನು ಹಾಗೂ ಶಬ್ದ ಸಮುಚ್ಚಯಗಳನ್ನು ಬಳಸುತ್ತೇವೆ. ಇವುಗಳನ್ನು ಜನರು ಸಂದರ್ಭಕ್ಕೆ ತಕ್ಕಂತೆ ಹಿತಮಿತವಾಗಿ ಹದವರಿತು ಬಳಸಿದಾಗ ಮಾತ್ರ ಅದಕ್ಕೆ ಒಂದು ರೀತಿಯ ಸತ್ವ ಬರುತ್ತದೆ. ಅಂತೆಯೇ ನಮ್ಮ ಜನಪದರು ತಾವು ಬಳಸುವ ಭಾಷೆಗೆ ಮೆರಗು ಬರಲು ಅನೇಕ ಬಗೆಯ ವಿಶೇಷಣ, ದುಷ್ಟಾಂತ, ಗಾದೆಮಾತು, ನುಡಿಗಟ್ಟುಗಳು, ಒಗಟುಗಳನ್ನು ಉಪಯೋಗಿಸಿಕೊಂಡು ಬಂದಿದ್ದಾರೆ. ಅನವಶ್ಯಕ ಶಬ್ದಗಳ ಬಳಕೆಯು ಭಾಷೆಗಳನ್ನು ಅನರ್ಥಗೊಳಿಸುತ್ತದೆ. ಹೀಗಾಗಿ ಚಿಕ್ಕ ಶಬ್ದಗಳು ಬಳಕೆಯ ಮೂಲಕ ಹಿರಿದಾದ ಅರ್ಥವನ್ನು ಹುದುಗಿಸಿ ಹೇಳುವುದು ವ್ಯಕ್ತಿಯ ಚಾತುರ್ಯ, ಜಾಣ್ಮೆಯನ್ನು ಅಭಿವ್ಯಕ್ತ ಪಡಿಸುತ್ತದೆ.

ಒಂದು ಭಾಷೆಯು ಬೆಳವಣಿಗೆಯಾಗಲು ಪ್ರೇರಕವಾದ ಅನೇಕ ಲಕ್ಷಣಗಳನ್ನು ಪಡೆನುಡಿಗಳು ಹೊಂದಿರುತ್ತವೆ. ಭಾಷೆಯನ್ನು ತನ್ನ ಒಡಲಲ್ಲಿ ತುಂಬಿಕೊಂಡಿರುವ ಜನಪದ ಸಂಪತ್ತು ಮತ್ತು ಆ ಜನರು ಅದನ್ನು ಬಳಸಿಕೊಳ್ಳುವ ವಿಧಾನದ ಮೇಲೆ ಅದರ ಹಿರಿಮೆ-ಗರಿಮೆಗಳನ್ನು ಗುರುತಿಸಲಾಗುವುದು. ಲಂಬಾಣಿ ಭಾಷೆಯು ಅದರ ಜನಪದ ಸಂಪತ್ತಿನಿಂದಾಗಿ ಅದೊಂದು ಜೀವಂತ ಭಾಷೆಯಾಗಿದ್ದು ಲಿಪಿಕ ಭಾಷೆಯಲ್ಲಿರುವಂತಹ ಎಲ್ಲಾ ಬಗೆಯ ಜನಪದ ಪ್ರಕಾರಗಳನ್ನು ಈ ಭಾಷೆಯಲ್ಲಿ ಗುರುತಿಸಬಹುದಾಗಿದೆ.

ಸುಖ-ಸಂತೋಷ, ನೋವು-ನಲಿವು ಇತ್ಯಾದಿಗಳನ್ನು ಜನಪದರು ಸಂಭಾಷಿಸುವಾಗ ಮಧ್ಯದಲ್ಲಿ ಅರ್ಥವತ್ತಾಗಿ ಒಂದು ಅಥವಾ ಹಲವಾರು ಪದಗಳನ್ನು ಜೋಡಿಸಿ ವಾಕ್ಯಗಳನ್ನು ರಚಿಸುತ್ತಾರೆ. ಈ ಸಂದರ್ಭಗಳಲ್ಲಿ ಪಡಿನುಡಿಗಳು ರೂಪುಗೊಳ್ಳುತ್ತದೆ. ಭಾಷೆಯ ಮಧ್ಯದಲ್ಲಿ ಪಡೆನುಡಿಗಳ ಬಳಕೆಯಿಂದ ಭಾಷೆಗೆ ತೀಕ್ಷ್ಣತೆ, ಸೊಬಗು, ಸೌಂದರ್ಯ ಪ್ರಾಪ್ತವಾಗುತ್ತದೆ. ಜನಪದ ವಾಕ್ ಚಾತುರ್ಯವು ಪಡೆನುಡಿಗಳ ಉಗಮದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಭಾಷೆಯನ್ನು ಅತ್ಯಂತ ಚತುರತೆಯಿಂದ ಶಕ್ತಿಶಾಲಿಯಾಗಿ ಬಳಸುವ, ಲಂಬಾಣಿಗರು ಮಾತಿನ ಜಾಣ್ಮೆಯನ್ನು ಅದರ ಪಡೆನುಡಿಗಳಲ್ಲಿ ಕಾಣಬಹುದಾಗಿದೆ. ಕೆಲವೊಂದು ಉದಾಹರಣೆಯೊಂದಿಗೆ ಇದನ್ನು ಅರಿಯಬಹುದು.

* ಥಕಡಾರ್ ತೀನಜ್ ಪಾನ್: ಮುತುಗಕ್ಕೆ ಮೂರೆ ಎಲೆ : ಬದಲಾಗದಿರುವ ಸ್ಥಿತಿಯನ್ನು ತಿಳಿಸುವ ಪಡೆನುಡಿ ಇದಾಗಿದ್ದು ಎಷ್ಟೇ ಪ್ರಯತ್ನ ಮಾಡಿದರು ಪ್ರಾಕೃತಿಕ ನಿಯಮಗಳನ್ನು ಬದಲಿಸಲು ಸಾದ್ಯವುಗುವುದಿಲ್ಲವೆಂದು ಹೇಳುವ ಸಂದರ್ಭದಲ್ಲಿ ಈ ಪಡೆನುಡಿಯನ್ನು ಬಳಸುತ್ತಾರೆ.
* ಚೂಲೆಮ ಪಾಣಿ: ಒಲೆಯಲ್ಲಿ ನೀರು ಸುರಿ : ಹಿಂಸೆ ಕೊಡುವುದು, ತೊಂದರೆಯನ್ನು ಕೊಡುವುದು.
* ಚೂಲೆಮಾ ನೂಣ್: ಒಲೆಯಲ್ಲಿ ಉಪ್ಪು ಸುರಿ : ವಿನಾಕಾರಣ ತೊಂದರೆ ಕೊಡುವುದು.
* ಮಾತೆಪರ್ ಲಿಂಬು ಕಾಟ್: ತಲೆಯ ಮೇಲೆ ನಿಂಬೆಹಣ್ಣನ್ನು ಕೊಯ್ಯುವುದು : ಎದುರಾಳಿಯನ್ನು ಮೀರಿಸುವ ಜಾಣ್ಮೆ ಶಕ್ತಿಯಿದ್ದು ನಿಪುಣತೆಯನ್ನು ಹೇಳುವ ಸಂದರ್ಭದಲ್ಲಿ ಈ ಪಡೆನುಡಿಯನ್ನು ಬಳಸುತ್ತಾರೆ.
* ಹಾತೇಮ ಪುಟ್ಲಿಹಾಂಡಿ : ಕೈಯಲ್ಲಿ ಹೊಡೆದಮಡಿಕೆ : ಈ ಪಡೆನುಡಿ ತೀರ ನಿರ್ಗತಿಕ ಹತಾಯ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ.
* ಗಾಮೇರ್ ಗೇತ್ಲ : ಗ್ರಾಮಗಳಲ್ಲಿ ರೂಢಿಯಾದವನು : ಲಂಬಾಣಿ ಸಮುದಾಯದ ತಾಂಡಗಳಲ್ಲಿ ಬೆಳೆಯದೆ ಇತರ ಗ್ರಾಮಗಳಲ್ಲಿ ಬೆಳೆದು ಅಲ್ಲಿಯ ಸಂಸ್ಕೃತಿಯನ್ನು ರೂಢಿಸಿಕೊಂಡಾಗ ಈ ಮಾತನ್ನು ಬಳಸುತ್ತಾರೆ.
* ಕಲ್ಡಿಮಾ ಕರಲೀನ್ ಕುಚ್ಚಿನು ಖೊ : ಮಡಿಕೆಯಲ್ಲಿ ಬೇಯಿಸಿಕೊಂಡು ಚಿಕ್ಕ ತಟ್ಟೆಯಲ್ಲಿ ಉಣ್ಣುವುದು: ವ್ಯಕ್ತಿಯ ಅತ್ಯಂತ ಸಂಕುಚಿತ ಮನೋಭಾವವನ್ನು ಕುರಿತು ಹೇಳುವುದು. ಚಿಕ್ಕ ಕುಟುಂಬದ ಬದುಕನ್ನು ಸಹ ಈ ಮಾತು ವಿಡಂಬಿಸುತ್ತದೆ.

* ನಾಕೆಪರ್ ಮಾಕಿ ಬೆಸೆಸಾಸರು ಛೇನಿ : ಮೂಗಿನ ಮೇಲೆ ನೊಣ ಕುಳಿತು ಕೊಳ್ಳುವಂತಿಲ್ಲ. ಮುಂಗೋಪಿ ಸ್ವಭಾವದವನು ಈ ಪಡೆನುಡಿ ಸೂಚಿಸುತ್ತದೆ.

* ಚೂಲೇರ್ ತೀನಬ್ ಮಂಗಾಳ : ಒಲೆಗೆ ಮೂರು ಕಲ್ಲುಗಳನ್ನು ಬಳಸಿಕ ಹೊಲೆಯನ್ನು ಹೂಡುತ್ತಾರೆ. ಮೂರಕ್ಕಿಂತ ಅಧಿಕವಾಗಲಿ ಇಲ್ಲವೆ ಕಡಿಮೆಯಾಗಲಿ ಬಳಸಲು ಸಾಧ್ಯವಿಲ್ಲ. ಬದಲಾಗದ ಸ್ಥಿತಿಯನ್ನು ಹೇಳುವಾಗ ಈ ಮಾತನ್ನು ಬಳಸುತ್ತಾರೆ.

* ಛಾತೀಪರ್ ಹುಬರ್ : ಎದೆಯ ಮೇಲೆ ನಿಲ್ಲು, ಅತಿ ಅವಸರ ಪಡಿಸು.

* ಅಂಗಾರ್ ಲಗಾಡವಾಳ್ : ಬೆಂಕಿ ಹಚ್ಚುವವರು ವೈಶಮ್ಯ ಹುಟ್ಟಿಸು, ರೇಗಿಸು

* ನುಣಿ ಲಗಾಡೆವಾಳ್ : ಬೆಣ್ಣೆಹಚ್ಚು : ಉಪಾಯದಿಂದ ಕೆಲಸ ಮಾಡಿಸಿಕೋ

* ನಾಕಿನ್ ಜೀಬ್ ಲಗಾಡ್ : ಮೂಗಿಗೇ ನಾಲಿಗೆ ಹೆಚ್ಚು, ಸತ್ಯವನ್ನು ಹೇಳು

* ದೀ ಜೀಬೆವಾಳು : ಎರಡು ನಾಲಿಗೆ ಉಳ್ಳವ; ನುಡಿದಂತೆ ನಡೆಯುವ

* ಅಂಕೀಮ ಧೂಡ್ ಘಾಲೆವಾಳ್ : ಕಣ್ಣಿಗೆ ಮಣ್ಣೆರಚುವವರು, ಮೋಸ ಮಾಡುವವರು.

ಹೀಗೆ ಲಂಬಾಣಿಗಳ ಸಂಸ್ಕೃತಿ ಬದುಕನ್ನು ಬಿಂಬಿಸುವ ಹಲವಾರು ಪಡೆನುಡಿಗಳು ಅವರಲ್ಲಿ ರೂಢಿಯಲ್ಲಿದ್ದು, ಇವುಗಳಲ್ಲಿ ಅಗಾಧವಾದ ಅರ್ಥ ಅಡಗಿದ್ದು ಅವುಗಳ ಬಳಕೆಯು ಲಿಪಿಯಿಲ್ಲದ ಕೊರತೆಯನ್ನು ತುಂಬುವುದರಲ್ಲಿ ಯಶಸ್ವಿಯಾಗಿದೆ.

ಲಂಬಾಣಿ ಜನಪದವು ಹೀಗೆ ಶ್ರೀಮಂತ ಮಾರ್ಗದಲ್ಲಿ ಬೆಳೆದಿದ್ದು ಅದರ ಪ್ರತಿಯೊಂದು ಪ್ರಕಾರಗಳ ವೈಶಾಲ್ಯತೆಯನ್ನು ನಿರೂಪಿಸುವುದರಲ್ಲಿ ಪ್ರಬಂಧ ಚೌಕಟ್ಟು ಹೊರತಾಗಿದೆ. ಕಾರಣ ಈ ಪ್ರಬಂಧವು ಸಾಂಸ್ಕೃತಿಕ ಮೌಲ್ಯಗಳ ಜೊತೆಗೆ ಮಹಿಳೆಯರು ಮತ್ತು ಧರ್ಮಕ್ಕೆ ಹೆಚ್ಚು ಒತ್ತುಕೊಟ್ಟಿದ್ದು ಜನಪದವನ್ನು ಸಮಗ್ರವಾಗಿ ವಿಶ್ಲೇಷಿಸುವುದು ಅಸಾಧ್ಯವಾದರೂ ಅದನ್ನು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಕೇವಲ ಸಾಂಸ್ಕೃತಿಕ ಮೌಲ್ಯಗಳ ದೃಷ್ಟಿಯಿಂದ ಕೆಲವು ಪ್ರಮುಖ ಅಂಶಗಳನ್ನು ಮಾತ್ರ ವಿವೇಚಿಸಲಾಗಿದೆ. ಆದ್ದರಿಂದ ಇವರ ಮೌಖಿಕ ಜನಪದದಲ್ಲಿ ಉಳಿದುಬಂದಿರುವ ಸಮಗ್ರ ಸಾಹಿತ್ಯವು ಇನ್ನೂ ಸಮಗ್ರವಾಗಿ ಸಂಗ್ರಹವಾಗಬೇಕಾಗಿದ್ದು ಅವರ ವೈಜ್ಞಾನಿಕ ಅಧ್ಯಯನ ತೀರ ಅಗತ್ಯವಾಗಿದೆ.

**ಸೇವಾಭಾಯಾ: ಕಥನ ಕಾವ್ಯ**

ಸುಮಾರು ೩೦೦-೪೦೦ ವರ್ಷಗಳ ಹಿಂದೆ (ಕ್ರಿ.ಶ.೧೬-೧೭) ಲಂಬಾಣಿಗರು ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರು. ಇಂಥ ವ್ಯಾಪಾರ ತಂಡಗಳಲ್ಲಿ ಸೇವಾ ಭಾಯನ ತಂದೆ ಭೀಮನಾಯ್ಕ ಬಹುದೊಡ್ಡ ವ್ಯಾಪಾರಿಯಾಗಿದ್ದರು. ಭೀಮನಾಯ್ಕನ ತಂದೆ ರಾಂಜಿನಾಯ್ಕ ಭಾರೀ ಶ್ರೀಮಂತ ಮನೆತನಕ್ಕೆ ಸೇರಿದವನು. ಅವನ ಬಳಿಯಲ್ಲಿ ೩.೭೫೧ ರಾಸುಗಳಿದ್ದವೆಂದು ತಿಳಿದುಬರುತ್ತದೆ.

ಈ ರಾಮಜಿನಾಯಕನಿಗೆ ಭೀಮ, ಖೇಮ ಮತ್ತು ಹೇಮಾ ಎಂಬ ಮೂರು ಜನ ಮಕ್ಕಳು. ಮುಂದೆ ಭೀಮನಾಯ್ಕನಿಗೆ ಮದುವೆ ಮಾಡಲು ಕರ್ನಾಟಕದ ಲಂಬಾಣಿ ತಾಂಡಗಳಲ್ಲೆಲ್ಲ ಕನ್ಯಾನ್ವೇಷಣೆ ಮಾಡಲಾಗಿ, ಎಲ್ಲೂ ಒಳ್ಳೇ ಸಂಬಂಧ ಒದಗಿಬರಲಿಲ್ಲವಾದ್ದರಿಂದ ಮಹಾರಾಷ್ಟ್ರದ ಚಿತ್ತೂರುಗಡ(ಚಿತೌಡಗಡ)ದ ಸಾಧಾರಣ ಮನೆತನದ ಜೇರಾಮ ಜಾಧವರ ಮಗಳು ಧರ್ಮಿಣಿಬಾಯಿಯೊಡನೆ ಒಳ್ಳೇ ಸಂಬಂಧ ಕೂಡಿ ಬಂದು ಅವಳೊಂದಿಗೆ ಮದುವೆ ಮಾಡಿದರು.

ಭೀಮನಾಯ್ಕನಿಗೆ ಧರ್ಮಿಣಿಬಾಯಿಯೊಡನೆ ಮದುವೆಯಾಗಿ ೪೦ ವರ್ಷಗಳ ದಾಂಪತ್ಯ ಜೀವನವನ್ನು ಕಳೆದರೂ ಸಂತಾನ ಪ್ರಾಪ್ತಿಯಿಲ್ಲದೆ ಬಂಜೆ ಎನ್ನುವ ಲೋಕಾಪವಾಡವನ್ನು ಹೊತ್ತು ಕೆಲಕಾಲ ಕೊರಗಿದರು. ಮುಂದೆ ದೃಢ ಸಂಕಲ್ಪದಿಂದ ಭೀಮನಾಯ್ಕರು ಸಂತಾನ ಪ್ರಾಪ್ತಿಗಾಗಿ ೧೨ ವರ್ಷ ತಪಸ್ಸನ್ನಾಚರಿಸಿದರು. ತತ್ಪರಿಣಾಮವಾಗಿ ಮರಿಯಮ್ಮ(ಮಾರಿಕಾಂಬೆ) ಪ್ರತ್ಯಕ್ಷಳಾಗಿ ಅಭಯ ನೀಡಿದಳು. ಭೀಮನಾಯ್ಕನಿಗೆ ಹುಟ್ಟುವ ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯವನನ್ನು ತನ್ನ ಸೇವಕ(ಭಗತ)ನನ್ನಾಗಿ ಮಾಡಬೇಕೆಂದು, ಅವನಿಗೆ 'ಸೇವಾ' ಎಂಬ ಹೆಸರಿಡಬೇಕೆಂದೂ ಪ್ರತಿಜ್ಞೆ ಮಾಡಿಸಿಕೊಂಡಳು. ಮರಿಯಮ್ಮ ವರಪ್ರಾಪ್ತಿಯಂತೆ ಧರ್ಮಿಣಿ ಮಾತಾಳಿ ಪವಿತ್ರ ಗರ್ಭದಿಂದ ಸಂಸಾರವನ್ನು ಉದ್ಧರಿಸಲು ಸೇವಾಲಾಲರ ಜನ್ಮವಾಯಿತು.

ಶ್ರೀ ಸೇವಾಭಾಯನ ಜನ್ಮಸ್ಥಳದ ಬಗೆಗೆ ಹಲವು ಭಿನ್ನಾಭಿಪ್ರಾಯಗಳಿವೆ. ಕರ್ನಾಟಕದ ಮಂಗಳೂರಿನ ಸಮೀಪದಲ್ಲಿರುವ ಗುತ್ತಿವಲ್ಲಾರಿಯು ಸೇವಾಭಾಯನ ಜನ್ಮಸ್ಥಳವಾಗಿದೆ ಎಂಬುದು ಒಂದು ಅಭಿಪ್ರಾಯವಾದರೆ, ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲೂಕಿನ ಪಶ್ಚಿಮಕ್ಕಿಂತ ಸೂರಗೊಂಡನ ಕೊಪ್ಪವೇ ಅವನ ಜನ್ಮ ಸ್ಥಳವಾಗಿದೆ ಎಂಬುದು ಈಚಿನ ಇನ್ನೊಂದು ಅಭಿಪ್ರಾಯವಾಗಿದೆ. ಸೂರಗೊಂಡು ಕೊಪ್ಪವೇ ಸೇವಾಬಾಯನ ಜನ್ಮಸ್ಥಳವೆಂಬುದಕ್ಕೆ ಈ ಕೆಳಗಿನ ಕೆಲವು ಆಧಾರಗಳು ಪುರಾವೆ ಒದಗಿಸುತ್ತವೆ.

ಲಂಬಾಣಿ ಜನಪದ ಗೀತೆಗಳಲ್ಲಿ

''ಕೊಟ್ಟೂರ್ ಗಾಮೇತಿ ಭಿಮರೊ ತಾಂಡೊ ಲಾದು
ಮಲೆ ಬೆನ್ನೂರ್ ತಾರೊ ಠಾಣೊ
ಸೂರನ ಕೊಪ್ಪಮ ಸೇವಾ ಜನಮಲೀದೊ''

(ಕೊಟ್ಟೂರು ಗ್ರಾಮದಿಂದ ಭೀಮನಾಯ್ಕರ ತಾಂಡ ಗುಳೆ ಹೋಯಿತು. ಮಲೆಬೆನ್ನೂರ್ ತಮ್ಮ ಠಾಣೆಯಾಗಿದೆ. ಸೂರನ್ ಕೊಪ್ಪದಲ್ಲಿ ಸೇವಾಭಾಯ ಜನ್ಮ ಪಡೆದನು.)

ಲಂಬಾಣಿ ಜನಪದ ಕಥನ ಗೀತೆಗಳಲ್ಲಿ ಬರುವ ಜೀನಿಪಟ್ಟಿ, ಚೀನಾ ಪಟ್ಟ(ಈಗಿನ ಚಿನಿಕಟ್ಟೆ), ಬೆಳಗುತ್ತಿ (ಈಗಿನ ಬೆಳೆಗುತ್ತಿ) ಸೂರಗೊಂಡನ ಕೊಪ್ಪದ ಸುತ್ತಲಿನ ಪ್ರದೇಶಗಳಾಗಿರುವುದರಿಂದ ಸೇವಾಭಾಯನ ಜನ್ಮ ಸ್ಥಳ ಇದೇ ಆಗಿರುವುದರಲ್ಲಿ ಸಂದೇಹವಿರಲಾರದು. ಈ ಸ್ಥಳವನ್ನು ಪರಿವೀಕ್ಷಣೆ ಮಾಡಿರುವ ಮಹಾರಾಷ್ಟ್ರದ ಪೌರದೇವಿಯ ಜಗದ್ಗುರುಗಳೂ, ಸೇವಾಲಾಲನ ೭ನೇ ಅವತಾರ ಪುರುಷವೆನ್ನಲಾಗುವ ಶ್ರೀ

ರಾಮರಾವ್ ಮಹಾರಾಜರೂ ಸೂರಗೊಂಡನ ಕೊಪ್ಪವೇ ಸೇವಾ ಭಾಯನ ಜನ್ಮಸ್ಥಳವಾಗಿದೆ ಎಂಬುದನ್ನು ದೃಢೀಕರಿಸುತ್ತಾರೆ.

ಹಲವು ವರ್ಷಗಳ ಹಿಂದೆ ಇಲ್ಲಿಯ ಗುಡ್ಡಗಾಡಿನಲ್ಲಿ ದನಕರುಗಳನ್ನು ಮೇಯಿಸುತ್ತ ಕೊಳಲೂದುತ್ತ ಒಬ್ಬ ಬಂಜಾರ ಜನಾಂಗದ ಸಂತ ಇದ್ದನೆಂದೂ, ಜೀವನದಲ್ಲಿ ಯಾವ ವಿಷಯದಲ್ಲೂ ಆಸಕ್ತಿ ಇಲ್ಲದೆ ತನ್ನ ದನಕರು ಮತ್ತು ಕುದುರೆಯೊಂದಿಗೆ ಎತ್ತರವಾದ ಸ್ಥಳದಲ್ಲಿ ಕೆಲವೊಮ್ಮೆ ಊಟ, ನೀರು, ನಿದ್ರೆ ಮರೆತು ಧ್ಯಾನಮಗ್ನನಾಗಿ ಕಾಲ ಕಳೆಯುತ್ತಿದ್ದನೆಂಬುದು ಸೂರಗೊಂಡನ ಕೊಪ್ಪದ ಸುತ್ತಲಿನ ಅನುಭವಿಕರ ಹೇಳಿಕೆಯಾಗಿದೆ.

ಹಾಗೆಯೇ ವಿಶ್ವದಾದ್ಯಂತ ಪರ್ಯಟನ ಮಾಡಿರುವ ಬಂಜಾರಾ ಶೋಧಕ, ವಿದ್ವಾಂಶ, ಅನುಭವಿ, ಸಮಾಜ ಸೇವಕ, ವಿಶ್ವ ಬಂಜಾರಾ ಶೋಧ ಪೀಠದ ಸಂಸ್ಥಾಪಕ ಅಧ್ಯಕ್ಷರೂ ಆಗಿರುವ ಮಹಾರಾಷ್ಟ್ರದ ಶ್ರೀ ರಾಮಸಿಂದ್ ಭಾನಾವತ್ ಅವರ ಅಭಿಮತವೂ ಸೂರಗೊಂಡನ ಕೊಪ್ಪವೇ ಶ್ರೀ ಸೇವಾ ಲಾಲರ ಜನ್ಮಸ್ಥಳವೆಂಬುದನ್ನು ಪುಷ್ಟಿಕರಿಸುತ್ತದೆ.

ಸೇವಾಭಾಯ ಹುಟ್ಟಿನಿಂದಲೇ ದೈವಾಂಶ ಸಂಭೂತ, ದೈವಭಕ್ತನಾಗಿದ್ದು ತುಂಬಾ ತೇಜಃಪುಂಜನಾಗಿದ್ದ. ತಮ್ಮ ಸಾವಿರಾರು ರಾಸುಗಳನ್ನು ಸೂರಗೊಂಡನ ಕೊಪ್ಪದ ಗುಡ್ಡಗಾಡಿಗೆ ಹೊಡೆದುಕೊಂಡು ಹೋಗಿ ದಿನವಿಡಿ ಅವುಗಳನ್ನು ಮೇಯಿಸಿಕೊಂಡು ಕೊಳಲೂದುತ್ತ ತಿರುಗುವುದೆಂದರೆ ಅವನಿಗೆ ಎಲ್ಲಿಲ್ಲದ ಸಂತೋಷ. ಅವನೊಂದಿಗೆ ಸತ್ಯಾ ಮತ್ತು ಪಟ್ಯಾ ಎಂಬಿಬ್ಬರು ದನಗಾಹಿಗಳಿದ್ದರು. ಜೊತೆಗೆ ತೋಳರಾಮ ಹೆಸರಿನ ಕುದುರೆ, ಗರಸ್ಯಾಸಾಂಡ್ ಹೆಸರಿನ ಹೋರಿಗಳಿದ್ದವು. ಈ ಹೋರಿಯು ದನಗಳ ಹಿಂಡನ್ನು ಹುಲ್ಲು, ನೆರಳು, ನೀರು ದೊರಕುವ ಕಡೆಗೆ ಕರೆದೊಯ್ಯುತ್ತಿತ್ತು. ಅಲ್ಲದೆ ಅಪಾಯದ ಸ್ಥಳಗಳಿಗೆ ಹೋಗುವುದನ್ನು ತಡೆಯುತ್ತಿತ್ತು.

ಭಕ್ತ, ಬ್ರಹ್ಮಚಾರಿ ಸೇವಾಭಾಯ ಇಪ್ಪತ್ತು ವರ್ಷಗಳವರೆಗೆ ಮರಿಯಮ್ಮನ ಸೇವೆ ಮಾಡಿ ಸಾಕಷ್ಟು ಪ್ರಭಾವಶಾಲಿಯಾದನು. ಲಂಬಾಣಿ ಜನ ಮರಿಯಮ್ಮನನ್ನು ಬಿಟ್ಟು ಸೇವಾಭಾಯನ ಪ್ರಭಾವಕ್ಕೊಳಗಾದರು. ಅವನೇ ತಮ್ಮ ಗುರುವೆಂದು ನಂಬಿ ನಡೆದರು. ಇದರಿಂದ ಕೂಪಿತಳಾದ ಮರಿಯಮ್ಮ ಸೇವಾಭಾಯನ ಬ್ರಹ್ಮಚಾರಿ ವ್ರತವನ್ನು ಮುರಿಯಲು ಪ್ರಯತ್ನಿಸಿದಳು. ಸೇವಾಭಾಯ ತನ್ನ ದೃಢನಿರ್ಧಾರವನ್ನು ಬದಲಿಸಲಿಲ್ಲ. ಪ್ರಪಂಚದಲ್ಲಿರುವ ಎಲ್ಲಾ ಲಂಬಾಣೀ ಹೆಣ್ಣುಗಳಿಗೆ ತಾನು 'ಭಾಯಿ'(ಅಣ್ಣ, ತಮ್ಮ) ಆಗಿರುವುದರಿಂದ ತನ್ನ ಹಣೆಬರಹದಲ್ಲಿ ಮದುವೆ ಎಂಬುದೇ ಬರೆದಿಲ್ಲವೆಂದು ದೇವಿಯೊಂದಿಗೆ ವಾದಿಸಿದನು. ತಾನು 'ಬಾಲ ಬ್ರಹ್ಮಚಾರಿ, ರಾಮ ಅವತಾರಿ, ತನಗೆ ಮದುವೆ ಸಲ್ಲದು' ಎಂದು ಹೇಳಿದ. ಕೊನೆಗೆ ಮರಿಯಮ್ಮ ತುಂಬಾ ಅವಮಾನಿತಳಾದಳು.

ಶ್ರೀ ಶಕ್ತಿ ಮರಿಯಮ್ಮದೇವಿಯ ಇಚ್ಛಾನುಸಾರ ಮಹಾರಾಷ್ಟ್ರ ಸೇವೆಯ ಈಗಿನ ಅಂಕೋಲ ಜಿಲ್ಲೆಯ 'ಪೌರಗಡ' (ಪೌರದೇವಿ) ಎಂಬಲ್ಲಿ ಸೇವಾಭಾಯ ತನ್ನ ದೇಹತ್ಯಾಗವನ್ನು ಮಾಡಿದನು. ಅಲ್ಲಿ ಅವನಿಗೆ

ಗಂಧದ ಕಟ್ಟಿಗೆ ಹಾಗೂ ಬೇವಿನ ಕಟ್ಟಿಗೆಯಲ್ಲಿ ತುಪ್ಪ ಸುರಿದು ಅಂತ್ಯಸಂಸ್ಕಾರವನ್ನು ಮಾಡಲಾಯಿತು. ಸುಟ್ಟುಕೊಳ್ಳುತ್ತಲೇ ಬೆಂಕಿಯ ಮಧ್ಯದಿಂದ ಸೇವಾಲಾಲನು

''ಸಾತ್ ಪೀಡಿಮಾಯಿ ಅವತಾರಲೀಯು
ಚೌದ ಪೀಡಿಮಾಯಾ ಗುತ್ತಿವಲ್ಲಾರಿ ಮಾಯಿ
ಫರ್ ಜಲಮಲೀಯು''

(ಏಳನೇ ತಲೆಮಾರಿನಲ್ಲಿ ಅವತಾರವನ್ನು ತಾಳುತ್ತೇನೆ. ಹದಿನಾಲ್ಕನೇ ತಲೆಮಾರಿನಲ್ಲಿ ಗುತ್ತಿವಲ್ಲಾರಿಯಲ್ಲಿ ಮರುಜನ್ಮ ಪಡೆಯುವೆ) ಹೀಗೆಂದು ತನ್ನ ಜನರಿಗೆ ದಿವ್ಯ ಸಂದೇಶವನ್ನು ನೀಡಿದ್ದಾನೆ. ಈ ಹಿನ್ನೆಲೆಯಲ್ಲಿ ಇಂದು ಮಹಾರಾಷ್ಟ್ರದ ಅಂಕೋಲ ಜಿಲ್ಲೆಯ ಪೌರದೇವಿಯ ಶ್ರೀರಾಮರಾವ್ ಮಹಾರಾಜರೇ ೭ನೇ ತಲೆಮಾರಿನ ಅವತಾರಿ ಪುರುಷನೆಂದು ಹೇಳಲಾಗುತ್ತದೆ.

ಹೀಗೆ ಐತಿಹಾಸಿಕ ವ್ಯಕ್ತಿಯಾದ ಸೇವಾಭಾಯನ ಅತ್ಯದ್ಭುತ ಶಕ್ತಿವುಳ್ಳವನ್ನಾಗಿ ಜನಾಂಗದ ಸಂರಕ್ಷಣೆಗಾಗಿ ಮತ್ತೆ ಅವತರಿಸಿದ್ದಾನೆಂದು ಲಂಬಾಣಿಗಳಲ್ಲಿ ಗಾಢವಾದ ನಂಬಿಕೆ ಇದೆ. ಪೌರದೇವಿಯಲ್ಲಿರುವ ಶ್ರೀಸೇವಾಲಾಲರ ದೇವಾಲಯವು ಇಂದು ಲಂಬಾಣಿಗರಿಗೆ ಪುಣ್ಯ ಕ್ಷೇತ್ರವಾಗಿದೆ.

ಲಂಬಾಣಿಗರು ಶ್ರೀ ಸೇವಾಭಾಯನ ಜೀವನ ಚರಿತ್ರೆ, ಪವಾಡ ಮತ್ತು ಆತನ ಅನೇಕ ಅವತಾರಗಳನ್ನು ತನ್ನ ಕಥನಗೀತೆಗಳಲ್ಲಿ ಸ್ವಾರಸ್ಯಕರವಾಗಿ ವ್ಯಕ್ತಪಡಿಸುತ್ತಾರೆ. ಸೇವಾಭಾಯನನ್ನು ಕುರಿತು ಅವರ ಕಥನಗೀತೆಗಳು ದಿನಗಟ್ಟಲೆ ವಾರಗಟ್ಟಲೆ ಬೆಳೆಯುತ್ತವೆ. ಸುದೀರ್ಘವಾಗಿರುವ ಈ ಕಥನಗೀತೆಗಳನ್ನು ಅವರ ಧಾರ್ಮಿಕ ಉತ್ಸವಗಳಲ್ಲಿ ಹಾಡುತ್ತಾರೆ. ಸಾಂಸ್ಕೃತಿಕ ನಾಯಕ ಶ್ರೀ ಸೇವಾಭಾಯನನ್ನು ಕುರಿತಾದ ಈ ಸುದೀರ್ಘ ಪೌರಾಣಿಕ ಕಾವ್ಯಲಂಬಾಣಿಗರ ಮೊದಲ ಜನಪದ ಮಹಾಕಾವ್ಯವಾಗಿದೆ. ಸೇವಾಭಾಯನ ಈ ಚಾರಿತ್ರಿಕ ಮಹಾಕಾವ್ಯ ಲಂಬಾಣಿ ಸಂಸ್ಕೃತಿಯ ಅನೇಕ ಪ್ರಮುಖ ಅಂಶಗಳನ್ನು ವಿಧಿತಪಡಿಸುತ್ತದೆ.

**ಮಾಟ-ಮಂತ್ರ :** ಮಾಟಮಂತ್ರ ಹಾಗೂ ದೃಷ್ಟಿ ದೋಷಗಳಿಂದಲೂ ವ್ಯಕ್ತಿಯಲ್ಲಿ ರೋಗಗಳು ಕಾಣಿಸಿಕೊಳ್ಳುತ್ತವೆ ಎನ್ನುತ್ತಾರೆ. ಕೆಲವು ವ್ಯಕ್ತಿಗಳ ದೃಷ್ಟಿ ಅದೆಷ್ಟು ತೀಕ್ಷ್ಣವಾಗಿರುತ್ತದೆಂದರೆ ಒಳ್ಳೇ ಅಡಿಗೆ ಪದಾರ್ಥ ವಸ್ತುಗಳು ಇದ್ದಕ್ಕಿದ್ದಂತೆ ಕೆಟ್ಟು ಹೋಗುತ್ತವೆ. ಕೆಲವರು ಸುಂದರವಾದ ಮಗುವನ್ನು ನೋಡಿದರೆ ಮಗುವಿನ ಮೈ ಬೆಚ್ಚಗಾಗಿ ಕಿರಿಕಿರಿಯನ್ನುಂಟು ಮಾಡಲು ತೊಡಗುತ್ತದೆ. ಊಟ ಮಾಡುವಾಗ ಹಸುವಿನ ಹಾಲು ಕರೆಯುವಾಗ ಇಂಥವರ ದೃಷ್ಟಿ ತಗುಲಿದರೆ ಹೊಟ್ಟೆ ಕೆಡುತ್ತದೆ. ದನಗಳು ಹಿಂಡುವುದನ್ನೇ ನಿಲ್ಲಿಸಿಬಿಡುತ್ತದೆ. ಇಲ್ಲವೇ ಹಾಲೂ ಕೆಟ್ಟು ಹೋಗುತ್ತದೆ.

ಸಮಾಜದಲ್ಲಿ ತಮಗಾಗದವರ ಮೇಲೆ ವಿರೋಧಿಗಳ ಮೇಲೆ ಮಾಟಮಂತ್ರವನ್ನು ಪ್ರಯೋಗಿಸುತ್ತಾರೆ. ಮಾಟ-ಮಂತ್ರಗಳ ಭಯ-ಭೀಕರತೆ ಎಲ್ಲೆಡೆಗೂ ಆವರಿಸಿದೆ. ಭಯಾನಕ ಮಾಂತ್ರಿಕರು ದುಷ್ಟದೈವದ ಆರಾಧಕರಾಗಿರುತ್ತಾರೆ. ದೈವದ ಆಜ್ಞೆಯನ್ನು ಅನುಸರಿಸಿ ತಾವು ಮಾಟ ಮಂತ್ರಗಳನ್ನು ಮಾಡುವುದಾಗಿ

ಹೇಳುತ್ತಾರೆ. ಲಂಬಾಣಿಗರಲ್ಲಿ ಈ ಬಗೆಯ ಮಾಂತ್ರಿಕರು ಎಲ್ಲ ಕಡೆಗೂ ಸಿಗುತ್ತಾರೆ. ಈ ಬಗೆಯ ಪುರುಷ ಮಾಂತ್ರಿಕರನ್ನು "ಗಿಡಗಾರಿ ಭೋಪಾ" ಎಂದೂ, ಸ್ತ್ರೀಯರನ್ನು "ಡಾಕಣ್ " ಎಂದೂ ಕರೆಯುತ್ತಾರೆ. ಮಾಟಮಂತ್ರ ಮಾಡುವುದರಲ್ಲಿ ಇವರ ಸಿದ್ಧಹಸ್ತರು ಸುಂದರವಾದ ಮಕ್ಕಳ ಮೇಲೆ ಸ್ತ್ರೀ ಮಾಂತ್ರಿಕರ ಕಣ್ಣು ಬಿದ್ದರೆ ಸಾಕು, ಅಂಥ ಮಕ್ಕಳು ಬದುಕಿ ಉಳಿಯಲಾರವೆಂದೂ, ಹೀಗೆ ಆಹುತಿ ತೆಗೆದುಕೊಂಡಿರುವ ಅನೇಕ ನಿದರ್ಶನಗಳಿರುವುದಾಗಿ ಹೇಳುತ್ತಾರೆ. ಇಂಥ ಸ್ತ್ರೀಯರು ಮನೆ ಇಲ್ಲವೆ ದೇವಾಲಯಗಳಲ್ಲಿ ಅಮಾವಾಸ್ಯೆಯ ರಾತ್ರಿ ಬೆತ್ತಲೆಯಾಗಿ ದುಷ್ಟದೈವಗಳನ್ನು ಒಲಿಸಿಕೊಳ್ಳುತ್ತಾರೆ ಎನ್ನುತ್ತಾರೆ.

ಮಾಂತ್ರಿಕನ ಸಹಾಯದಿಂದ ಆಗದ ವ್ಯಕ್ತಿಯ ವಿರೋಧಿಗಳ ಪಾದದ ಧೂಳು, ಕೂದಲು, ಬಟ್ಟೆ ಬರೆ ತೆಗೆದುಕೊಂಡು ಅವನಿಗರಿವಿಲ್ಲದಂತೆ ಮಾಟಮಂತ್ರ ಮಾಡಿಸುತ್ತಾರೆ. ಇಲ್ಲವೆ ಯಾವುದಾದರೂ ರೂಪದಿಂದ ಆಹಾರ ಪದಾರ್ಥಗಳಲ್ಲಿ ಮಾಟ-ಮಂತ್ರ ಬೆರಸಿ ತಿನ್ನಿಸುವುದರ ಮೂಲಕ ಅವನಿಗೆ ಕೇಡುಂಟು ಮಾಡುತ್ತಾರೆ. ಇದಾವುದಾಗದಿದ್ದರೆ ಗೊಂಬೆ, ಲಿಂಬೆಹಣ್ಣು ಮಂತ್ರಿಸಿ ಸೂಜಿ ಚುಚ್ಚಿ ಅವರ ಮನೆಮಾಳಿಗೆ ಮೇಲೆಯೋ, ಹೊಲಗಳಲ್ಲಿಯೋ ಹುಣ್ಣಿಮೆ, ಅಮಾವಾಸ್ಯೆ ರಾತ್ರಿಗಳಂದು ಹುಗಿಯುತ್ತಾರೆ. ಇದರಿಂದ ವ್ಯಕ್ತಿ ಇಲ್ಲವೆ ಆ ಮನೆತನಕ್ಕೆ ಪೀಡೆ ಕಾಟಗಳು ಪ್ರಾರಂಭವಾಗುತ್ತದೆ. ಇಂಥ ಸಂದರ್ಭದಲ್ಲಿ ಮತ್ತೊಬ್ಬ ಪ್ರಬಲ ಮಾಟದವನ ಹತ್ತಿ ಹೋಗಿ ನಿವಾರಣೆ ಮಾಡಿಕೊಳ್ಳುತ್ತಾರೆ.[೨೦]

**ಅಡಿಟಿಪ್ಪಣಿಗಳು**

೧. ಡಾಲ್ಟನ್ ಜಾರ್ಜ್, **ಎಕನಾಮಿಕ್ಸ್ ಡೆವಲಪ್‌ಮೆಂಟ್ ಆ್ಯಂಡ್ ಸೋಶಿಯಲ್ ಚೇಂಜ್**, ೧೯೭೧, ಪು.೨೦೧

೨. ಗಂಗನಾಯ್ಕ, **ಲಂಬಾಣಿಗರು**, ೨೦೦೪, ಪು.೧೯

೩. ಖಂಡೋಬಾ ಪಿ.ಕೆ., **ಕರ್ನಾಟಕದ ಲಂಬಾಣಿಗಳು**, ೧೯೯೧, ಪು.೧೧

೪. ಗಂಗನಾಯ್ಕ, **ಪೂರ್ವೋಕ್ತ**, ೨೦೦೪, ಪು.೧೯

೫. ಚಕ್ಕೆರೆ ಶಿವಶಂಕರ, **ಗೊರವರ ಸಂಸ್ಕೃತಿ**, ೧೯೮೦, ಪು.೨೫

೬. ಬಸವರಾಜ ನೆಲ್ಲಿಸರ, **ಲಂಬಾಣಿಗರು ಮತ್ತು ಬಗ್ಗರು**, ೧೯೭೩, ಪು.೩

೭. ನಾಯಕ್ ಡಿ.ಬಿ., **ಲಂಬಾಣಿ ಜಾನಪದ**, ೨೦೦೩, ಪು.೭೬

೮. ಅದೇ, ಪು.೮೨

೯. ಸಿದ್ದರಾಮ, **ಲಂಬಾಣಿಗರ ಗಾದೆಗಳು**, ೧೯೨೨, ಪು.೧೧

೧೦. ನಾಯಕ ಎಸ್.ಎಂ., **ಲಂಬಾಣಿ ಗಾದೆಗಳು**, ೧೯೭೯

೧೧. ನಾಯಕ ಹಾ.ಮಾ., **ಜಾನಪದ ಸ್ವರೂಪ**, ೧೯೮೮, ಪು.೪೨

೧೨. ರಾ.ಗೌ., **ಜಾನಪದ ಸಾಹಿತ್ಯ ರೂಪಗಳು,** ೧೯೮೬, ಪು.೭೫

೧೩. ವೀರಣ್ಣ ದಂಡೆ, **ಗಾದೆಗಳು,** ೧೯೯೩, ಪು.೧೯೨

೧೪. ಸಣ್ಣರಾಮ, **ಲಂಬಾಣಿ ಸಂಸ್ಕೃತಿ,** ೧೯೯೯, ಪು.೨೫೧ ೨೫೩

೧೫. ನಂಜುಂಡಯ್ಯ ಮತ್ತು ಅನಂತಕೃಷ್ಣಅಯ್ಯರ್ ಎಲ್.ಕೆ., **ದ ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್,** ವ್ಯಾಲೂಂ ೨, ಬೆಂಗಳೂರು, ೧೯೭೮, ಪು.೨೧

೧೬. ಸಣ್ಣರಾಮ, **ಪೂರ್ವೋಕ್ತ,** ೧೯೯೯, ಪು.೨೧

೧೭. ಜವರೇಗೌಡ, **ಜಾನಪದ ಸೌಂದರ್ಯ,** ೧೯೭೭, ಪು.೧೩

೧೮. ಖಂಡೋಬ ಪಿ.ಕೆ., **ಪೂರ್ವೋಕ್ತ,** ೧೯೯೧, ಪು.೨೦೦೧

೧೯. ಶೇಖರನಾಯ್ಕ, **ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ,** ೨೦೦೨, ಪು.೭೫-೫೯

೨೦. ಖಂಡೋಬ ಪಿ.ಕೆ., **ಕರ್ನಾಟಕದ ಬುಡಕಟ್ಟಿನ ಲಂಬಾಣಿಗಳು,** ೨೦೦೦, ಪು.೨೦೦೧.೩೬

# ಅಧ್ಯಾಯ ೪

# ಮಾರುಕಟ್ಟೆ ಮತ್ತು ವ್ಯಾಪಾರ

೪

# ಮಾರುಕಟ್ಟೆ ಮತ್ತು ವ್ಯಾಪಾರ

## ೪.೧. ಪ್ರಸ್ತಾವನೆ

ಲಂಬಾಣಿಗರು ಮೂಲತಃ ವ್ಯಾಪಾರಿಗಳು. ರಾಜಸ್ಥಾನದ ಮಣಿಕ್ (ವ್ಯಾಪಾರ) ಸಮಾಜಕ್ಕೆ ಸೇರಿದವರಾಗಿದ್ದಾರೆ. ಬಂಜಾರಾ, ವನಜಾರಾ, ವಣಜಾರು, ಲಮಾನ್ , ಲಮಾಣ್ ಮೊದಲಾದವುಗಳು ಅವರ ವೃತ್ತಿಯನ್ನು ಆಧರಿಸಿ ಬಂದಿರುವ ಹೆಸರುಗಳು.

ರಾಜಸ್ಥಾನದ ವ್ಯಾಪಾರಿ ವರ್ಗದವರಲ್ಲಿ ಗುರ್ಜರ, ಮಾರವಾಡಿ ಹಾಗೂ ಲಂಬಾಣಿಗರು ಮಹತ್ವದ ಪಾತ್ರವನ್ನು ವಹಿಸಿರುತ್ತಾರೆ. ಯಾವ ಕಾರಣಕ್ಕೆ ತಮ್ಮ ಮೂಲಸ್ಥಾನವನ್ನು ಬಿಟ್ಟು ಗುಂಪುಗಳಲ್ಲಿ ದಕ್ಷಿಣಕ್ಕೆ ಬಂದು ಚದುರಿ ಅಲೆಮಾರಿಗಳಾಗಿ ವ್ಯಾಪಾರಕ್ಕಾಗಿ ನಿಂತರು. ಪ್ರತಿಯೊಬ್ಬರಲ್ಲೂ ಸಾಕಷ್ಟು ಪ್ರಮಾಣದಲ್ಲಿ ದನಕರುಗಳಿದ್ದುದರಿಂದ ಅವುಗಳನ್ನು ಬಾರಿ ವಸ್ತುಗಳನ್ನು ಹೇರಲು ಉಪಯೋಗಿಸಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಬರಾಜು ಮಾಡುವುದನ್ನು ಪ್ರಾರಂಭಿಸಿದರು. ಅಲೆಮಾರಿ ಗುಂಪಿನ ಲಂಬಾಣಿಗರಲ್ಲಿ ಕೆಲವರು ಲವಣದ (ಉಪ್ಪು) ವ್ಯಾಪಾರವನ್ನು ಇನ್ನೂ ಕೆಲವರು ಆಹಾರ ಧಾನ್ಯ, ಖಾದ್ಯ ಪದಾರ್ಥ ಹಾಗೂ ಮುತ್ತಿನ ವ್ಯಾಪಾರವನ್ನು ಕೈಕೊಂಡಿರುವುದು ಈ ಅಧ್ಯಾಯನದಿಂದ ತಿಳಿದುಬರುತ್ತದೆ. ಅಂತೆಯೇ ಮೊಗಲರ ಸೇವೆಗಳಿಗೆ ಆಹಾರ ಧಾನ್ಯವನ್ನು ಸರಬರಾಜು ಮಾಡುವ ಮಹತ್ವರವಾದ ಕಾರ್ಯದಲ್ಲಿಯೂ ತೊಡಗಿದ್ದರು ಕಂಡು ಬರುತ್ತದೆ.

Banjaras were also ungased is foreign tradeand were reading Europe through Egypt. Greece and Italy. In medival ages''lambada'' was a trade centre in Italy which the Lamon's, Lambadies used to visit. some of the Lambadis have stayed back in Europe and Known as Romaneese.[1]

ಪ್ರಸ್ತುತ ಅಧ್ಯಾಯನದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿಗರ ಪ್ರಮುಖ ಹಾಗೂ ಪ್ರಸ್ತುತವಿರುವ ಮೂಲ ಕಸುಬುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳೆಂದರೆ, ವ್ಯವಸಾಯ, ಕೂಲಿ, ವ್ಯಾಪಾರ,

ಕುಲಕಸುಬು, ಮನೆಕಟ್ಟುವುದು, ಸುಣ್ಣ ಸುಡುವುದು, ಬಡಗಿತನವನ್ನು ಮುಂತಾದವುಗಳು. ಈ ಎಲ್ಲಾ ಕಸುಬುಗಳ ಚಾರಿತ್ರಿಕ ಹಿನ್ನಲೆ, ಉತ್ಪಾದನಾ ವಿಧಾನ, ಉತ್ಪಾದನಾ ಸರಕುಗಳು, ಮಾರಾಟದ ವಿಧಾನ ಮತ್ತು ವೃತ್ತಿಯಲ್ಲಿನ ಅಡೆತಡೆಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಕಾಲಮಿತಿಯ ಕಾರಣದಿಂದಾಗಿ ಅತ್ಯಂತ ವಿರಳವಾಗಿರುವ ಮೂಲ ವೃತ್ತಿಗಳನ್ನು ವಿಶ್ಲೇಷಣೆ ಮಾಡಲಾಗಿತ್ತು. ಕೃಷಿ ಮತ್ತು ವ್ಯಾಪಾರ ಮತ್ತು ಕೂಲಿಯನ್ನು ಅವಲಂಬಿಸಿರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಆದರೂ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ದೃಷ್ಟಿಯಿಂದ ಸೂಕ್ಷ್ಮ ವಿಶ್ಲೇಷಣೆ ಅಗತ್ಯವಿದೆ.

ಸಾಮಾಜಿಕ ಜೀವನದಲ್ಲಿ ಲಂಬಾಣಿಗರ ಜನ-ಜೀವನ, ಸಮನ್ವಯತೆ, ಸಹಕಾರ, ಸಹಬಾಳ್ವೆ, ಸಾಮೂಹಿಕ ಬೆಳವಣಿಗೆಗೆ ಸಹಕಾರಿಯಾಗಿದೆ. ಆರ್ಥಿಕ ದೃಷ್ಟಿಯಿಂದ ಲಂಬಾಣಿಗರಿಗೆ, ದೊಡ್ಡ ಉದ್ದಿಮೆದಾರರಿಗೆ ಲಭ್ಯವಾದಷ್ಟು ಲಾಭ ಮತ್ತು ಸೌಲಭ್ಯಗಳು ಸಿಗದಿರುವುದು ವಿಷಾಧನೀಯ.

## ೪.೨. ಲಂಬಾಣಿಗರು ಮತ್ತು ಮಾರುಕಟ್ಟೆ

ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆ, ಶ್ರಮವಿಭಜನೆ ಹಾಗೂ ವೈಶಿಷ್ಟತೆಯ ಆಧಾರದ ಮೇಲೆ ಬೇರೆ ಬೇರೆ ಜನ ಸಮುದಾಯದವರು ಬೇರೆ ಬೇರೆ ವಸ್ತು ಮತ್ತು ಸೇವೆಗಳನ್ನು ತಯಾರಿಸುವರು.

ಉದಾ : ಕುಂಬಾರರು ಕುಡಿಕೆ, ಮಡಿಕೆಗಳನ್ನು, ಕಮ್ಮಾರರು ಕಬ್ಬಿಣದ ಸಾಧನ ಸಲಕರಣೆಗಳನ್ನು ಚಮ್ಮಾರರು ಚರ್ಮದ ವಸ್ತುಗಳನ್ನು ತಯಾರಿಸುವರು. ಹಾಗೆಯೇ ಮಡಿವಾಳರು, ಹೂಗಾರರು, ಬಳೆಗಾರರು ಇತ್ಯಾದಿ ಜನ ಸಮುದಾಯದವರು ಸೇವೆಗಳನ್ನು ನೀಡುತ್ತಾರೆ.

ಆದರೆ ಲಂಬಾಣಿ ವೃತ್ತಿಯವರು ನೀಡುವ ಮತ್ತು ತಯಾರಿಸುವ ಪದಾರ್ಥಗಳನ್ನು ಜನರಿಗೆ ತಲುಪಿಸುವುದು ಹೇಗೆ? ಇವುಗಳ ಮಾರಾಟದ ವಿಧಾನ ಹೇಗೆ ಮತ್ತು ಎಲ್ಲಿ? ಈ ಹಿನ್ನಲೆಯಲ್ಲಿ ಮಾರುಕಟ್ಟೆ, ಲಂಬಾಣಿಗರು ತಯಾರಿಸಿದ ಅಥವಾ ಉತ್ಪಾದಿಸಿದ ವಸ್ತುಗಳ ಹಂಚಿಕೆಯನ್ನು ನಿರ್ಧರಿಸುತ್ತದೆ. ಅರ್ಥವ್ಯವಸ್ಥೆಯಲ್ಲಿ ಸರಕು ಸೇವೆಗಳ ವಿನಿಮಯ ಅತಿ ಮುಖ್ಯವಾಗಿದೆ. ಸರಕು ಸೇವೆಗಳ ಮಾರಾಟವಾಗದೇ ವೃತ್ತಿಗಳ ಅಭಿವೃದ್ಧಿ ಅಸಾಧ್ಯ. ಅರ್ಥಶಾಸ್ತ್ರದಲ್ಲಿ ಮಾರುಕಟ್ಟೆ ಎಂದರೇನು? ಅದರ ಉದ್ದೇಶಗಳೇನು? ಅದರ ಅವಶ್ಯಕತೆ ಎಷ್ಟಿದೆ? ಹಾಗೂ ಲಂಬಾಣಿಗರ ಮಾರುಕಟ್ಟೆ ಇತರರ ಮಾರುಕಟ್ಟೆಗಿಂತ ಹೇಗೆ ಭಿನ್ನವಾಗಿದೆ? ಏಕೆ ಭಿನ್ನವಾಗಿದೆ? ಹೇಗೆ ಮಾರಾಟ ಪ್ರಕ್ರಿಯೆ ಕೈಗೊಳ್ಳುತ್ತಾರೆ ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೪.೩. ಲಂಬಾಣಿಗರು ಮತ್ತು ವಸ್ತು ವಿನಿಮಯ ಪದ್ಧತಿ

ನಮ್ಮ ದೇಶ ಕೃಷಿ ಪ್ರಧಾನವಾದುದು. ಅದು ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ಈ ಹಳ್ಳಿಗಳಲ್ಲಿ ರುವ ಜನಸಂಖ್ಯೆಯ ಪೈಕಿ ಸುಮಾರು ಶೇ.೭೦-೭೫ರಷ್ಟು ಜನರು ಬೇಸಾಯ ಮಾಡಿಕೊಂಡಿರುವವರು.

ಸುಮರು ೩೦ ಪ್ರತಿಶತ ವ್ಯವಸಾಯ ಕಾರ್ಮಿಕರು, ಉಳಿದವರು ಶೇ.೧೦-೧೫ರಷ್ಟು ಜನರು ಇತರೆ ವೃತ್ತಿಗಳನ್ನು ಅವಲಂಬಿಸಿಕೊಂಡಿರುವರು. ಕೃಷಿ ಪ್ರಧಾನ ದೇಶವಾದ್ದರಿಂದ ಭೂಮಿಗೆ ಹೆಚ್ಚು ಮಹತ್ವ. ಈ ಭೂಮಿಯ ಒಡೆಯನಾದ ರೈತನನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ವೃತ್ತಿಗಳು ರೂಪುಗೊಂಡಿರುತ್ತದೆ. ರೈತ ಕುಟುಂಬ ಎಲ್ಲರಿಗೂ ಬೇಕಾದ ಆಹಾರವನ್ನು ಉತ್ಪಾದಿಸಿದರೆ, ಈ ರೈತ ಕುಟುಂಬಕ್ಕೆ ಬೇಕಾದ ಸರಕು-ಸೇವೆಗಳನ್ನು ಉಳಿದ ಕುಟುಂಬಗಳು ಅಂದರೆ ಲಂಬಾಣಿಗರು ಸಲ್ಲಿಸುತ್ತಾರೆ. ಈ ವ್ಯವಸ್ಥೆಯಲ್ಲಿ ಆಧುನಿಕ ಮಾರುಕಟ್ಟೆಯ ಲಕ್ಷಣಗಳಾದ ಉತ್ಪಾದನೆ, ಸಂಗ್ರಹಣೆ, ಮಾರಾಟ, ಬೆಲೆ ನಿರ್ಧಾರ ಅಂಶಗಳು ಕಂಡುಬರುವುದಿಲ್ಲ. ಇಲ್ಲಿ ಕಂಡುಬರುವುದು.

ವಸ್ತು ಮತ್ತು ಸೇವೆಗಳನ್ನು ಇತರೆ ವಸ್ತು ಮತ್ತು ಸೇವೆಗಳಿಗೆ ವಿನಿಮಯ ಮಾಡುವ ಪದ್ಧತಿ. ಪ್ರಾಚೀನ ಕಾಲದಿಂದಲೂ ನಡೆದು ಬಂದ ಈ ವ್ಯವಹಾರ ಪದ್ಧತಿ (ವಸ್ತುವಿನಿಮಯ) ನಮ್ಮ ಸಮಾಜದಿಂದ ಕಣ್ಮರೆಯಾಗುತ್ತಿದೆ. ವರ್ತಮಾನದಲ್ಲಿ ಕರಾರುವಕ್ಕಿನ ಸಂಬಂಧಗಳು ಪಾದರ್ಪಣೆ ಮಾಡಿದೆ. ಇದಕ್ಕೆ ಕಾರಣವಾದ ಅಂಶಗಳನ್ನು ಇಲ್ಲಿ ಸೂಚಿಸಬಹುದು.

* ಸಮಗ್ರ ಗ್ರಾಮೀಣ ಸಮಾಜ ವ್ಯವಸ್ಥೆಯೂ ಪರಿವರ್ತನೆಯ ಪ್ರಕ್ರಿಯೆಯಲ್ಲಿರುವುದು.
* ಜೀವನೋಪಾಯಕ್ಕಾಗಿ ಕೃಷಿ ಮಾಡುತ್ತಿದ್ದ ಕೃಷಿ ವ್ಯವಸ್ಥೆ ಹೋಗಿ ವಾಣಿಜ್ಯ ಪೇಟೆಗಾಗಿ ಕೃಷಿ ಮಾಡುವುದು ಹೆಚ್ಚುತ್ತಿದೆ.
* ಗ್ರಾಮೀಣ ಸಮಾಜದಲ್ಲಿ ನಗದು ಹಣದ ಬಳಕೆ ಹೆಚ್ಚಿರುವುದರಿಂದ ವಸ್ತುವಿನಿಮಯ ಪದ್ಧತಿ ನಿರುಪಯುಕ್ತವಾಗುತ್ತದೆ.
* ಜನಸಂಖ್ಯೆಯ ಹೆಚ್ಚಳದಿಂದಾಗಿ ಕೃಷಿ ಭೂಮಿಯ ಮೇಲೆ ಹೆಚ್ಚು ಒತ್ತಡ ಬಂದು ಗ್ರಾಮೀಣ ಕೃಷಿಯೇತರ ಉದ್ಯೋಗಗಳಲ್ಲಿ ಹೆಚ್ಚಾಗಿ ತೊಡಗಿಸಿಕೊಳ್ಳುತ್ತಿರುವುದು.
* ಆಧುನಿಕ ಸಾರಿಗೆ-ಸಂಪರ್ಕಗಳು ಹೆಚ್ಚಿ ಪೇಟೆಯೊಡನೆ ಸಂಬಂಧಗಳು ಬೆಳೆಯುತ್ತಿರುವುದು.
* ಕೃಷಿಯೇತರ ಉದ್ಯೋಗಗಳು ಹೆಚ್ಚು ಪ್ರಮಾಣಧಲ್ಲಿ ಲಭ್ಯವಾಗುತ್ತಿವೆ.
* ಜಮೀನುದಾರಿ ಪದ್ಧತಿಯ ನಿರ್ಮೂಲನೆ
* ವೈಜ್ಞಾನಿಕ ಕ್ಷೇತ್ರದ ವ್ಯಾಪಾರ ಬೆಳವಣಿಗೆ.
* ಹೊಸ ರೀತಿಯ ಯಂತ್ರೋಪಕರಣಗಳ ಬಳಕೆ
* ವಸ್ತು ವಿನಿಮಯ ಪದ್ಧತಿಯಲ್ಲಿ ಮೌಲ್ಯದ ನಿರ್ಧಾರದ ಕೊರತೆ, ಮೌಲ್ಯ ಸಂಗ್ರಹಣೆಯ ಕೊರತೆ, ವಿಭಜನೆಯ ಕೊರತೆ ಹಾಗೂ ವರ್ಗಾವಣೆಯ ಸಮಸ್ಯೆಗಳು ಕಂಡುಬರುತ್ತದೆ. ಆ ಕಾರಣಗಳಿಂದಾಗಿ ಸಾಂಪ್ರದಾಯಿಕ ಮಾರುಕಟ್ಟೆ(ವಸ್ತು ವಿನಿಮಯ) ವ್ಯವಸ್ಥೆ ವರ್ತಮಾನ ಮಾರುಕಟ್ಟೆಯಾಗಿ ಬದಲಾಗಿದೆ.

೪.೪. ಮಾರುಕಟ್ಟೆ

ವಸ್ತುವಿನಿಮಯ ಪದ್ಧತಿ ತನ್ನ ಪ್ರಭಾವವನ್ನು ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಕಳೆದುಕೊಂಡಂತೆ ಆಧುನಿಕ ಮಾರುಕಟ್ಟೆ ವ್ಯವಸ್ಥೆ ಕಾರ್ಯರೂಪಕ್ಕೆ ಬಂದಿದೆ. ಲಂಬಾಣಿಗರು ತಮ್ಮ ವರ್ತಮಾನ ಮಾರುಕಟ್ಟೆಯ ಬಗ್ಗೆ ವಿಶ್ಲೇಷಣೆ ಮಾಡುವುದಕ್ಕಿಂತ ಮುಂಚಿತವಾಗಿ ಮಾರುಕಟ್ಟೆ ಎಂದರೇನು? ಎಂಬುದನ್ನು ವಿವರಿಸುವುದು ಅಗತ್ಯ.

ಮಾರಾಟ ಪ್ರಕ್ರಿಯೆಯಲ್ಲಿ ''ಮಾರುಕಟ್ಟೆ'' ಎನ್ನುವ ಪದದ ಮೂಲ ಮತ್ತು ಅರ್ಥವಿವರಣೆ ತಿಳಿಯುವುದು ಇಲ್ಲಿ ಅವಶ್ಯ. ''ಮಾರ್ಕೆಟ್ '' ಎನ್ನುವ ಆಂಗ್ಲ ಪದ ''ಮಾರ್ಕೇಟಸ್ '' ಎನ್ನುವ ಲ್ಯಾಟಿನ್ ಪದದಿಂದ ಉದ್ಭವವಾಗಿದೆ. ಈ ಲ್ಯಾಟಿನ್ ಪದ ''ವ್ಯಾಪಾರ ಮಾಡು'', ''ವ್ಯಾಪಾರ ಸ್ಥಳ'', ''ವ್ಯಾಪಾರ ವಸ್ತು'', ''ಸಾರಿಗೆ'' ಎಂದೆಲ್ಲ ಅರ್ಥಕೊಡುತ್ತದೆ. ಆಯಾ ಸಂದರ್ಭಕ್ಕೆ ಅನುಗುಣವಾಗಿ ಈ ಪದವನ್ನು ಉಪಯೋಗಿಸಲಾಗಿದೆ. ಇದರಿಂದ ನಮಗೆ ತಿಳಿಯುವ ಅಂಶ ''ಮಾರುಕಟ್ಟೆ'' ಎಂದರೆ ''ವಸ್ತು ವಿನಿಮಯ ಕೇಂದ್ರ'' ಆಗಬಹುದು. ಅಥವಾ ''ಕೊಳ್ಳುವರು ಮತ್ತು ಮಾರಾಟಗಾರರು ಮಿಲನವಾಗುವ ಸ್ಥಳ'' ಅಥವಾ ''ವಹಿವಾಟು ನಡೆಯುವ ವ್ಯಾಪ್ತಿ'' ಅಥವಾ ''ಕೊಳ್ಳುವ ಮಾರುವ ಕ್ರಿಯೆ'' ಅಥವಾ ''ವಾಣಿಜ್ಯ ಚಟುವಟಿಕೆ ಪ್ರಕ್ರಿಯೆ'' ಎಂದು ಹೇಳಬಹುದು.

ಮಾರಾಟ ಪ್ರಕ್ರಿಯೆಯಲ್ಲಿ ''ವಿನಿಮಯ ಕೇಂದ್ರಬಿಂದು. ಈ ವಿನಿಮಯ ಕಾರ್ಯದಿಂದ ವ್ಯಕ್ತಿಗಳು, ಸಂಸ್ಥೆಗಳು, ರಾಷ್ಟ್ರಗಳು, ತಮಗೆ ಬೇಕಾದ ವಸ್ತುಗಳನ್ನು ಪಡೆಯುತ್ತಾರೆ. ಈ ವಸ್ತುಗಳನ್ನು ಪಡೆಯುವ ಜಾಗಕ್ಕೆ 'ಮಾರುಕಟ್ಟೆ' ಎನ್ನುತ್ತಾರೆ. 'philipkotler' ಫಿಲಿಸ್ ಕೋಟ್ಲರ ಪ್ರಕಾರ ''ಶಕ್ತ ವಿನಿಮಯ ಕಾರ್ಯ ನಡೆಯುವ ಸ್ಥಳ''[2]ಎಂದು ಹೇಳಿದ್ದಾರೆ. ವಿನಿಮಯ ಕಾರ್ಯ ಮಾರಾಟ ಮಾಡುವವರ ಮತ್ತು ಕೊಳ್ಳುವವರ ನಡುವೆ ನೇರವಾಗಿ ನಡೆಯಬಹುದು ಅಥವಾ ಪತ್ರ ವ್ಯವಹಾರದ, ದೂರವಾಣಿ ಮುಂತಾದ ಸಾಧನಗಳ ಮೂಲಕ ನಡೆಯಬಹುದು. 'ಮಾರುಕಟ್ಟೆ' ಎನ್ನುವುದು ಭೌಗೋಳಿಕ ಪ್ರದೇಶವಾಗಿದ್ದು, ಮಾರುಕಟ್ಟೆ ವಸ್ತುಗಳು ಸಿದ್ಧವಾಗಿ ನಿಂತಿರುವ ಕೇಂದ್ರಗಳನ್ನು 'ಮಾರುಕಟ್ಟೆ' ಎನ್ನುತ್ತೇವೆ. ಆದರೆ ಈ ಪದ ಇಂದಿನ ದಿನಗಳಲ್ಲಿ ಹೆಚ್ಚು ಬದಲಾವಣೆಗೆ ಒಳಪಟ್ಟಿದೆ. ಒಂದು ಸಂಸ್ಥೆ ಅಥವಾ ವ್ಯಕ್ತಿಗಳು ವ್ಯವಹಾರದಲ್ಲಿ ನಿಕಟ ಸಂಬಂಧ ಹೊಂದಿದ್ದು, ಒಂದು ವಸ್ತುವಿಗೆ ಸಂಬಂಧಪಟ್ಟ ಹಾಗೆ ವ್ಯಾಪಕ ವ್ಯವಹಾರ ನಡೆಸುವುದೇ ಮಾರುಕಟ್ಟೆ ಆಗಿದೆ.

ಬಳಕೆಯ ಭಾಷೆಯಲ್ಲಿ 'ಮಾರುಕಟ್ಟೆ' ಎಂದರೆ ಸರಕುಗಳನ್ನು ಮಾರುವ-ಕೊಳ್ಳುವ ಒಂದು ನಿರ್ದಿಷ್ಟ ಸ್ಥಳವೆಂದು ಅರ್ಥವಾಗುತ್ತದೆ. ಇಲ್ಲಿ ಮಾರುವವರು ಮತ್ತು ಕೊಳ್ಳುವವರು ನಿರೀಕ್ಷೆಯಲ್ಲಿರುತ್ತಾರೆ. ಕೊಳ್ಳುವವರು ಆ ಸ್ಥಳಕ್ಕೆ ಹೋಗಿ ಸರಕುಗಳನ್ನು ಪ್ರತ್ಯೇಕವಾಗಿ ಪರೀಕ್ಷಿಸಿ, ಮಾರುವವರೊಡನೆ ಚೌಕಾಸಿ ಮಾಡಿ ಕೊಂಡುಕೊಳ್ಳುತ್ತಾರೆ.

ಉದಾ : ಹೂವಿನ ಮಾರುಕಟ್ಟೆ, ಹಣ್ಣಿನ ಮಾರುಕಟ್ಟೆ, ತರಕಾರಿ ಮಾರುಕಟ್ಟೆ, ಮೀನಿನ ಮಾರುಕಟ್ಟೆ, ಮಾಂಸದ ಮಾರುಕಟ್ಟೆ, ಬಟ್ಟೆಯ ಮಾರುಕಟ್ಟೆ ಇತ್ಯಾದಿ. ಆದರೆ ಅರ್ಥಶಾಸ್ತ್ರದ ಪ್ರಕಾರ ''ಒಂದು ಪ್ರಕಾರದ ಸರಕುಗಳ ಬೆಲೆಯು ಸುಲಭವಾಗಿ ಮತ್ತು ಶೀಘ್ರವಾಗಿ ಒಂದೇ ಮಟ್ಟದಲ್ಲಿ ಹತ್ತಿ ಮಾರುಕಟ್ಟೆ, ಗೋಧಿ ಮಾರುಕಟ್ಟೆ ನಿರ್ಧಾರವಾಗುವಂತೆ ಮಾರುವವರು ಮತ್ತು ಕೊಳ್ಳುವವರು ಯಾವ ಅಡೆತಡೆಗಳೂ ಇಲ್ಲದೆ ಪರಸ್ಪರ ಸಂಧಿಸಿ ವ್ಯವಹಾರ ಮಾಡುವ ಪ್ರದೇಶ ಅಥವಾ ಸನ್ನಿವೇಶಕ್ಕೆ 'ಮಾರುಕಟ್ಟೆ' ಎಂದು ಹೇಳಬಹುದು.

ವಾಣಿಜ್ಯಶಾಸ್ತ್ರದಲ್ಲಿ 'ಮಾರುಕಟ್ಟೆ' ಪದವನ್ನು ಅರ್ಥಶಾಸ್ತ್ರದ ದೃಷ್ಟಿಯಲ್ಲಿ ಉಪಯೋಗಿಸಲಾಗಿದೆ. ಈ ಅರ್ಥದಲ್ಲಿ ಕೊಳ್ಳುವ ಮತ್ತು ಮಾರಾಟ ಮಾಡುವವರು ಒಂದು ನಿಗದಿತ ಸ್ಥಳದಲ್ಲಿ ಮುಖಾಮುಖಿ ಬೇಟೆ ಮಾಡಬೇಕಾದ ಅಗತ್ಯವಿಲ್ಲ. ಕೊಳ್ಳುವ ಮತ್ತು ಮಾರಾಟ ಕಾರ್ಯಗಳು ನೇರವಾಗಿ ಅಥವಾ ಪತ್ರ ವ್ಯವಹಾರ, ಟೆಲಿಫೋನ್, ಟೆಲಿಗ್ರಾಂ, ಕೇಬಲ್ ಅಥವಾ ಇತರ ಯಾವುದೇ ಆಧುನಿಕ ಸಂಪರ್ಕ ಸಾಧನಗಳ ಮೂಲಕ ನಡೆಯಬಹುದು. ಅಂದರೆ, ಮಾರುಕಟ್ಟೆ ಒಂದು ಭೌಗೋಳಿಕ ಪ್ರದೇಶವಾಗಿರಬೇಕಾದ ಅವಶ್ಯಕತೆ ಇಲ್ಲ. ಒಂದು ಸಂಸ್ಥೆ ಅಥವಾ ವ್ಯಕ್ತಿಗಳು ನಿಕಟ ಸಂಬಂಧ ಹೊಂದಿದ್ದು ಒಂದು ವಸ್ತುವಿಗೆ ಸಂಬಂಧಪಟ್ಟ ಹಾಗೆ ವ್ಯಾಪಾರ ವ್ಯವಹಾರ ನಡೆಯುವುದೇ ಮಾರುಕಟ್ಟೆಯಾಗಿದೆ. ಮಾರುಕಟ್ಟೆ ಕುರಿತು ವಿವಿಧ ಆರ್ಥಿಕ ತಜ್ಞರು ತಮ್ಮ ಅಭಿಪ್ರಾಯಗಳನ್ನು ನೀಡಿದ್ದಾರೆ.

ಜೆವೊನ್ಸ ಅವರ ಪ್ರಕಾರ ''ಯಾವುದೊಂದು ವಸ್ತುವಿನ ವ್ಯವಹಾರ ಮಾಡುವ ಮತ್ತು ಪರಸ್ಪರ ವ್ಯವಹಾರಿಕ ಸಂಬಂಧವನ್ನು ಹೊಂದಿರುವ ವ್ಯಕ್ತಿಗಳ ಸಮುದಾಯವೇ ಮಾರುಕಟ್ಟೆಯಾಗಿದೆ.''[೩]

ಪ್ರೊ.ಸೆಲಿಗ್ ಮನ್ ಅವರ ಪ್ರಕಾರ, ''ಆರ್ಥಿಕ ಸರಕುಗಳನ್ನು ಮಾರುವ ಮತ್ತು ಕೊಳ್ಳುವ ವ್ಯಕ್ತಿಗಳು ಪರಸ್ಪರ ಸಂಧಿಸಿದಾಗ ಮಾರುಕಟ್ಟೆಯು ಉದ್ಭವಿಸುತ್ತದೆ. ಅವರು ಪ್ರತ್ಯಕ್ಷವಾಗಿ ಪರಸ್ಪರ ಬೇಟೆಯಾಗಬೇಕಾಗಿಲ್ಲ. ಅಂದರೆ ಅರ್ಥಶಾಸ್ತ್ರದ ಪ್ರಕಾರ, ಮಾರುಕಟ್ಟೆಯ ನಿರ್ಮಾಣವಾಗಬೇಕಾದರೆ ಮಾರುವವರು ಮತ್ತು ಕೊಳ್ಳುವವರು ಒಂದು ನಿರ್ದಿಷ್ಟ ಸ್ಥಳದಲ್ಲಿ ಪ್ರತ್ಯಕ್ಷವಾಗಿ ಹಾಜರಾಗಬೇಕಾಗಿಲ್ಲ. ಅವರು ಸಾಮಾನ್ಯವಾಗಿ ಅಂಚೆಯ ಮೂಲಕ ಇಲ್ಲವೆ ದೂರವಾಣಿ, ತಂತಿ ಅಥವಾ ಇನ್ನಾವುದೋ ಸಂಪರ್ಕ ಸಾಧನದ ಮೂಲಕ ಪರಸ್ಪರ ಸಂಧಿಸಿದಾಗಲೂ ಮಾರುಕಟ್ಟೆಯು ಉದ್ಭವಿಸುತ್ತದೆ.''[೪]

ಟಾಸ್ಲೆ, ಕ್ಲಾರ್ಕ್ ಮತ್ತು ಕ್ಲಾರ್ಕ ಅವರ ಪ್ರಕಾರ ''ಯಾವುದೊಂದು ವಸ್ತುವಿನ ಒಡೆತನವನ್ನು ವರ್ಗಾಯಿಸುವ ಶಕ್ತಿಗಳು ಕಾರ್ಯಮಾಡುತ್ತಿರುವ ಕೇಂದ್ರವು ಅಥವಾ ಪ್ರದೇಶವು ಮಾರುಕಟ್ಟೆಯಾಗಿದೆ. ಇಲ್ಲಿಂದ ವಸ್ತುಗಳ ಸಾಗಾಟವಾಗಬಹುದು ಅಥವಾ ಇಲ್ಲಿಗೆ ಅವುಗಳ ಸಾಗಾಟವಾಗಬಹುದು.''[೫]

ಕೊರ್ನೊಟ್(Cournot) ಅವರ ಪ್ರಕಾರ, ''ಅರ್ಥಶಾಸ್ತ್ರಜ್ಞರು ತಿಳಿದುಕೊಂಡರೆ, ಮಾರುಕಟ್ಟೆಯು ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಯಾವುದೇ ಒಂದು ನಿರ್ದಿಷ್ಟ ಸ್ಥಳವಾಗಿರದೆ ಒಂದು ಪ್ರಕಾರದ ಸರಕುಗಳ ಬೆಲೆಗಳು ಸುಲಭವಾಗಿ ಮಾತ್ತು ಶೀಘ್ರವಾಗಿ ಒಂದೇ ಮಟ್ಟದಲ್ಲಿ ನಿರ್ಧಾರವಾಗುವಂತೆ

ಮಾರುವವರು ಮತ್ತು ಕೊಳ್ಳುವವರು ಯಾವ ಅಡೆತಡೆಗಳೂ ಇಲ್ಲದೆ ಮುಕ್ತವಾಗಿ ಪರಸ್ಪರ ಸಂಪರ್ಕಿಸಿ ವ್ಯವಹಾರ ನಡೆಸುವ ಯಾವುದೇ ಪ್ರದೇಶವಾಗಿರುತ್ತದೆ.''[೬]

ಅಮೆರಿಕನ್ ಮಾರ್ಕೆಟಿಂಗ್ ಅಸೋಸಿಯೇಶನ್ ಪ್ರಕಾರ ''ಕೊಳ್ಳುವವರು ಮತ್ತು ಮಾರುವವರು ನಿರ್ಣಯಗಳನ್ನು ಕೈಕೊಳ್ಳುವುದರ ಮೂಲಕ ಸರಕು-ಸೇವೆಗಳ ವರ್ಗಾವಣೆ ಮಾಡುವ ಸನ್ನಿವೇಶವೇ ಮಾರುಕಟ್ಟೆ.''[೭]

ಬೆಕಮನ್ ಮತ್ತು ಡಿವ್ಹಿಡೆಸನ್ (Beckmanad Davidson) ಎಂಬುವರ ಪ್ರಕಾರ, ''ಸರಕುಗಳ ಬೆಲೆಗಳನ್ನು ನಿರ್ಧರಿಸುವ ಒತ್ತಡಗಳು ಕಾರ್ಯ ಪ್ರವರ್ತವಾಗಿರುವ ಮತ್ತು ಸಂಬಂಧಿಸಿದ ಸರಕುಗಳ ಪ್ರತ್ಯಕ್ಷ ಚಲನೆಯೊಂದಿಗೆ ಅವುಗಳ ಒಡೆತನದ ವಿನಿಮಯವಾಗುತ್ತಿರುವ ಯಾವುದೇ ಕ್ಷೇತ್ರವು ಮಾರುಕಟ್ಟೆಯಾಗಿದೆ.''[೮]

ಚಾಪ್ ಮನ್ (Chaman) ಎಂಬುವರ ಪ್ರಕಾರ, ''ಅರ್ಥಶಾಸ್ತ್ರದ ಅರ್ಥ ವಿವರಣೆಯ ಪ್ರಕಾರ, ಮಾರುಕಟ್ಟೆಯು ಒಂದು ನಿರ್ದಿಷ್ಟ ಸ್ಥಳಕ್ಕೆ ಸಂಬಂಧಿಸಿರದೆ, ಯಾವುದೇ ವಸ್ತುವಿಗೆ ಅಥವಾ ವಸ್ತುಗಳಿಗೆ ಮತ್ತು ನೇರವಾಗಿ ಪರಸ್ಪರ ಪೈಪೋಟಿಗಿಳಿದಿರುವ ಕೊಳ್ಳುವವರು ಮತ್ತು ಮಾರುವವರಿಗೆ ಸಂಬಂಧಿಸಿರುತ್ತದೆ.''[೯]

ಜಿ.ಎಫ್ .ಸೈಲ್ ಪ್ರಕಾರ, ''ಮಾರುಕಟ್ಟೆ ಎಂದರೆ ಕೊಳ್ಳುವ ಮತ್ತು ಮಾರುವ ಒಂದು ನಿರ್ದಿಷ್ಟ ಸ್ಥಳವಲ್ಲ. ಆದರೆ ಯಾವುದೇ ಪ್ರದೇಶದಲ್ಲಿ ಕೊಳ್ಳುವವರು ಮುಕ್ತ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುವುದರಿಂದ ವಸ್ತುವಿನ ಬೆಲೆ ಸುಲಭವಾಗಿ ಮತ್ತು ಶೀಘ್ರವಾಗಿ ಸಮಗೊಳ್ಳುವ ಸನ್ನಿವೇಶವೇ ಮಾರುಕಟ್ಟೆ''[೧೦]

''ಮಾರುಕಟ್ಟೆ ಎಂದರೆ ಕೊಳ್ಳುವವರು ಮತ್ತು ಮಾರುವವರು ಪರಸ್ಪರ ಮುಕ್ತ ಪೈಪೋಟಿಯಲ್ಲಿರುವ ಸ್ಥಳ ಮತ್ತು ಪ್ರದೇಶವಾಗಿದೆ.

ಫಿಲಪ್ ಕೋಟ್ಲರ್(Philip Kotler) ಅವರ ಪ್ರಕಾರ, ''ಮಾರುಕಟ್ಟೆಯು ನಿರ್ದಿಷ್ಟ ಬಯಕೆ ಅಥವಾ ಅವಶ್ಯಕತೆಯಲ್ಲಿ ಪಾಲ್ಗೊಳ್ಳುವ ಸಂಭವನೀಯ ಗ್ರಾಹಕರಿಂದ ಕೂಡಿರುತ್ತದೆ. ಅವರು ಅನಿರ್ದಿಷ್ಟ ಬಯಕೆ ಅಥವಾ ಅವಶ್ಯಕತೆಯನ್ನು ತೃಪ್ತಿ ಪಡಿಸಲು ವಿನಿಮಯದಲ್ಲಿ ಭಾಗವಹಿಸಲು ಇಷ್ಟವುಳ್ಳವರೂ ಮತ್ತು ಶಕ್ಯರೂ ಆಗಿರುತ್ತಾರೆ.''[೧೧]

ಡಬ್ಲ್ಯೂ. ಎಸ್. ಜವನ್ಸ್ ಅವರು ಪ್ರಕಾರ ''ಮಾರುಕಟ್ಟೆ ಎಂದರೆ ಹಣವನ್ನು ಸರಕಿಗೆ ಅಥವಾ ಸರಕುಗಳನ್ನು ಸರಕುಗಳಿಗೆ ವಿನಿಮಯಿಸುವ ಉದ್ದೇಶದಿಂದ ಮಾರುವವರು ಮತ್ತು ಕೊಳ್ಳುವವರು ಬೇಟೆಯಾಡುವ ಸ್ಥಳವಾಗಿದೆ.''[೧೨]

ಪ್ರೊ.ಜೆ.ಕೆ. ಮೆಹ್ತಾರವರ ಅಭಿಪ್ರಾಯದಲ್ಲಿ, ''ಮಾರುಕಟ್ಟೆಯೆಂದರೆ ಒಂದು ಸ್ಥಳದಿಂದ ಮಾರಾಟಕ್ಕೆ ಒದಗಿಸಲ್ಪಟ್ಟ ವಸ್ತುವಿಗೆ ಇರುವ ಬೇಡಿಕೆಯಾಗಿದೆ.''[೧೩]

ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಇಂದು ಮಾರುವವರು ಮತ್ತು ಕೊಳ್ಳುವವರು ಪ್ರತ್ಯೇಕವಾಗಿ ಹಾಜರಿರಬೇಕೆಂಬುದಾಗಲಿ ಅಥವಾ ಅವರು ಬೇಟೆಯಾಗುವ ನಿರ್ದಿಷ್ಟ ಸ್ಥಳವಾಗಲೀ ಅಥವಾ ಪ್ರತ್ಯಕ್ಷವಾಗಿ ಅವರು ಕ್ರಯವಿಕ್ರಯ ಮಾಡಬೇಕೆಂಬುದಾಗಲಿ ಮಾರುಕಟ್ಟೆಯ ಅವಶ್ಯಕವಾದ ಅಂಶವೆಂದು ಪರಿಗಣಿಸಲ್ಪಟ್ಟಿಲ್ಲ. ಒಂದೇ ವೇಳೆಗೆ ಒಂದು ವಸ್ತುವಿಗೆ ಒಂದೇ ಬೆಲೆ ಇರುವಂತೆ ಮಾರುವವರು ಮತ್ತು ಕೊಳ್ಳುವವರು ಅನಿರ್ಬಂಧವಾಗಿ ಸಂಪರ್ಕಿಸುವ ಸನ್ನಿವೇಶವೇ ಮಾರುಕಟ್ಟೆ.

ಅರ್ಥಶಾಸ್ತ್ರಜ್ಞರ ವ್ಯಾಖ್ಯಾನಗಳಿಂದ ತಿಳಿದುಬರುವುದೇನೆಂದರೆ ಮಾರುಕಟ್ಟೆಯ ಅರ್ಥ ವಿವರಣೆಯು ವಿಶಾಲವಾಗಿದ್ದು ಅದನ್ನು ಹಲವಾರು ರೀತಿಯಿಂದ ವ್ಯಾಖ್ಯಾನಿಸಲಾಗಿದೆ. ಅದರಲ್ಲಿ ಈ ಕೆಳಗೆ ನಮೂದಿಸಿದ ಯಾವುದೇ ಅಂಶವು ಒಳಗೊಂಡಿರಬಹುದು.

ಮಾರುಕಟ್ಟೆಯು ಕ್ರಯ-ವಿಕ್ರಯಗಳು ನಡೆಯುವ ಯಾವುದೇ ನಿರ್ದಿಷ್ಟ ಬಯಲು ಜಾಗ ಅಥವಾ ದೊಡ್ಡ ಕಟ್ಟಡ ಅಥವಾ ಕಟ್ಟಡಗಳಿರುವ ಸ್ಥಳ ಆಗಿರಬಹುದು. ಮಾರುಕಟ್ಟೆಯು ಜನರು ಸರಕುಗಳನ್ನು ಕೊಳ್ಳಲು ಮತ್ತು ಮಾರಲು ಒಂದು ನಿರ್ದಿಷ್ಟ ಸ್ಥಳದಲ್ಲಿ ಒಂದು ನಿರ್ದಿಷ್ಟ ಸಮಯದಕ್ಕೆ ಸೇರುವ ಸನ್ನಿವೇಶವಾಗಿದೆ. ಇಂಥ ಮಾರುಕಟ್ಟೆಗಳು ಹಳ್ಳಿಗಳಲ್ಲಿ ವಾರಕ್ಕೊಮ್ಮೆ ಅಥವಾ ನಿಯತಕಾಲಿಕವಾಗಿ ನಡೆಯುವ ಜಾತ್ರೆಯ ಅಥವಾ ಉತ್ಸವದ ಸಮಯದಲ್ಲಿ ಕಂಡುಬರುತ್ತದೆ. ಮಾರುಕಟ್ಟೆಯು ಸರಕುಗಳ ವಿನಿಮಯವನ್ನೇರ್ಪಡಿಸುವ ಒಂದು ಸಂಘಟನೆಯಾಗಿರಬಹುದು. ಮಾನವನ ಬಯಕೆಗಳನ್ನು ತೃಪ್ತಿಪಡಿಸಲು ಕೈಗೊಂಡ ಆರ್ಥಿಕ ಕಾರ್ಯವೇ ಕೊಳ್ಳುವ ಮತ್ತು ಮಾರುವ ಚಟುವಟಿಕೆಯಾಗಿದೆ.

ಒಟ್ಟಿನಲ್ಲಿ ಹೇಳಬೇಕೆಂದರೆ ಮಾರುಕಟ್ಟೆಯು ಮಾರುವವರು ಮತ್ತು ಕೊಳ್ಳುವವರು ಕೂಡಿ ವ್ಯವಹರಿಸುವ ಒಂದು ನಿರ್ದಿಷ್ಟ ಸನ್ನಿವೇಶ. ಸ್ಥಳ ಅಥವಾ ಪ್ರದೇಶವಾಗಿದೆ. ಮಾರುವವರು ಅಥವಾ ಕೊಳ್ಳುವವರು ಸರಕು ಸೇವೆಗಳನ್ನು ವರ್ಗಾಯಿಸಲು ತೀರ್ಮಾನವನ್ನು ಕೈಗೊಳ್ಳಬಹುದಾದ ಸ್ಥಿತಿಗತಿಗಳ ಅಥವಾ ಅಂಶಗಳ ಕೂಟವಾಗಿದೆ ಮತ್ತು ಸರಕು ಅಥವಾ ಸೇವೆಗೆ ಸಂಭವನೀಯ ಗ್ರಾಹಕರ ಬೇಡಿಕೆಯಿರುವ ಸನ್ನಿವೇಶವಾಗಿದೆ.

ಅರ್ಥಶಾಸ್ತ್ರದ ಪರಿಭಾಷೆಯಲ್ಲಿ 'ಮಾರುಕಟ್ಟೆ' ಎನಿಸಿಕೊಳ್ಳಬೇಕಾದರೆ ಕೆಲವು ಷರತ್ತುಗಳು ಪೂರೈಸಲ್ಪಡ ಬೇಕು. ಅವುಗಳೆಂದರೆ-ಮಾರಾಟಕ್ಕೆ ಒಂದು ಸ್ಥಳವಿರಬೇಕು. ವಸ್ತುವನ್ನು ಮಾರಾಟ ಮಾಡುವವರು ಮತ್ತು ಕೊಳ್ಳುವವರು ಇರಬೇಕು. ವಸ್ತುವಿನ ಬೆಲೆಯ ಬಗ್ಗೆ ವ್ಯಾಪಾರಿಗಳ ಮತ್ತು ಗ್ರಾಹಕರ ನಡುವೆ ಒಪ್ಪಂದ ಇರಬೇಕು. ವ್ಯಾಪಾರದ ವಸ್ತು ಒಂದೇ ರೀತಿಯದಾಗಿರಬಹುದು ಅಥವಾ ವೈವಿಧ್ಯಮಯವಾಗಿರಬಹುದು ಮತ್ತು ವಸ್ತುವಿಗೆ ಹಣದ ರೂಪದ ಮೌಲ್ಯ ಇರಬೇಕು.

**ಮಾರುಕಟ್ಟೆಯ ಗಾತ್ರ:** ಕೆಲವು ವಸ್ತುಗಳ ಸಂದರ್ಭಗಳಲ್ಲಿ ಮಾರುಕಟ್ಟೆಯು ವಿಶಾಲವಾಗಿದ್ದು ಅದು ಇಡೀ ದೇಶ ಇಲ್ಲವೇ ಪ್ರಪಂಚವನ್ನು ಅವಲಂಬಿಸಿರುತ್ತದೆ. ಇನ್ನೂ ಕೆಲವು ವಸ್ತುಗಳಿಗೆ ಮಾರುಕಟ್ಟೆಯು

ಸೀಮಿತವಾಗಿದ್ದು ಅದು ಗ್ರಾಮ ಪ್ರದೇಶಕ್ಕೆ ಮೀಸಲಾಗಿರುತ್ತದೆ. ಮಾರುಕಟ್ಟೆಯ ಗಾತ್ರವು ಹಲವಾರು ಅಂಶಗಳನ್ನು ಅವಲಂಬಿಸಿರುತ್ತದೆ. ಅವುಗಳೆಂದರೆ

**೧. ವಸ್ತುವಿನ ಲಕ್ಷಣ:** ಒಂದು ವಸ್ತು ವಿಶಾಲವಾದ ಮಾರುಕಟ್ಟೆ ಹೊಂದಬೇಕಾದರೆ ಅದು ಸುಲಭವಾಗಿ ಸಾಗಿಸುವಂತಿರಬೇಕು, ಬಾಳಿಕೆ ಬರುವಂತಿರಬೇಕು, ಪ್ರದರ್ಶಿಸಲು ಬರುವಂತಿರಬೇಕು, ಪೂರೈಕೆ ಅಧಿಕಗೊಳಿಸು ವಂತಿರಬೇಕು.

**೨. ಬೇಡಿಕೆಯ ಸ್ವರೂಪ:** ಸರಕುಗಳ ಬೇಡಿಕೆ ಸ್ವರೂಪವು ಮಾರುಕಟ್ಟೆಯ ಗಾತ್ರವನ್ನು ನಿರ್ಧರಿಸುತ್ತದೆ. ಚಿನ್ನ, ಬೆಳ್ಳಿ, ವಸ್ತುಗಳಿಗೆ ಪ್ರಪಂಚದಲ್ಲೆಲ್ಲಾ ಬೇಡಿಕೆಯಿದೆ. ಆದುದರಿಂದ ಅದಕ್ಕೆ ವಿಶಾಲವಾದ ಮಾರುಕಟ್ಟೆ ಇದೆ.

**೩. ಶಾಂತಿ ಮತ್ತು ಭದ್ರತೆ:** ದೇಶದಲ್ಲಿ ಶಾಂತಿ ಮತ್ತು ಭದ್ರತೆ ಇಲ್ಲದಿದ್ದಾಗ ದೂರದ ಪ್ರದೇಶಗಳಿಗೆ ವಸ್ತುಗಳನ್ನು ಕಳಿಸುವುದು ಮತ್ತು ದೂರದ ಪ್ರದೇಶಗಳಿಂದ ವಸ್ತುಗಳನ್ನು ತರಿಸುವುದು ಕಷ್ಟವಾಗುತ್ತದೆ. ಯುದ್ಧ ಕಾಲದಲ್ಲಿ ಮಾರುಕಟ್ಟೆ ಸಂಕುಚಿತಗೊಳ್ಳುತ್ತದೆ. ಹೀಗಾಗಿ ಮಾರುಕಟ್ಟೆಯ ಗಾತ್ರವು ಪ್ರದೇಶದಲ್ಲಿ ನೆಲೆಸಿರುವ ಶಾಂತಿ ಮತ್ತು ಭದ್ರತೆಯನ್ನು ಅವಲಂಬಿಸಿರುತ್ತದೆ.

**೪. ಸಾರಿಗೆ ಮತ್ತು ಸಂಪರ್ಕಗಳು:** ಮಾರುಕಟ್ಟೆ ಗಾತ್ರವು ದೇಶದ ಸಾರಿಗೆ ಮತ್ತು ಸಂಪರ್ಕಗಳ ಅಭಿವೃದ್ಧಿಯನ್ನು ಅವಲಂಬಿಸಿದೆ. ಉತ್ತಮ ಸಾರಿಗೆ ಸಂಪರ್ಕದಿಂದ ಸರಕು-ಸೇವೆಗಳನ್ನು ವಿನಿಮಯ ಮಾಡಿಕೊಳ್ಳಬಹುದು. ಇದರಿಂದ ಮಾರುಕಟ್ಟೆ ವಿಶಾಲವಾಗಿದೆ.

**೫. ಸರ್ಕಾರದ ನೀತಿ:** ಮಾರುಕಟ್ಟೆಯ ಗಾತ್ರವು ಸರ್ಕಾರದ ನೀತಿಯಿಂದಲೂ ನಿರ್ಧರಿಸಲ್ಪಡುತ್ತದೆ. ತೆರಿಗೆ-ಸುಂಕಗಳು ಮತ್ತು ಕೋಟಾಗಳು, ರಿಯಾಯ್ತಿಗಳು, ಪ್ರೋತ್ಸಾಹಕಗಳು ಮಾರುಕಟ್ಟೆಯ ಗಾತ್ರವನ್ನು ನಿರ್ಧರಿಸುತ್ತವೆ.

**೬. ಶ್ರಮ ವಿಭಜನೆ:** ಆಡಂಸ್ಮಿತ್‌ರ ಪ್ರಕಾರ ಮಾರುಕಟ್ಟೆಯ ಗಾತ್ರವು ಶ್ರಮ ವಿಭಜನೆಗೆ ಅಡ್ಡಿಯಾಗಿದೆ. ಅಂದರೆ ಶ್ರಮ ವಿಭಜನೆಯು ಯಶಸ್ವಿಯಾಗಬೇಕಾದರೆ ಮಾರುಕಟ್ಟೆಯು ವಿಶಾಲವಾಗಿರಬೇಕು. ವಿಶಾಲವಾದ ಮಾರುಕಟ್ಟೆಯಿಂದ ಶ್ರಮ ವಿಭಜನೆಯ ಮೂಲಕ ಅಧಿಕ ಸರಕುಗಳನ್ನು ಉತ್ಪಾದಿಸಿ ಮಾರಾಟ ಮಾಡಬಹುದು. ಇದರಿಂದ ಮಾರುಕಟ್ಟೆಯ ಗಾತ್ರ ಅಧಿಕಗೊಳ್ಳುತ್ತದೆ.

ದೇಶದ ಆರ್ಥಿಕ ವ್ಯವಸ್ಥೆಯೇ ಆಗಲಿ. ರಾಜ್ಯದ ಆರ್ಥಿಕ ವ್ಯವಸ್ಥೆಯೇ ಆಗಲಿ, ಸಮುದಾಯದ ಆರ್ಥಿಕ ವ್ಯವಸ್ಥೆಯಾಗಲಿ ವಸ್ತುಗಳ ಉತ್ಪಾದನೆ ಎಷ್ಟು ಮುಖ್ಯವೋ ಅವುಗಳ ಮಾರಾಟವು ಅಷ್ಟೇ ಮುಖ್ಯವಾಗಿದೆ. ಉತ್ಪಾದಿಸಿದ ವಸ್ತುಗಳನ್ನು ಮಾರಾಟಕ್ಕೆ ಸಿದ್ಧಪಡಿಸಿಬಿಟ್ಟರೆ ಉತ್ಪಾದನಾ ಕಾರ್ಯಕೊನೆಗೊಳ್ಳುತ್ತದೆ. ಅಲ್ಲಿಂದ ಮುಂದಕ್ಕೆ ಅಂದರೆ ವಸ್ತುಗಳ ಉತ್ಪಾದಕನಿಂದ ಬಳಕೆದಾರರ ಕೈಗೆ ಸೇರುವವರೆಗೂ ನಡೆಯುವ ಎಲ್ಲಾ ಪ್ರಯತ್ನಗಳು ಮಾರಾಟದ ಭಾಗವಾಗಿರುತ್ತದೆ. ಅದು ಯಾವುದೇ

ತೊಂದರೆಯಿಲ್ಲದೆ, ವಸ್ತುಗಳನ್ನು ಮಾರಾಟ ಮಾಡಲು ಮತ್ತು ಸರಕುಗಳನ್ನು ಕೊಂಡುಕೊಳ್ಳಲು ಎಲ್ಲಾ ಸೌಲಭ್ಯಗಳು ಸಿಗುವಂತೆ ಮಾರುಕಟ್ಟೆ ವ್ಯವಸ್ಥೆ ಇರಬೇಕು.

ಲಂಬಾಣಿಗರು ತಯಾರಿಸಿದ ವಸ್ತುಗಳ ಮಾರಾಟದಲ್ಲಿ ಹಾಗೂ ಕೊಂಡುತಂದ ವಸ್ತುಗಳ ಮಾರಾಟಕ್ಕಾಗಿ ಇಂತಹ ಸ್ಥಳಗಳು ದೂರವಾಗಿವೆ. ಕಾರಣ ಲಂಬಾಣಿಗರು ಮನೋಭಾವದಲ್ಲಿ ಅಸ್ಪೃಶ್ಯತೆ ಮನೋಭಾವ ಇರಬಹುದು. ಮಾರುಕಟ್ಟೆಯ ನಿಯಮಗಳು ತೆರಿಗೆಗಳು ಇವರಿಗೆ ಒಗ್ಗದ ವಿಷಯವಾಗಿರಬಹುದು. ಇತ್ಯಾದಿ ಕಾರಣಗಳಿಂದ ಲಂಬಾಣಿಗರು ಮಾರುಕಟ್ಟೆಯಿಂದ ದೂರ ಉಳಿದಿದ್ದಾರೆ. ಲಂಬಾಣಿಗರು ತಾವು ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡಬೇಕಾಗಿರುವುದು ಅನಿವಾರ್ಯ. ಮಾರಾಟ ವ್ಯವಸ್ಥೆ ಮೂಲಕ ಮಾರಾಟ ಮಾಡುವುದಲ್ಲದೆ ಮಾರಾಟ ಮಾಡುವ ಹಂತದಲ್ಲಿ ತಮ್ಮದೇ ನಿಯಮ ಕಾರ್ಯಸೂಚಿ ರೂಢಿಸಿಕೊಂಡು ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾರೆ.

**ವಸ್ತು ವಿನಿಮಯ:** ಒಂದು ವಸ್ತು ವ್ಯಕ್ತಿಯಿಂದ ಮತ್ತೊಂದು ವ್ಯಕ್ತಿಗೆ ವಸ್ತುಗಳನ್ನು ವರ್ಗಾವಣೆ ಮಾಡುವುದೇ ವಸ್ತು ವಿನಿಮಯ ಕಾರ್ಯವೆಂದು ಹೇಳುತ್ತೇವೆ. ಇಲ್ಲಿ ಇಬ್ಬರು ಕಾರ್ಯದಲ್ಲಿ ಸಮನಾಗಿ ಪಾಲುಗೊಳ್ಳುವರು. ವಿನಿಮಯ ಕಾರ್ಯ ಕೇವಲ ಮಾರುಕಟ್ಟೆಯಲ್ಲಿ ಆಗಬೇಕೆಂದಿಲ್ಲ. ಆದ್ದರಿಂಧ ಲಂಬಾಣಿಗರು ತಾವು ತಯಾರಿಸಿದ ವಸ್ತುಗಳನ್ನು ಬೀದಿ ಬೀದಿಗೆ, ಜನಸಂದಣಿ ಇರುವ ಇತರೆ ಪ್ರದೇಶದಲ್ಲಿ ಹೋಗಿ ಅನುಭೋಗಿಸಿ ತಮ್ಮ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಲಂಬಾಣಿಗರು ತಯಾರಿಸಿದ ವಸ್ತುಗಳನ್ನು ಕೆಲವೊಮ್ಮೆ ನೇರವಾಗಿ ಮಧ್ಯವರ್ತಿದಾರರಿಗೆ ವಸ್ತುಗಳನ್ನು ಮಾರುತ್ತಾರೆ. ಹಾಗೂ ನೈಸರ್ಗಿಕ ಉತ್ಪನ್ನಗಳನ್ನು ನೇರವಾಗಿ ಅನುಭೋಗಿಗಳಿಗೆ ಹುಡುಕಿಕೊಂಡು ಮನೆಮನೆಗೆ ಹೋಗಿ ಮಾರುತ್ತಾರೆ. ವೃತ್ತಿದಾರರು ಅನುಭೋಗಿಗಳನ್ನು ಹುಡುಕಿಕೊಂಡು ಹೋಗಿ ತಮ್ಮ ವಸ್ತುಗಳನ್ನು ಮಾರಲು ಒಂದಲ್ಲ ಒಂದು ತಂತ್ರವನ್ನು ಉಪಯೋಗಿಸುತ್ತಾರೆ. ಇತರೆ ಸಮುದಾಯದ ವೃತ್ತಿದಾರರು ತಾವು ತಯಾರಿಸಿದ ಸರಕುಗಳೂ ಅಥವಾ ಸೇವೆಗೆ ಸುಗ್ಗಿಯ ಕಾಲದಲ್ಲಿ ರೈತರಿಂದ ಪಡೆದುಕೊಳ್ಳುತ್ತಾರೆ. ಇತರೆಯವರಿಗೆ ತಮ್ಮ ವಸ್ತು ಮತ್ತು ಸೇವೆಗಳನ್ನೂ ಹಣಕ್ಕೆ ಮಾರುತ್ತಾರೆ.

ವಸ್ತುಗಳು ಭೌತಿಕ ನಿರ್ವಹಣೆ ಎಂದರೆ ಉತ್ಪಾದಕರಿಂದ ಬಳಕೆದಾರ ಅಥವಾ ಉಪಯೋಗಿಸುವವನಿಗೆ ವಸ್ತುಗಳನ್ನು ಸಾಗಿಸುವುದು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಸ್ತುಗಳನ್ನು ಭೌತಿಕವಾಗಿ ಸಾಗಿಸು ವುದು. ಉತ್ಪನ್ನ ಮಾರಾಟವಾಗುವವರೆಗೂ ವಸ್ತುಗಳನ್ನು ತಮ್ಮಲ್ಲಿಯೇ ಇಟ್ಟುಕೊಂಡು ಬೇಡಿಕೆ ಬಂದಾಗ ಮಾರಾಟ ಮಾಡುವ ಸ್ಥಳಕ್ಕೆ ಸಾಗಿಸುತ್ತಾರೆ.

ಸಾಗಾಣಿಕೆ ವ್ಯವಸ್ಥೆಯಿಂದ ಪ್ರಪಂಚದ ಮಾರಾಟದಲ್ಲಿ ಕ್ರಾಂತಿ ನಡೆದಿದೆ. ಸಾಗಾಣಿಕೆ ವ್ಯವಸ್ಥೆಯಿಂದ ವಸ್ತು ತಲುಪಬೇಕಾದವರಿಗೆ ತಲುಪುತ್ತದೆ. ಇಲ್ಲದಿದ್ದರೆ ವಸ್ತು ನಾಶವಾಗುತ್ತದೆ. ವಸ್ತು ತನ್ನ ಗುಣಮಟ್ಟ ಕಳೆದುಕೊಳ್ಳುತ್ತದೆ. ಪರಿಣಾಮ ಕಸುಬುದಾರ ನಷ್ಟಕ್ಕೆ ಒಳಗಾಗುತ್ತಾನೆ. ಈ ಕಸುಬುದಾರರಿಗೆ ಪ್ರತ್ಯೇಕ ಸಾರಿಗೆ ವ್ಯವಸ್ಥೆ ಇಲ್ಲವಾದರೂ ಅನುಕೂಲಕ್ಕೆ ತಕ್ಕಂತೆ ಬಳಕೆದಾರನ ಮನೆ ಬಾಗಿಲಿಗೆ ಹೋಗಿ ಮಾರಟ ಮಾಡುವರು.

ಲಂಬಾಣಿ ಸಮುದಾಯದವರಿಗೆ ಪ್ರತ್ಯೇಕವಾದಂತಹ ಮಾರುಕಟ್ಟೆ ವ್ಯವಸ್ಥೆ ಇರುವುದಿಲ್ಲ. ಮಾರುಕಟ್ಟೆಯಲ್ಲಿ ಇವರಿಗಾಗಿ ಪ್ರತ್ಯೇಕ ಸ್ಥಳ ಕಂಡುಬರುವುದಿಲ್ಲ. ಆದರೂ ಮಾರುಕಟ್ಟೆ ವ್ಯವಸ್ಥೆ ಇರದಿದ್ದರೂ ತಮ್ಮದೇ ವ್ಯವಸ್ಥೆ ಮೂಲಕ ವಸ್ತುಗಳನ್ನು ಮಾರಾಟ ಮಾಡುವರು. ಇದು ಅವರ ಬದುಕಿಗೆ ಅನಿವಾರ್ಯ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮಾರಾಟದ ವ್ಯಾಪ್ತಿಯನ್ನು ವಿಸ್ತರಿಸುತ್ತ ತಮ್ಮ ತಂತ್ರಗಾರಿಕೆ ಮೂಲಕ ಮಾರಾಟ ಮಾಡುವರು. ಲಂಬಾಣಿಗರು ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವ ಸ್ಥಳಗಳೆಂದರೆ ಸಂತೆ, ಜಾತ್ರೆ, ಬೀದಿ, ನಿಲ್ದಾಣ, ಯಾತ್ರಾಸ್ಥಳ, ರಸ್ತೆ ಬದಿ, ಜನಸಂದಣಿ ಪ್ರದೇಶಗಳು. ಇವರ ವಸ್ತುಗಳ ಮಾರಾಟಕ್ಕೆ ನಿಶ್ಚಿತ ಪ್ರದೇಶ ಅಥವಾ ವ್ಯವಸ್ಥೆ ಅಥವಾ ಸ್ಥಾನವೆಂಬುದಿಲ್ಲ. ಮಾರುಕಟ್ಟೆಯಲ್ಲಿ ಆಧುನಿಕ ಕೈಗಾರಿಕೆಗಳು ತಯಾರಿಸಿದ ವಸ್ತುಗಳು ಕಡಿಮೆ ಬೆಲೆಗೆ ದೊರೆಯುವುದರಿಂದ ಇವರ ವಸ್ತುಗಳ ಮಾರಾಟಕ ಕಷ್ಟಕರ. ಲಂಬಾಣಿಗರು ತಯಾರಿಸಿದ ಉಡುಪುಗಳಿಗೆ ಆಧುನಿಕ ಬಟ್ಟೆ ಉದ್ಯಮಗಳು ಪೈಪೋಟಿ ನೀಡುತ್ತವೆ. ಆದುದರಿಂದ ಲಂಬಾಣಿ ಜನಾಂಗದವರು ತಯಾರಿಸುತ್ತಿದ್ದ ಕಸೂತಿ ಕೆಲಸಗಳು ಮತ್ತು ಇನ್ನಿತರ ವಸ್ತುಗಳ ಬಗ್ಗೆ ತಮ್ಮ ಉದ್ಯೋಗ ಕಳೆದುಕೊಳ್ಳುವಂತಾಗಿದೆ. ಆಧುನಿಕ ಕೆಲವು ಉದ್ಯಮಗಳು ಬೇರೆ ಸಮುದಾಯದವರ ಸವಾಲಾಗಿ ನಿಂತಿವೆ.

**ಉತ್ಪಾದನೆ :** ಒಂದು ವಸ್ತುವಿನ ಉತ್ಪಾದನೆಯು ಸಫಲವಾಗಬೇಕೆಂದರೆ ಆ ವಸ್ತುವು ಅವರ ಅಪೇಕ್ಷೆ ಮತ್ತು ಅವಶ್ಯಕತೆಗಳಿಗನುಗುಣವಾಗಿ ಅನುಭೋಗಿಗಳಿಗೆ ಸೇರಬೇಕು. ಏಕೆಂದರೆ ಉತ್ಪಾದಿಸಿದ ವಸ್ತುಗಳನ್ನು ಹಾಗೆಯೇ ಇಡುವುದು ತಪ್ಪಾಗುತ್ತದೆ. ಇದರ ಗುಣಮಟ್ಟ ಕ್ಷೀಣಿಸುವ ಮೊದಲು ಎಲ್ಲಿ ಸೇರಬೇಕೋ ಅಲ್ಲಿಗೆ ಸೇರಬೇಕಾಗುತ್ತದೆ. ಹಾಗೆ ಮಾಡುವುದರಿಂದ ಆ ವಸ್ತುಗಳ ಉತ್ಪಾದನೆ ಸಾರ್ಥಕವಾಗುತ್ತದೆ.

ಉತ್ಪಾದಿತ ವಸ್ತುಗಳನ್ನು ಬಳಕೆದಾರರಿಗೆ ಸೇರಿಸುವ ಅಥವಾ ವರ್ಗಾಯಿಸಿದ ಕ್ರಿಯೆಯನ್ನು ಮಾರಾಟದ ಪ್ರಕ್ರಿಯೆ ಎಂದು ಕರೆಯುವರು. ಉತ್ಪಾದಕರಿಂದ ಬಳಕೆದಾರರಿಗೆ ನಿಯಂತ್ರಿಸುವ ವ್ಯವಹಾರಿಕ ಚಟುವಟಿಕೆಗಳ ನಿರ್ವಹಣೆ ಮಾರಾಟದ ಪ್ರಕ್ರಿಯೆ ಆಗಿದೆ.

ಲಂಬಾಣಿಗರು ವಸ್ತುಗಳನ್ನು ಉತ್ಪಾದಿಸಿ ನೇರವಾಗಿ ಮಾರಾಟದಲ್ಲಿ ತೊಡಗುತ್ತಾರಾದರೂ ಉತ್ಪಾದನಾ ವಸ್ತು ವಿವಿಧ ಹಂತದಿಂದ ಹರಿದು ಬರಬೇಕಾಗಿದೆ. ಒಂದು ವಸ್ತುವನ್ನು ಹಲವಾರು ತೊಂದರೆಗಳ ನಡುವೆ ಉತ್ಪಾದಿಸಿ ಅದನ್ನು ತುಂಬಾ ಜಾಗೃತವಾಗಿ ನೇರ ಮಾರಾಟದ ಮೂಲಕ ಅನುಭೋಗಿಗಳನ್ನು ಹುಡುಕಿಕೊಂಡು ಹೋಗಿ ವಸ್ತುಗಳನ್ನು ಮಾರಾಟಮಾಡಬೇಕು. ಲಂಬಾಣಿಗರು ಉತ್ಪಾದಿಸಿದ ವಸ್ತುಗಳು ಗ್ರಾಹಕರಿಗೆ ಆಕರ್ಷಣೆಯವಾಗಿ ಮಾತುಗಾರಿಕೆ ಮೂಲಕ ಸರಕುಮಾರಾಟ ಮಾಡುವ ಕೌಶಲ್ಯ ಹೊಂದಬೇಕಾಗಿದೆ.

ಲಂಬಾಣಿಗರು ತಯಾರಿಸುವ ವಸ್ತು ಅವರ ಶ್ರಮ ಮತ್ತು ಸಂಪ್ರದಾಯದಿಂದ ಕೂಡಿದೆ. ಅವರು ಯಾವ ವಸ್ತುಗಳನ್ನು ಹೇಗೆ ಉತ್ಪಾದಿಸಬೇಕು. ಹೇಗೆ ಅವಲಂಬಿಸಬೇಕು? ಯಾವ ವಸ್ತುವಿಗೆ ಯಾವ ರೂಪ ಮತ್ತು ವಿನ್ಯಾಸ ಕೊಡಬೇಕು. ಎಂಥಹ ಬಣ್ಣಗಳು, ಕೊಡಬೇಕು? ಎಂದು ಮೊದಲೇ ನಿರ್ಧರಿಸುತ್ತಾರೆ.

ಇವರು ಲಾಭಕ್ಕಿಂತ ಸೇವೆಗೆ ಹೆಚ್ಚಿನ ಮಹತ್ವ ಕೊಡುತ್ತಾರೆ. ಲಂಬಾಣಿಗರು ನಂಬಿಕೆಯ ಮೇಲೆ, ನಯ ವಿನಯದಿಂದ ಬೇಡಿಕೊಂಡು ವಸ್ತುವಿನ ಗುಣಮಟ್ಟ, ತಾಳಿಕೆ, ಬಾಳಿಕೆ, ಇನ್ನು ಮುಂತಾದವುಗಳನ್ನು ಕೂಲಂಕಶವಾಗಿ ತಿಳಿದು ಮಾರಾಟ ಮಾಡುವರು.

ಲಂಬಾಣಿಗರು ತಾವು ಉತ್ಪಾದಿಸಿದ ವಸ್ತುವಿಗೆ ಬೆಲೆ ಕಟ್ಟುವುದು ಸಹಜ. ಹಾಗೆ ಬೆಲೆ ನಿರ್ಧರಿಸಿದ ಮೇಲೆ ವಸ್ತುವನ್ನು ಜನರು ಹೇಗೆ ಸ್ವೀಕರಿಸುತ್ತಾರೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧಾರವಾಗಬೇಕಾಗುತ್ತದೆ. ಇಲ್ಲಿ ವಸ್ತುವನ್ನು ಉತ್ಪಾದಿಸಿ ಮಾಡಲು ವಸ್ತುವಿನ ಖರ್ಚು ವೆಚ್ಚವನ್ನು ತೆಗೆಯಲಾಗುತ್ತದೆ. ಸಾಮಾನ್ಯವಾಗಿ ಜನರಿಗೆ ತುಂಬಾ ಸರಳವಾಗಿ ಕೈಗೆಟಕುವ ಬೆಲೆಯನ್ನು ನಿರ್ಧರಿಸುತ್ತಾರೆ. ನಿರ್ಧರಿಸಿದ ಬೆಲೆಗಳು ಜಾತ್ರೆ, ಸಂತೆ, ಮಾರುಕಟ್ಟೆ, ಹಬ್ಬ-ಹರಿದಿನ ಹಾಗೂ ಪ್ರವಾಸಿ ಸ್ಥಳಗಳಲ್ಲಿ ಹಾಗೂ ದೇವಸ್ಥಾನ ಇತ್ಯಾದಿಗಳಲ್ಲಿ ಏರಿಕೆ ಮತ್ತು ಇಳಿಕೆಯಲ್ಲಿ ಕಂಡುಬರಬಹುದು. ಅಲ್ಲಿ ಪರಿಸ್ಥಿತಿಗನುಗುಣವಾಗಿ ವಸ್ತುವನ್ನು ಮಾರುತ್ತಾರೆ.

ಲಂಬಾಣಿಗರು ವಸ್ತುಗಳ ಉತ್ಪಾದನೆಯಲ್ಲಿ ಹಣರೂಪಿ ವೆಚ್ಚಕ್ಕಿಂತ ನೈಜ ವೆಚ್ಚ ಅಧಿಕವಾಗಿದೆ. ಹೆಚ್ಚಾಗಿ ಶ್ರಮ ಇಲ್ಲಿ ವ್ಯಯ ಮಾಡಬೇಕಾಗುತ್ತದೆ. ಶ್ರಮ ತುಂಬಾ ಶ್ರದ್ಧೆಯಿಂದ ಹಂತ ಹಂತವಾಗಿ ಯಾವ ವಯಮಾನದವರು ಎಷ್ಟು ವಿನಿಯೋಗಿಸಬೇಕು. ಎಂತಹ ಕರಕುಶಲತೆ ಬೇಕು ಎಂದು ನಿರ್ಧರಿಸುತ್ತಾರೆ. ಇವರು ಹಣ ಇಲ್ಲದಿದ್ದರೂ ಇವರ ನೈಜ ಶಕ್ತಿಯಿಂದ ವಸ್ತು ಉತ್ಪಾದಿಸಬಲ್ಲರು.

ಉತ್ಪಾದಿಸುವ ವಸ್ತುವನ್ನು ಮಾರುಕಟ್ಟೆಗೆ ತರುವ ಮುನ್ನ ಅದರ ತಯಾರಿಕೆಗೆ ತಗಲುವ ವೆಚ್ಚವನ್ನು ಅಂದಾಜು ಲೆಕ್ಕಹಾಕಿ ಅದಕ್ಕೆ ವಿನಿಯೋಗಿಸಿದ ಸಮಯ, ಸದಸ್ಯರ ಸಂಖ್ಯೆ, ವಸ್ತುಗಳ ಉತ್ಪಾದನೆ, ಕಚ್ಚಾ ವಸ್ತುಗಳೂ, ಶ್ರಮ ಇತ್ಯಾದಿಗಳೆಲ್ಲವನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧಾರ ಮಾಡುವರು. ಏಕೆಂದರೆ ಅಂದಿನ ಸ್ಥಿತಿ, ಸಮಯ ಮೊದಲಾದ ಅಂಶಗಳು ಪ್ರಭಾವ ಬೀರುವುದರಿಂದ ವ್ಯತ್ಯಾಸ ಆಗುತ್ತದೆ. ಹಾಗೂ ವ್ಯತ್ಯಾಸದ ನಂತರ ಒಂದಿಷ್ಟಾದರೂ ಲಾಭ ಬರುತ್ತದೆ. ವಸ್ತುಗಳು ಯಾರೂ ಖರೀದಿಸದಿದ್ದಾಗ ಕಡಿಮೆ ಬೆಲೆಗೆ ಮಾರುವರು.

**ಲಂಬಾಣಿಗರ ಸರಕು-ಸೇವೆಗಳ ಮಾರಾಟ ಪ್ರಕ್ರಿಯೆಯ ಸಮಸ್ಯೆಗಳು.**

ಆಧುನಿಕ ಮಾರಾಟದ ವ್ಯವಸ್ಥೆ ಮಾರುವಿಕೆಯು ಒಂದು ಪ್ರಮುಖವಾದ ಕಾರ್ಯ. ಯಾವುದೇ ವೃತ್ತಿಯ ಯಶಸ್ಸು ಬಹುಮಟ್ಟಿಗೆ ಸರಕುಗಳ ಮಾರಾಟವನ್ನು ಅವಲಂಬಿಸಿದೆ. ಸರಕುಗಳ ಮಾರಾಟದಿಂದ ಉತ್ಪಾದಕನಿಗೆ ಆದಾಯ ಬರುತ್ತದೆ. ಇದರಿಂದ ತಮ್ಮ ವೃತ್ತಿಯನ್ನು ಅಭಿವೃದ್ಧಿಪಡಿಸಬಹುದು. ಉತ್ಪಾದಿತ ಸರಕುಗಳು ಮಾರಾಟವಾಗದಿದ್ದರೆ ನಷ್ಟ ಸಂಭವಿಸಿ ವೃತ್ತಿಯ ಕಡೆಗೆ ಆಸಕ್ತಿ ಕಡಿಮೆಯಾಗುವುದುಂಟು. ಆದುದರಿಂದ ಲಂಬಾಣಿಗರು ಇಂದು ತಮ್ಮ ಸರಕು-ಸೇವೆಗಳ ಮಾರಾಟ ಪ್ರಕ್ರಿಯೆಯಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಸಮಸ್ಯೆಗಳು ಮಾರಾಟ ಮಾಡುವ ಸರಕುಗಳನ್ನು ಅವಲಂಬಿಸಿರುತ್ತದೆ.

ಈ ಸಮಸ್ಯೆಗಳಿಗೆ ಎಲ್ಲಾ ಸರಕುಗಳಿಗೂ ಏಕರೂಪವಾಗಿ ಅನ್ವಹಿಸದೆ ಅವು ಬೇರೆ ಬೇರೆ ಸರಕುಗಳಿಗೆ ಬೇರೆ ಬೇರೆಯಾಗುತ್ತಾ ಹೋಗುತ್ತದೆ. ಲಂಬಾಣಿಗರು ವರ್ತಮಾನ ಮಾರುಕಟ್ಟೆಯಲ್ಲಿ ತಮ್ಮ ಉತ್ಪನ್ನದ ಮಾರಾಟದ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳೆಂದರೆ;

೧. **ಮಾರುಕಟ್ಟೆಯ ಸಮಾಚಾರ ಮತ್ತು ಸಂಶೋಧನೆ:** ಲಂಬಾಣಿಗರು ಮಾರಾಟದ ಕಾರ್ಯವನ್ನು ನಿರ್ವಹಿಸುವಾಗ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಹಿಡಿಯಬೇಕಾದರೆ ಅವರಿಗೆ ಮಾರುಕಟ್ಟೆಯ ಮಾಹಿತಿಯು ಅತ್ಯವಶ್ಯಕವಾಗಿ ಇರಬೇಕು. ಮಾರುಕಟ್ಟೆಯ ಸಮಾಚಾರವನ್ನು ಸಂಗ್ರಹಿಸುವ ಮತ್ತು ವಿಶ್ಲೇಷಿಸುವ ಕಾರ್ಯವನ್ನು ಮಾಡಬೇಕು. ತನ್ನ ಸರಕುಗಳೊಡನೆ ಪೈಪೋಟಿಗಿಳಿದಿರುವ ಸರಕುಗಳ ಬೆಲೆ, ಗುಣಮಟ್ಟ, ಸರಕುಗಳ ಮಾರಾಟದ ಪ್ರಮಾಣ, ಪ್ರತಿಸ್ಪರ್ಧಿಗಳು ನೀಡುತ್ತಿರುವ ಸೌಲಭ್ಯಗಳು, ಗ್ರಾಹಕರ ಅಭಿರುಚಿ ಮೊದಲಾದ ಸಂಗತಿಗಳನ್ನು ಉತ್ಪಾದಕರು ತಿಳಿದುಕೊಂಡಿಬೇಕಾಗುತ್ತದೆ. ಆದರೆ ನಮ್ಮ ಕುಲಕಸುಬುದಾರರಿಗೆ ಮಾರುಕಟ್ಟೆಯಲ್ಲಿನ ಸ್ಥಿತಿ-ಗತಿಗಳ ಬಗೆಗೆ ಸರಿಯಾದ ಜ್ಞಾನವಿಲ್ಲದೆ ತಮ್ಮ ಉತ್ಪನ್ನದ ಮಾರಾಟ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲಾರರು. ಮಾರುಕಟ್ಟೆಯ ಸರಿಯಾದ ಮಾಹಿತಿಯಿಂದ, ಗ್ರಾಹಕರ ಅವಶ್ಯಕತೆಗಳಿಗೆ ತಕ್ಕಂತೆ ಸರಕುಗಳನ್ನು ಉತ್ಪಾದಿಸಲು, ಸರಿಯಾದ ಬೆಲೆ, ಸರಿಯಾದ ಪ್ರಮಾಣದಲ್ಲಿ ಪೂರೈಸಲು ಸಾಧ್ಯವಾಗುತ್ತದೆ. ಆದರೆ ಲಂಬಾಣಿಗರಿಗೆ ಗ್ರಾಹಕರು ಯಾವ ಸರಕುಗಳನ್ನು ಕೊಳ್ಳಲು ಇಚ್ಚಿಸುತ್ತಾರೆ? ಯಾವ ಗುಣಮಟ್ಟದ, ಯಾವ ಗಾತ್ರದ, ಯಾವ ಬಣ್ಣದ, ಯಾವ ಆಕಾರದ ಸರಕುಗಳು ಅವರಿಗೆ ಬೇಕಾಗುತ್ತದೆ ಎಂಬ ಮಾಹಿತಿ ಇರುವುದಿಲ್ಲ. ಗ್ರಾಹಕರು ಯಾವ ಪ್ರಮಾಣದಲ್ಲಿ ಕೊಂಡುಕೊಳ್ಳುತ್ತಾರೆ. ಯಾವ ಬೆಲೆಗೆ ಕೊಳ್ಳಲು ಬಯಸುತ್ತಾರೆ. ಯಾವ ಬೆಲೆಯಿಂದ ಲಾಭ ಸಂಪಾದಿಸಲು ಸಾಧ್ಯವಿದೆ. ತನ್ನ ಸರಕುಗಳಿರುವ ಮಾರುಕಟ್ಟೆಯ ವ್ಯಾಪ್ತಿ ಎಷ್ಟು, ಗ್ರಾಹಕರು ತಮ್ಮ ಸರಕುಗಳನ್ನು ಯಾವ ಸಮಯದಲ್ಲಿ ಕೊಳ್ಳಲು ಇಚ್ಛಿಸುತ್ತಾರೆ ಎಂಬ ಮಾಹಿತಿಗಳ ಕೊರತೆಯನ್ನು ಎದುರಿಸುತ್ತಾರೆ. ಇದರಿಂದಾಗಿ ಲಂಬಾಣಿಗರು ತಮ್ಮ ಸರಕುಗಳನ್ನು ಮಾರಟ ಮಾಡಲಾಗದೆ ಲಾಭ ಸಂಪಾದಿಸಲಾಗದೆ. ವೃತ್ತಿಯ ಬಗೆಗ ಆಸಕ್ತಿ ಕಡಿಮೆ ಮಾಡಿಕೊಳ್ಳುತ್ತಾರೆ. ಇದನ್ನು ಸರಿಪಡಿಸಿಕೊಳ್ಳಬೇಕಾದರೆ ಮಾರುಕಟ್ಟೆಯ ಸಮಾಚಾರದ ಅರಿವು ಪ್ರತಿಯೊಬ್ಬ ಲಂಬಾಣಿಗರಿಗೆ ಇರುವುದು ಅತ್ಯಗತ್ಯ.

೨. **ಸಾರಿಗೆ ಮತ್ತು ಸಂಪರ್ಕ:** ಲಂಬಾಣಿಗರು ಉತ್ಪಾದಿಸಿದ ಸರಕುಗಳನ್ನು ಅವುಗಳ ಉಪಭೋಗದ ಸ್ಥಳಗಳಿಗೆ ಸಾಗುವುದು ಮಹತ್ವದ ಕಾರ್ಯ. ಈ ಕಾರ್ಯಕ್ಕಾಗಿ ಸಾರಿಗೆಯು ಅತ್ಯಾವಶ್ಯಕ. ಸಾರಿಗೆಯ ಸೌಕರ್ಯವಿಲ್ಲದೆ ಸರಕುಗಳ ಸಾಗಾಟವಾಗುವುದಿಲ್ಲ. ಸರಕುಗಳನ್ನು ಅವುಗಳ ಉತ್ಪಾದನಾ ಸ್ಥಳಗಳಿಂದ ಮಾರಾಟವಾಗುವ ಸ್ಥಳಗಳಿಗೆ ಸಾಗಿಸಬೇಕಾದರೆ ಉತ್ತಮ ಸಾರಿಗೆಬೇಕು. ಸಾರಿಗೆಯು ಸ್ಥಳ ತುಷ್ಟಿಗುಣವನ್ನು, ಸಮಯ ತುಷ್ಟಿಗುಣವನ್ನು ಮಾಡುತ್ತದೆ. ಉತ್ಪಾದಿಸಿ ಸರಕುಗಳು ಉತ್ಪಾದಿಸಲ್ಪಟ್ಟ ಸ್ಥಳಗಳಲ್ಲಿಯೇ ಮಾರಾಟವಾಗುವುದಿಲ್ಲ. ಅವುಗಳನ್ನು ಬಳಕೆದಾರರಲ್ಲಿಗೆ ಸಾಗಿಸಬೇಕು. ಬಳಕೆದಾರರಿಗೆ ಬೇಕಾದ ಸಮಯದಲ್ಲಿ ಅವುಗಳನ್ನು ಒದಗಿಸಬೇಕು. ಈ ಕಾರ್ಯವನ್ನು ಸಾರಿಗೆ ವ್ಯವಸ್ಥೆಯು ಮಾಡುತ್ತದೆ. ಸಾರಿಗೆ-ಸಂಪರ್ಕದಿಂದ ಮಾರುಕಟ್ಟೆಯು

ವಿಸ್ತಾರವಾಗಿರುತ್ತದೆ. ಇದರಿಂದ ದೊಡ್ಡ ಪ್ರಮಾಣದ ಉತ್ಪಾದನೆ ಸಾಧ್ಯವಾಗುತ್ತದೆ. ಸರಕುಗಳ ಬೇಡಿಕೆ ಹೆಚ್ಚಿಸುವುದರ ಜೊತೆಗೆ ಉತ್ಪಾದಕರ ಲಾಭದ ಪ್ರಮಾಣವನ್ನು ಹೆಚ್ಚಿಸುತ್ತದೆ. ಆದರೆ ಲಂಬಾಣಿಗರು ಸಣ್ಣ ಪ್ರಮಾಣದ ಉತ್ಪಾದಕರಾಗಿರುವುದರಿಂದ, ಅವರಿಗೆ ಉತ್ತಮ ಸಾರಿಗೆ ಸಂಪರ್ಕದ ಸವಲತ್ತುಗಳು ದೊರೆಯುವುದಿಲ್ಲ. ಹೀಗಾಗಿ ತಮ್ಮ ಉತ್ಪನ್ನವನ್ನು ಸ್ಥಳೀಯ ಸಂತೆ, ಜಾತ್ರೆ, ಯಾತ್ರಾ ಸ್ಥಳಗಳಲ್ಲಿ ಕಡಿಮೆ ಬೆಲೆಗೆ ಮಾರಾಟ ಮಾಡಲು ಸಾಧ್ಯತೆಗಳೇ ಹೆಚ್ಚು. ಲಂಬಾಣಿಗರು ಪೂರ್ವದಲ್ಲಿ ವ್ಯಾಪಾರಕ್ಕಾಗಿ ಎತ್ತುಗಳ ಮೇಲೂ ತಮ್ಮ ವ್ಯಾಪಾರವನ್ನು ಮಾಡುತ್ತಿದ್ದು, ಪ್ರಾಣಿಗಳ ಮೇಲೂ ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಿ ವ್ಯಾಪಾರ ಮಾಡುತ್ತಿರುವುದು ಕಂಡುಬರುತ್ತಿದ್ದು, ಇತ್ತೀಚಿನ ದಿನಗಳಲ್ಲಿ ಕಾಲ ಬದಲಾದಂತೆ ತಾವು ಬದಲಾವಣೆ ಹೊಂದಿ ತಮ್ಮ ವ್ಯಾಪಾರಕ್ಕಾಗಿ ಕೆಲವು ಆಟೋರೀಕ್ಷಾ, ಬಂಡಿಗಳನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ. ಆದುದರಿಂದ ಇತ್ತೀಚೆಗೆ ಲಘುವಾಹನಗಳು ಲಂಬಾಣಿಗರಿಗೆ ಸರಕುಗಳ ಸಾಗಾಣಿಕೆಗೆ ನೆರವಾಗುತ್ತವೆ.

**೩. ಪ್ರಮಾಣೀಕರಣ ಮತ್ತು ವರ್ಗೀಕರಣ:** ಸರಕುಗಳನ್ನು ಪ್ರಮಾಣೀಕರಿಸುವುದು ಮಾರಾಟದ ಒಂದು ಮಹತ್ವದ ಕಾರ್ಯ. ಸರಕುಗಳ ಸಾಮಾನ್ಯ ಗುಣಲಕ್ಷಣಗಳ ಆಧಾರದ ಮೇಲೆ ಅವುಗಳನ್ನು ವರ್ಗೀಕರಿಸಲಾಗುತ್ತದೆ. ಪ್ರಮಾಣೀಕರಿಸಲ್ಪಟ್ಟ ಸರಕುಗಳು ವಿಶಿಷ್ಟ ಗುಣ ಲಕ್ಷಣಗಳನ್ನು ಹೊಂದಿರುವುದರಿಂದ ಅವುಗಳನ್ನೂ ಮಾರಾಟ ಮಾಡುವುದು ಬಹಳ ಸುಲಭ. ಪ್ರಮಾಣೀಕರಿಸಲ್ಪಟ್ಟ ಸರಕುಗಳಲ್ಲಿ ಜನರಿಗೆ ವಿಶ್ವಾಸವಿರುವುದರಿಂದ ಅವರು ಆ ಸರಕುಗಳನ್ನು ಪರೀಕ್ಷಿಸದೆ ಕೊಂಡುಕೊಳ್ಳುತ್ತಾರೆ. ಪ್ರಾಮಾಣೀಕರಿಸಲ್ಪಟ್ಟ ಸರಕುಗಳಿಗೆ ಯೋಗ್ಯ ಬೆಲೆ ಸಿಗುವುದರಿಂದ ವೃತ್ತಿದಾರರಿಗೂ ಪ್ರಮಾಣೀಕರಣ ಅನುಕೂಲವಾಗುತ್ತದೆ. ಸರಕುಗಳ ಗುಣಲಕ್ಷಣ ಮತ್ತು ಗಾತ್ರಗಳಿಗನುಗುಣವಾಗಿ ವಿಂಗಡಿಸಬೇಕು. ಕಾರಣ ಗ್ರಾಹಕರು ಉತ್ತಮ ಗುಣಮಟ್ಟದ ವಸ್ತುಗಳನ್ನೇ ಕೊಳ್ಳಲು ಬಯಸುತ್ತಾರೆ. ಪ್ರಮಾಣೀಕರಣ ಮತ್ತು ವರ್ಗೀಕರಣ ದೊಡ್ಡ ಕೈಗಾರಿಕೆಗಳಲ್ಲಿ ಸಾಧ್ಯವಾಗಿರುವುದರಿಂದ ಅವುಗಳು ತಯಾರಿಸುವ ಸರಕುಗಳ ಬೇಡಿಕೆ ಹೆಚ್ಚು. ಆದರೆ ಬೇರೆ ಬೇರೆ ಸಮುದಯಾದ ಕುಲಕಸುಬುದಾರರು ಉತ್ಪಾದನೆ ಮತ್ತು ಮಾರಾಟದಲ್ಲಿ ಸರಕುಗಳ ಪ್ರಮಾಣೀಕರಣ ಮತ್ತು ವರ್ಗೀಕರಣ ಮಾಡುವುದಿಲ್ಲ. ಉತ್ಪಾದಿಸಿದ ಸರಕುಗಳನ್ನು ಸಾರಾ ಸಗಟಾಗಿ ಮಾರುಕಟ್ಟೆಗೆ ತಂದು ಮಾರಲು ಪ್ರಯತ್ನಿಸುತ್ತಾರೆ. ಇದರಿಂದ ಸರಕುಗಳ ಮಾರಾಟದ ಪ್ರಮಾಣ ಕಡಿಮೆ ಆಗಿದೆ ಮತ್ತು ಉತ್ತಮ ಬೆಲೆ ಇಲ್ಲದೆ ಆದಾಯವು ಕಡಿಮೆಯಾಗಿದೆ.

**೪. ಸಂಗ್ರಹಣೆ:** ಸರಕುಗಳನ್ನು ಉತ್ಪಾದನಾ ಸಮಯದಿಂದ ಮಾರಾಟದ ಸಮಯದವರೆಗೆ ಯೋಗ್ಯ ಸ್ಥಿತಿಯಲ್ಲಿ ಕಾಯ್ದಿಡುವ ವ್ಯವಸ್ಥೆಗೆ 'ಸಂಗ್ರಹಣೆ' ಎಂದು ಹೇಳುವರು. ಸಂಗ್ರಹಣೆ ಸರಕುಗಳ ಮಾರಾಟದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಇದರಿಂದ ಉತ್ಪಾದನಾಕಾರ್ಯ ಸುಗಮವಾಗಿ ನಡೆಯುವುದಲ್ಲದೆ ವಿತರಣೆಯ ಕಾರ್ಯವು ಸುಲಭವಾಗುವುದು. ಬಳಕೆದಾರರ ಬೇಡಿಕೆಗನುಗುಣವಾಗಿ ಸರಕುಗಳನ್ನು ಪೂರೈಸಲು ಮತ್ತು ಬೆಲೆಗಳಲ್ಲಿರುವ ಏರಿಳಿತಗಳನ್ನು ತಡೆಯಲು ಸಂಗ್ರಹಣೆಯಿಂದ ಸಾಧ್ಯವಾಗುವುದು. ಸಂಗ್ರಹಣೆ ಸ್ಥಳ ಮತ್ತು

ಸಮಯ ತುಷ್ಟಿಗುಣವನ್ನು ನೀಡುತ್ತದೆ. ಇದರಿಂದ ಉತ್ಪಾದಕರಿಗೂ ಹಾಗೂ ಬಳಕೆದಾರರಿಗೂ ಅನುಕೂಲ. ಆದರೆ ಲಂಬಾಣಿಗರು ಸಂಗ್ರಹಣೆಯ ಸೌಲಭ್ಯದ ಅನುಕೂಲಗಳಿಂದ ವಂಚಿತರಾಗಿದ್ದಾರೆ. ಕಾರಣ ಅವರ ವಾದದ ಮನೆ ಚಿಕ್ಕದಾಗಿರುವುದು. ಸಂಗ್ರಹಿಸಲು ಸ್ಥಳಾವಕಾಶದ ಕೊರತೆ, ಸರಕುಗಳ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುಗಳನ್ನು ಮತ್ತು ತಯಾರಿಸಿದ ಸಿದ್ಧ ಸರಕುಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಸ್ಥಳ ಹಾಗೂ ಶಕ್ತಿ ಲಂಬಾಣಿಗಳಲ್ಲಿ ಇಲ್ಲದಿರುವುದು ಪ್ರಮುಖ ಸಮಸ್ಯೆ. ಈ ಸಮಸ್ಯೆಯ ಲಂಬಾಣಿಗರಿಗೆ ಕಚ್ಚಾವಸ್ತುಗಳ ಕೊರತೆಗೆ ಕಾರಣ ಮತ್ತು ಸರಕುಗಳನ್ನು ಕಾಯ್ದು ಉತ್ತಮ ಬೆಲೆಗೆ ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲ. ಉತ್ಪಾದಿಸಿದ ತಕ್ಷಣ ಸರಕುಗಳನ್ನು ಮಾರಾಟ ಮಾಡಬೇಕಾಗುತ್ತದೆ. ಇದರಿಂದ ಲಂಬಾಣಿಗರಿಗೆ ತಮ್ಮ ಸರಕುಗಳಿಂದ ಉತ್ತಮ ಆದಾಯ ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರವು ಗಮನಹರಿಸದಿರುವುದು ವಿಷಾದನೀಯ ಸಂಗತಿ.

**೫. ಮಾರಾಟ ಕಲೆ:** ಉತ್ಪಾದಕರ ಜೀವಾಳವೂ ಉತ್ಪಾದನೆಯ ಮುಖ್ಯ ಉದ್ದೇಶವೂ ಮಾರಾಟ. ಉತ್ಪಾದಿಸಲ್ಪಟ್ಟ ಸರಕುಗಳು ಮಾರಾಟವಾಗದಿದ್ದರೆ ಉತ್ಪಾದನೆ ನಿಲ್ಲುತ್ತದೆ. ಆದ್ದರಿಂದ ವೃತ್ತಿಗಳು ಬೆಳೆಯಬೇಕಾದರೆ ಉತ್ಪಾದಿಸಿದ ಸರಕುಗಳು ಮಾರಾಟವಾಗಬೇಕು. ಮಾರಾಟದಿಂದ ಆದಾಯ ಬರುತ್ತದೆ. ಆದಾಯದಿಂದ ಕಸುಬುದಾರರ ಬದುಕು ಹಸನುಗೊಳಿಸುತ್ತದೆ. ಇಂದು ಸರಕುಗಳ ಮಾರಾಟದಲ್ಲಿ ತೀವ್ರವಾದ ಪೈಪೋಟಿ ಇದೆ. ಆದ್ದರಿಂದ ಆಧುನಿಕ ವಾಣಿಜ್ಯ ಪ್ರಪಂಚದಲ್ಲಿ ಮಾರಾಟದ ಕಲೆಯು ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಮಾರಾಟದ ಕಲೆ ಸರಕುಗಳ ಮಾರಾಟ ಹೆಚ್ಚಿಸುತ್ತದೆ. ಅಲ್ಲದೆ ಹೊಸ ಮಾರುಕಟ್ಟೆ ಸೃಷ್ಟಿಯಾಗಿ ಹೆಚ್ಚಿನ ಮಾರಾಟದಿಂದ ಹೆಚ್ಚಿನ ಲಾಭದ ಗಳಿಕಗೆ ನೇರವಾಗುತ್ತದೆ. ಆದರೆ ನಮ್ಮ ಕುಲಕಸುಬುದಾರರಲ್ಲಿ ಮಾರಾಟದ ಕಲೆ ಇರುವುದಿಲ್ಲ. ಕಾರಣ ಅವರು ಅನಕ್ಷರಸ್ಥರು ಅವಿದ್ಯಾವಂತರೂ ಆಗಿದ್ದಾರೆ. ಹೆಚ್ಚಿನ ಮಟ್ಟದಲ್ಲಿ ಲಂಬಾಣಿ ಮಹಿಳೆಯರು ಅವಿದ್ಯಾವಂತರಾಗಿದ್ದಾರೆ ಎಂಬುದೇ ಕಾರಣ. ಅವರು ಸರಕುಗಳನ್ನು ಮಾರಾಟ ಮಾಡುವಾಗ ಗ್ರಾಹಕರನ್ನು ಕಾಡಿಬೇಡಿ ಮಾರಾಟ ಮಾಡುವುದನ್ನು ನಾವು ಕಣ್ಣಾರೆ ಕಂಡಿದ್ದೇವೆ. ಆದ್ದರಿಂದ ಲಂಬಾಣಿಗರು ತಮ್ಮ ಸರಕುಗಳನ್ನು ಮಾರಾಟ ಮಾಡಲಾಗದೇ, ಆದಾಯ ಗಳಿಸಲಾಗದೇ ಜೀವನ ನಡೆಸುವುದೇ ಕಷ್ಟವಾಗಿದೆ. ಆದ್ದರಿಂದ ಲಂಬಾಣಿಗರು ಮಾರಾಟದ ಕಲೆಯನ್ನು ರೂಢಿಸಿಕೊಳ್ಳುವುದು ಅತ್ಯಗತ್ಯ.

**೬. ಮುದ್ರೆ ಮತ್ತು ವ್ಯಾಪಾರಿ ಚಿನ್ಹೆ:** ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಉತ್ಪಾದಕರು ಸರಕು ಸೇವೆಗಳ ಮಾರಾಟಕ್ಕಾಗಿ ಮುದ್ರೆ ಅಥವಾ ವ್ಯಾಪಾರಿ ಚಿನ್ಹೆ ಉಪಯೋಗಿಸುವುದು ಸಾಮಾನ್ಯ. ಇಂಥ ಮುದ್ರೆ ಮತ್ತು ಚಿನ್ಹೆಗಳನ್ನು ಬಳಕೆದಾರರೂ ಸ್ವಾಗತಿಸಿದ್ದಾರೆ. ಮುದ್ರೆಯಲ್ಲಿ ಹೆಸರು ಮತ್ತು ಚಿತ್ರಗಳ ಸಂಯೋಜನೆಯಿರಬಹುದು. ಅಥವಾ ಅದರಲ್ಲಿ ಹೆಸರು ಮತ್ತು ಸಂಕೇತಗಳ ಸಂಯೋಜನೆ ಇರಬಹುದು. ಇದರಿಂದ ಆ ವಸ್ತುವು ಯಾವ ಉತ್ಪಾದಕನಿಗೆ ಸಂಬಂಧಿಸಿರುತ್ತದೆಂಬುದು ಪ್ರತ್ಯೇಕಿಸಿ ಹೇಳಲು ಸಾಧ್ಯ. ಒಂದೇ ಬಗೆಯ ವಸ್ತುಗಳು ಮಾರುಕಟ್ಟೆಗೆ ಬಂದಾಗ ಅವುಗಳಿಗೆ ಇಂಥ ಬ್ರಾಂಡ್ ಇರದಿದ್ದರೆ ಯಾವ ವಸ್ತುವು ಯಾವ ಉತ್ಪಾದಕನದು

ಎಂಬುದು ತಿಳಿಯದು. ಬ್ರಾಂಡ್ ಗಳಿದ್ದರೆ ಉತ್ಪಾದಕನು ವಸ್ತುಗಳನ್ನು ಸುಲಭವಾಗಿ ಕಂಡು ಹಿಡಿಯಬಹುದು. ಉದಾ: ಸೋನಿ ಟಿ.ವಿ. ಸ್ಯಾಮ್ ಸಂಗ್ , ನೋಕೀಯಾ ಮೊಬೈಲ್ , ಐಡಿಯಾ ಸಿಯ್ ಕಾಡ್ ೯, ಮಾರುತಿ ಕಾರುಗಳು, ಬಜಾಜ್ ಸ್ಕೂಟರ್ ಇತ್ಯಾದಿ. ಆಧುನಿಕ ಉತ್ಪಾದಕರೆಲ್ಲರೂ ಸಾಮಾನ್ಯವಾಗಿ ಮುದ್ರೆ ಮತ್ತು ವ್ಯಾಪಾರದ ಚಿನ್ಹೆಗಳನ್ನು ಹೊಂದಿರುತ್ತಾರೆ. ಇವುಗಳು ಕಾನೂನಿನ ಪ್ರಕಾರ ನೊಂದಾಯಿಸಿದಾಗ ಅದಕ್ಕೆ ಕಾನೂನು ರಕ್ಷಣೆ ಸಿಗುತ್ತದೆ. ಆದರೆ ಲಂಬಾಣಿಗರು ತಯಾರಿಸುವ ಸರಕುಗಳಿಗೆ ಯಾವುದೇ ಮುದ್ರೆಯಾಗಲಿ ಅಥವಾ ಚಿನ್ಹೆಯಾಗಲಿ ಇರುವುದಿಲ್ಲ. ಕೆಲವು ಸಮುದಾಯದಾರರು ತಯಾರಿಸುವ ವಸ್ತುಗಳಿಗೆ ಮುದ್ರೆ ಇರುತ್ತದೆ. ಇನ್ನೂ ಕೆಲವರು ತಯಾರಿಸಿದ ವಸ್ತುಗಳಿಗೆ ವ್ಯಾಪಾರದ ಚಿನ್ಹೆ ಮತ್ತು ಮುದ್ರೆ ಇರುವುದಿಲ್ಲ. ಇದೇ ರೀತಿ ಎಲ್ಲಾ ಕುಲ ಕಸುಬುದಾರರಿಗೆ ತಾವು ತಯಾರು ಮಾಡುವ ಸರಕುಗಳಿಗೆ ಮುದ್ರೆಯಾಗಲಿ ಅಥವಾ ವ್ಯಾಪಾರಿ ಚಿನ್ಹೆಯಾಗಲಿ ಇರುವುದಿಲ್ಲ. ಸಾಮಾನ್ಯವಾಗಿ ಗ್ರಾಹಕರು ಮುದ್ರೆ ಇರುವ ವಸ್ತುಗಳನ್ನೇ ಕೊಳ್ಳುವುದು ರೂಢಿಯಾಗಿತ್ತು.

ಸಂಡೂರಿನಲ್ಲಿ ಲಂಬಾಣಿಗಳ ಉಡುಪುಗಳು ತಯಾರಾಗುತ್ತವೆ. ಆದರೆ ಅವುಗಳಿಗೆ ಯಾವುದೇ ಮುದ್ರೆ ಇಲ್ಲ. ಅಂತಹ ಸಂದರ್ಭಗಳಲ್ಲಿ ಲಂಬಾಣಿಗರು ತಯಾರಿಸುವ ಬಣ್ಣ ಬಣ್ಣದ ಉಡುಪುಗಳಿಗೆ ಗ್ರಾಹಕರು ಕೊಂಡುಕೊಳ್ಳುವುದು ಕಡಿಮೆ. ಕಾರಣ ಆ ಉಡುಪುಗಳಿಗೆ ಯಾವುದೇ ಮುದ್ರೆ ಮತ್ತು ಚಿನ್ಹೆ ಇಲ್ಲದಿರುವಿಕೆ. ಆದರೆ ಅದೇ ರೀತಿಯಾಗಿ ಸೀರೆಯನ್ನು ತಯಾರಿಸುವ ಕಂಪನಿಗಳು ಕಾಂಜಿವರಂ, ಮೈಸೂರು ಸಿಲ್ಕ್ ಸೀರೆಗಳಿಗೆ ಅದರದೇ ಆದ ಕಂಪನಿಯ ಮುದ್ರೆ ಇರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಆ ವಸ್ತುಗಳನ್ನು ಗ್ರಾಹಕರು ಯಾವುದೇ ತಕರಾರು ಇಲ್ಲದೆ ಕೊಂಡುಕೊಳ್ಳುತ್ತಾರೆ. ಆದುದರಿಂದ ಲಂಬಾಣಿಗರು ತಯಾರಿಸುವ ಉಡುಪುಗಳಿಗೆ (ಸರಕುಗಳಿಗೆ) ಮುದ್ರೆಗಳನ್ನು ನೀಡುವುದು ಅಗತ್ಯ. ಇದರಿಂದ ವ್ಯಾಪಾರ ವಿಸ್ತರಣೆಗೊಂಡು ಲಂಬಾಣಿಗರಿಗೆ ಹೆಚ್ಚಿನ ಆದಾಯದ ಜೊತೆಗೆ ಹೆಚ್ಚು ಪ್ರಮಾಣದಲ್ಲಿ ಸರಕುಗಳಿಗೆ ಬೇಡಿಕೆ ಬರುತ್ತದೆ.

**೭. ಜಾಹಿರಾತು :** ಸರಕುಗಳ ಮಾರಾಟದಲ್ಲಿ ವಿಕ್ರಯ ಕಲೆಯಷ್ಟೇ ಜಾಹಿರಾತಿಗೂ ಸಹ ಮಹತ್ವದ ಪಾತ್ರವಿದೆ. ಆಧುನಿಕ ಪ್ರಪಂಚ ಜಾಹಿರಾತು ಪ್ರಪಂಚವಾಗಿ ಮಾರ್ಪಟಾಗಿದೆ. ಉತ್ಪಾದಿಸಲ್ಪಟ್ಟ ಸರಕುಗಳು ಎಷ್ಟೇ ಉತ್ತಮವಾಗಿರಬಹುದು, ಅವು ಅಷ್ಟೇ ಉಪಯುಕ್ತವಾಗಿರಬಹುದು. ಆದರೆ ಅವು ಗ್ರಾಹಕರಿಗೆ ಗೊತ್ತಾಗದ ಹೊರತು ಮಾರಾಟವಾಗಲಾರವು. ಜಾಹಿರಾತು ಮೂಲಕ ಸರಕುಗಳ ಗುಣಮಟ್ಟ, ಉಪಯುಕ್ತತೆಗಳ ಬಗೆಗೆ ತಿಳಿದು ಹೇಳಬಹುದು. ಜಾಹಿರಾತು ಏಕಕಾಲದಲ್ಲಿ ಅತ್ಯಧಿಕ ಸಂಖ್ಯೆಯ ಗ್ರಾಹಕರಿಗೆ ಸಂದೇಶವನ್ನು ತಲುಪಿಸುತ್ತದೆ. ಜಾಹಿರಾತು ಗ್ರಾಹಕರ ಗಮನ ಸೆಳೆದು ಸರಕನ್ನು ಕೊಳ್ಳುವಂತೆ ಆಸಕ್ತಿ ಹುಟ್ಟಿಸುವುದು. ಗ್ರಾಹಕರ ಬಯಕೆಯನ್ನು ಜಾಗೃತಗೊಳಿಸುವುದು ಮತ್ತು ಸರಕುಗಳನ್ನು ಕೊಳ್ಳುವಂತೆ ಮಾಡುವುದು. ಜಾಹೀರಾತಿನಿಂದ ತಮ್ಮ ಸರಕುಗಳ ಹೊಸ ಮಾರುಕಟ್ಟೆ ದೊರಕಿಸಲು ಉತ್ಪಾದಕರಿಗೆ ಸಾಧ್ಯವಾಗುತ್ತದೆ. ಸರಕುಗಳ ಮಾರಾಟವು ಅಧಿಕವಾಗುತ್ತದೆ. ಇದರಿಂದ ಉತ್ಪಾದಕರಿಗೆ ಅಧಿಕ ಲಾಭವೂ ಲಭ್ಯವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಉತ್ಪಾದಕರು ಜಾಹಿರಾತಿನ ಮೊರೆ ಹೋಗುತ್ತಿದ್ದಾರೆ.

ಆದರೆ ಕುಲಕಸಬುದಾರರಾದ ಲಂಬಾಣಿಗರು ಮೇದಾರರು, ನೇಕಾರರು, ಕಮ್ಮಾರರು, ಕುಂಬಾರರು, ಸುಣ್ಣಗಾರರು ಇತ್ಯಾದಿ ಜನಾಂಗದವರು ಜಾಹಿರಾತು ಮಾಧ್ಯಮವನ್ನು ಬಳಸುತ್ತಿಲ್ಲ. ಕಾರಣ ಜಾಹೀರಾತು ವೆಚ್ಚವನ್ನು ಭರಿಸುವ ಶಕ್ತಿ ಅವರಿಗಿಲ್ಲ. ಇದರಿಂದಾಗಿ ಲಂಬಾಣಿಗಳು ತಯಾರಿಸುವ ಸರಕುಗಳು ಜನರಿಗೆ ಪರಿಚಯವಾಗದೇ ಬರೀ ಸ್ಥಳೀಯ ಮಾರುಕಟ್ಟೆಯನ್ನೇ ನಂಬಿಕೊಂಡಿದ್ದಾರೆ. ಆದ್ದರಿಂದ ಅವರ ಮಾರಾಟದ ಪ್ರಮಾಣ ಕಡಿಮೆ. ಆದಾಯವು ಸಹ ಕಡಿಮೆ ಪ್ರಸ್ತುತ ಕೆಲವು ಮಧ್ಯವರ್ತಿಗಳು ಲಂಬಾಣಿಗಳು ತಯಾರಿಸಿದ ಸರಕುಗಳನ್ನು ಕಡಿಮೆ ಬೆಲೆಗೆ ಕೊಂಡು ತಮ್ಮದೇ ಮುದ್ರೆ ನಾಮವನ್ನು ಹಾಕಿ ಅದ್ಕಕಿಂತ ಹೆಚ್ಚಿನ ಬೆಲೆಗೆ ಮಾರಾಟ ಮಾಡಿ ಲಾಭಗಳಿಸುತ್ತಾರೆ. ಆದ್ದರಿಂದ ಲಂಬಾಣಿಗರ ಪರವಾಗಿ ಸರಕಾರವು ಅವರ ಸರಕುಗಳಿಗೆ ಸಂಬಂಧಿಸಿದಂತೆ ಜಾಹಿರಾತು ನೀಡಿದರೇ ಸರಕಾರವೇ ಅವರ ಸರಕುಗಳನ್ನು ಕೊಂಡು ಅಂತರಾಷ್ಟ್ರೀಯ ಮಟ್ಟದಲ್ಲಿ ಲಂಬಾಣಿ ಉಡುಪುಗಳಿಗೆ ಹೆಚ್ಚಿನ ಬೇಡಿಕೆಯಾಗಿರುವುದರಿಂದ ಸರಕಾರವು ಅವರಿಗೆ ಮಾರುಕಟ್ಟೆಯ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟರೆ ಲಂಬಾಣಿಗರ ಬದುಕು ಹಸನಾಗುವುದರಲ್ಲಿ ಸಂಶಯವಿಲ್ಲ.

**೮. ಪೈಪೋಟಿ :** ಇಂದು ಮಾರುಕಟ್ಟೆಯಲ್ಲಿ ಪ್ರತಿಯೊಂದು ವಸ್ತುವಿಗೂ ಬಲವಾದ ಪೈಪೋಟಿ ಕಂಡುಬರುತ್ತದೆ. ಇಂದಿನ ಮಾರುಕಟ್ಟೆಯು ಅತ್ಯಂತ ಪೈಪೋಟಿಯುತವಾದ ಮಾರುಕಟ್ಟೆಯಾಗಿದೆ. ಪ್ರತಿಯೊಂದು ವಸ್ತುವಿಗೂ ಅನೇಕ ಪರ್ಯಾಯ ಸ್ಪರ್ಧಾತ್ಮಕ ವಸ್ತುಗಳು ಬಲವಾದ ಪೈಪೋಟಿ ಒಡ್ಡಿರುವುದು ಕಂಡುಬರುತ್ತದೆ. ಆದ್ದರಿಂದ ಉತ್ಪಾದಕನು ತನ್ನ ವಸ್ತುಗಳು ತನ್ನ ಪ್ರತಿಸ್ಪರ್ಧಿಗಳ ವಸ್ತುಗಳಿಗಿಂತಲೂ ಶ್ರೇಷ್ಠವಾದವುಗಳೆಂದೂ ತಿಳಿಸಿ ಮಾರಾಟ ಮಾಡಲು ಪ್ರಯತ್ನಿಸುತ್ತಿದ್ದಾರೆ. ಈ ದಿಸೆಯಲ್ಲಿ ಲಂಬಾಣಿಗರು ತಯಾರಿಸುವ ವಸ್ತುಗಳಿಗೆ ಉದ್ದಿಮೆಗಳ ಸರಕುಗಳು ತೀವ್ರ ಪೈಪೋಟಿ ನೀಡುತ್ತಿವೆ. ಆಧುನಿಕ ಯಂತ್ರೋಪಕರಣಗಳ ಸಹಾಯದಿಂದ ಉದ್ದಿಮೆದಾರರು ತಯಾರಿಸಿದ ಸರಕುಗಳು ಸಹಜವಾಗಿ ಉತ್ತಮ ಗುಣಮಟ್ಟದ್ದು. ಬಾಳಿಕೆ ಬರುವಂತದ್ದು, ಆಕರ್ಷಕವಾದದ್ದು ಹಾಗೂ ಕಡಿಮೆ ಬೆಲೆಯುಳ್ಳದ್ದು ಆಗಿರುತ್ತದೆ. ಅದರಿಂದಾಗಿ ಗ್ರಾಹಕರು ಸಾಮಾನ್ಯವಾಗಿ ದೊಡ್ಡ ಉದ್ದಿಮೆದಾರರ ಸರಕುಗಳನ್ನೇ ಕೊಳ್ಳುತ್ತಾರೆ. ಲಂಬಾಣಿಗರ ವಸ್ತುಗಳಿಗೆ ದಿನದಿಂದ ದಿನಕ್ಕೆ ಬೇಡಿಕೆ ಕಡಿಮೆಯಾಗುತ್ತಿದೆ. ಯಾಕೆಂದರೆ ಲಂಬಾಣಿ ಉಡುಪು ತುಂಬಾ ಖರ್ಚು ಹೆಚ್ಚು ಜೊತೆಗೆ ಆಧುನಿಕ ಯುಗದಲ್ಲಿ ಈಗೀನ ಪೀಳಿಗೆಯು ಅದನ್ನು ನಿರಾಕರಿಸುತ್ತಿದ್ದಾರೆ. ಎಲ್ಲಾರು ಅಧುನಿಕ ಪ್ರಪಂಚಕ್ಕೆ ಬದಲಾವಣೆಯಾಗುತ್ತಿದ್ದಾರೆ. ಜೊತೆಗೆ ಬಳ್ಳಾರಿ ಜಿಲ್ಲೆಯ ಕೆಲವು ತಾಲೂಕುಗಳ ತಾಂಡಗಳಲ್ಲಿ ಲಂಬಾಣಿ ಉಡುಪು ಮಾಯವಾಗುತ್ತಿದೆ. ಯಾಕೆಂದರೆ ಆಧುನಿಕ ಯಂತ್ರ ಸಾಮಾಗ್ರಿಗಳು ಮತ್ತು ಯಂತ್ರದಲ್ಲಿ ಉತ್ಪಾದನೆಯಾದ ಉಡುಪುಗಳಿಗೆ ಮಾರುಹೋಗಿರುವುದರಿಂದ ಲಂಬಾಣಿ ಉಡುಪಿಗೆ ಸ್ವಲ್ಪ ಪ್ರಮಾಣದ ಬೇಡಿಕೆ ಕಡಿಮೆಯಾಗಿದೆ.

**೯. ಮಾರಾಟ ಮಳಿಗಗಳು:** ಉತ್ಪಾದಕರು ತಯಾರಿಸಿದ ಸರಕುಗಳನ್ನು ಮಾರುಕಟ್ಟೆಯ ನಿರ್ದಿಷ್ಟ ಮಳಿಗೆಗಳಲ್ಲಿ ಮಾರಾಟ ಮಾಡುವುದು ಪ್ರಮುಖ ಕಾರ್ಯ. ಇದರಿಂದ ಗ್ರಾಹಕರು ವಿವಿಧ ಕಡೆಗಳಿಂದ ಬಂದು ಅಲ್ಲಿ ಸರಕುಗಳನ್ನು ಕೊಂಡುಕೊಳ್ಳುತ್ತಾರೆ. ಇದು ಮಾರಾಟಕ್ಕೆ ಹಾಗೂ ನಿರಂತರ ಆದಾಯ ಗಳಿಕೆಗೆ ಅನಿವಾರ್ಯ.

ಆದರೆ ಲಂಬಾಣಿಗರು ತಾವು ತಯಾರಿಸಿದ ಸರಕುಗಳನ್ನು ಮಾರಾಟ ಮಾಡಲು ಪ್ರತ್ಯೇಕ ಹಾಗೂ ನಿರ್ದಿಷ್ಟಪಡಿಸಿದ ಮಾರಾಟ ಮಳಿಗಳಿರುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಲಂಬಾಣಿಗರು ಅವರ ಉಡುಪುಗಳನ್ನು ಹಂಪಿಯ ಬೀದಿಯಲ್ಲಿ ಮಾರುತಿರುವುದನ್ನು ನಾವು ಈಗಾಗಲೇ ಕಂಡಿದ್ದೇವೆ. ಲಂಬಾಣಿಗರಿಗೆ ಸ್ಥಿರವಾದ ಮಾರಾಟ ಮಳಿಗೆಗಳಿಲ್ಲ. ಇವು ಬದಲಾವಣೆಯಾಗುತ್ತಿರುತ್ತದೆ. ಆದರೂ ಕೆಲವು ಮೇಲಾಧಿಕಾರಿಗಳಿಂದ ಲಂಬಾಣಿಗರ ಉಡುಪನ್ನು ಮಾರಾಟ ಮಾಡಲು ಅಡ್ಡಿಯಾಗುತ್ತದೆ. ಆದ್ದರಿಂದ ಲಂಭಾಣಿಗರು ತಾವು ತಯಾರಿಸಿದ ಸರಕುಗಳನ್ನು ಮಧ್ಯವರ್ತಿಗಳಿಗೆ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡುತ್ತಾರೆ. ಲಂಬಾಣಿಗರಿಗೆ ತಮ್ಮ ಸರಕು-ಸೇವೆಗಳನ್ನು ಮಾರಾಟ ಮಾಡಲು ಪ್ರತ್ಯೇಕ ಮಳಿಗೆಗಳು ಇಲ್ಲದಿರುವುದು ಮತ್ತು ವ್ಯಾಪಾರದಾರರು ಇವರ ಸರಕುಗಳನ್ನು ತಮ್ಮ ಮಳಿಗೆಗಳಲ್ಲಿ ಇಟ್ಟು ಮಾರಾಟ ಮಾಡಲು ಅವಕಾಶ ಕೊಡುವುದಿಲ್ಲ. ಇದರಿಂದಾಗಿ ವಿವಿಧ ರೀತಿಯ ಸರಕುಗಳನ್ನು ತಯಾರಿಸುವ ಕುಲಕಸುಬುಗಳು ಮಾರಾಟದ ವ್ಯವಸ್ತೆ ಇಲ್ಲದೇ ಮೂಲೆ ಗುಂಪಾಗುತ್ತಿವೆ.

ಲಂಬಾಣಿಗರು ಸರಕುಗಳನ್ನು ತಯಾರಿಸಲು ಕಚ್ಚಾ ವಸ್ತುಗಳನ್ನು ಕೊಂಡುಕೊಳ್ಳಲು, ತಯಾರಿಸಿದ ಸರಕುಗಳನ್ನು ಮಾರಾಟ ಮಾಡಲು ಹಣಕಾಸು ಬೇಕು. ಆದರೆ ಈ ಸಮುದಾಯಗಳಿಗೆ ಹಣಕಾಸಿನ ಸಂಸ್ಥೆಗಳು ಹಣಕಾಸು ನೀಡಲು ಮುಂದೆ ಬರುವುದಿಲ್ಲ. ಕೊಟ್ಟ ಸಾಲಕ್ಕೆ ಭರವಸೆ ಅಥವಾ ಹಿಂದುರುಗಿ ಬರುವ ಸಾಧ್ಯತೆಗಳು ಕಡಿಮೆ ಎಂದು ಬ್ಯಾಂಕುಗಳು ಭಾವಿಸಿಕೊಂಡಿವೆ. ಹೀಗಾಗಿ ಲಂಬಾಣಿಗರು ತಮಗೆ ಅವಶ್ಯಕತೆ ಇರುವ ಹಣಕಾಸನ್ನು ಲೇವಾದೇವಿ ವ್ಯವಹಾರದಿಂದ, ಸ್ಥಳೀಯ ಹಣವುಳ್ಳವರಿಂದ ಹೆಚ್ಚಿನ ಬಡ್ಡಿಗೆ ಪಡೆದುಕೊಳ್ಳಬೇಕಾಗುತ್ತದೆ. ತಂದ ಸಾಲವನ್ನು ಸರಿಯಾದ ಸಮಯಕ್ಕೆ ಹಿಂತಿರುಗಿಸಲು ಸಾಧ್ಯವಾಗದ ಸನ್ನಿವೇಶದಲ್ಲಿ ಲಂಬಾಣಿಗರು ಬದುಕುತ್ತಿದ್ದಾರೆ.

ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಬದಲಾಗುತ್ತಿರುವ ತಂತ್ರಜ್ಞಾನಕ್ಕೆ ತಕ್ಕಂತೆ ಆಧುನಿಕ ಉದ್ದಿಮೆಗಳು ಸರಕುಗಳನ್ನು ವೈವಿಧ್ಯಮಯವಾಗಿ, ಆಕರ್ಷಕವಾಗಿ ತಯಾರಿಸಿ ಉತ್ತಮ ಮಾರಾಟ ಮಳಿಗೆಗಳಲ್ಲಿ ಇಟ್ಟು ಮಾರಾಟ ಮಾಡುತ್ತಿದ್ದಾರೆ. ಆದರೆ ಲಂಬಾಣಿಗರು ತಯಾರಿಸುವ ಸರಕುಗಳಿಗೆ ವೈವಿಧ್ಯತೆ ಹಾಗೂ ತಾಳಿಕೆ ಬಾಳಿಕೆ ಆಕರ್ಷಕ ಶಕ್ತಿ ಇಲ್ಲದಿರುವುದರಿಂದ ಇವರ ಸರಕುಗಳ ಬೇಡಿಕೆ ಕಡಿಮೆಯಾಗಿದೆ. ಉದ್ದಿಮೆಗಳ ಪೈಪೋಟಿಯಿಂದಾಗಿ ಹಲವು ಉತ್ಪಾದಕ ಸಮುದಾಯದವರು ವೃತ್ತಿಯಲ್ಲಿ ನೆಲಕಚ್ಚಿದ್ದಾರೆ ಮತ್ತೆ ಅವು ಅಳಿವಿನ ಅಂಚಿನಲ್ಲಿವೆ.

ಲಂಬಾಣಿಗರು ವರ್ತಮಾನ ಮಾರುಕಟ್ಟೆಯಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಬೇಕಾದರೆ ಹಲವಾರು ಪ್ರಮುಖ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಅವುಗಳೆಂದರೆ

* ಮಾರುಕಟ್ಟೆಯ ಸಮಾಚಾರ ಮತ್ತು ಸಂಶೋಧನೆಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಬೇಕು.

* ಸಾರಿಗೆ ಮತ್ತು ಸಂಪರ್ಕದ ವ್ಯವಸ್ಥೆಯನ್ನು ಬಳಸಿಕೊಳ್ಳುವುದು.

* ಸರಕುಗಳ ಪ್ರಮಾಣೀಕರಣ ಮತ್ತು ವರ್ಗೀಕರಣ ಮಾಡಿಕೊಳ್ಳುವುದು.

* ಕಚ್ಚಾ ವಸ್ತು ಮತ್ತು ಸಿದ್ಧವಸ್ತುಗಳ ಸಂಗ್ರಹಣೆಗೆ ವ್ಯವಸ್ಥೆ ಮಾಡಿಕೊಳ್ಳುವುದು.

* ಸರಕುಗಳನ್ನು ಮಾರಾಟ ಮಾಡುವ ಉತ್ತಮ ಮಾರಾಟ ಕಲೆಯನ್ನು ರೂಢಿಸಿಕೊಳ್ಳುವುದು.

* ತಮ್ಮ ಸರಕುಗಳನ್ನು ಮುದ್ರೆ ಮತ್ತು ಚಿನ್ಹೆಗಳನ್ನು ಬಳಸುವುದು.

* ಉತ್ತಮ ಗುಣಮಟ್ಟದ ಸರಕುಗಳನ್ನು ತಯಾರಿಸಿ ಜಾಗತಿಕ ಪೈಪೋಟಿಯನ್ನು ಎದುರಿಸುವುದು.

* ತಮ್ಮ ಸರಕುಗಳಿಗೆ ಜಾಹಿರಾತು ನೀಡುವುದರ ಮೂಲಕ ಬೇಡಿಕೆಯನ್ನು ನಿರ್ಮಾಣ ಮಾಡಿಕೊಳ್ಳುವುದು.

* ಮಾರಾಟ ಸಂಘಗಳನ್ನು ಸ್ಥಾಪಿಸಿಕೊಳ್ಳುವುದು ಹಾಗೂ ಮಾರಾಟ ಮಳಿಗೆ ವ್ಯವಸ್ಥೆ ಮಾಡಿಕೊಳ್ಳುವುದು.

* ಆಧುನಿಕ ಮಾರುಕಟ್ಟೆಯ ವಿಧಿ ವಿಧಾನಗಳನ್ನು ಪರಿಣಾಮಕಾರಿಯಾಗಿ ಅಳವಡಿಸಿಕೊಳ್ಳುವುದು.

* ಲಂಬಾಣಿಗರ ಸರಕುಗಳಿಗೆ ಸರ್ಕಾರವು ತಾಲೂಕು. ಜಿಲ್ಲೆ, ರಾಜ್ಯ ಹಾಗೂ ರಾಷ್ಟ್ರಮಟ್ಟದ ಪ್ರದರ್ಶನ ಮತ್ತು ಮಾರಾಟ ವ್ಯವಸ್ಥೆಯನ್ನು ನಿರಂತರವಾಗಿ ಏರ್ಪಡಿಸುವುದು.

ಈ ಮೇಲಿನ ಎಲ್ಲಾ ವಿಧಾನಗಳನ್ನು ಲಂಬಾಣಿಗರು ಅಳವಡಿಸಿ ಅನುಸರಿಸಿಕೊಂಡು ಹೋಗುವುದಾದರೆ ವರ್ತಮಾನ ಕಾಲದ ಪೈಪೋಟಿಯ ಮಾರುಕಟ್ಟೆಯಲ್ಲಿ ಲಂಬಾಣಿಗರು ತಾವು ತಯಾರಿಸಿದ ಸರಕು-ಸೇವೆಗಳನ್ನು ಉಳಿಸಿ ಬೆಳೆಸಿಕೊಳ್ಳಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಖಂಡೋಬ ಪಿ.ಕೆ., **ಕರ್ನಾಟಕದ ಬುಡಕಟ್ಟಿನ ಲಂಬಾಣಿಗಳು** ಪು.೮೫

೨. ರೆಡ್ಡಿ ಪಿ.ಎನ್., ಹೆಚ್.ಆರ್.ಅಪ್ಪಣ, **ಮಾರುಕಟ್ಟೆ ಕಾರ್ಯವಿಧಾನ,** ೧೯೮೭, ಪು.೩

೩. ಹಲಸಗಿ ಎಸ್.ಓ., **ಮಾರುಕಟ್ಟೆಯ ಮೂಲತತ್ವಗಳು,** ೨೦೦೯, ಪು.೪

೪. ಬಸವಾ ಕೆ.ಡಿ., **ಮಾರುಕಟ್ಟೆಯ ನಿರ್ವಹಣೆ,** ೨೦೦೮, ಪು.೧೫೯

೫. ಅದೇ, ಪು.೧೫

೬. ಅದೇ, ಪು.೧೫

೭. ಅದೇ, ಪು.೧೫

೮. ಅದೇ, ಪು.೧೫

೯. ಅದೇ, ಪು.೧೫

೧೦. ರೆಡ್ಡಿ ಪಿ.ಎನ್., ಹೆಚ್.ಆರ್.ಅಪ್ಪಣ, **ಪೂರ್ವೋಕ್ತ,** ೧೯೮೭, ಪು.೩

೧೧. ಬಸವಾ ಕೆ.ಡಿ., **ಪೂರ್ವೋಕ್ತ**, ೨೦೦೮, ಪು.೨೯

೬. ಗುಪ್ತ ಎಂ., **ವ್ಯವಹಾರಿಕ ಅರ್ಥಶಾಸ್ತ್ರ**, ಪು.೧೩೯

೭. ಅದೇ, ಪು.೧೩೯

೮. ಅದೇ, ಪು.೧೪೦

೯. ರಾವ್ ಎಂ.ವಿ., **ಮಾರಾಟ ಕಾರ್ಯಗಳು**, ಪು.೧೫

೧೦. ಅದೇ, ಪು.೧೬

೧೧. ಬಸವಾ ಕೆ.ಡಿ., **ಆಧುನಿಕ ವಿಕ್ರಮ ಶಾಸ್ತ್ರ**, ಪು.೨-೫

೧೨. ಕೃಷ್ಣಮೂರ್ತಿ ಎಚ್.ಆರ್., **ಹೊಸಬೀಡು**, ೨೦೦೫, ಪು.೨೯೨

೧೩. ಅದೇ, ಪು.೨೯೨

## ಅಧ್ಯಾಯ ೫

# ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು

೫.೧. ಸಾಮಾಜಿಕ ಸ್ಥಿತ್ಯಂತರಗಳು

೫.೨. ಲಂಬಾಣಿಗರ ವಸತಿ ವ್ಯವಸ್ಥೆ

೫.೩. ಕೌಟುಂಬಿಕ ಸ್ಥಿತಿಗತಿ

೫.೪. ಸಾಂಸ್ಕೃತಿಕ ಸ್ಥಿತ್ಯಂತರಗಳು

೫.೫. ಆರ್ಥಿಕ ಸ್ಥಿತ್ಯಂತರಗಳು

೫

# ಲಂಬಾಣಿ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು

## ೫.೧. ಸಾಮಾಜಿಕ ಸ್ಥಿತ್ಯಂತರಗಳು

ಗ್ರಾಮ ಸಮುದಾಯಗಳಿಂದ ಅವನತಿದೂರದಲ್ಲಿ ವಾಸವಾಗಿರುವ ಲಂಬಾಣಿ ಜನಾಂಗವು ತಮ್ಮದೇ ಆದ ಸಂಸ್ಕೃತಿ ಹಾಗೂ ಜೀವನ ವಿಧಾನವನ್ನು ಹೊಂದಿವೆ. ಬೆಟ್ಟಗುಡ್ಡಗಳ ತಪ್ಪಲು ಅಥವಾ ಬಯಲು ಪ್ರದೇಶವನ್ನು ಅಕ್ರಮಿಸಿಕೊಂಡು ವಾಸಿಸುವ ಇವರ ವಸತಿಗಳಿಗೆ 'ತಾಂಡಾ'ಗಳೆಂದು ಕರೆಯಲಾಗುತ್ತಿದೆ. ಈ ತಾಂಡಾಗಳಲ್ಲಿ ಜೀವನ ಸಾಗಿಸಿದರೂ ಸಹ ಬಹುತೇಕ ಲಂಬಾಣಿಗರು ತಮ್ಮ ಹಟ್ಟಿಗಳಿಂದ ದೂರದ ನಗರಕ್ಕೆ ವಲಸೆ ಹೋಗುವುದು ವಾಡಿಕೆ. ಮೂಲತಃ ವ್ಯಾಪಾರಿ ಮನೋಭಾವದಿಂದ ಬಂದವರಾದ್ದರಿಂದ ಅಲೆದಾಟವು ಸಹಜವಾಗಿ ಬಂದ ಗುಣವಾಗಿದೆ. ಅಲೆಮಾರಿಯಾಗಿ ದೂರದ ಊರಿಗೆ ಬಂದು ಕೃಷಿಗಾರಿಕೆಯ ಕಬ್ಬಿನ ಕಟಾವಿಗಾಗಿ ವರ್ಷದ ಕೆಲವು ತಿಂಗಳು ಮಾತ್ರ ತೆರಳುತ್ತಾರೆ.

ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ಸುರಿಯುವ ಕಾರ್ಯ ಮುಗಿದ ತಕ್ಷಣವೇ ತಮ್ಮ ಊರುಗಳಿಗೆ ಧಾವಿಸಿ ಬರುವುದು ಸರ್ವೆಸಾಮಾನ್ಯವಾಗಿದೆ. ಹಿಂದೆ ಈ ತರಹದ ವೃತ್ತಿಗೆ ಅಂಟಿಕೊಂಡಿದ್ದರು. ಆದರೆ ಈಗ ಜಿಲ್ಲೆಯ ಬಹುತೇಕ ಲಂಬಾಣಿಗರು ವಲಸೆ ಹೋಗುವುದು ತಪ್ಪಿದೆ. ತಮ್ಮ ಊರಲ್ಲೇ ಸಿಗುವ ಅದಿರು ಸಾಗಾಟಕ್ಕೆ ಉತ್ತಮ ಬೆಲೆ ಇದ್ದರಿಂದ ಈ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಆದರೆ ಕೆಲವು ದಿನಗಳ ಹಿಂದ ಅದಿರು ರಫ್ತು ಸಾಗಾಟವನ್ನು ಸರ್ಕಾರವು ನಿಷೇಧಿಸಿದ್ದರಿಂದ ಪುನಃ ಮೂಲವೃತ್ತಿಯಾದ ಕಬ್ಬು ಕಟಾವು ಕಾರ್ಯ ಮಾಡಲು ಊರು ಬಿಟ್ಟು ಹೋಗುತ್ತಿರುವುದು ಕಂಡುಬರುತ್ತಿದೆ.

ಈ ಜನಾಂಗವು ಅಲೆಮಾರಿಗಳಾಗಿ ತಮ್ಮ ಊರನ್ನು ಬಿಟ್ಟು ನಗರ ಸಂಸ್ಕೃತಿ ಮನಗಂಡರು. ಅವರದೇ ಆದ ಸಂಸ್ಕೃತಿ ವಿಧಿವಿಧಾನಗಳು ಮಾತ್ರ ಬದಲಾಗಲಿಲ್ಲ. ಇದರಿಂದ ಅವರಲ್ಲಿರುವ ಸಾಮಾಜಿಕ ಕಳಕಳಿ ಆರ್ಥಿಕ ಹಾಗೂ ಧಾರ್ಮಿಕ ಭಾವನೆಗಳಿಗೆ ತನ್ನದೇ ಶಕ್ತಿಯನ್ನು ಒಳಗೊಂಡಿದೆ.

''ಉತ್ತರ ಭಾರತದಿಂದ ದಕ್ಷಿಣಕ್ಕೆ ವ್ಯಾಪಾರಕ್ಕಾಗಿ ವಲಸೆ ಬಂದಿರುವ ಲಂಬಾಣಿಗರು, ಕಾಲಾಂತರದಲ್ಲಿ ಅಲ್ಲಲ್ಲಿ ತಂಡೋಪತಂಡವಾಗಿ ತಮ್ಮದೇ ಆದ ಜನಸಮುದಾಯದ ತಾಂಡೆಗಳನ್ನು ನಿರ್ಮಿಸಿಕೊಂಡು ಸಾವಿರಾರು ವರ್ಷಗಳಿಂದ ತಮ್ಮ ಸಂಸ್ಕೃತಿ, ಸಂಪ್ರದಾಯಗಳನ್ನು ಉಳಿಸಿಕೊಂಡು ಬದುಕಿದ್ದಾರೆ'' (ಡಾ.ಪಿ.ಕೆ.ಖಂಡೋಬಾ, ಪು.೪೫, ೧೯೯೧). ಈಗಲೂ ಸಹಬಳ್ಳಾರಿ ಜಿಲ್ಲೆಯಲ್ಲಿ ನಿಗದಿತ ವೇಳೆಯಲ್ಲಿ ಬೇರೆಡೆಗೆ ತೆರಳಿ ಅಲ್ಲಿದ್ದ ನಗರೀಕರಣ ಸಂಸ್ಕೃತಿಗೆ ಬಲಿಯಾಗದೇ ಪುನಃ ಹಳ್ಳಿಗೆ ವಾಪಸ್ಸಾಗುತ್ತಾರೆ. ಇದರಿಂದ ಲಂಬಾಣಿಗರಲ್ಲಿ ನಗರೀಕರಣ ಸಂಸ್ಕೃತಿಯು ಹೆಚ್ಚಾಗಿ ಪ್ರಭಾವ ಬೀರಲಿಲ್ಲ ಎನ್ನಬಹುದು. ಪ್ರತಿ ತಾಂಡಾಗಳಿಗೆ ಒಬ್ಬ ಪ್ರತಿನಿಧಿಯು ಇರುತ್ತಾನೆ. ಆತನೇ ಆ ತಾಂಡಾದ ನಾಯಕನಾಗಿರುತ್ತಾನೆ. ನಾಯಕನ ಮಾತನ್ನು ಚಾಚು ತಪ್ಪದೇ ಪಾಲಿಸಿಕೊಂಡುಬರುವ ವಿಶಿಷ್ಟ ಸಂಸ್ಕೃತಿ ಲಂಬಾಣಿಗರದು ಆಗಿದೆ.

ಲಂಬಾಣಿಗರು ವಿಶಿಷ್ಟ ಕಲಾತ್ಮಕ ಕುಸುರಿ ಕೆಲಸದಿಂದ ಇಲ್ಲವೇ ತಾವೇ ತಯಾರಿಸಿದ ವೇಷಭೂಷಣಗಳು ನೋಡಲು ಆಕರ್ಷಣೀಯ. ಈ ಉಡುಗೆ ತೊಡುಗೆಗಳಿಂದ ತಟ್ಟನೆ ಲಂಬಾಣಿ ಜನಾಂಗದವರೆಂದು ಗುರುತಿಸಲ್ಪಡಲಾಗುತ್ತದೆ. ಇದೇ ತರಹದ ಶೈಲಿಯ ವಸ್ತ್ರವನ್ನು ರಾಜಸ್ಥಾನಿ ಹೆಣ್ಣು ಮಕ್ಕಳು ಧರಿಸುವರು. ತುಂಬಾ ವಿಶಿಷ್ಟ ಮಾದರಿಯ ಉಡುಗೆ ತೊಟ್ಟ ಲಂಬಾಣೀ ಮಹಿಳೆಯರು ಪುರುಷರಿಗಿಂತಲೂ ಆಕರ್ಷಣೀಯವಾಗಿರುತ್ತಾರೆ. ಪುರುಷರೂ ಸಹ ತಲೆಗೆ ತುಂಬಾ ಉದ್ದನೆಯ ಗಾತ್ರದ ರುಮಾಲು, ಜುಬ್ಬಾ, ಪೈಜಾಮ್‌ನ್ನು ಧರಿಸಿರುವುದು ಕಂಡಬರುತ್ತದೆ. ಆದರೆ ಈಚೆಗೆ ಈ ವೇಷಭೂಷಣವು ನಗರೀಕರಣಕ್ಕೆ ಹತ್ತಿರವಿರುವ ಕೆಲವು ತಾಂಡಾಗಳಲ್ಲಿ ಮಾಯವಾಗಿ ನಗರಸಂಸ್ಕೃತಿಗೆ ಹೊಂದಿಕೊಂಡಂತೆ ಸೀರೆ ರವಕೆಯನ್ನು ತೊಟ್ಟು ಜೀವಿಸುತ್ತಿದ್ದಾರೆ.

### ೫.೨. ಲಂಬಾಣಿಗರ ವಸತಿ ವ್ಯವಸ್ಥೆ

ಲಂಬಾಣಿಗರು ನಗರ ಪ್ರದೇಶದಿಂದ ದೂರದಲ್ಲಿ ವಾಸಮಾಡುತ್ತಾರೆ. ಬಳ್ಳಾರಿ ಜಿಲ್ಲೆಯ ಬಹುತೇಕ ತಾಂಡಾಗಳಲ್ಲಿ ವಾಸಿಸುವ ಲಂಬಾಣಿಗರು ಗುಡಿಸಲು ವಾಸಿಗಳಾಗಿದ್ದಾರೆ. ಆದರೆ ಈಚೆಗೆ ಜಿಲ್ಲೆಯ ಪ್ರಮುಖ ತಾಂಡಾಗಳಲ್ಲಿ ಗುಡಿಸಲು ಮನೆಗಳೇ ಕಾಣಸಿಗುವುದಿಲ್ಲ. ಲಂಬಾಣಿಗರು ಸಹ ಮೇಲ್ಮಹಡಿಗಳನ್ನು ಕಟ್ಟಿಸಿಕೊಂಡು ಸುಂದರ ಬದುಕನ್ನು ಸಾಗಿಸುತ್ತಿದ್ದಾರೆ. ಆದರೆ ಕೆಲವು ತಾಂಡಾಗಳು ತುಂಬಾ ವಿಸ್ತಾರವಾದ ಬಯಲು ಜಾಗವನ್ನು ಹೊಂದಿರುವವರು. ತಮ್ಮ ಗುಡಿಸಲುಗಳ ಸುತ್ತಲೂ ತಾಂಡಾಗಳ ಆಸುಪಾಸಲ್ಲೇ ಗುಡ್ಡಗಳಲ್ಲಿ ದೊರಕುವ ಮುಳ್ಳುಕಡ್ಡಿಗಳನ್ನು ಹಾಕಿಕೊಂಡಿರುತ್ತಾರೆ. ಇದು ಒಂದು ರೀತಿ ರಕ್ಷಣಾತ್ಮಕವಾಗಿ ಕಂಡುಬರುತ್ತದೆ. ಕೆಲವು ಸುಧಾರಿಸಿದ ತಾಂಡಾಗಳ ಜೀವನ ವಿಧಾನ ಗಮನಿಸಿದರೆ ಅವರ ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದು ಕಂಡುಬಂದಿದೆ. ವಾಸದಿಂದ ಅನುಕೂಲಸ್ಥರಾಗಿರುತ್ತಾರೆ. ಹಂಚಿನ ಮನೆಗಳೂ, ತಾರಸಿಮನೆಗಳಲ್ಲಿ ವಾಸವಾದರೂ ಸಹ ವಲಸೆ ಹೋಗಿ ಬರುವುದು ಮಾತ್ರ ನಿಂತಿಲ್ಲ ಎಂಬುದು ಕ್ಷೇತ್ರ ಅಧ್ಯಯನದಿಂದ ತಿಳಿದುಬಂದಿದೆ.

ಲಂಬಾಣಿಗರು ಕೌಟುಂಬಿಕವಾಗಿ ಈಗಲೂ ಹಿಂದುಳಿದಿದ್ದಾರೆ. ಆಧುನಿಕ ಪರಿಕರಗಳು ಗ್ರಾಮೀಣ ಭಾಗಕ್ಕೆ ಸಾಗಿಬಂದರೂ ಸಹ ಇಂದಿಗೂ ಕೆಲವು ತಾಂಡಾಗಳಲ್ಲಿ ಬದುಕುವ ಪರಿಸ್ಥಿತಿ ಗಮನಿಸಿದರೆ ಇನ್ನೂ ಅಭಿವೃದ್ಧಿ ಹೊಂದಿಲ್ಲ ಎಂದು ತಿಳಿದುಬರುತ್ತದೆ. ತಮ್ಮದೇ ಆದ ಜೀವನ ವಿಧಾನ, ರೀತಿ-ನೀತಿಗಳನ್ನು ಅನುಸರಿಸಿಕೊಂಡೆ ಜೀವನ ಸಾಗಿಸುತ್ತಿರುವ ಲಂಬಾಣಿಗರು ಈಗಲೂ ಮನೆಗಳಲ್ಲಿ ಆಧುನಿಕ ಪರಿಕರಗಳನ್ನು ಬಳಸುತ್ತಿದ್ದರೂ ಸಹ ಮಡಕೆ-ಕುಡಿಕೆಗಳ ಬಳಕೆ ಕಾಣಸಿಗುತ್ತದೆ. ತಾಂಡಾಗಳ ಪ್ರತಿ ಮನೆಯ ಹಟ್ಟಿಯ ಮುಂದೆ ನೇತಾಕಿರುವ ನೆಲುವುಗಳಲ್ಲಿ ಮಡಕೆಗಳನ್ನು ಇಟ್ಟಿರುತ್ತಾರೆ. ಹೀಗೆ ನೇತಾಕುವುದರಿಂದ ಮನೆಯ ಒಳಗಡೆ ಸಾಗಿ ಬರುವ ಬೆಕ್ಕಿನ ತೊಂದರೆಯಿಂದ ಬಚಾವಾಗಬಹುದು. ಬಹುತೇಕ ಲಂಬಾಣಿಗರು ಇಂದಿಗೂ ಚಾಪೆ, ಚೀಲಗಳನ್ನು ಮಲಗಲು ಬಳಸುತ್ತಾರೆ.

ಊರ ಹೊರಗಿದ್ದ ತಾಂಡಾಗಳೆಲ್ಲವೂ ನಗರದೊಳಗೆ ಸೇರಿಕೊಂಡಿವೆ. ಇದರಿಂದ ನಗರೀಕರಣದ ಈ ಹೊಸ್ತಿಲಿನಲ್ಲಿ ಸಹ ತುಂಬಾ ವಿಭಿನ್ನವಾದ ಜೀವನ ವಿಧಾನವನ್ನು ರೂಢಿಸಿಕೊಂಡೆ ಸಾಗಿಸುತ್ತಿದ್ದಾರೆ. ಕಬ್ಬು ಕಟಾವು ಮಾಡಿದ ಸೌದೆಯನ್ನೇ ಬಹುತೇಕವಾಗಿ ತಾವು ವಾಸಿಸಲು ಇರುವ ಹಟ್ಟಿಯ ಮೇಲೆ ಹೊದಿಕೆಗಾಗಿ ಬಳಸುವುದು ಕಂಡುಬರುತ್ತದೆ. ಇಂತಹ ಹಟ್ಟಿಗಳು ತೀರಾ ಗ್ರಾಮೀಣ ಭಾಗದಲ್ಲಿ ಇಲ್ಲವೆ ವಲಸೆ ಹೋದ ವೇಳೆಯಲ್ಲಿ ಗದ್ದೆಗಳ ಆಸುಪಾಸಲ್ಲೇ ಈ ರೀತಿಯ ಹಟ್ಟಿಗಳನ್ನು ಕಟ್ಟಿಕೊಂಡಿರುತ್ತಾರೆ. ಹೊಲ-ಗದ್ದೆಯ ಬಯಲಿನಲ್ಲಿ ಯಾವುದೇ ಹುಳ ಉಪಟಗಳ ಭಯವಿಲ್ಲದಂತೆ ಜೀವನ ಸಾಗಿಸುವುದು ತುಂಬಾ ವಿಶೇಷ. ಅಲೆಮಾರಿಯಾಗಿ ಹೋದ ವೇಳೆಯಲ್ಲಿ ತಾವು ತಂಗಿರುವ ಸ್ಥಳದ ಹತ್ತಿರದಲ್ಲೇ ಪ್ರತ್ಯೇಕವಾದ ದೇವಳ, ಮಠಗಳನ್ನು ಕಟ್ಟಿಕೊಳ್ಳುವುದಿಲ್ಲ. ಆದರೆ ಇವರಂತೆ ವಲಸೆಯಾಗಿ ಬರುವ ಬುಡಕಟ್ಟು ಸಮೂಹವು ಆಯಾ ಜನವಸತಿಯ ದೇವರನ್ನು ವಿಶಾಲವಾದ ಜಾಗದಲ್ಲಿ ದೇಗುಲವನ್ನು ರಚಿಸಿಕೊಂಡಿರುತ್ತಾರೆ. ಇದು ತಾತ್ಕಾಲಿಕವಾಗಿದ್ದರಿಂದ ಮೇಲು ಹೊದಿಕೆ ಇಲ್ಲದೆ ಕೆಲವಕ್ಕೆ ಬಟ್ಟೆ ಇಲ್ಲವೆ ವಿಶಾಲವಾದ ಕೌದಿಯನ್ನು ಹೊದಿಸಿದ್ದು ಕಂಡುಬರುತ್ತದೆ.

ಕೃಷಿಗೆ ಮೊದಲ ಪ್ರಾಧಾನ್ಯತೆ ನೀಡುವ ಲಂಬಾಣಿಗರು ಇದುವರೆಗೂ ಕೇವಲ ಕಬ್ಬು ಕಟಾವು ಮಾಡುವ ಶ್ರಮದಾಯಕ ಕೆಲಸವನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದರು. ಈ ಕೆಲಸಕ್ಕೆ ದೂರದ ನಗರಕ್ಕೂ ಹೋಗಿ ಬರುವುದು ವಾಡಿಕೆಯಾಗಿದೆ. ತಾವು ದುಡಿದು ತಂದ ಹಣದಿಂದ ಹೆಚ್ಚಾಗಿ ಜೋಳದ ಹಿಟ್ಟು, ಇಲ್ಲವೇ ರಾಗಿ ಹಿಟ್ಟಿನ ರೊಟ್ಟಿಯನ್ನು ಹೆಚ್ಚಾಗಿ ಬಳಸುವುದು ಕಂಡುಬರುತ್ತದೆ. ಜಿಲ್ಲೆಯ ಬಹುತೇಖ ತಾಂಡಾಗಳಲ್ಲಿ ಇದೇ ಆಹಾರಪದ್ಧತಿಯಾಗಿ ಬಳಕೆಯಲ್ಲಿದೆ. ಇವರ ಅತ್ಯಂತ ಪ್ರಿಯವಾದ ಆಹಾರ ಮಾಂಸ. ಸ್ತ್ರೀ ದೇವತೆಗಳನ್ನು ಹೆಚ್ಚು ಆರಾಧಿಸುವ ಇವರು ತಾವೇ ಸಾಕಿರುವ ಇಲ್ಲವೇ ವರುಷಕ್ಕೆ ಒಮ್ಮೆಯಾದರೂ ಗಾಳೆಮ್ಮ ದೇವಿಗೆ ಕುರಿ ಇಲ್ಲವೇ ಕೋಳಿ ಸಮರ್ಪಣೆ ಮಾಡುವ ಪದ್ಧತಿ ಈಗಲೂ ಇದೆ. ಜಿಲ್ಲೆಯಲ್ಲಿ ಹೊಸಪೇಟೆ ತಾಲೂಕಿನ ಕಮಲಾಪುರದ ಬಳಿ ಇರುವ ಗಾಳೆಮ್ಮದೇವಿಯ ದೇವಾಲಯಕ್ಕೆ ಸಾಗಿ ಬಂದು ಬಲಿ ಅರ್ಪಿಸಿ ಹೋಗುತ್ತಾರೆ. ತಮಗೆ ಇಲ್ಲವೇ ತಮ್ಮ ಮಕ್ಕಳು ಹಾಗೂ ತಾವು ಸಾಕುವ ಪ್ರಾಣಿಗಳ ರಕ್ಷಣೆಗಾಗಿ ಈ

ದೇವತೆ ಮೊರೆ ಹೋಗುವುದು ಸರ್ವೇ ಸಾಮಾನ್ಯ ಸಂಗತಿಯಾಗಿದೆ. ತಾವಿರುವ ಊರಿಂದಲೂ ಬಹುತೇಕ ತಾಂಡದ ಜನರು ಎತ್ತಿನಬಂಡಿಯಲ್ಲಿ ತಮ್ಮ ಕುಟುಂಬದ ಎಲ್ಲಾ ಸದಸ್ಯರ ಜೊತೆಗೆ ಆಚರಣೆ ಮಾಡುವರು. ಈ ರೀತಿಯಾಗಿ ಬಹುತೇಕವಾಗಿ ಹೋಳಿ ಹಬ್ಬ ಆಗಿ ಒಂದುವಾರದ ಬಳಿಕ ಜರುಗಿಸುವರು. ಮಂಗಳವಾರ ಇಲ್ಲವೇ ಶುಕ್ರವಾರದಂದು ಪೂಜೆ ಸಲ್ಲಿಸಿ ನಂತರ ತಮ್ಮ ತಮ್ಮ ತಾಂಡಗಳಿಗೆ ತೆರಳುವರು. ಇವರಂತೆ ಗುಜರಾತಿನ ಮಾರ್ವಾಡಿಗಳು ಇಂದಿಗೂ ಸಹ ಲಂಬಾಣಿಗರು ಗಾಳೆಮ್ಮನನ್ನು ಪೂಜಿಸಿದರೆ ತಾವು ವಾಸವಾಗಿರುವ ಊರಲ್ಲಿರುವ ಗ್ರಾಮ ದೇವತೆಯಾದ ಊರಮ್ಮನ ದೇವಾಲಯಕ್ಕೆ ಹೋಳಿ ಹಬ್ಬದ ಬಳಿಕ ಒಂದು ವಾರ ಕಳೆದ ಮೇಲೆ ಈಗಲೂ ಆಚರಿಸುತ್ತಾರೆ. ಆದರೆ ಈ ಜನ ಸಮೂಹಕ್ಕೆ ಲಂಬಾಣಿಗರಲ್ಲಿ ಭಿನ್ನತೆ ಏನೆಂದರೆ ಮಾಂಸಾಹಾರ ಮಾತ್ರ ಇರೋಲ್ಲ. ಆದರೆ ಮೂಲತಃ ಆರಾಧನೆ ಮಾತ್ರ ಒಂದೆಯಾಗಿದ್ದು, ಹೊಸಪೇಟೆಯಲ್ಲಿ ಈಗಲೂ ಚಾಲ್ತಿಯಲ್ಲಿದೆ. ಇದರಿಂದಲೇ ಲಂಬಾಣಿಗರು ರಾಜಸ್ಥಾನದ ಮಾರ್ವಾಡಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ಇವರೇನು ಭಿನ್ನರಲ್ಲ ಎಂದು ತಿಳಿದುಬರುತ್ತದೆ.

ಜಿಲ್ಲೆಯ ಬಹುತೇಕ ಲಂಬಾಣಿ ತಾಂಡಾಗಳಲ್ಲಿ ತಾವೇ ಕಟ್ಟಿಕೊಂಡ ದೇವಾಲಯಗಳಿಗೆ, ಪೂಜಾರಿಗಳಿಗೆ ಪ್ರಮುಖ ಸ್ಥಾನಮಾನವನ್ನು ನೀಡುತ್ತಾರೆ. ಇವರು ವೈವಾಹಿಕ ಜೀವನದಲ್ಲಿ ನಡೆಯುವ ತಾಳಿಕಟ್ಟುವಾಗ ಮಾತ್ರ ಹೊರಗಿನ ಪುರೋಹಿತರು ಕಾರ್ಯ ಜರುಗಿಸುವರು. ದೈನಂದಿನ ಇಲ್ಲವೇ ವಾರ್ಷಿಕಾವರ್ತನದಲ್ಲಿ ಜರುಗಿಸುವ ಬಹುತೇಕ ಆಚರಣೆಗಳು ಆಯಾ ತಾಂಡಾದ ಪೂಜಾರಿಗಳೇ ನಡೆಸಿಕೊಡುವರು ಎಂದು ಕ್ಷೇತ್ರಾಧ್ಯಯನದಿಂದ ತಿಳಿದುಬಂದ ಸಂಗತಿಯಾಗಿದೆ. ತಾಂಡಗಳಲ್ಲಿ ಗುರುವಿನ ಸ್ಥಾನವನ್ನು ಪೂಜಾರಿಗೆ ನೀಡಲಾಗುತ್ತದೆ. ಪೂಜಾರಿಯ ಉಪದೇಶ-ಸಲಹೆಗಳನ್ನು ತಾಂಡಾದ ಜನರು ಮೀರಲಾರರು. ಆಯಾ ದೇವಾಲಯದ ದೇವರನ್ನು ಪೂಜಾರಿಯು ಆಹ್ವಾನಿಸಿಕೊಂಡು ಭವಿಷ್ಯವನ್ನು ನುಡಿಯುವುದು ಒಂದು ವಿಶೇಷ. ಈ ರೀತಿಯ ಮಾರ್ಗಗಳನ್ನು ಕೃಷಿ ಇಲ್ಲವೆ ತಮ್ಮ ಜೀವನೋಪಾಯದ ಘಟನೆಗಳನ್ನು ಚಾಚುತಪ್ಪದೇ ಲಂಬಾಣಿ ಜನತೆ ಪಾಲಿಸುವರು.

ಇದೇ ರೀತಿಯಲ್ಲಿ ಹಟ್ಟಿಯಲ್ಲಿರುವ ನಾಯಕನಿಗೂ ಸಹ ಗೌರವ-ಆದರಗಳಿಂದ ಕಾಣುತ್ತಾರೆ. ಈ ಸಮಾಜದ ಯಾವುದೇ ಶುಭ ಇಲ್ಲವೆ ಶೋಕ ಕಾರ್ಯಗಳಲ್ಲಿ ಆ ತಾಂಡಾದ ನಾಯಕನ ಪಾತ್ರವೂ ಸಹ ಪ್ರಮುಖವಾಗಿರುತ್ತದೆ. ಈ ನಾಯಕನ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ. ಈಗಲೂ ಗ್ರಾಮೀಣ ಭಾಗದ ತಾಂಡಾಗಳು ಆ ತಾಂಡಾದ ನಾಯಕನ ಹೆಸರನ್ನು ಇಟ್ಟಿರುತ್ತಾರೆ. ನಾಯಕನ ಸಲಹೆ-ಉಪದೇಶಗಳನ್ನು ಪ್ರತಿಯೊಬ್ಬ ವ್ಯಕ್ತಿ ಪಾಲಿಸಬೇಕಾದುದು ಆದ್ಯ ಕರ್ತವ್ಯವಾಗಿರುತ್ತದೆ.

ತಾಂಡಾಗಳ ಹೊರವಲಯ ಇಲ್ಲವೇ ಮಧ್ಯಭಾಗದಲ್ಲಿ ಕೆಲವು ದೇವಾಲಯಗಳನ್ನು ಲಂಬಾಣಿಗರು ನಿರ್ಮಿಸಿಕೊಂಡಿರುವರು. ದೇವಾಲಯಗಳನ್ನು ಲಂಬಾಣಿಗರು ದೇವಳ್ , ದೇಗುಲ, ಗುಡಿ, ಮಟ್ ಮುಂತಾದ ಹೆಸರುಗಳಿಂದ ಕರೆಯುವರು. ಇವರು ಪೂಜಿಸುವ ಹಲವು ದೇವರುಗಳ ಮೂರ್ತಿಗಳನ್ನು ಬಟ್ಟೆಗಳಲ್ಲಿ

ಸುತ್ತಿಡುವುದು ವಾಡಿಕೆಯಾಗಿದೆ. ದೈವಮೂರ್ತಿಗಳನ್ನು ಕೆಂಪು ಇಲ್ಲವೇ ಬಿಳಿ ವಸ್ತ್ರಗಳಲ್ಲಿ ಮಡಚಿಡುವ, ಉತ್ಸವದ ವೇಳೆ ಪವಿತ್ರ ಮನೋಭಾವನೆಯಿಂದ ಅವನ್ನು ತೆಗೆದು ಪೂಜಾಕಾರ್ಯಕ್ಕೆ ಅಣಿಗೊಳಿಸುವರು.

ಬಹುತೇಕವಾಗಿ ಹಟ್ಟಿಗಳಲ್ಲಿರುವ ದೇವಾಲಯಗಳ ಬಳಿ ಬೇವಿನಮರಗಳನ್ನು ಬೆಳಸಲಾಗುತ್ತದೆ. ಈ ಮರದ ಬಳೀಯಲ್ಲಿ ಕೆಂಪು ಇಲ್ಲವೇ ಬಿಳಿ ಜಂಡಾಗಳನ್ನು ಇಡಲಾಗುತ್ತದೆ. ಈ ಧ್ವಜಗಳೂ ಅವರ ಸಮಾಜದ ಮೂಲ ಪುರುಷ ಸೇವಾಭಾಯಾನ ಸಂಕೇತಗಳೆಂಬ ಭಾವನೆಯಿದೆ. ಈ ಸಮಾಜದಲ್ಲಿ ಮಾಂಸದ ಆಹಾರವನ್ನು ಸೇವನೆ ಮಾಡಿದರೂ ಸಹ ದೇವಾಲಯದ ಗರ್ಭಗುಡಿಯಲ್ಲಿ ಕೆಲವು ದೇವರುಗಳಿಗೆ ಮಾಂಸ ನೈವೇದ್ಯ ನಿಷೇಧವಾಗಿರುತ್ತದೆ.

### ೫.೩. ಕೌಟುಂಬಿಕ ಸ್ಥಿತಿಗತಿ

ಲಂಬಾಣಿಗರಲ್ಲಿ ಕುಟುಂಬದ ಒಡೆಯನೇ ಯಜಮಾನಾದರೂ ತಾಂಡಕ್ಕೆ ಒಬ್ಬ ಯಜಮಾನನನ್ನು ನೇಮಿಸಿರುತ್ತಾರೆ. ಈತನೇ ಅಲ್ಲಿ ಸರ್ವಾಧಿಕಾರಿ. ಯಜಮಾನನೇ ನ್ಯಾಯದೀಶ. ಸಣ್ಣ-ಪುಟ್ಟ ವ್ಯಾಜ್ಯಗಳನ್ನು ತಾಂಡಾಗಳಲ್ಲೇ ಬಗೆಹರಿಸುವುದುಂಟು. ಲಂಬಾಣಿಗರಲ್ಲಿ ವಿಶೇಷವಾಗಿ ಚಪ್ಪಲಿಯಿಂದ ಒದೆಸಿಕೊಂಡರೆ ತಮ್ಮ ತಾಂಡಾದಿಂದ ಹೊರಹಾಕಿ ದಂಡ ವಿಧಿಸಲಾಗುತ್ತದೆ.

ಬಳ್ಳಾರಿ ಜಿಲ್ಲೆಯ ಯಾವುದೇ ಗ್ರಾಮಗಳಲ್ಲಿ, ತಾಂಡಾಗಳಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಾಣ ಸಿಗುತ್ತವೆ. ಏಕೆಂದರೆ ಜೀವನೋಪಾಯಕ್ಕಾಗಿ ವಲಸೆ ಹೋಗುವುದರಿಂದ ಪ್ರತ್ಯೇಕ ಜೀವನ ಸಾಗಿಸುವ ದೃಷ್ಟಿಯಿಂದ ಈ ರೀತಿ ವಿಭಜನೆಯಾಗಿ ಬದುಕು ಸಾಗಿಸುತ್ತಿರುವುದು ಕಂಡುಬರುತ್ತದೆ. ಆದರೂ ಕೆಲವು ಕುಟುಂಬಗಳಲ್ಲಿ ಮಾತ್ರ ಅವಿಭಕ್ತಪದ್ಧತಿ ಇರುತ್ತದೆ. ಆದರೆ ಅವರು ಆ ಮನೆಯ ಒಡೆಯನ ಮನೆಗಳ ಆಸುಪಾಸಿನಲ್ಲಿ ವಾಸವಾಗಿರುತ್ತಾರೆ. ಇಷ್ಟೆಲ್ಲಾ ಇದ್ದರೂ ತಾಂಡಾದ ಯಾವುದೇ ಹಬ್ಬ-ಹರಿದಿನ-ಆಚರಣೆಗಳಲ್ಲಿ ಮಾತ್ರ ಎಲ್ಲರೂ ಒಂದಾಗಿ ಜರುಗಿಸುವುದು ಕಂಡುಬಂದಿದೆ.

ಹಿಂದೂ ಸಂಪ್ರದಾಯದಲ್ಲಿ ಮಾತೃಪ್ರಧಾನ ಹಾಗೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಗೆಯಿದ್ದರೂ ಸಹ ಮಾತೃ ಪ್ರಧಾನ ವ್ಯವಸ್ಥೆಯೇ ಬಹುತೇಕರಲ್ಲಿ ಕಾಣಸಿಗುತ್ತದೆ. ಆದರೆ ಕೆಲವು ತಾಂಡಾಗಳಲ್ಲಿ ಪಿತೃ ಪ್ರಧಾನ ವ್ಯವಸ್ಥೆ ಕಂಡುಬಂದರೆ ಇನ್ನು ಕೆಲವು ಕಡೆ ಮಾತೃ ಪ್ರಧಾನ ವ್ಯವಸ್ಥೆಯಿದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪುರುಷನೇ ಇಡೀ ಸಂಸಾರದ ನೊಗವನ್ನು ಹೊತ್ತಿರುತ್ತಾನೆ. ಇದರಿಂದ ಸ್ತ್ರೀಯರು ಪುರುಷರಿಗೆ ಅದೀನರಾಗಿ ಬದುಕು ಸಾಗಿಸುವರು. ಬಹುತೇಕವಾಗಿ ವಲಸೆ ಹೋದಾಗಲೂ ಸಹ ಪುರುಷನು ಕೃಷಿಗಾರಿಕೆಯ ಕಬ್ಬುಕಟಾವು ಇಲ್ಲವೆ ಕಾರ್ಖಾನೆಯಲ್ಲಿ ಕೆಲಸಕ್ಕೆ ಹೋದರೆ ಕೆಲವು ಮಹಿಳೆಯರು ಸಾಥ್ ನೀಡಿದರೆ ಇನ್ನು ಕೆಲವರು ತಮ್ಮ ಜೀವನೋಪಾಯಕ್ಕಾಗಿ ಉರುವಲುಗಳನ್ನು ಕಡಿದುತಂದು ತಮಗೆ ಬೇಕಾದಷ್ಟು ಇಟ್ಟುಕೊಂಡು ಉಳಿದದ್ದನ್ನು ಮಾರಿ ಬಂದ ಹಣದಿಂದ ಕುಟುಂಬದ ಆರ್ಥಿಕ ಸ್ಥಿತಿಗೆ ಪಾಲುದಾರರಾಗುತ್ತಾರೆ. ಹೀಗೆ ವಲಸೆಬಂದ ಕುಟುಂಬದ ಮಕ್ಕಳು ವಿದ್ಯೆಯಿಂದ ವಂಚಿತರಾಗಿ ದೂರ ಉಳಿಯುತ್ತಿದ್ದಾರೆ.

ಆಯಾ ಕುಟುಂಬದಲ್ಲಿ ಹಿರಿಯ ಮಗನೇ ಎಲ್ಲಾ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ವಲಸೆ ಹೋಗಿ ಮರಳಿ ತಾಂಡಾಕ್ಕೆ ಬಂದಾಗಲೂ ಆಯಾ ಕುಟುಂಬದ ಹಿರಿಯ ಹಾಗೂ ತಾಂಡಾದ ಯಜಮಾನನ ಮಾತಿಗೆ ಮೀರುವ ಕೆಲಸ ಮಾಡಲಾರರು. ಒಂದು ವೇಳೆ ಯಜಮಾನನ ಮಾತು ಮೀರುವ ಕೆಲಸ ಮಾಡಿದರೆ ಸೂಕ್ತ ರೀತಿಯ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ.

ಜಿಲ್ಲೆಯ ಸಂಡೂರು ತಾಲೂಕಿನ ಹಲವು ತಾಂಡಾಗಳು ತೀರಾ ಈಚೆಗೆ ಮಹಿಳೆಯರು ಸ್ವಾವಲಂಬಿ ಬದುಕು ಕಟ್ಟಿಕೊಂಡು ಬದುಕುತ್ತಿರುವುದು ಗಮನಕ್ಕೆ ಬಂದಿದೆ. ಈ ಭಾಗದಲ್ಲಿ ಘೋರ್ಪಡೆ ರಾಜ ಮನೆತನದ ಅಧೀನದಲ್ಲಿ ಹಲವು ತಾಂಡಾಗಳು ಇದ್ದವು ಎನ್ನಲಿಕ್ಕೆ ರಾಜ ಮನೆತನದ ಮಕ್ಕಳ ಹೆಸರುಗಳನ್ನು ತಾಂಡಾಕ್ಕೆ ಇಟ್ಟಿದ್ದಾರೆ. ಅಲ್ಲದೆ ತಾಂಡಾದ ಜನರ ಉಡುಗೆ-ತೊಡುಗೆಗಳನ್ನು ವ್ಯವಹಾರಿಕವಾಗಿ ವಿಶ್ವಕ್ಕೂ ಮಾನ್ಯ ಮಾಡಲು ಸಂಡೂರಿನಲ್ಲೇ ಕರಕುಶಲ ಕಲೆಯ ತರಬೇತಿ ನಡೆಸಲಾಯಿತು. ಈ ತರಬೇತಿ ಕೇಂದ್ರದಲ್ಲಿ ಲಂಬಾಣಿಗರು ತಾವೇ ಸ್ವತಃ ಮನೆಯಲ್ಲಿ ತಮ್ಮ ಉಡುಗೆ-ತೊಡುಗೆಗಳನ್ನು ರಚಿಸಿಕೊಳ್ಳುತ್ತಿದ್ದರು. ಇದನ್ನು ಗಮನಿಸಿದ ರಾಜನು ಕರಕುಶಲ ಕೇಂದ್ರದಲ್ಲಿ ಲಂಬಾಣಿಗರಿಗೆ ಅವಕಾಶ ನೀಡಿ ಲಂಬಾಣಿಗರ ಉಡುಗೆ-ತೊಡುಗೆ ರಚಿಸಲು ಅವಕಾಶ ಕಲ್ಪಿಸಿದನು. ಇದರಿಂದ ಈ ಭಾಗದ ಜನರು ಕಬ್ಬು, ಕಟಾವು, ಕೃಷಿಯನ್ನು ಅವಲಂಬಿಸದೇ ಸ್ವಾವಲಂಬಿ ಬದುಕನ್ನು ಕಟ್ಟಿಕೊಂಡರು. ಈ ನಿಟ್ಟಿನಲ್ಲಿ ನಗರದಲ್ಲೇ ಜೀವನ ಸಾಗಿಸುತ್ತಾ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಿ ವಿದ್ಯಾವಂತರಾಗಲು ನೆರವಾದರು.

**೫.೪. ಸಾಂಸ್ಕೃತಿಕ ಸ್ಥಿತ್ಯಂತರಗಳು**

ಯಾವುದೇ ಧರ್ಮದಲ್ಲಿ ಸಂತಾನಕ್ಕೆ ಮಹತ್ವ ನೀಡಿರುವುದು ಗಮನಾರ್ಹ. ಅದರಲ್ಲೂ ಆಯಾ ಕುಟುಂಬದಲ್ಲಿ ಗಂಡು ಮಗುವಿನ ಜನನ ಆದರೆ ಎಲ್ಲಿಲ್ಲದ ಖುಷಿ ಇರುತ್ತದೆ. ಸಂತಾನ ಇಲ್ಲದಿದ್ದರೆ ಅವರ ಜೀವನ ವ್ಯರ್ಥ ಎಂಬ ಮಾತುಗಳು ಕೇಳಿಬರುತ್ತವೆ. ಲಂಬಾಣಿ ಜನಾಂಗವು ಇದಕ್ಕೆ ಹೊರತಾಗಿಲ್ಲ. ಇವರಲ್ಲಿಯೂ ಸಹ ಸಂತಾನಕ್ಕೆ ತುಂಬಾ ಮಹತ್ವ ನೀಡುತ್ತಾರೆ. ಸಂತಾನ ಪ್ರಾಪ್ತಿಯಾಗದಿದ್ದರೆ ಲಂಬಾಣಿ ಜನಾಂಗದ ವ್ಯಕ್ತಿ ಎಷ್ಟು ವಿವಾಹವಾದರೂ ಮಾಡಿಕೊಳ್ಳಬೇಕಾದ ನಿಯಮವಿದೆ. ಇದರಿಂದಲೇ ಅವರಲ್ಲಿ ಕೂಡಾವಳಿ ಪದ್ಧತಿಯು ಇರುವುದು ತಿಳಿದುಬರುವುದು. ಇದು ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ವಿಷಯವು ಕ್ಷೇತ್ರಾಧ್ಯಯನದಿಂದ ತಿಳಿದುಬಂದ ಸಂಗತಿಯಾಗಿದೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ ಎಂಬಂತೆ ಕಡುಬಡತನ ತಾಂಡವ ಆಡುತ್ತಿದ್ದರೂ ಸಹ ಬಹುಪತ್ನಿತ್ವ ಇದೆ. ಅಂತೆಯೇ ಪುರಾಣದ ವಾಕ್ಯದಂತೆ "ಅಪುತ್ರಸ್ಯಗತಿರ್ನಾಪ್ತಿ" ಎಂಬ ನಂಬಿಕೆಯನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುತ್ತಿದ್ದಾರೆ. ಈ ಕಾರಣಕ್ಕಾಗಿ ವಿವಾಹದ ಬಳಿಕ ಪ್ರತಿಹೆಣ್ಣಿಗೂ ಸಂತಾನ ಪ್ರಾಪ್ತಿ ಎನ್ನುವುದು ಆಕೆ ಎದುರಿಸುವ ಕಠಿಣ ಪರೀಕ್ಷೆಯಾಗಿದೆ. ವಿವಾಹವಾಗಿ ೨-೩ ವರುಷದಲ್ಲೇ ಹೆಣ್ಣಿಗೆ ಗರ್ಭಧಾರಣೆ ಆಗಬೇಕು. ಅದರಲ್ಲೂ ಪುತ್ರ ಸಂತಾನಕ್ಕೆ ಮೊದಲ ಪ್ರಾಶಸ್ತ್ಯ ನೀಡಿರುವುದು ಕಂಡುಬರುತ್ತದೆ. ಪುತ್ರಿ ಸಂತಾನಕ್ಕಿಂತ

ಪುತ್ರ ಸಂತಾನವಾದರೆ ಮನೆಯಲ್ಲಿ ಸಂಭ್ರಮ ಸಡಗರ ಹೆಚ್ಚಾಗಿರುತ್ತದೆ. ಗಂಡು ಮಗು ಜನನ ಆದ ಬಳಿಕವೇ ಇಡೀ ಹಟ್ಟಿಗೆ ಸಂತಸದ ಸುದ್ದಿಯಾಗಿರುತ್ತದೆ.

ಈ ಕಾರಣಕ್ಕಾಗಿ ಲಂಬಾಣಿಗರು ಹೆಣ್ಣು ಗರ್ಭ ಧರಿಸಿದ ಲಕ್ಷಣವೇ ತನ್ನದೇ ಆದ ಸಂಸ್ಕಾರಗಳನ್ನು ರೂಢಿಸಿಕೊಳ್ಳುತ್ತಾರೆ. ಇತರೆ ಜಾತಿಗಳಲ್ಲಿ ಹೆಣ್ಣಿಗೆ ಮೊದಲ ಹೆರಿಗೆ ತವರು ಮನೆಯಲ್ಲೇ ಜರುಗಿದರೆ ಲಂಬಾಣಿಗರಲ್ಲಿ ವಿಶೇಷವಾಗಿ ಗಂಡನ ಮನೆಯಲ್ಲಿ ಜರುಗುತ್ತದೆ. ಇದರಿಂದ ಗರ್ಭಧರಿಸಿದ ೪-೫ ತಿಂಗಳ ಬಳಿಕ ತವರಿಗೆ ತೆರಳಿ ಮಗು ಜನನವಾಗುವ ಸನಿಹದಲ್ಲೇ ಗಂಡನ ಮನೆಗೆ ಬರುವುದು ವಾಡಿಕೆಯಾಗಿದೆ. ಇದರಲ್ಲಿ ಗರ್ಭಧಾರಣೆಯಿಂದ ಸಂಸ್ಕಾರಗಳು ಆರಂಭವಾಗಿ ಜನನ ಆದ ಬಳಿಕ ಮರಣದವರೆಗೂ ತಮ್ಮದೇ ಆದ ರೀತಿ-ನೀತಿಗಳನ್ನು ರೂಡಿಸಿಕೊಂಡು ಜೀವನ ಸಾಗಿಸುತ್ತಾರೆ. ಈ ಘಟ್ಟಗಳೂ ಜೀವನದ ಪ್ರಮುಖ ಘಟ್ಟಗಳಾಗಿವೆ.

**ಜನನ :** ಲಂಬಾಣೀ ಜನರಲ್ಲಿ ಜನನ ಕಾರ್ಯಕ್ಕೆ ತುಂಬಾ ಪ್ರಮುಖ್ಯತೆ ನೀಡಿರುವುದು ಕಂಡುಬರುತ್ತದೆ. ಒಂದು ವೇಳೆ ವಿವಾಹವಾದ ಹೆಣ್ಣಿಗೆ ಸಂತಾನ ಪ್ರಾಪ್ತಿ ಬೇಗ ಆಗದಿದ್ದರೆ ಆ ಊರಿನ ಜನಪದ ವೈದ್ಯರನ್ನು ಸಂಪರ್ಕಿಸಿ ಗಿಡಮೂಲಿಕೆ ಔಷಧವನ್ನು ಕೊಡುವುದು ವಾಡಿಕೆಯಾಗಿದೆ.

ಕೆಲವು ಮಹಿಳೆಯರು ನಿತ್ಯವೂ ರೋಧನವನ್ನು ಅನುಭವಿಸುವ ಸ್ಥಿತಿ ಬಂಜೆಗೆ ಇರುತ್ತದೆ. ಆದರೆ ಇತ್ತೀಚೆಗೆ ವೈಜ್ಞಾನಿಕ ಬೆಳವಣಿಗೆಯಿಂದಲೂ ಈ ಜನಾಂಗದವರು ವೈದ್ಯರನ್ನು ಸಂಪರ್ಕಿಸಿ ಸೂಕ್ತ ಸಲಹೆ ಪಡೆದುಕೊಳ್ಳುತ್ತಿರುವುದು ನಗರ ಭಾಗದಲ್ಲಿ ಕಂಡುಬಂದರೆ ಗ್ರಾಮೀಣ ಭಾಗದಲ್ಲಿ ಇನ್ನು ಜನರು ಆಯಾ ತಾಂಡಾ ಸಂಸ್ಕೃತಿಯನ್ನು ಬಿಟ್ಟು ಹೊರ ಬಂದಿಲ್ಲ. ಆದರೂ ಈಚೆಗೆ ಅವರಲ್ಲಿಯೂ ಸಹ ಬಹುತೇಕ ಹೆರಿಗೆಗಳು ಸೂಲಗಿತ್ತಿಯರ ಎದುರು ನಡೆಯುವುದು ಕಳಚಿಕೊಂಡಿದೆ. ನಗರ ಸಂಸ್ಕೃತಿಗಿಂತ ತೀರ ದೂರ ಉಳಿದ ಹಳ್ಳಿಗಳು ಇಲ್ಲವೆ ಅಲೆಮಾರಿಗಳಾಗಿ ದುಡಿಯಲು ಹೋದವರು ಮಾತ್ರ ಅಲ್ಲಿ ವಾಸವಾಗಿರುವ ಹಿರಿಯ ಹೆಂಗಸರೇ ಹೆರಿಗೆ ಮಾಡಿಸಲು ಮುಂದಾಗುತ್ತಾರೆ.

ಮೊದಲು ಹೆರಿಗೆಯ ವೇಳೆ ಪ್ರತಿಯೊಬ್ಬ ತಾಯಿಯೂ ಮಕ್ಕಳನ್ನು ಹೇಗೆ ಆರೈಕೆ ಮಾಡಬೇಕೆಂದು ಸೂಲಗಿತ್ತಿ ಕೈಗೊಳ್ಳುವ ಕಾರ್ಯಗಳಿಂದ ತಿಳಿದುಕೊಳ್ಳುತ್ತಾರೆ. ಮುಂದೊಂದು ದಿನ ತಾನು ಹಟ್ಟಿಯಲ್ಲಿ ಸೂಲಗಿತ್ತಿ ಸ್ಥಾನ ಪಡೆಯುವಳು.

ಗರ್ಭಿಣಿ ಹೆಂಗಸು ಈ ಹಿಂದಿಗಿಂತಲೂ ಇಂದು ತುಂಬಾ ಜವಾಬ್ದಾರಿಯಿಂದ ನೋಡಿಕೊಳ್ಳುವುದು ಕಂಡುಬರುತ್ತದೆ. ಆದರೆ ಈ ಹಿಂದೆ ನಡೆಯುವ ಆಚರಣೆಗಳನ್ನು ಚಾಚು ತಪ್ಪದೇ ಪಾಲಿಸುವುದು ಕೆಲವೇ ತಾಂಡಾಗಳನ್ನು ಗುರುಗಿಸಬಹುದಾಗಿದೆ. ಆಯಾ ಹಟ್ಟಿಗಳಲ್ಲಿರುವ ಪ್ರಮುಖ ದೇವತೆಯಾದ ಸಾತಿಸತ್ತಿ (ಏಳು ಮಕ್ಕಳ ತಾಯಿಯನ್ನು) ಆರಾಧನೆ ಮಾಡಿ ಬರುತ್ತಾರೆ. ಹೆರಿಗೆ ಬೇನೆ ಹೆತ್ತವಳಿಗೆ ಗೊತ್ತು ಎಂಬ ಗಾದೆ ಮಾತಿನಂತೆ ಗರ್ಭಿಣಿಗೆ ಹೆರಿಗೆಯಾಗುವ ಘಟ್ಟವೂ ತುಂಬಾ ಪ್ರಮುಖವಾಗಿರುತ್ತದೆ. ಆಕೆ 'ಮರುಜನ್ಮ'

ಪಡೆದಂತೆ ಎಂಬ ಅನುಭವದ ಮಾತುಗಳು ಕೇಳಿಬರುತ್ತವೆ. ಇದು ತೀರಾ ಸಂಪರ್ಕ ಇಲ್ಲದ ತಾಂಡಾಗಳಲ್ಲಿ ಮಾತ್ರ ಈ ರೀತಿ ಅನಿಸುತ್ತದೆ. ಆದರೆ ನಗರಕ್ಕೆ ಸಮೀಪ ಇರುವ ತಾಂಡಾಗಳ ಜನರು ಹೆರಿಗೆಗಾಗಿ ಆಸ್ಪತ್ರೆಯನ್ನೇ ಅವಲಂಬಿಸುತ್ತಾರೆ. ಏಕೆಂದರೆ ವೈದ್ಯರ ಎದುರಿಗೆ ಆಗುವ ಹೆರಿಗೆ ಸುಸೂತ್ರವಾಗಿ ಹಾಗೂ ಹೆರಿಗೆಯ ಮುನ್ನಾ ಒದಗಿ ಬರುವ ತೊಂದರೆ ನಿವಾರಿಸುವುದು ಮನಗಂಡಿದ್ದಾರೆ. ಆದರೆ ಈಚೆಗೆ ಕೆಲವು ಆಸ್ಪತ್ರೆಗಳು ಆರ್ಥಿಕ ಪರಿಸ್ಥಿತಿ ಸುಧಾರಿಸಲು ತಮ್ಮ ವೃತ್ತಿ ಧರ್ಮವನ್ನು ಬಳಸಿಕೊಂಡು ಸಹಜ ಹೆರಿಗೆಗಳನ್ನು ಮಾಡಿಸುವುದು ತುಂಬಾ ದೂರ ಉಳಿಯುತ್ತಿದೆ ಎಂಬ ವಾತಾವರಣ ಸೃಷ್ಟಿಯಾಗಿದೆ.

ಆಯಾ ತಾಂಡಾಗಳಲ್ಲಿ ಮಗು ಹುಟ್ಟಿದ ಬಳಿಕ ಸಂತಸದ ವಾತಾವರಣ ಮೂಡಿರುತ್ತದೆ. ಕೆಲವು ಹಟ್ಟಿಗಳಲ್ಲಿ ಈಗಲೂ ಗಂಡು ಮಗು ಜನಿಸಿದ ಕೂಡಲೇ ನಗಾರಿ ಬಾರಿಸುವ ಪದ್ಧತಿ ಇದೆ. ಆದರೆ ಹೆಣ್ಣು ಮಗುವಿಗೆ ಈ ಸಡಗರ ಸಂಭ್ರಮ ಇರುವುದಿಲ್ಲ. ಏಕೆಂದರೆ ಗಂಡು ಮಗು ಮುಂದೆ ವಂಶವನ್ನು ಬೆಳೆಸುವ ಆ ಮನೆಗೆ ಯಜಮಾನನಾಗುವನು ಎಂಬ ನಂಬಿಕೆಯಿಂದ ಈ ರೀತಿಯ ಆಚರಣೆ ಮಾಡುತ್ತಿರುವುದು ಕಂಡುಬರುತ್ತದೆ. 'ನಗಾರಿ' ಬಾರಿಸಿದ ಬಳಿಕ ಇಡೀ ಹಟ್ಟಿಗೆ ಮಗುವಿನ ತಂದೆಯೂ ಸಾರಾಯಿ ನೀಡಿ ಸಂತಸ ಪಡುವುದು ವಾಡಿಕೆಯಾಗಿದೆ. ಆದರೆ ಈಚೆಗೆ ಸಾರಾಯಿ ಸಾಗಾಟ ಕಡಿಮೆಯಾಗುತ್ತಿರುವುದರಿಂದ ಸರ್ಕಾರದಿಂದ ತಯಾರಾಗುವ ಮದ್ಯಪಾನವನ್ನು ನೀಡಿ ಜನರ ಮನಸ್ಸನ್ನು ಸಂತಸಪಡಿಸುವುದು ಕಂಡುಬರುತ್ತದೆ.

ಜಿಲ್ಲೆಯ ಯಾವುದೇ ತಾಂಡಾಗಳ ಕುಟುಂಬದಲ್ಲಿ ಅತಿಹೆಚ್ಚು ಸಂಖ್ಯೆಯ ಮಕ್ಕಳಿರುವುದು ಗೋಚರಿಸುತ್ತವೆ. ಇವರಲ್ಲಿ ಹೆಚ್ಚಾಗಿ ಕುಟುಂಬ ಯೋಜನೆಯನ್ನು ಬೆಳಸಿಲ್ಲದಿರುವುದು ವ್ಯಕ್ತವಾಗುತ್ತದೆ. ಆದರೆ ಇದನ್ನು ಕೇವಲ ಅವಿದ್ಯಾವಂತರು ಮಾತ್ರ ಈ ರೀತಿ ಪಾಲಿಸಿದ್ದಾರೆ. ಏಕೆಂದರೆ ಒಂದೊಂದು ಕುಟುಂಬದಲ್ಲಿ ೮ ರಿಂದ ೧೨ ಜನರು ಇರುವುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದಿದೆ. ಏಕೆಂದರೆ ಹೆಚ್ಚಾಗಿ ಕೃಷಿಗಾರಿಕೆಗೆ ಹೆಚ್ಚು ಮಹತ್ವ ಕೊಡುವ ಜನ ತಮ್ಮ ಮಕ್ಕಳನ್ನು ತಮ್ಮ ಹಿಂದೇನೆ ಕರೆದುಕೊಂಡು ಹೋಗಿ ಅವರಿಗೂ ತಮ್ಮ ಸಾಂಪ್ರದಾಯಿಕ ಕೆಲಸವನ್ನು ಕಲಿಸುವುದು ವಾಡಿಕೆ. ಆದರೆ ಈಚೆಗೆ ಕೆಲವು ವಿದ್ಯಾವಂತರು ಮಿತ ಸಂತಾನಿಗಳಾಗಿ ಚೊಕ್ಕ ಸಂಸಾರಕ್ಕೆ ಪ್ರಾಶಸ್ತ್ಯ ನೀಡುತ್ತಿದ್ದಾರೆ. ಇಂತಹ ಕುಟುಂಬದಲ್ಲಿ ಮಾತ್ರ ತಮ್ಮ ಮಕ್ಕಳಿಗೆ ಉನ್ನತ ವ್ಯಾಸಂಗಕ್ಕೆ ಕಳಿಸುತ್ತಾರೆ. ಆದರೆ ತಾಂಡದಲ್ಲಿ ಬಹುತೇಕ ಜನರು ಶಾಲಾಭ್ಯಾಸವನ್ನು ತೊರೆದು ಕೆಲಸಕ್ಕೆ ಕರೆದು ಹೋಗಿರುವುದು ಕಂಡುಬರುತ್ತದೆ. ಆದರೂ ಈಚೆಗೆ ತಾಂಡಾಗಳಲ್ಲೇ ಅಂಗನವಾಡಿ ಕೇಂದ್ರಗಳು ಸ್ಥಾಪನೆಯಾಗಿ ತುಂಬಾ ಅನುಕೂಲ ಮಾಡಿಸಿವೆ. ಹೆಂಗಸರಿಗಾಗಿ ಇರುವ ಬಹುತೇಕ ಸೌಕರ್ಯಗಳು ಈ ಕೇಂದ್ರಗಳಿಂದ ಲಭ್ಯವಾಗುತ್ತಿವೆ. ತಾಂಡಾದ ಕೊನೆಯ ಪ್ರಜೆಯೂ ಸಹ ತಮ್ಮ ಮಕ್ಕಳನ್ನು ತಾನು ಕಷ್ಟಪಟ್ಟರೂ ವಿದ್ಯಾಭ್ಯಾಸಕ್ಕೆ ಕಳುಹಿಸುತ್ತಿರುವುದು ಕಾಣಸಿಗುತ್ತದೆ. ಇದು ಹೆಚ್ಚಾಗಿ ಮುಂದುವರಿದಾಗ ಮಾತ್ರ ಹಟ್ಟಿಗಳು ಉತ್ತಮ ಸ್ಥಿತಿಯಲ್ಲಿದ್ದು ನಗರೀಕರಣ ಸಂಸ್ಕೃತಿಗಿಂತ ಹೆಚ್ಚಿನ ಪ್ರಾಶಸ್ತ್ಯ ಪಡೆದುಕೊಳ್ಳುತ್ತವೆ.

ಲಂಬಾಣಿಗರ ಬಹುತೇಕ ಹಟ್ಟಿ ಇಲ್ಲವೆ ತಾಂಡಾಗಳಲ್ಲಿ ಮಗು ಜನನ ಆದಂದಿನಿಂದ ಹಲವು ಘಟ್ಟಗಳವರೆಗೆ ವಿವಿಧ ಹಂತಗಳಲ್ಲಿ ಸಂಸ್ಕಾರ ಮಾಡುವರು. ಈ ಕುರಿತಾಗಿ ಲಂಬಾಣಿ ಹೆಂಗಸರು ಹಾಡಿನ ಮೂಲಕ ಗುರುತಿಸಿದ್ದು ಕಾಣಸಿಗುತ್ತದೆ.

೧. ಮಗು ಜನನದ ಗೀತೆ (ಏಕಳ ಪೋಯೇರೋ ಗೀದ)

೨. ಸೂತಕ ನಿವಾರಣೆ ಗೀತೆ (ದಳವಾಧೋಕಾಯೇರೋಗಿದೆ)

೩. ಮಗುನಾಮಕರಣಗೀತೆ (ಪಾಲಣೀಯ ಘುಲೇರೋ ಗೀದ)

೪. ಜವುಳಗೀತೆ (ಬಾಳ ಲಟ್ಯಾಕಡಾಯೇರೊಗೀದ)

೫. ಹುಟ್ಟುಹಬ್ಬದ ಗೀತೆ (ಧೂಂಡ್ ಕರೇರೋಗೀದ) ಹೀಗೆ ವಿವಿಧ ರೀತಿಯಲ್ಲಿ ಲಂಬಾಣಿ ಮಹಿಳೆಯರು ಜನನದಿಂದ ಪ್ರಾಪ್ತ ವಯಸ್ಕರವರೆಗೂ ಹಲವು ಹಾಡುಗಳನ್ನು ಹಾಡುತ್ತಿರುವುದು ಕಂಡುಬರುತ್ತದೆ ಎಂದು ಡಾ.ಡಿ.ಬಿ.ನಾಯಕರವರು ಗುರುತಿಸಿದ್ದಾರೆ. ಈ ರೀತಿಯ ಸಂಸ್ಕಾರವು ಜಿಲ್ಲೆಯ ಹಲವಾರು ತಾಂಡಾಗಳಲ್ಲಿ ಕಾಣಸಿಗುತ್ತದೆ.

**೧. ಮಗು ಜನನದ ಗೀತೆ(ಏಖಳ ಪೊಯೇರೋಗೀದ)**

ಪ್ರತಿಯೊಬ್ಬ ಮಹಿಳೆಯು ಗರ್ಭಧರಿಸಿದ ಬಳಿಕ ಆಕೆಯು ಒಂಭತ್ತು ತಿಂಗಳು ಮಗುವನ್ನು ಹೊಟ್ಟೆಯಲ್ಲಿಟ್ಟು ಸಲಹುತ್ತಾಳೆ. ಈ ನಡುವೆ ಆ ಮನೆಯ ಯಜಮಾನಿಯು ಗರ್ಭವತಿಗೆ ಸೂಕ್ತವಾದ ಅಹಾರವನ್ನು ನೀಡುತ್ತಾಳೆ. ಹೆರಿಗೆಯ ವೇಳೆಯಲ್ಲಿ ಲಂಬಾಣಿ ಜನಪದರು ಬೇನೆ ಕಳೆಯಲು ಗರ್ಭವತಿಯ ಎದುರು ಕುಳಿತು ಹಾಡನ್ನು ಹಾಡುತ್ತಾರೆ. ಇವು ಒಂದು ರೀತಿ ಅವಳಿಗೆ ಪೀಡುಸುವ ಗೀತೆಗಳಾದರೂ ಸಹ ಆಕೆ ಗೀತೆಗಳನ್ನು ಆಲಿಸುತ್ತಾ ಸಲೀಸಾಗಿ ಹೆರಿಗೆ ಮಾಡಿಸಲು ಜನಪದರ ಗೀತೆಗಳೇ ಕಾರಣವಾಗುತ್ತವೆ.

ಗರ್ಭವತಿ ಹೆಣ್ಣಿಗೆ ಗಂಡು ಮಗು ಜನನವಾದ ತಕ್ಷಣವೇ ನಗಾರಿಬಾರಿಸಿದರೆ, ಹೆಣ್ಣು ಮಗು ಜನಿಸಿದರೆ ಕಂಚಿನ ಗಂಗಾಳ ಬಾರಿಸುತ್ತಾರೆ. ಜನಿಸಿದ ಮಗು ಮುಂದೆ ಉತ್ತಮ ಇಲ್ಲವೇ ಕೆಟ್ಟ ಗುಣ ರೂಡಿಸಿಕೊಂಡರೆ ನೀನು ಹುಟ್ಟಿದಾಗ ಗಂಗಾಳ ಇಲ್ಲವೇ ನಗಾರಿ ಬಾರಿಸಿದವರ್ಯಾರು ಎಂದು ಕೊಂಕು ಮಾತನಾಡುವುದು ಕಂಡುಬರುತ್ತದೆ. ಗಂಡು ಮಗು ಜನಿಸಿದರೆ, ತಾಂಡಾದಲ್ಲಿ ಎಲ್ಲರ ಮುಖದಲ್ಲಿ ಸಂತಸ ಏಕೆಂದರೆ ಗಂಡು ಜನಿಸಿದರೆ ಮನೆಯ ಯಜಮಾನನು ಇತರರಿಗೆ ಸಾರಾಯಿ ಕುಡಿಸುವನೆಂಬ ಭಾವನೆಯಿರುತ್ತದೆ. ಕುಡಿತಕ್ಕೆ ಪ್ರಮುಖ ಪ್ರಾಶಸ್ತ್ಯವನ್ನು ನೀಡುವ ಈ ಜನರು ಕಷ್ಟುಪಟ್ಟು ದುಡಿಯುವ ಮನೋಭಾವದವ ರಾಗಿರುತ್ತಾರೆಂದರೆ ತಪ್ಪಾಗಲಿಕ್ಕಿಲ್ಲ. ಆದ್ದರಿಂದ ಮುಂದೆ ಈ ಕುಟುಂಬದ ಜವಾಬ್ದಾರಿ ಈ ಮಗುವೇ ಪಡೆಯುವುದು ಎಂಬ ಭಾವನೆ ಅವರಲ್ಲಿರುತ್ತದೆ.

ಪುತ್ರ ಜನಸಿದ ಬಳಿಕ ಸಂಭ್ರಮದ ಆಚರಣೆಯ ವೇಳೆ ಮಗುವಿನ ಉತ್ತಮ ಭವಿಷ್ಯಕ್ಕಾಗಿ ತಾಂಡಾದಲ್ಲಿ ವಾಸವಾಗಿರುವ ನಾರಿಯರೆಲ್ಲರೂ ಪ್ರಾರ್ಥನೆ ಗೀತೆಯನ್ನು ಹಾಡುತ್ತಾರೆ.

ಯಾಡಿಬಾಪುರಿ ಆಸಿಸಯೇ ಬೇಟಾ ಜಲಮಾಯೋ|
ದೇವಧರಮುರಿ ಆಸಿಸಯೇ ಬೇಬಾಜಲಮಾಯೋ|

ಆಚ ಆಚಿ ಘುಡಿಯೇ ಸುರಜ್ಞಾ ಜಲಮಾಯೋ।

ಭಟಿ ಮಾತಾರ ಆಸಿಸಯೇಯಾಡಿ ಚಾಂದಾರಿ ಯೂರತ।

(ತಂದೆ ತಾಯಿಗಳ ಆಶೀರ್ವಾದದಿಂದ ಮಗುವಿನ ಜನನವಾಯಿತು, ದೇವತೆಗಳ ಆಶೀರ್ವಾದದಿಂದ ಮಗುವಿನ ಜನನವಾಯಿತು, ಭಟಿಮಾತಾಳ ಶುಭಾಶಯವು ಹೇಳಲಸದಳವು) ಎಂದು ಮಗುವಿನ ಕುರಿತಾಗಿ ಹಾಡುವರು.[೨] ಲಂಬಾಣೀಗರಲ್ಲಿಯೂ ಸಹ ಮಗುವಿನ ಜನನಕ್ಕೆ ಕಾರಣಳಾಗಿ ಹಣೆ ಬರಹ ಬರೆಯಲು ವಿಧಿ ಮಾಯೆ ಬರುವಳು ಎಂಬಂತೆ ಈ ಹಾಡಿನಲ್ಲಿ 'ಭಟಿಮಾತಾಳ' ಆಶೀರ್ವಾದ ದಿಂದ ಮಗುವಿನ ಭವಿಷ್ಯ ಉಜ್ವಲ ಆಗಲಿದೆ ಎಂಬ ನಂಬಿಕೆ ಈಗಲೂ ಇರುವುದು ಈ ಹಾಡಿನಿಂದ ವ್ಯಕ್ತವಾಗುತ್ತದೆ.

**೨. ಸೂತಕ ನಿವಾರಣ ಗೀತೆ(ದಳವಾಧೋಕಾಯೇರೋಗೀದ)**

ಮಗು ಜನಿಸಿದ ಬಳಿಕ ಹೆರಿಗೆಯ ಮನೆಯು ಸೂತಕ ಆಗಿರುತ್ತದೆಂಬ ಭಾವನೆ ಬಹುತೇಕವಾಗಿ ನಮ್ಮ ಜನಪದರಲ್ಲಿದೆ. ಅಂತೆಯೇ ಈ ಸೂತಕ ನಿವಾರಣೆ ಮಾಡಲು ಮನೆಯನ್ನು ಸಿಂಗರಿಸಿ ಭಕ್ತಿಯಿಂದ ಛಟ್ಟಿಮಾ ವಿಧಿಮಾಯೆಯನ್ನು ಪೂಜೆ ಮಾಡುವುದಾಗಿದೆ. ಛಟ್ಟಿಮಾದೇವತೆಯನ್ನು ಮಗು ಜನಿಸಿದ ೫ನೇ ದಿನಕ್ಕೆ ಮನೆಗೆ ಆಹ್ವಾನಿಸಿ, ಆ ಮಗುವಿನ ಹಣೆಬರಹ ಬರೆಯಲು ಕರೆಯುವ ವಿಶಿಷ್ಟ ಸಂಪ್ರದಾಯ ಆಚರಣೆಯು ಲಂಬಾಣಿಗರಲ್ಲಿ ಮನೆ ಮಾಡಿದೆ.

ಛಟ್ಟಿ ಮಾತಾಳ ಪ್ರಾರ್ಥನೆಗೆ ವಳಂಗ ಎಂಬ ಹೆಸರಿದೆ. ತಾಯಿ ಮಗುವಿನ ಯೋಗ ಕ್ಷೇಮವನ್ನು ನೋಡಿಕೊಳ್ಳೊ, ಛಟ್ಟೆಮಾಳನ್ನು ನಗುನಗುತ್ತಾ ಬಂದು ಅಳು ಅಳುತಾ ಆಚೆ ಹೋಗು ಎಂದು ಗೀತೆಯ ಮೂಲಕ ಸ್ತುತಿಸುವುದು ಕಂಡುಬರುತ್ತದೆ. ಅಂದು ರಾತ್ರಿ ಹೆರಿಗೆಯಾದ ಮನೆಗೆ ವಿಧಿಮಾಯೆ(ಛಟ್ಟಿಮಾ) ಮಗುವಿನ ಹಣೆಬರಹ ಬರೆಯಲು ಆಗಮಿಸುವಳೆಂಬ ನಂಬಿಕೆಯಿದೆ. ಇದರಿಂದ ಅಂದು ರಾತ್ರಿ ತಾಯಿಯಿಂದ ಮಗು ಬೇರ್ಪಡಿಸಿ ಮಲಗಿಸಿ ತುಂಬಿದ ತಂಬಿಗೆಯನ್ನು ಇಟ್ಟು ದೇವಿಯನ್ನು ಆಹ್ವಾನಿಸುವ ಪದ್ಧತಿ ಈಗಲೂ ಇದೆ.

**೩. ಮಗುವಿನ ನಾಮಕರಣ ಸಂಸ್ಕಾರ(ಪಾಲಣೇಮ ಘುಲೇರೂಗೀದ)**

ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿರುವ ತಾಂಡಾಗಳಲ್ಲಿ ಮಗು ಜನಿಸಿದ ಬಳಿಕ ಆದ ಸಂತಸವು ಅಷ್ಟಿಷ್ಟಲ್ಲ. ಆದರೆ ಗಂಡು ಸಂತಾನಕ್ಕೆ ಪ್ರಥಮ ಪ್ರಾಶಸ್ತ್ಯ ಹೆಣ್ಣು ಸಂತಾನಕ್ಕೆ ಅಷ್ಟೇನು ಮಹತ್ವ ನೀಡದ ಈ ಜನ ಸಮೂಹವು, ಮಗುವಿಗೆ ಹೆಸರಿಡುವ ದಿನವನ್ನು ಅಷ್ಟೇನೂ ಸಂಭ್ರಮದಿಂದ ಜರುಗಿಸುವುದಿಲ್ಲ. ಮಗು ಜನಿಸಿದ ಶುಭ ಮಹೂರ್ತದವನ್ನು ಕೆಲವರು ತಮ್ಮ ಹಟ್ಟಿಯಲ್ಲಿರುವ ಹಿರಿಯ ಜನಪದರನ್ನೋ ಇಲ್ಲವೇ ಜ್ಯೋತಿಷಿಗಳನ್ನು ಸಂಪರ್ಕಿಸಿ ದೋಷವೇನಾದರೂ ಇದ್ದರೆ ಅದಕ್ಕೆ ನಿವಾರಣೆ ಮಾಡಿ ನಾಮಕರಣ ಸಂಸ್ಕಾರವನ್ನು ಪೂರೈಸುವರು. ಮಗು ಜನನವಾದ ೧೫ ದಿನ ಇಲ್ಲವೇ ಒಂದು ತಿಂಗಳು ಅಥವಾ ಮೂರು

ತಿಂಗಳ ಒಳಗೆ ನಾಮಕರಣ ಶಾಸ್ತ್ರ ಪೂರೈಸುವರು. ಏಕೆಂಧರೆ ಕೃಷಿಕ ಕಾರ್ಯಕ್ಕೆ ಆ ಮನೆಯ ಬಾಣಂತಿಯು ಗಂಡನಿಗೆ ಸಾಥ್ ನೀಡಬೇಕಾದ ಅನಿವಾರ್ಯ ಪರಿಸ್ಥಿತಿ ಕಂಡುಬರುತ್ತದೆ. ಕೆಲವೊಮ್ಮೆ ಹಾಲುಗಲ್ಲದ ಕೂಸನ್ನು ಗದ್ದೆಗೆ ಕರೆದುಕೊಂಡು ಹೋಗುವ ಸಂಪ್ರದಾಯವು ಈ ಭಾಗದಲ್ಲಿದೆ. ಈಚೆಗೆ ಗಣಿಗಾರಿಕೆಯ ಸಾಗಾಟ ಹೆಚ್ಚಿದ್ದರಿಂದ ಈ ಕಾಯಕದ ವೇಳೆ ತಮ್ಮ ಹಸುಗೂಸುಗಳನ್ನು ಜೊತೆಗೆ ಕರೆದೊಯ್ದಿದ್ದಾರೆ. ಗಣಿಗಾರಿಕೆ ಸಂಚಾರಕ್ಕೆ ನಿಷೇಧವನ್ನು ಹೇರಿದ್ದರಿಂದ ಪುನಃ ಲಂಬಾಣೀಗರು ತಮ್ಮ ಮೂಲ ಕಾಯಕವಾದ ಕೃಷಿಗಾರಿಕೆಯತ್ತ ಸಾಗಿದ್ದಾರೆ.

ಜಿಲ್ಲೆಯಲ್ಲಿ ಪುರುಷರು ಮತ್ತು ಸ್ತ್ರೀಯರೂ ಹೆಚ್ಚಾಗಿ ಕಬ್ಬಿನ ಕಟಾವಿನಲ್ಲಿ ಪಾಲ್ಗೊಂಡಿದ್ದರೆ. ಮತ್ತೆ ಕೆಲವರು ಗುಡ್ಡ-ಗಾಡಿನಲ್ಲಿ ದೊರೆಯುವ ಕಾಳೆಹಣ್ಣು, ಈಸಲು ಹಣ್ಣು, ಹರಿದುತಂದು ಮಾರಾಟ ಮಾಡುವುದು ಕಾಣಸಿಗುತ್ತದೆ. ಈಚೆಗೆ ಶೇಂಗಾವನ್ನು ಬಸ್ ನಿಲ್ದಾಣ, ರೈಲುನಿಲ್ದಾಣದ ಒಳಗೆ ಇಲ್ಲವೆ ರೈಲಿನಲ್ಲಿ ಸಂಚರಿಸುವ ಪ್ರಯಾಣಿಕರಿಗೆ ನಿಗಧಿತ ಧರ ಪಡೆದು ಬದುಕುನ್ನು ಸಾಗಿಸುತ್ತಾರೆ. ತಮ್ಮ ಹಸುಗೂಸನ್ನು ಬೆನ್ನಿಗೆ ಕಟ್ಟಿಕೊಂಡೆ ಕೆಲವರು ಈ ಕಾಯಕವನ್ನು ಪೂರೈಸಿದ್ದು ಕರುಣಾಜನಕ ಸಂಗತಿಯಾಗಿದೆ.

ಮಗುವಿನ ನಾಮಕರಣದ ವೇಳೆ ಬಿದಿರಿನ ತೊಟ್ಟಿಲಲ್ಲಿ ಮಗುವನ್ನು ಮಲಗಿಸಿ ಆ ಮಗು ಅವರ ಹಿರಿಯರನ್ನು ಹೋಲುತ್ತಿದ್ದರೆ ಅವರ ಹೆಸರನ್ನು ಇಲ್ಲವೇ ಆಯಾ ದೈವದ ಹೆಸರುಗಳನ್ನು ಇಡುವುದು ವಾಡಿಕೆಯಾಗಿದೆ. ಕೆಲವರು ಗೋಣಿ ಚೀಲವನ್ನೇ ತೊಟ್ಟಿಲಾಗಿ ಬಳಸಿ ಮಗುವನ್ನು ಮಲಗಿಸುವುದು ಕಾಣಬಹುದು. ಆದರೆ ಈಚೆಗೆ ಗೋಣಿಚೀಲದ ಸ್ಥಾನವನ್ನು ಅವರು ಉಡುವ ಸೀರೆಯನ್ನು ಅವರ ಮನೆಯ ಮುಂದೆ ಇರುವ ಗುಡಿಸಲು ಹೊರಭಾಗದ ಮೇಲ್ಛಾವಣಿಯ ಬಿದಿರಿಗೆ ನೇತಾಕುವರು. ಮಗು ಮಲಗುವ ಮುನ್ನಾ ಲಂಬಾಣಿ ಹೆಣ್ಣುಮಕ್ಕಳು ಶಿಶುಗೀತೆಯನ್ನು ಹಾಡಿ ರಂಜಿಸುವುದು ಇಂದಿಗೂ ಕಾಣಸಿಗುತ್ತದೆ.

ಸೊನೇರೋ ಪಾಲಣೋ ತೂಗಾದಯೋ|
ರೂಪೇರೋ ಸಾಂಕಾಳ ಲಗಾದೆಯೋ|
ಹಾಲೋ ಹಾಲೋ ಬಾಳಾ ಸೋಜೋ ಸೋಜೋರ|
ಛಟಿಮಾತಾ ಬಾಳಾನ ಸಾಯಿ ವೇಜೋ|
ಹಾಲೋ ಹಾಲೋ ಬಾಳಾ ಸೋಜೋ ಸೋsಜ್ಯೋsರ||[೩]

ಈ ಗೀತೆಯು ಮುಗಿಯುತ್ತಿದ್ದಂತೆ ಮಗು ಮಲಗಿರುತ್ತದೆ. ಆ ಬಳಿಕ ಆ ಮನೆಯ ಗೃಹಿಣಿ ಅಡುಗೆ ಕೆಲಸಕ್ಕೆ ಅಣಿಗೊಳಿಸುತ್ತಾಳೆ. ಮಗು ಎಚ್ಚರವಾಗಿ ಅಳು ಕೇಳಿಸಿದಾಕ್ಷಣವೇ ತನ್ನ ಎದೆಯ ಹಾಲನ್ನು ಉಣಿಸಿ ಸಂತೈಸುವುದು ಕಂಡುಬರುತ್ತದೆ. ಬೇರೆ ಬೇರೆ ಜನಾಂಗದಲ್ಲಿ ಮಗುವನ್ನು ಬೇರೆಯ ವಸ್ತುಗಳಿಗೆ, ದೈವಕ್ಕೆ ಇಲ್ಲವೇ ಹಿರಿಯರಿಗೆ ಹೋಲಿಸಿ ಮುದ್ದಾಡಿದಂತೆ ಇವರು ಸೂರ್ಯ, ಚಂದ್ರ, ದೇವತೆಗಳೀಗೆ ಮಗುವಿನ ರೂಪವನ್ನು ಹೋಲಿಸಿ ವರ್ಣಿಸುವ ಪರಿಯೂ ಹಾಡಿನಲ್ಲಿ ಪರ್ಯಾವಸಾನಗೊಳ್ಳುತ್ತದೆ.

೪. ಜವುಳಗೀತೆ (ಬಾಳಲಟ್ಟಾ ಕಡಾಯೇರೋಗೀದ)

ಮಗು ಹುಟ್ಟಿದ ವರ್ಷದ ಒಳಗಾಗಿಯೇ ಮುಡಿಶಾಸ್ತ್ರ ಪೂರೈಸುವುದು ಬಹುತೇಕ ಎಲ್ಲಾ ಜನಾಂಗದವರಲ್ಲಿ ಕಟ್ಟುನಿಟ್ಟಾಗಿ ಆಚರಿಸುವರು. ಹೀಗೆ ಮಾಡುವುದರಿಂದ ಮಗುವನ್ನು ಆದೈವ ಸಲುಹುತ್ತಾನೆ ಎಂಬ ಕಲ್ಪನೆಯಿದೆ. ಒಂದು ವೇಳೆ ಜವುಳ ಶಾಸ್ತ್ರ ಪೂರೈಸಲಾಗದಿದ್ದರೆ ತಡವಾದರೆ ಆಮಗು ರಂಪ ಮಾಡಿದರೆ ನೀವು ಬೇಡಿಕೊಂಡ ದೇವರಿಗೆ ಆದಷ್ಟು ಬೇಗನೆ 'ಮುಡಿ' ಕೊಟ್ಟು ಬನ್ನಿ ಎಂದು ಹಟ್ಟಿಯ ಹಿರಿಯ ಜನಪದರು ತಿಳಿಸುವರು. ಬಹುತೇಕವಾಗಿ ಲಂಬಾಣಿಗರು ಅವರ ಸ್ತ್ರೀದೈವಕ್ಕೆ ಮೊರೆ ಹೋಗಿರುತ್ತಾರೆ. ಅವರಲ್ಲಿ ಪ್ರಮುಖರಾಗಿ ಮರಿಯಮ್ಮ, ದುರ್ಗಮ್ಮ, ತುಳಜಯ್ಯ ದೇವಿಗೆ ಹರಕೆ ಹೊತ್ತಿರುತ್ತಾರೆ. ಜಿಲ್ಲೆಯಲ್ಲಿ ಎಷ್ಟೆ ಬಡತನದವರಿದ್ದರೂ ಸಹ ಗಾಳೆಮ್ಮನ ಗುಡಿಗೆ ಬಂದು ಜವುಳ ಶಾಸ್ತ್ರ ಪೂರೈಸುವರು. ಈ ದೇವತೆಯು ಮಗುವಿನ ಸಂಪೂರ್ಣ ಏಳ್ಗೆಗಾಗಿ ರಕ್ಷಕಳಾಗಿರುತ್ತಾಳೆಂಬ ನಂಬಿಕೆಯು ಈ ಭಾಗದ ಜನರಲ್ಲಿದೆ. ಕೆಲವರು ಕೋಳಿ-ಕುರಿಯನ್ನು ಬಲಿ ಕೊಟ್ಟು ದೇವತೆಯನ್ನು ಸಂಪ್ರೀತರಾಗಿಸುವುದು ಕಾಣಸಿಗುತ್ತದೆ. ಈಚೆಗೆ ಅವರ ಭಾಗಗಳಲ್ಲಿ ಸಾಮರಸ್ಯ ಪ್ರತೀಕವಾಗಿ ಪೂಜಿಸಲ್ಪಡುವ ಮೊಹರಂ ದೇವರಿಗೆ ಮೊರೆ ಹೋಗಿ ಹರಕೆಯಂತೆ ಸಂತಾನ ಪ್ರಾಪ್ತಿಯಾಗಿದೆ ಎಂದು ತಿಳಿದುಜಂಡಾ ಕಟ್ಟೆಗೆ ತೆರಳಿ ಅಲ್ಲಿಯೂ ಪೂಜೆ ಸಲ್ಲಿಸುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಸಂಗತಿಯಾಗಿದೆ.

ಜವುಳ ಶಾಸ್ತ್ರ ಮಾಡುವಾಗಲೂ ಲಂಬಾಣಿ ಸ್ತ್ರೀಯರು ಪ್ರಾರ್ಥನಾ ಗೀತೆಯನ್ನು ಹಾಡುತ್ತಾರೆ. ಹೀಗೆ ಹಾಡುವ ಪ್ರಕ್ರಿಯೆಗೆ 'ಮಾಳಂಗದೇರೊ' ಇಲ್ಲವೇ ವೊಳಂಗಶಾಸ್ತ್ರ ಎಂದು ಕರೆಯುವರು.

ಮಾರಿ ತುಳಜ ಭಾವಾನಿಯೆ ಸಾಯಿವೇಜೋ |
ಬಾಳೋರೋ ತೋನ ಲಟ್ಟಾ ಚಡಯೇ ಮಾವಲಿ
ಬಾಳಾರಿ ತು ಸಾಯಿ ವೇಜೋಯೆ ಯಾ|

(ತಾಯಿ ತುಳಜಾಭವಾನಿಯೇ ಬಾಲಕನಜವುಳದ
ನಿನಗರ್ಪಿಸುವೇ ತಾಯಿಯೇ ಬಾಲಕನನ್ನು ರಕ್ಷಿಸು)

ಎಂದು ಭಕ್ತಿಯಿಂದ ಶಕ್ತಿ ಸ್ವರೂಪರಾದ ದೈವದ ಮೊರೆ ಹೋಗುವುದು ಜನಪದರ ಗೀತೆಯಿಂದ ತಿಳಿದುಬರುತ್ತದೆ.

೫. ಹುಟ್ಟು ಹಬ್ಬದ ಗೀತೇ(ಧೂಂಡ್ ಕರೇರೋಗೀಧ)

ಈ ಸಂಸ್ಕಾರಕ್ಕೆ ಅಷ್ಟೇನೂ ಮಹತ್ವವನ್ನು ಬಳ್ಳಾರಿ ಜಿಲ್ಲೆಯ ಲಂಬಾಣಿಗರು ನೀಡುವುದಿಲ್ಲ. ಏಕೆಂದರೆ ದಿನನಿತ್ಯವೂ ಕೂಲಿ ಮಾಡಿಬರುವ ಮನೆಯ ಯಜಮಾನ, ಆತನಿಗೆ ಸಾಥ್ ನೀಡುವ ಹೆಂಡಿತಿಯು ಜೀವನದ ಪೋಷಣೆಯಲ್ಲಿ ಮಗ್ನರಾಗಿರುತ್ತಾರೆ. ಕೆಲವು ಹಟ್ಟಿಗಳಲ್ಲಿ ಗಂಡುಸಂತಾನವಾದವರು ಮಾತ್ರ ದೂಂಡ್ ಸಂಸ್ಕಾರ ಆಚರಿಸುವರೆಂದು ಡಾ.ಡಿ.ಬಿ.ನಾಯಕರವರು ತಿಳಿಸಿದ್ದಾರೆ. ಇದನ್ನು ಹೋಳಿ ಹಬ್ಬದ ವೇಳೆ ಜರುಗಿಸಲಾಗುವುದು. ಹಬ್ಬದ ಸಂಭ್ರಮದಲ್ಲಿ ಮುಗುವಿನ ಹೆಸರಲ್ಲಿ ಸಂಸ್ಕಾರ ಆಚರಣೆ ಆಚರಿಸುತ್ತಾರೆ.

ಮಗುವಿನ ವಯಸ್ಸನ್ನು ಗಣನೆಗೆ ತೆಗೆದುಕೊಳ್ಳದೇ ಹಬ್ಬ-ಹರಿದಿನಗಳನ್ನೇ ಲೆಕ್ಕಕ್ಕೆ ತೆಗೆದುಕೊಂಡಿರುತ್ತಾರೆ. ಏಕೆಂದರೆ ಬಹುತೇಕ ಲಂಬಾಣಿಗರು ಅನಕ್ಷರಸ್ಥರಾಗಿರುವರು. ಆದರೆ ಈಚೆಗೆ ಕೆಲವು ಹಟ್ಟಿಗಳಲ್ಲಿ ಜನುಮದ ಶಾಸ್ತ್ರವನ್ನು ತೆಗೆಯಿಸುವುದು ಆ ಮಗುವಿನ ಜಾತಕವನ್ನು ಪಡೆದು ತರುತ್ತಾರೆ.

ಹಂಪಿಯ ಭಾಗದಲ್ಲಿ ಮಗುವಿಗೆ ಹಾಲುಣಿಸುವಾಗ ತಾಯಿಯೊಬ್ಬಳು ''ಕೆರೆಯನ್ನು ಕಟ್ಟಿಸು, ಬಾವಿಯನ್ನು ಸವೆಸು, ಸೇವಾಗಾರವನ್ನು ನಿರ್ಮಿಸು'' ಎಂಬ ನುಡಿಯನ್ನು ನುಡಿಯುತ್ತಾಳೆ. ಅಂತೆಯೇ ಆ ಮಗು ದೊಡ್ಡವನಾದ ಬಳಿಕ ಈ ಕಾರ್ಯಕ್ಕೆ ತೊಡಗಲಿ ಎಂಬ ಆಶಯದಿಂದ ಈ ಗೀತೆ ಹುಟ್ಟಿಕೊಂಡಿದ್ದರೆ, ಲಂಬಾಣಿಗರು ಮೂಲತಃ ಶ್ರಮಜೀವಿಗಳಾಗಿದ್ದರಿಂದಲೂ ಈ ಕುಟುಂಬದಲ್ಲಿ ಅತಿಹೆಚ್ಚು ಸಂಖ್ಯೆಯ ಮಕ್ಕಳನ್ನು ಹೆರುವುದರಿಂದ ಆ ಮನೆಯ ಮಗು ಒಬ್ಬೊಬ್ಬರು ಏನಾಗಬೇಕೆಂದು ಗೀತೆಯಲ್ಲಿ ಪ್ರಸ್ತಾಪವಾಗಿದೆ. ಮೊದಲ ಮಗು ನಾಯಕ, ಎರಡನೆಯವ ಕಾರಬಾರಿ, ಮೂರನೆಯವನು ರಾಸು, ನಾಲ್ಕನೆಯವನು ಕುದುರೆ ನೋಡಿಕೊಳ್ಳಬೇಕು, ಐದನೆಯವನು ಕುದುರೆ ಸಾಕಾಣಿಕೆ, ಆರನೆಯವನು ತಂದೆ ತಾಯಿ ರಕ್ಷಿಸಲಿ'' ಎಂಬ ಗೀತೆಯನ್ನು ಡಾ.ಡಿ.ಬಿ.ನಾಯಕರವರು ತಮ್ಮ ಸಂಶೋಧನಾ ಗ್ರಂಥದಲ್ಲಿ ತಿಳಿಸಿದ್ದಾರೆ. ಆದರೆ ಇಲ್ಲಿ ಕೇವಲ ಗಂಡುಮಕ್ಕಳು ಮಾತ್ರ ಈ ರೀತಿಯ ಕೆಲಸದಲ್ಲಿ ಭಾಗಿಯಾಗುವ ಬಗ್ಗೆ ತಿಳಿಸಿದ್ದಾರೆ. ಏಕೆಂದರೆ ಹೆಣ್ಣು ಮಕ್ಕಳು ತಾಯಿಯ ಮನೆಯನ್ನು ತೊರೆಯುವರೆಂಬ ಕಲ್ಪನೆಯಿಂದ ಈ ಗೀತೆ ಹುಟ್ಟಿರಬಹುದಾಗಿದೆ. ಹೀಗೆ ಮಗು ಜನಿಸಿದಂದಿನಿಂದ ಮರಣ ಮದುವೆ ಶಾಸ್ತ್ರದವರೆಗೂ ಅನೇಕ ಸಂಸ್ಕಾರ ರೂಢಿಸಿಕೊಂಡಿದ್ದಾರೆ.

ಲಂಬಾಣಿಗರಲ್ಲಿ ವೈವಾಹಿಕ ಜೀವನ ಕ್ರಮವು ತುಂಬಾ ಮಹತ್ವದ ಘಟ್ಟವಾಗಿದೆ. ವಿವಾಹವಾಗುವವರೆಗೆ ಮಾತ್ರ ಅವಿಭಕ್ತ ಕುಟುಂಬದಲ್ಲಿದ್ದು ಒಂದಾಗಿ ಜೀವನ ಸಾಗಿಸುತ್ತಾರೆ. ವೈವಾಹಿಕ ಜೀವನದ ಬಳಿಕ ವಿಭಕ್ತ ಕುಟುಂಬಗಳನ್ನಾಗಿ ಮಾರ್ಪಾಡಾಗುವರು. ತಮ್ಮದೇ ಆದ ಕುಟುಂಬ ವ್ಯವಸ್ಥೆಗೆ ಕಾರಣೀಭೂತರಾಗುವರು. ಗಂಡು ಮಕ್ಕಳು ಮದುವೆಯ ಬಳಿಕ ಪ್ರತ್ಯೇಕವಾಗಿ ಜೀವನ ಸಾಗಿಸುವುದು ಕ್ಷೇತ್ರ ಅಧ್ಯಯನದಿಂದ ತಿಳಿದುಬಂದಿದೆ. ಇವರಲ್ಲಿ ಎರಡು ಗೋತ್ರಗಳಿವೆ. ಅವುಗಳೂ ಜಾತ್ ಮತ್ತು ಭುಕ್ಯ ಎನ್ನುವುದು. ಸಗೋತ್ರ ವಿವಾಹ ನಿಷೇಧವಿರುವ ಲಂಬಾಣಿಗರಲ್ಲಿ ಕನ್ಯಾಶುಲ್ಕವಿದೆ. ಇದಕ್ಕೆ ಕರಾರ ಎಂದು ಹೆಸರು. ಗೋವುಗಳಲ್ಲವೇ ಹಣದ ರೂಪದಲ್ಲಿ ಕನ್ಯಾಶುಲ್ಕ ನೀಡುವ ಪದ್ಧತಿ ಇದೆ. ಲಂಬಾಣಿಗರು ಹೆಚ್ಚಾಗಿ ಏಕಪತ್ನಿತ್ವ ಹಾಗೂ ಏಕಪತಿತ್ವ ಜಾರಿಯಲ್ಲಿದ್ದರೂ ಸಹ ಅಲಲ್ಲಿ ಬಹುಪತ್ನಿತ್ವ ವ್ಯವಸ್ಥೆ ಇದೆ. ಕುಟುಂಬದಲ್ಲಿ ಗಂಡು ಸಂತಾನ ಆಗದಿದ್ದಾಗ ಇಲ್ಲವೇ ಹೆಂಡತಿಯು ಬಂಜೆಯೆಂದು ತಿಳಿದಾಗ ಮಾತ್ರ ಬಹುಪತ್ನಿತ್ವಕ್ಕೆ ಅವಕಾಶವುಂಟು. ಅಲ್ಲದೆ ಲಂಬಾಣಿಗರಲ್ಲಿ ವಿಶೇಷವಾಗಿ ಅಣ್ಣ ತೀರಿದ ಬಳಿಕ ಅಣ್ಣನ ಹೆಂಡತಿಯನ್ನು ತಮ್ಮನು ವಿವಾಹ ಮಾಡಿಕೊಳ್ಳಬೇಕಾದ ಸಂಪ್ರದಾಯವಿದೆ. ಬಹುಪತ್ನಿತ್ವ ಆಚರಣೆಯಿದ್ದ ಬಗ್ಗೆ ಲಂಬಾಣಿಗರಲ್ಲಿರುವ ಗಾದೆಗಳೇ ಸಾಕ್ಷಿಯಾಗಿವೆ ಎನ್ನಬಹುದು. ಏನೇ ಆಗಲಿ ಲಂಬಾಣಿಗರು ಮೊದಲು ದಾಂಪತ್ಯವೇ ಶ್ರೇಷ್ಠವಾದುದೆಂಬ ಭಾವನೆಯಿದೆ. ಮರುಮದುವೆಯಲ್ಲಿ ಸುಖವಿಲ್ಲವೆಂಬ ಭಾವನೆಯೂ ಅವರಲ್ಲಿದೆ. ವಧುವರರ ಆಯ್ಕೆಯಲ್ಲಿ ಆಯಾ ಗ್ರಾಮದ ಹಿರಿಯರ ಪಾತ್ರ ಮುಖ್ಯ. ಆಯ್ಕೆ ಮಾಡಿದ ವಧು-ವರರ ಮನೆತನಕ್ಕಿಂತಲೂ ಆಯಾ

ತಾಂಡಾದ ನಾಯಕನೇ ಪ್ರಮುಖ. ಏಕೆಂದರೆ ತಾಂಡಾದ ನಾಯಕನ ಗುಣಗಳು ಅಲ್ಲಿಯ ಪ್ರತಿಯೊಬ್ಬರಲ್ಲೂ ಇರುತ್ತವೆ.

ವೈವಾಹಿಕ ಆಚರಣೆ ಇಲ್ಲವೇ ಯಾವುದಾದರೂ ಕಾರ್ಯಗಳಲ್ಲಿ ತಮ್ಮ ಗಂಡನ ಹೆಸರನ್ನು ಉಚ್ಚಾರ ಮಾಡಿದರೆ ಗಂಡನ ಆಯಸ್ಸು ಕಡಿಮೆ ಆಗುವುದೆಂದು ತಿಳಿಯುವರು. ಇವರಲ್ಲಿರುವ ಸಂಸ್ಕಾರವೆಂದರೆ ಮಾನ-ಮನ್ನಣೆಗಳಿಗೆ ಗೌರವ ನೀಡುತ್ತಾರೆ.

**ವೈವಾಹಿಕ ಸಂಪ್ರದಾಯ:** ಆಚರಣೆಯು ಇತರ ಸಮಾಜದವರಿಗಿಂತಲೂ ತುಂಬಾ ಭಿನ್ನತೆಯಿರುವುದು ಕಂಡು ಬರುತ್ತದೆ. ಇಂದಿಗೂ ಲಂಬಾಣಿಗರ ತಾಂಡಾಗಳಲ್ಲಿ ಮದುವೆ ಕಾರ್ಯ ಆರಂಭವಾದರೆ ಸಾಕು ವಿಜೃಂಭಣೆಯು ಮಡುಗಟ್ಟಿರುತ್ತದೆ. ಅಲ್ಲದೆ ಒಂದು ವಾರದವರೆಗೂ ವೈವಾಹಿಕ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಈಚೆಗೆ ೨-೩ ದಿನಕ್ಕೆ ಸೀಮಿತಗೊಳಿಸಿದ್ದಾರೆ. ಬಹುತೇಕವಾಗಿ ಹೆಣ್ಣಿನ ಮನೆಯ ಮುಂದೆ ಮದುವೆ ಕಾರ್ಯ ಜರುಗಿಸುವರು. ಹೆಣ್ಣು ನೋಡುವ ಸಂಪ್ರದಾಯದಿಂದ ಹಿಡಿದು ಮದುವೆ ಮಾಡಿ ಹೆಣ್ಣನ್ನು ಗಂಡನ ಮನೆಗೆ ಕಳುಹಿಸಿ ಕೊಡುವವರೆಗೂ ತುಂಬಾ ವಿಭಿನ್ನವಾದ ಸಾಂಪ್ರದಾಯಿಕ ಆಚರಣೆಗಳನ್ನು ಜರುಗಿಸುವರು.

ಲಂಬಾಣಿಗರು ಹೆಣ್ಣಿನ ಮನೆಯ ಮುಂದೆ ವಿವಾಹದ ಹಿಂದಿನ ದಿನದ ಮಂಗಳ ಕಾರ್ಯಗಳನ್ನು ತುಂಬಾ ಶಾಸ್ತ್ರೋಕ್ತವಾಗಿ ಜರುಗಿಸುವರು. ಈ ಆಚರಣೆಗೆ ತಾಂಡಾದ ಹಿರಿಯ ಮುಖಂಡನ ನೇತೃತ್ವದಲ್ಲಿ ಜರುಗಿಸಲಾಗುವುದು. ಮನೆಯ ಮುಂದೆ ಹಂದರ ಹಾಕಿದ ಬಳಿಕವೇ ವಿವಾಹದ ಕಾರ್ಯಗಳನ್ನು ಆರಂಭಿಸುವರು. ಆಯಾ ಮನೆಯ ದೇವರ ಪೂಜೆ ಕಾರ್ಯವನ್ನು ಕೈಗೊಂಡ ಬಳಿಕ ಮದುವಣಗಿತ್ತಿಯ ಶಾಸ್ತ್ರವನ್ನು ಪೂರೈಸುವರು. ಇದೇ ರೀತಿ ಗಂಡಿನ ಮನೆಯ ಮುಂದೆ ಶಾಸ್ತ್ರ ಕ್ರಿಯೆಗಳನ್ನು ಪೂರೈಸಿ ಹಂದರದಲ್ಲಿ ಹಾಲುಗಂಬಕ್ಕೆ ಪೂಜೆಸಲ್ಲಿಸಿ ಹೆಣ್ಣಿನ ಊರಿಗೆ ಮದುಮಗ ಹಾಗೂ ಆತನ ಹಿಂದೆ ಸಹಾಯಕ ನಾಗಿ ಅವರ ಸಂಬಂಧಿಕರೊಬ್ಬರು ಧಾವಿಸಿ ಬರುವರು. ಆತನನ್ನು 'ಲೇರಿಯಾ' ಎಂದು ಕರೆಯಲಾಗುತ್ತದೆ.

ಹೀಗೆ ಮಾವನ ಮನೆಗೆ ಬಂದ ಮದುಮಗ ಮತ್ತು ಆತನ ಜೊತೆಗೆ ಬಂದ ವ್ಯಕ್ತಿಯನ್ನು ತಾಂಡಾದ ಹೊರಗಡೆ ನಿಲ್ಲಿಸಿ ಕುಟುಂಬದವರು ಐದು ಜನ ಹೆಣ್ಣುಮಕ್ಕಳು ಅಲ್ಲಿಗೆ ತೆರಳಿ ಮದುಮಗನಿಗೆ ಆರತಿ ಬೆಳಗಿ ಮದುವೆ ಮಂಟಪಕ್ಕೆ ಕರೆತರುವರು. ಈ ರೀತಿ ಕಾರ್ಯ ಮಾಡುವವರೆಗೂ ಮಂಟಪಕ್ಕೆ ಹೋಗಲಾರರು.

ಹೆಣ್ಣಿನ ಮನೆಯ ಮುಂದೆ ರಾತ್ರಿ ಇಡೀ ಮದುವೆ ಶಾಸ್ತ್ರಗಳನ್ನು ವಿಧಿವತ್ತಾಗಿ ಜರುಗಿಸುವರು. ಮದುವೆ ಕಾರ್ಯದಲ್ಲಿ ಇಡೀ ತಾಂಡಾದ ಜನರು ಉತ್ಸಾಹ ಸಂಭ್ರಮದಿಂದ ಪಾಲ್ಗೊಳ್ಳುವರು. ರಾತ್ರಿ ಇಡೀ ವಿವಾಹ ಶಾಸ್ತ್ರಗಳನ್ನು ನಡೆಸುವರು. ಅವುಗಳಲ್ಲಿ ಮಡಕೆ ತರುವ ಶಾಸ್ತ್ರವೂ ಒಂದು. ಈ ಮಡಕೆಗಳನ್ನು ಮದುವೆಯಾಗದ ಕನ್ಯೆಯರು ಹೊತ್ತು ತರಬೇಕೆಂಬ ನಿಯಮವಿದೆ. ಈ ಶಾಸ್ತ್ರವನ್ನು ಜರುಗಿಸುವಾಗ ಇತರೆ ಜನರು ಕಾತರದಿಂದ ಕಾದು ಕುಳಿತಿರುತ್ತಾರೆ. ಮಡಕೆ ಹೊತ್ತುಕೊಂಡ ಹುಡುಗಿಯರು ತಮ್ಮ ಮನಸ್ಸಲ್ಲಿರುವ

ಹುಡುಗನ ಹೆಸರನ್ನು ಹೇಳುತ್ತಾರೆ. ಹುಡಿಗಿಯ ಮನದಲ್ಲಿ ಇಷ್ಟವಿರುವ ವ್ಯಕ್ತಿಯನ್ನು ತಿಳಿದುಕೊಳ್ಳಲು ನಡೆಸುವ ಆಚರಣೆ ತುಂಬಾ ಭಿನ್ನವಾಗಿದೆ.

ಅನಂತರ ಬೀಸುವ ಕಲ್ಲಿನಿಂದ ಅರಿಶಿಣವನ್ನು ಬೀಸುವುದು ವಾಡಿಕೆ. ಈ ಅರಿಶಿಣವನ್ನು ಮಡಿಕೆಗಳನ್ನು ತಂದ ಹುಡುಗಿಯರು ಬೀಸುವರು. ತಾವು ತಂದಿದ್ದ ಮಡಕೆಗಳನ್ನು ಮದುವೆ ಮಂಟಪದ ಬಳಿ ಒಂದೊಂದು ಸೇರಿಸಿ ಇಡಲಾಗುತ್ತದೆ. ಹಾಗೇನೆ ಬೇರೆ ಜನಾಂಗದಲ್ಲಿ ಹಂದರದ ಕಟ್ಟಿಗೆಗೆ ಹಾಲು ಗಂಬ ಹೆಸರಿನ ಮರದ ಟೊಂಗೆ ಕಟ್ಟಿದರೆ, ಇದರಲ್ಲಿ ಎಕ್ಕದ ಟೊಂಗೆ ಕಟ್ಟುತ್ತಾರೆ. ಇದಕ್ಕೆ ಅಂಕ್ ಡಾಂಕ್ ಎನ್ನುವರು. ಇದರೊಂದಿಗೆ ಕಡವೆಕಾಯಿ, ನಿಂಬೆಹಣ್ಣು ಹಾಗೂ ಒನಕೆಯನ್ನು ಕಟ್ಟುವರು.

ವಿವಾಹದ ದಿನದಂದು ಮದುವೆ ಮಂಟಪದ ಹಂದರದಲ್ಲಿ ಸುರಿಗೆ ಶಾಸ್ತ್ರವನ್ನು ಜರುಗಿಸುವರು. ನಾಲ್ಕು ಚಿಕ್ಕದಾದ ಕುಡಿಕೆಗಳನ್ನು ಇಟ್ಟು ಇವುಗಳಿಗೆ ದಾರ ಸುತ್ತುವುದರೊಂದಿಗೆ ಮಧುವಣಗಿತ್ತಿಯ ಕೊರಳಿಗೆ ದಾರವನ್ನು ಕಟ್ಟುತ್ತಾರೆ. ಈ ದಾರ ಕಟ್ಟುವಾಗ ಆಕೆ ನೋಡಬಾರದೆಂಬ ನಿಯಮವಿದೆ. ಈ ಶಾಸ್ತ್ರ ಮಾಡುವ ಉದ್ದೇಶ ಅಪ್ಪ ಅಮ್ಮನಿಂದ ಮಗಳು ದೂರಾಗುವಳೆಂಬ ಭಾವನೆಯಿಂದ ದಾರಕಟ್ಟುತ್ತಾರೆ. ಏಳು ಎಳೆದಾರ ವನ್ನು ಏಳು ಗಂಟು ಹಾಕಿಕಟ್ಟುತ್ತಾರೆ. ಇದಕ್ಕೆ ಡೋರ್ಣೆ ಭಾಂಜಿರೊ ಎನ್ನುವರು.

ವರನಿಗೂ ದಾರಸುತ್ತುವ ಪದ್ಧತಿ ಶಾಸ್ತ್ರವನ್ನು ಮಾಡಿಸುವರು. ಲಂಬಾಣಿಗರಲ್ಲಿ ವಿಶೇಷವಾದ ವೈವಾಹಿಕ ಆಚರಣೆಗಳಿವೆ ಅವುಗಳಲ್ಲಿ ನಡುರಾತ್ರೀಲಿ ಸಪ್ತಪದಿ ಶಾಸ್ತ್ರ ಪೂರೈಸುವುದು ಹಾಗೂ ಅಳಿಯನಾಗುವವ ಮತ್ತು ವರನ ತಮ್ಮನಿಗೆ ಬರೆ ಹಾಕುವುದು ತುಂಬಾ ವಿಭಿನ್ನವಾದುದಾಗಿದೆ.

ಬಹುತೇಕ ಮದುವೆಗಳಲ್ಲಿ ಹಗಲಲ್ಲಿ ಸಪ್ತಪದಿಯನ್ನು ತುಳಿಯುವ ಶಾಸ್ತ್ರ ಪೂರೈಸಿದರೆ ಲಂಬಾಣಿಗರು ಮಧ್ಯರಾತ್ರಿಯ ವೇಳೆ ಸಪ್ತಪದಿ ಶಾಸ್ತ್ರವನ್ನು ಜರುಗಿಸುವರು. ಇದು ಇತರೆ ಮದುವೆಗಳಿಗಿಂತಲೂ ಭಿನ್ನವಾಗಿದೆ. ಅಂತೆಯೇ ಮದುವೆ ಗಂಡಿಗೆ ಮತ್ತು ಆತನ ತಮ್ಮನಿಗೆ ಸೂಜಿಯಿಂದ ರಟ್ಟೆಗೆ ಬರೆಹಾಕುವರು. ಇದೊಂದು ಧರ್ಮದೀಪಾ ಎಂಬ ಭಾವನೆ ಇವರಲ್ಲಿದೆ. ಮದುವೆಯ ಮಂಗಳಸ್ನಾನದ ವೇಳೆಯಲ್ಲಿ ಅತ್ತೆಯೂ ಅಳಿಯನ ಜುಟ್ಟಿನಿಂದ ಬೀಳುವ ನೀರನ್ನು ಕುಡಿಯುತ್ತಾಳೆ. ಜೊತೆಗೆ ಅಳಿಯನಾಗುವವನಿಗೆ ಒನಕೆಯಿಂದ ಒಡೆದು ಯಾರಿಗೂ ಮುಂದೆ ಬೈಯ್ಯುವುದಿಲ್ಲ ಎಂದು ಹೇಳುವವರೆಗೂ ಒನಕೆಯಿಂದ ಬಡಿಯುವ ಪದ್ಧತಿಯಿದೆ. ಇದೇ ವೇಳೆ ಅತ್ತೆಯು ವರನ ಕಿವಿಯನ್ನು ಹಿಂಡುತ್ತಾಳೆ.

ತಾಳಿ ಕಟ್ಟುವ ಶಾಸ್ತ್ರಕ್ಕೆ ಮುನ್ನಾ ಈ ಹಿಂದೆ ಸುರಗಿಶಾಸ್ತ್ರದ ವೇಲೆ ವಧುವರರಿಗೆ ಕಟ್ಟಿದ ದಾರಗಳನ್ನು ಬಿಚ್ಚಿಸುವ ಶಾಸ್ತ್ರ ಪೂರೈಸುವರು. ವಧುವಿಗೆ ಕಟ್ಟಿದ ದಾರವನ್ನು ವರಬಿಚ್ಚಿದರೆ, ವರನ ಕುತ್ತಿಗೆಗೆ ಕಟ್ಟಿದ ದಾರವನ್ನು ವಧು ಬಿಚ್ಚುತ್ತಾಳೆ. ಇದೇ ವೇಳೆ ವಧು-ವರರಿಗಾಗಿ ಕೆಲವು ಆಟ ಆಡಿಸುವರು. ಅದರಲ್ಲಿ ಅನ್ನದ ಗಂಜಿಯಲ್ಲಿ ನಾಣ್ಯ ಹಾಕಿ ಹುಡುಕಿಸುವರು. ನಾಣ್ಯವನ್ನು ಯಾರು ಬೇಗ ಹುಡುಕಿ ಕೊಡುವರೋ ಅವರು

ಜಯ ಪಡೆದಂತೆ ಇಲ್ಲದಿದ್ದರೆ ಸೋತಂತೆ. ಹೀಗೆ ಈ ರೀತಿಯ ಆಟಗಳಲ್ಲಿ ಲೈಂಗಿಕ ಪರಿಕಲ್ಪನೆಗಳು ಒಳಗೊಂಡಿರುವುದು ವ್ಯಕ್ತವಾಗುತ್ತದೆ.

ಲಂಬಾಣಿಗರು ಈಚೆಗೆ ಮೂರು ದಿನದ ಕಾರ್ಯಗಳನ್ನು ಪೂರೈಸುವರು. ಮೊದಲ ೨ ದಿನದ ಕಾರ್ಯಕ್ರಮಗಳನ್ನು ಆಯಾ ತಾಂಡಾದ ಬಂಜಾರರ ಹಿರಿಯರು ಶಾಸ್ತ್ರೋಕ್ತವಾಗಿ ಕಾರ್ಯ ಪೂರೈಸುವರು. ೩ನೇಯ ದಿನದಂದು ಜರುಗುವ ತಾಳಿಕಟ್ಟುವ ಶಾಸ್ತ್ರವನ್ನು ಮಾತ್ರ ಬ್ರಾಹ್ಮಣನಿಂದ ಪೂರೈಸುವರು. ತಾಳಿಕಟ್ಟುವ ಕಾರ್ಯದಿಂದ ಅರುಂಧತಿ ನಕ್ಷತ್ರ ತೋರಿಸುವವರೆಗೂ ಬ್ರಾಹ್ಮಣನದೇ ಪ್ರಮುಖ ಸ್ಥಾನವಾಗಿರುತ್ತದೆ.

ತಾಳಿಕಟ್ಟುವ ಶಾಸ್ತ್ರದ ಮುಂಚೆ ಲಕ್ಷ್ಮಿ ಮೂರ್ತಿಗೆ ವಧು-ವರರಿಂದ ಪೂಜೆ ಮಾಡಿಸಲಾಗುತ್ತದೆ. ಆ ಬಳಿಕ ವಧುವು ವರನ ಕಾಲಿಗೆ ಕುಂಕುಮಾರ್ಚನೆ ಮಾಡಿಸಲಾಗುತ್ತದೆ. ತಾಳಿಯನ್ನು ಮುತ್ತೈದೆಯವರಿಂದ ಸ್ಪರ್ಶಿಸಿದ ಬಳಿಕ ವರನು ವಧುವಿಗೆ ತಾಳಿಯನ್ನು ಕಟ್ಟುವನು. ಆ ಬಳಿಕ ಮದುವೆ ಮಂಟಪದಿಂದ ವಧು-ವರರನ್ನು ಹೊರಕರೆದು ಬ್ರಾಹ್ಮಣನು ಅರುಂಧತಿ ನಕ್ಷತ್ರಕ್ಕೆ ಪೂಜೆ ಸಲ್ಲಿಸುವ ಶಾಸ್ತ್ರ ಮಾಡಿಸುವನು. ಇಲ್ಲಿಗೆ ವಿವಾಹದ ಕಾರ್ಯ ಮುಗಿದರೂ ಸಹ ಕೊನೆಗೆ ವಧುವನ್ನು ಬೀಳ್ಕೊಡುವ ಸಂಪ್ರದಾಯವು ಲಂಬಾಣಿಗರಲ್ಲಿ ತುಂಬಾ ಮಹತ್ವವಾದ ಹಾಗೂ ಭಿನ್ನತೆಯಿಂದ ಕೂಡಿದ ಆಚರಣೆಯಾಗಿದೆ.

ವರನು ವಿಶೇಷವಾಗಿ ಆಕರ್ಷಿಸಲು ಆತನ ವೇಷ-ಭಷಣವೇ ಕಾರಣ. ವೇಷಭೂಷಣಕ್ಕೆ ತುಂಬಾ ಮಹತ್ವವನ್ನು ಲಂಬಾಣಿಗರು ನೀಡುತ್ತಾರೆ. ವರನು ಮೈಗೆ ಅಂಗಿ, ದೋತರ, ಸೊಂಟಕ್ಕೆ ನಡುಪಟ್ಟಿ, ತಲೆಗೆ ರುಮಾಲು, ಕಾಲಿಗೆ ಮೇಲ್ಮುಖವಾದ ಬೂಟುಗಳು, ಬೆರಳಿಗೆ ಬೆಳ್ಳಿ ಇಲ್ಲವೇ ಬಂಗಾರದ ಉಂಗುರ, ಕೈಗೆ ಬೆಳ್ಳಿ ಕಡಗ, ಕಿವಿಗೆ ಓಲೆ, ತಲೆಯ ಮೇಲೆ ಕೆಂಪು ಶಾಲು, ಹೆಗಲಿಗೆ ಎಲೆ ಅಡಿಕೆಯ ಚೀಲವನ್ನು ಇಳಿಬಿಟ್ಟಿರುತ್ತಾನೆ. ಆದರೆ ವಧುವು ಲಂಬಾಣಿಗರ ಸಾಂಪ್ರದಾಯಿಕ ಉಡುಗೆ ತೊಡುಗೆ ತೊಟ್ಟಿರುತ್ತಾಳೆ. ಇವು ತುಂಬಾ ಭಿನ್ನವಾದ ವೇಷಭೂಷಣವಾಗಿದೆ.

''ವಿವಾಹದ ಬಳಿಕ ವಧುವನ್ನು ವರನ ಮನೆಗೆ ಕಳುಹಿಸುವ ಸಂಪ್ರದಾಯವು ತುಂಬಾ ಮಹತ್ವವಾಗಿರುತ್ತದೆ. ಇದನ್ನು 'ಹವೇಲಿ'ಶಾಸ್ತ್ರ ಅಥವಾ 'ಡಾವಲೋ' ಎನ್ನುವರು. ಹೆಣ್ಣು ತನ್ನನ್ನು ಬೀಳ್ಕೊಡುವಾಗ ತನ್ನ ಮನೆಗೆ, ತವರಿಗೆ ಹಾಗೂ ತಾಂಡಾದ ಬಂಧು ಬಳಗದವರನ್ನು ಉದ್ದೇಶಿಸಿ ಶುಭಕೋರುವುದೇ ಈ ಹವೇಲಿಯ ಉದ್ದೇಶ''[೪] ಎಂದು ಡಾ.ಪಿ.ಕೆ.ಖಂಡೋಬಾರವರು ತಿಳಿಸಿದ್ದಾರೆ. ವಿವಾಹ ವಾದ ಹೆಣ್ಣಿನ ಮನೆಯ ಎದುರಿಗೆ ಆಕಳನ್ನು ನಿಲ್ಲಿಸಿ ವಧುವನ್ನು ಆಕಳ ಮೇಲೆ ನಿಲ್ಲಿಸುತ್ತಾರೆ. ಆಗ ವಧುವು ತನ್ನ ಊರಿನ ಹಿರಿಯರಿಗೆ, ಸಂಬಂಧಿಕರಿಗೆ ದುಃಖ ಭರಿತವಾಗಿ ಹೋಗಿಬರಲು ಅಪ್ಪಣೆ ಪಡೆಯುತ್ತಾಳೆ. ಇದೊಂದು ತುಂಬಾ ವಿಸ್ಮಯಕರವಾದ ಅಳುವ ಸಂಪ್ರದಾಯವಾಗಿದೆ. ಬೇರೆ ಜನಾಂಗದಲ್ಲೂ ವಧುವು ವರನ ಮನೆಗೆ ಹೋಗುವಾಗ ಅಳುತ್ತಾರೆ. ಇಲ್ಲಿ ಅಳುವ ರಾಗದಲ್ಲಿ ತನ್ನ ಊರಿನ ಹಾಗೂ ಸಂಬಂದಿಕರ ಕುರಿತು ವ್ಯಕ್ತಪಡಿಸುವ ರೋಧನದ ವಿಶೇಷ ಅಂಶಗಳು ಆಚರಣೆಯಲ್ಲಿ ಕಂಡುಬರುತ್ತಿವೆ.

ಗಂಡಿಗೆ ಉಪದೇಶವನ್ನು ಹೇಳಿ ಹೆಣ್ಣಿಗೂ ಉತ್ತಮ ರೀತಿಯಾಗಿ ಸಂಸಾರ ನಡೆಸಲು ತಿಳಿಸುತ್ತಾರೆ. ''ಹವೇಲಿ ಶಾಸ್ತ್ರ''ದ ವೇಳೆ ವಧು ಅಳುವ ಆಕ್ರಂಧನ ಮುಗಿಲು ಮುಟ್ಟುತ್ತದೆ. ಇದೊಂದು ಕರುಣಾಜನಕ ಸನ್ನಿವೇಶವಾಗಿ ಮಾರ್ಪಾಡಾಗುತ್ತದೆ. ಈ ಕಾರ್ಯ ಮುಗಿದ ಬಳಿಕ ವೈವಾಹಿಕ ಕಾರ್ಯಗಳು ಮುಕ್ತಾಯವಾದಂತೆ.

ಲಂಬಾಣಿ ಜನಾಂಗದಲ್ಲಿಯೂ ಸಹ ಕೂಡಾವಳಿ ಪದ್ಧತಿ ಮತ್ತು ಬಹುಪತ್ನಿತ್ವ ಪದ್ಧತಿ ಇರುವುದು ಕಾಣಬಹುದಾಗಿದೆ. ಗಂಡ ಸತ್ತ ವಿಧವೆಯೂ ಆ ಕುಟುಂಬದ ಕಿರಿಯ ಸಹೋದರ ಇಲ್ಲವೆ ಇತರರನ್ನು ವಿವಾಹವಾಗಬಹುದು. ಹೆಂಡತಿಗೆ ಸಂತಾನೋತ್ಪತ್ತಿ ಆಗದಿದ್ದರೆ ಗಂಡಸು ಮಕ್ಕಳಾಗುವವರೆಗೂ ಮರು ಮದುವೆ ಮಾಡಿಕೊಳ್ಳಬಹುದಾದ ಸ್ವತಂತ್ರವಿದೆ.

ಈ ರೀತಿಯ ಸಂಪ್ರದಾಯವು ತುಂಬಾ ಭಿನ್ನವಾಗಿ ತೋರಿದರೂ ಸಹ ಲಂಬಾಣಿ ಸಮಾಜದವರು ಸಂಪ್ರದಾಯವನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುತ್ತಿರುವುದು ಗಮನಾರ್ಹ. ಈ ವಿಶಿಷ್ಟ ಆಚರಣೆ, ಸಂಪ್ರದಾಯ, ನಂಬಿಕೆಗಳು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಾಗಿಬರುತ್ತಾರೆ. ಆದರೆ ಈಚೆಗೆ ಕೆಲವರು ಅಲ್ಪ-ಸ್ವಲ್ಪ ಬದಲಾವಣೆಗಳೊಂದಿಗೆ ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆ. ಸಾಂಪ್ರದಾಯಿಕವಾಗಿ ಧರಿಸುವ ಉಡುಗೆ ತೊಡುಗೆ ಇಂದು ಬದಲಾಗಿದೆ. ಇದು ಹೆಂಗಸರಲ್ಲಿ ಅಷ್ಟೇ ಅಲ್ಲ ಪುರುಷರಲ್ಲೂ ಬದಲಾವಣೆಯಾಗಿದೆ. ಆದರೂ ಇಂದಿಗೂ ವೈವಾಹಿಕ ಕಾರ್ಯಗಳನ್ನು ನಗರ ಪ್ರದೇಶದಲ್ಲಿ ವಾಸಿಸುವ ಲಂಬಾಣಿ ಸಮುದಾಯದವರು ಚ್ಯುತಿ ಬಾರದಂತೆ ನಡೆದುಕೊಳ್ಳುತ್ತಾರೆ.

**೫.೪. ಸಾಂಸ್ಕೃತಿಕ ಸ್ಥಿತ್ಯಂತರಗಳು**

ಇಡೀ ವಿಶ್ವದಲ್ಲಿ ಯಾವುದೇ ಜನಾಂಗವನ್ನು ತೆಗೆದುಕೊಂಡರು ಆಯಾ ಜನಾಂಗದಲ್ಲಿ ಅವರದೇ ವಿಶಿಷ್ಟ ಸಾಂಸ್ಕೃತಿಕ ನೋಟಗಳಿಂದ ತುಂಬ ಮಹತ್ವವನ್ನು ಪಡೆದಿರುತ್ತದೆ. ಸಾಂಸ್ಕೃತಿಕ ಕೊಡುಕೊಳೆಗಳೆ ಆಯಾ ಜನಾಂಗಕ್ಕೆ ತುಂಬಾ ಮಹತ್ವ ತಂದಿರುತ್ತದೆ. ಬಹುತೇಕ ಸಂಸ್ಕೃತಿಯಲ್ಲಿ ಪರಂಪರಾಗತವಾಗಿ ರೂಡಿಸಿಕೊಂಡು ಚಾಚು ತಪ್ಪದೇ ಪಾಲಿಸಿಕೊಂಡು ಬರುತ್ತಿರುವ ಅಂಶಗಳ ನೀತಿ ನಿಯಮಗಳು ಒಂದೇ. ಆದರೆ ಕೆಲವು ಜನಾಂಗಗಳಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸವಾಗಿ ಕಾಣಬಹುದು. ಆದರೂ ಅವುಗಳ ಮೂಲ ತಿರುಳು ಮಾತ್ರ ಒಂದೇ ಅಗಿರುತ್ತವೆ. ಆಯಾ ಜಾತಿ ಜನಾಂಗದವರು ನೀಡಿದ ಭಾಷೆ ದೃಷ್ಟಿಯಿಂದ ಬದಲಾವಣೆ - ವೇಷ ಭೂಷಣದಿಂದ ಭಿನ್ನತೆ ಪಡೆದುಕೊಂಡಿರಬಹುದೇ ವಿನಃ ಬಳಕೆಯಲ್ಲಿ ಮಾತ್ರ ಎಲ್ಲವೂ ಒಂದೆಯಾಗಿರುತ್ತವೆ.

ಯಾವುದೇ ಸಂಸ್ಕೃತಿಯಲ್ಲಿ ಗುರುತಿಸಿಕೊಳ್ಳುವ ಪ್ರಮುಖ ಅಂಶಗಳೆಂದರೆ ಜನನ-ಮದುವೆ-ಮರಣ, ನಡೆ-ನುಡಿ, ಆಚಾರ-ವಿಚಾರ, ವೇಷ-ಭೂಷಣ, ಭಾಷಾ ಬಾಂಧವ್ಯ, ರೀತಿ-ನೀತಿಗಳು, ಹಬ್ಬ ಹರಿದಿನಗಳು ಹಾಗೂ ಅವರು ರೂಡಿಸಿಕೊಂಡು ಬಂದಿರುವ ಗೀತೆಗಳು, ಒಗಟುಗಳು, ಕೊಳಸಾತ್‌ಗಳು(ಶ್ಲೋಕ) ಗಾದೆಗಳು, ಲಾವಣಿಗಳು, ನುಡಿಗಟ್ಟುಗಳು ಬಳಕೆಯಿಂದ ತಮ್ಮದೇ ಆದ ಮಹತ್ವ ಪಡೆದಿರುತ್ತದೆ. ಅಂತೆಯೇ ಈ

ಎಲ್ಲ ಅಂಶಗಳನ್ನು ಲಂಬಾಣಿ ಸಮುದಾಯದವರಲ್ಲಿ ಕಾಣಬಹುದಾಗಿದೆ. ಇಂತಹ ಸಾಂಸ್ಕೃತಿಕ ನೋಟಗಳು ಆಯಾ ಕಾಲ ದೇಶಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ವ್ಯತ್ಯಾಸವನ್ನು ಹೊಂದಿರುತ್ತವೆ. ಉತ್ತಮ ಮೌಲ್ಯಗಳನ್ನು ಜೀವನದಲ್ಲಿ ರೂಡಿಸಿಕೊಂಡು ಮೂಢತೆಯನ್ನು ನೀಗಿದಾಗ ಮಾತ್ರ ಇತರೆ ಸಂಸ್ಕೃತಿಗಿಂತಲೂ ಉತ್ತಮವಾಗಿ ಅಭಿವೃದ್ಧಿ ಆಗುವುದರಲ್ಲಿ ಸಂದೇಹವೇ ಇಲ್ಲೆನ್ನಬಹುದು.

ಮೂಲತಃ ಶ್ರಮಜೀವಿಗಳಾದ ಲಂಬಾಣಿಗರ ಜನ ಜೀವನವು ತುಂಬಾ ಕಷ್ಟದಾಯಕವಾಗಿದ್ದರೂ ಸಹ ಸ್ವಾಭಿಮಾನಿಗಳಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಯಾವುದೇ ತರಹದ ಕೀಳರಿಮೆ ಭಾವನೆ ಅವರಲ್ಲಿ ಕಾಣಸಿಗಲಾರದು. ಆದರೆ ಅವರಲ್ಲಿರುವ ''ಕಂದಾಚಾರ ಮೂಢನಂಬಿಕೆ ಹಾಗೂ ಅನಕ್ಷರತೆಯ ತೊಳಲಾಟದಲ್ಲಿ ಸಿಲುಕಿರುತ್ತಾರೋ ಅಲ್ಲಿಯವರೆಗೆ ಪ್ರಗತಿ ಅಸಾಧ್ಯ'' ಎಂಬ ವಿದ್ವಾಂಸರ ಮಾತು ಒಪ್ಪತಕ್ಕದಾಗಿದೆ (ಡಾ.ಪಿ.ಕೆ. ಖಂಡೋಬಾ, ಪು.೩೦). ಅವರು ಪರಂಪರೆಯಿಂದ ಚಾಚು ತಪ್ಪದೇ ಪಾಲಿಸಿಕೊಂಡು ಬರುವ ಹಬ್ಬ-ಹರಿದಿನ ಗಳಲ್ಲಿ ವೈವಾಹಿಕ ಸಂಭ್ರಮದಲ್ಲಿ ತಮ್ಮ ಆರ್ಥಿಕ ಸ್ಥಿತಿಗೆ ಕುಂಟಿತವಾದರೂ ಗಡಿಗೆ ತುಪ್ಪ ಕುಡಿಯಬೇಕು ಎನ್ನುವಂತೆ ಸಾಲ ಮಾಡಿ ದುಂದುವೆಚ್ಚ ಮಾಡುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅವರಲ್ಲಿದ್ದ ಬಡತನ ದಟ್ಟದಾರಿದ್ರ್ಯದಿಂದಲೂ ಕುಡಿತದ ಚಟಕ್ಕೆ ದಾಸರಾಗಿ ತಮ್ಮ ಬದುಕನ್ನು ಹಾಳು ಮಾಡಿಕೊಳ್ಳುತ್ತಾರೆಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಜಿಲ್ಲೆಯ ಬಹುತೇಕ ಗ್ರಾಮಗಳು ಇಂದಿಗೂ ಈ ಪರಿಸ್ಥಿತಿಯಿಂದ ಹೊರಬರಲಾಗುತ್ತಿಲ್ಲ. ಇದರಿಂದ ಹಟ್ಟಿಯ ಜನರು ಅಭಿವೃದ್ಧಿಯಿಂದ ಕುಂಠಿತರಾಗುತ್ತಿದ್ದಾರೆ ಎನ್ನಬಹುದಾಗಿದೆ. ಇವರಲ್ಲಿ ಪ್ರಮುಖವಾದ ಸಂಗತಿಯೆಂದರೆ ಶ್ರಮಪಟ್ಟು ದುಡಿದು ತಂದು ಮನೆಯ ಯಜಮಾನನಿಗೆ ತಿನ್ನಲು ಮಾಂಸ, ಕುಡಿಯಲು ಹೆಂಡ-ಸರಾಯಿ ಸಿಕ್ಕಿರೆ ಅದುವೇ ಅವರಿಗೆ ಸ್ವರ್ಗ ಸಮಾನ. ಈ ದುಶ್ಚಟಕ್ಕೆ ಬಲಿಯಾಗಲು ಕಾರಣ ಈ ಜನಾಂಗದ ಕೆಲವು ವ್ಯಕ್ತಿಗಳು ತಾಂಡಗಳಲ್ಲಿ ಸಾರಾಯಿ ತಯಾರಿಸುವುದು ಒಂದಾಗಿದೆ. ಆದರೆ ಇತ್ತೀಚೆಗೆ ಬಹುತೇಕ ತಾಂಡಾಗಳಲ್ಲಿ ಸಾರಾಯಿ ಅಡ್ಡೆಗಳು ಕಾಣಸಿಗುತ್ತಿಲ್ಲ. ಇವುಗಳ ಸಾಲಿನಲ್ಲಿ ಸರ್ಕಾರ ತಯಾರಿಸಿದ ಮಧ್ಯಪಾನವನ್ನು ಸ್ವೀಕರಿಸುತ್ತಿರುವುದು ಕಾಣಸಿಗುತ್ತದೆ. ಆಯಾ ಮನೆಯ ಯಜಮಾನನು ತಾನು ಅನಕ್ಷರತೆಯಿಂದ ಬಳಲಿದರೂ ಸಹ ತನ್ನ ಮಕ್ಕಳನ್ನು ತನ್ನ ಹಿಂದೆ ಕೃಷಿಗಾರಿಕೆಗೆ ಕರೆದು ಹೋಗುತ್ತಿರುವುದರಿಂದ ಅನಕ್ಷರಸ್ಥರನ್ನಾಗಿಸುತ್ತಾರೆ. ಇದರಿಂದ ಲಂಬಾಣಿ ಜನರಲ್ಲಿ ವಿದ್ಯಾಭ್ಯಾಸದ ಹಿನ್ನೆಡೆಯಿಂದ ಪ್ರಗತಿ ಆಗುತ್ತಿಲ್ಲ. ಅಲ್ಲದೆ ಸರ್ಕಾರದಿಂದ ದೊರಕುವ ಯಾವುದೇ ಸೌಲಭ್ಯಗಳನ್ನು ಪಡೆಯುವಲ್ಲಿ ಅನಕ್ಷರತೆಯೇ ಪ್ರಮುಖ ಕಾರಣವಾಗಿದೆ. ಇದರಿಂದ ತಾಂಡಾದ ಯಜಮಾನನು ತಮ್ಮ ಮಕ್ಕಳಿಗೆ ಶಿಕ್ಷಣ ನೀಡಿಸಿದರೆ ಈ ಜನಾಂಗವು ಅಭಿವೃದ್ಧಿ ಸಾಲಿನಲ್ಲಿರುವುದರಲ್ಲಿ ಸಂದೇಹವಿಲ್ಲ.

ಲಂಬಾಣಿ ಸಮಾಜದ ಬೆಳವಣಿಗೆಗೆ ಹಿನ್ನಡೆಯುಂಟಾಗಲೂ ಕಾರಣವೇನೆಂದರೆ ಇಂದಿಗೂ ಚಾಚು ತಪ್ಪದೇ ಪಾಲಿಸಿಕೊಂಡು ಬರುವ ಮೌಢ್ಯತೆಯೇ ಕಾರಣ. ಇದರಿಂದ ಅವರ ಜೀವನದಲ್ಲಿ ದಾರಿದ್ರ್ಯವು ತಾಂಡವಾಡುತ್ತಿದೆ. ಮೂಢನಂಬಿಕೆಗಳಿಗೆ ದಾಸರಾದ ಈ ಜನರು ಅವುಗಳನ್ನು ಅಳವಡಿಸಿಕೊಂಡೆ ಜೀವನ

ಸಾಗಿಸುತ್ತಾರೆ. ಅವರು ವಾಸಿಸುವ ಹಟ್ಟಿಗಳಲ್ಲಿ ತಾವು ಸಾಕುವ ಪ್ರಾಣಿಪಕ್ಷಿ ಹಾಗೂ ಕುಟುಂಬದ ಯಾರಿಗೇ ಆಗಲಿ ಕಾಯಿಲೆ ಬಂಧರೆ, ದೈವಗಳ ಕಾಟವೆಂದು ತಿಳಿದುಕೊಳ್ಳುವರು. ಇದರಿಂದ ಇಂದಿಗೂ ಜಿಲ್ಲೆಯ ಹೊಸಪೇಟೆಯ ಬಳಿಯ ಗಾಳೆಮ್ಮ ಎಂಬ ದೈವ ಇರುವ ಸ್ಥಳಕ್ಕೆ ಬಂದು ಕಾಣಿಕೆ ಇಲ್ಲವೆ ಹರಕೆ ಒಪ್ಪಿಸುವರು. ಏಕೆಂದರೆ ಸಾಕು ಪ್ರಾಣಿ ಇಲ್ಲವೆ ಕಾಯಿಲೆ ಬಂದಾಗ ಗಾಳೆಮ್ಮ ದೇವಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ಅದರಂತೆ ಇಂದಿಗೂ ದೂರದ ಊರುಗಳಿಂದ ಎತ್ತಿನ ಬಂಡಿಯಲ್ಲಿ ಸಾಗಿಬಂದು, ಕಡುಬಡವರಾದರೂ ಕೋಳಿ ಅಥವಾ ಕುರಿಯನ್ನು ಬಲಿ ಸಮರ್ಪಿಸಿ ಹೋಗುವುದು ವಾಡಿಕೆಯಾಗಿದೆ. ಹಾಗೇನೆ ಈಗಲೂ ಕೂಡ್ಲಿಗಿ ಬಳೀಯ ಗುಳೇಲಕ್ಕಮ್ಮ ದೇವಿಯ ಇದ್ದಲ್ಲಿಗೆ ಇಡೀ ಊರಲ್ಲಿರುವ ಜನರು ಭಕ್ತಿಯಿಂದ ಸಾಗಿ ದೇವಿಯನ್ನು ಪೂಜಿಸಿ ಊರ ಶಾಂತಿಗಾಗಿ ಬೇಡಿಕೊಳ್ಳುವರು. ಇಷ್ಟೆಲ್ಲಾ ಆದರೂ ಇನ್ನಿತರೆ ದೈವಗಳಾದ ಧರ್ಮಸ್ಥಳದ ಮಂಜುನಾಥ, ತಿರುಪತಿ ವೆಂಕಟೇಶ್ವರ, ಪಂಡರಾಪುರದ ಪಾಂಡುರಂಗ ಹಾಗೂ ಇತರೆ ದೇವಾಲಯಗಳಿಗೆ ಈಗಲೂ ಹಲವು ಭಕ್ತರು ತಂಡೋಪತಂಡವಾಗಿ ಕಾಲ್ನಡಿಗೆ ಇಲ್ಲವೇ ವಾಹನಗಳ ಮೂಲಕ ತೆರಳಿ ತಮ್ಮ ಭಕ್ತಿಯನ್ನು ಸಮರ್ಪಿಸುವುದು ಗಮನಾರ್ಹ. ಅಲ್ಲದೆ ತಮ್ಮ ಊರಿನಲ್ಲಿರುವ ಯಾವುದೇ ವ್ಯಕ್ತಿಯನ್ನು ತಾವು ಹೇಳಿದಂತೆ ಕೇಳಲು ಅಥವಾ ತಮಗೆ ತಮ್ಮ ಬೆಳೆ-ಜಾನುವಾರುಗಳಿಗೆ ತೊಂದರೆ ಕೊಡುವ ವ್ಯಕ್ತಿಗಳು ಮಾಟ ಮಂತ್ರ ಮಾಡಿಸುವುದು ವಾಡಿಕೆ. ಇದಕ್ಕೆ ಪ್ರತಿಯಾಗಿ ಮತ್ತೊಂದು ಗುಂಪು ಅದರ ನಿವಾರಣೆಗಾಗಿ ಅದೇ ಮಾಂತ್ರಿಕರ ಬಳಿ ಹೋಗಿ ಪ್ರತಿ ತಂತ್ರ ಹಾಕಿಸುವುದು ಅವರಲ್ಲಿ ಹುದುಗಿರುವ ಮೌಢ್ಯತೆಯಾಗಿದೆ. ಈ ಕುರಿತಾಗಿ ಲಂಬಾಣಿ ಸಮಾಜದಲ್ಲಿ ಅಕ್ಷರತೆ ನೆಲೆಗೊಳ್ಳಬೇಕಾಗಿರುವುದು ತುಂಬಾ ಅನಿವಾರ್ಯವೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಸಂಗತಿಯಾಗಿದೆ. ಆದರೂ ಈಚೆಗೆ ಹಲವು ಗ್ರಾಮಗಳಲ್ಲಿ ಕೆಲವರು ಮಾತ್ರ ತಮ್ಮ ಮಕ್ಕಳಿಗೆ ವಿದ್ಯೆ ಕೊಡಿಸುತ್ತಿರುವುದು ಕಾಣಸಿಗುತ್ತದೆ. ಆದರೆ ಇದು ಎಲ್ಲರಲ್ಲೂ ಜಾಗೃತಿ ಮೂಡಬೇಕಾಗಿರುವುದು ತುಂಬಾ ಅವಶ್ಯ.

ಇದರಲ್ಲಿರುವ ಮತ್ತೊಂದು ಅನಿಷ್ಟ ಪದ್ಧತಿಯೆಂದರೆ ಬಾಲ್ಯ ವಿವಾಹ. ಮೂಲತಃ ವ್ಯಾಪಾರಿ ಮನೋಭಾವದ ಈ ಜನಸಮೂಹವು ಮುಂದೆ ತನಗೆ ಒದಗಬಹುದಾದ ಆರ್ಥಿಕ ಸಂಕಷ್ಟ ನಿವಾರಣೆಗಾಗಿ ಬೇಗನೆ ಅಂದರೆ ನಿಗದಿಪೂರ್ವ ವಯಸ್ಸಲ್ಲಿ ತಮ್ಮ ಮಕ್ಕಳಿಗೆ ವಿವಾಹ ಮಾಡಿಸುತ್ತಾರೆ. ಅಪ್ರಾಪ್ತರಿಗೆ ವಿವಾಹ ಮಾಡಿಸಿ ಮುಂದೆ ಒದಗುವ ಪ್ರಮಾದಗಳನ್ನು ತಾವೇ ಬರಮಾಡಿಕೊಳ್ಳುತ್ತಾರೆ. ಚಿಕ್ಕ ವಯಸ್ಸಲ್ಲಿ ತಾಯ್ತನ ಅನುಭವಿಸಿ ಜನಸಂಖ್ಯೆ ಏರಿಕೆಯಾಗುವುದಲ್ಲದೆ, ಮಕ್ಕಳ ಭವಿಷ್ಯಕ್ಕೆ ತಾವೇ ಕುತ್ತು ತರುವ ಪ್ರಯತ್ನ ಮಾಡುತ್ತಾರೆ. ತಮ್ಮ ವ್ಯಾಪಾರಿ ಮನೋಭಾವದಿಂದ ಊರೂರು ಅಲೆಯುವ ಈ ಜನ ಸಮೂಹ ಚಿಕ್ಕ ಮಕ್ಕಳಿಗೆ ಶಿಕ್ಷಣ ಕೊಡಿಸುವುದು ಬಿಟ್ಟು ಕೂಲಿ ಕೆಲಸಕ್ಕಾಗಿ ಕಬ್ಬು ಕಟಾವು ಇನ್ನಿತರ ಕೃಷಿಕ ಕೆಲಸಕ್ಕೆ ಉಪಯೋಗಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಸರ್ಕಾರವು ಬಾಲ್ಯ ವಿವಾಹವನ್ನು ನಿಷೇಧಗೊಳಿಸಿ ಕಾನೂನು ಜಾರಿಗೆ ತಂದರೂ ಸಹ ಕಾನೂನಿಗೆ ವಿರುದ್ಧವಾಗಿ ಕಾರ್ಯ ಪೂರೈಸುವುದು ಕಾಣಸಿಗುತ್ತದೆ. ಇದರೊಂದಿಗೆ ಒಂದೇ ಬಾರಿಗೆ ಹಲವು ಮದುವೆಗಳನ್ನು ಮಾಡಿಸಿದರೆ ತಮಗೆ ಒದಗಬಹುದಾದ ಖರ್ಚು

ಪೆಚ್ಚವೂ ಕಡಿಮೆಯಾಗುವುದೆಂದು ಇಂತಹ ಸಮಾಜ ವಿರೋಧಿ ಕಾರ್ಯವನ್ನು ಜರುಗಿಸುವರು. ಇನ್ನು ಮುಂದೆ ಹಟ್ಟಿಯಲ್ಲಿ ವಾಸವಾಗಿರುವ ಅಕ್ಷರಸ್ಥರು ಮೌಢ್ಯ ವಿಚಾರಗಳಿಗೆ ದಾಸರಾಗದೆ ಅವರನ್ನು ಜಾಗೃತರಾಗಿಸುವ ಕೆಲಸ ಮಾಡಬೇಕಾಗಿದೆ.

**ಲಂಬಾಣಿ ಜನಾಂಗದ ಭಾಷೆ:** ಲಂಬಾಣಿ ಜನಾಂಗದವರಿಗೆ ಪ್ರತ್ಯೇಕವಾದ ಲಿಪಿ ಇಲ್ಲದಿದ್ದರೂ ತಮ್ಮದೇ ಆದ 'ಗೋರ್ ಬೋಲಿ' ಭಾಷೆಯನ್ನು ರೂಢಸಿಕೊಂಡು ಬರುತ್ತಿರುವ ಲಿಪ್ಲಂತರಕ್ಕಾಗಿ ಕನ್ನಡ ಭಾಷೆ ಬಳಸುತ್ತಿರುವರು. ಉಚ್ಚಾರಣೆ ಮಾತ್ರ ಅವರ ಭಾಷೆಯಲ್ಲೇ ಮಾಡುವರು. ಆದರೆ ಬರವಣಿಗೆಗಾಗಿ ಕನ್ನಡವನ್ನೇ ಬಳಸುವ ಇವರಲ್ಲೂ ಅಪಾರ ಜನಪದ ಸಾಹಿತ್ಯವು ಇದೆ. ಇವರಲ್ಲಿರುವ ಮೌಖಿಕ ಸಾಹಿತ್ಯವಾದ ಕಥೆಗಳು, ಗೀತೆಗಳು, ಒಗಟುಗಳು, ಲಾವಣಿಗಳು, ಗಾದೆ ಮತ್ತು ನುಡಿಗಟ್ಟುಗಳು ಅಲ್ಲದೆ ಕೊಳಸಾತ್ ಗಳು ಅವರ ಸಾಂಸ್ಕೃತಿಗೆ ಕೈದೀವಿಗೆಯಾಗಿವೆ ಎನ್ನಬಹುದು. ಇದು ಬೇರಾವುದೇ ಸಾಹಿತ್ಯದಿಂದ ಪಡೆದಿಲ್ಲ. ಅವರು ಆಚರಿಸುವ ಹಬ್ಬ-ಹರಿದಿನ ಸಂಭ್ರಮಾಚರಣೆ ಹಾಗೂ ಜನನ-ಮರಣ ವಿವಾಹದ ವೇಳೆ ಮಾಡಿದ ಆಚಾರ-ವಿಚಾರಗಳೇ ಇಂದು ಸಾಂಸ್ಕೃತಿಕ ಸಾಹಿತ್ಯಕ್ಕೆ ಕೊಡುಗೆ ಮಹತ್ವದಾಗಿದೆ.

ಲಂಬಾಣಿ ಸಮಾಜದಲ್ಲಿ ಕಥೆಗಳಿಗೆ ಪ್ರಮುಖ ಸ್ಥಾನ ನೀಡಲಾಗಿದೆ. ಇಡೀ ಸಾಂಸ್ಕೃತಿಕ ಜಗತ್ತು ಅನಾವರಣಗೊಳ್ಳಬೇಕಾದರೆ ಕಥಾ ಸಾಹಿತ್ಯ ಪ್ರಮುಖ ಘಟ್ಟವಾಗಿದೆ. ಲಂಬಾಣಿ ಸಮುದಾಯದವರಲ್ಲಿ ಕಥೆಗಳ ಸಾಹಿತ್ಯವೇ ಇದೇ ಅವರು ಸಾಮಾನ್ಯವಾಗಿ ಕಥೆಗಳನ್ನು ಸಾಕಿ ಎಂದು ಕರೆಯುವರು. ಅವರು ಹೇಳುವ ಕಥೆಗಳಲ್ಲಿ ಕುಲಕಸುಬು ಮತ್ತು ಕುಲದೇವತೆಗಳು ಪ್ರಮುಖವಾಗಿವೆ. ಅಲ್ಲದೆ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳ ಬಗ್ಗೆ ವಿವರ ನೀಡುವ ಕಥೆಗಳಿವೆಯೆಂದು ಗಂಗಾನಾಯ್ಕರವರು ಲಂಬಾಣಿಗರು ಎಂಬ ಕೃತಿಯಲ್ಲಿ ಸೂಕ್ಷ್ಮವಾಗಿ ತಿಳಿಸಿದ್ದಾರೆ.["] ಲಂಬಾಣಿಗರಲ್ಲಿರುವ ಕಥಾ ಪರಂಪರೆಯನ್ನು ಅಧ್ಯಯನ ದೃಷ್ಟಿಯಿಂದ ಅವರಲ್ಲಿ ರುವ ಕಥನ ಗೀತೆಗಳನ್ನು ಧಾರ್ಮಿಕ, ಪೌರಾಣಿಕ, ಐತಿಹಾಸಿಕ, ವೀರ ಅದ್ಭುತ ಸಾಮಾಜಿಕ ಗೀತೆಗಳಾಗಿ ವರ್ಗೀಕರಿಸಲಾಗಿದೆ.

ಲಂಬಾಣಿ ಜನಾಂಗದಲ್ಲೂ ಕುಲದೇವತಾರಾಧನೆಯೂ ತುಂಬಾ ಮಹತ್ವ ಪಡೆದುಕೊಂಡಿದೆ. ಕುಲದೇವತೆಗಳಿಗೆ ಸಂಬಂಧಿಸಿದ ಕತೆಗಳು ಬಳ್ಳಾರಿ ಜಿಲ್ಲಾ ಭಾಗದಲ್ಲಿ ಜನಜನಿತವಾಗಿವೆ. ಹಲವು ಗ್ರಾಮ ಗಳಲ್ಲಿ ಈಗಲೂ ಕುಲದೇವತೆಗಳ ಆರಾಧನೆಯನ್ನು ಬಹಳ ವಿಜೃಂಭಣೆಯಿಂದ ಸಾಮಾಜಿಕವಾಗಿ ಪೂರೈಸುವರು. ಆಯಾ ತಾಂಡಾದ ನಾಯಕನ ಸೂಚನೆಯಂತೆ ಕುಲದೇವರನ್ನು ಪೂಜಿಸುವ ಪರಿಪಾಠ ಈಗಲೂ ಕಾಣಬಹುದಾಗಿದೆ. ಕೆಲವು ಊರುಗಳಲ್ಲಿ ಈಗಲೂ ಕುಲದೇವರುಗಳಾದ ಸೇವಾಬಾಯ, ಮೀಟುಭುಕ್ಯ, ಸಾತೀ ಸತ್ತಿ, ಬಾಲಾಜಿ ತಿರುಪತಿ ತಿಮ್ಮಪ್ಪ, ಮರಿಯಮ್ಮ, ವಾಗ್ದೇವಿ(ಹುಲಿಗೆಮ್ಮ) ದೇವರ ಆರಾಧನೆ ತುಂಬಾ ವಿಜೃಂಭಣೆಯಿಂದ ಅಷ್ಟೇ ನಿಷ್ಠೆಯಿಂದ ಜರುಗಿಸುವರು. ಇಂತಹ ದೈವಗಳ ಚರಿತ್ರೆಯನ್ನು ಅವರ ಹಬ್ಬ-ಹರಿದಿನಗಳಲ್ಲಿ ತಮ್ಮ ತಾಂಡಾಗಳಿಗೆ ಡಾಢಿಗಳನ್ನು ಕರೆಸಿ ದೈವಗಳ ಚರಿತ್ರೆಯನ್ನು ಕೇಳುವರು. ಆದರೆ ಹೆಚ್ಚಾಗಿ ಬಳ್ಳಾರಿ ಜಿಲ್ಲೆಯಲ್ಲಿ

ಭಜನೆ ಮೇಳದ ತಂಡವೂ ಕೆಲವು ವಿಶಿಷ್ಟ ಹಬ್ಬಗಳಾದ ದೀಪಾವಳಿ ಇಲ್ಲವೆ ದಸರಾ ಹಬ್ಬಗಳಲ್ಲಿ ರಾತ್ರಿ ಇಡೀ ಭಜನೆ ಹಾಡುಗಳ ಮೂಲಕ ಕುಲದೇವರ ಚರಿತ್ರೆಯನ್ನು ಹಾಡಿಸುವ ಪರಿಪಾಠ ಇದೆ.

ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿರುವ ಬೇವಿನ ಮರ ಇಲ್ಲವೆ ಆಲದ ಮರಕ್ಕೆ ಸೀರೆಯನ್ನು ತೊಡಿಸಿ ಸಾತಿ ಸತ್ತಿ ಅಂದರೆ ಏಳು ಮಕ್ಕಳ ತಾಯಿಯನ್ನು ಆರಾಧಿಸುವರು. ಈ ದೇವತೆಗೆ ತುಂಬಾ ಪಾವಿತ್ರತೆ ಭಾವನೆಯಿಂದ ಪೂಜೆ ಸಲ್ಲಿಸುವರು. ಆ ಗ್ರಾಮದ ಹೊರ ವಲಯದಲ್ಲಿ ದೇವತಾರಾಧನೆಗೆ ಅವಕಾಶ ಕಲ್ಪಿಸುವರೆಂದು ಕ್ಷೇತ್ರಾಧ್ಯಯನದಿಂದ ತಿಳಿದುಬಂದಿದೆ. ಊರ ಹೊರಗೆ ಇದ್ದು ಈ ರೀತಿಯ ಶಕ್ತಿಯ ದೈವಗಳು ತಮ್ಮ ಗ್ರಾಮಗಳನ್ನು ಕಾಪಾಡುವರೆಂಬ ನಂಬಿಕೆ ಈಗಲೂ ಲಂಬಾಣಿಗ ಸಮುದಾಯದಲ್ಲಿ ಕಾಣಬಹುದಾಗಿದೆ.

ಬಹುತೇಕವಾಗಿ ಶಕ್ತಿ ದೇವತೆ-ದೇವರುಗಳನ್ನು ಸಂಪ್ರೀತಗೊಳಿಸಲು ಕುರಿ-ಕೋಳಿಗಳನ್ನು ಬಲಿ ನೀಡುವ ಪದ್ಧತಿ ಈಗಲೂ ಕಾಣಸಿಗುತ್ತದೆ. ಈ ರೀತಿ ಬಲಿ ನೀಡಿದರೆ ತಮ್ಮ ಸಾಕು ಪ್ರಾಣಿಗಳಿಗೆ ರೋಗ ರುಜಿನ ಬಾರದಂತೆ ಕಾಪಾಡಲಿ ಎಂಬ ಉದ್ದೇಶವೂ ಹೆಚ್ಚಾಗಿ ಕಂಡುಬರುತ್ತದೆ. ಜಿಲ್ಲೆಯ ಗಾಳೆಮ್ಮ ದೇವತೆಗೆ ಬಲಿ ನೀಡಿ ತಮ್ಮ ಹರಕೆಯನ್ನು ತೀರಿಸಲು ಕುಟುಂಬ ಸಮೇತವಾಗಿ ಬಂದು ಪೂಜೆ ಸಲ್ಲಿಸಿ ತೆರಳುವರು. ಇವರು ಇಂದಿಗೂ ವಿಶೇಷವಾಗಿ ಆಯಾ ತಾಂಡಾಗಳಿಂದ ಎತ್ತಿನಬಂಡಿಗಳ ಮೂಲಕ ಸಾಗಿಬರುವುದು ತುಂಬಾ ವಿಶೇಷ. ಅತ್ಯಂತ ಮಡಿಯಿಂದಲೇ ದೇವಿಗೆ ವೈವೇದ್ಯ ಅರ್ಪಿಸಿದ ಬಳಿಕವೇ ತಮ್ಮ ಗ್ರಾಮದ ಜನರಿಗೆ ಬಲಿ ಊಟ ಬಡಿಸಿ ತಾವು ಸ್ವೀಕಾರ ಮಾಡಿ ತಂತಮ್ಮ ಊರುಗಳಿಗೆ ತೆರಳುವರು. ಇದರೊಂದಿಗೆ ಹಿಂದೂಗಳು ಜರುಗಿಸುವ ಇತರೆ ಹಬ್ಬಗಳನ್ನು ಅಷ್ಟೇ ಪ್ರಮುಖವಾಗಿ ಜರುಗಿಸುವರು. ದಸರಾ ಹಬ್ಬ, ಹೋಳಿ ಹಬ್ಬ(ತೇಜ್ ), ದೀಪಾವಳಿ(ದಿವಾಳಿ) ಹಬ್ಬಗಳನ್ನು ಇಂದಿಗೂ ಸಂಪ್ರದಾಯ ಬದ್ಧವಾಗಿ ಜರುಗಿಸುವರು. ದಸರಾ ಹಬ್ಬದಲ್ಲಿ ಭಜನೆ ಮೂಲಕ ಆರಾಧನೆ ಕೈಗೊಂಡರೆ, ದವಾಳಿಯಲ್ಲಿ ಚಿಕ್ಕಮಕ್ಕಳು ಪುಟ್ಟಿಯಲ್ಲಿ ತೆನೆಹೊತ್ತು ಸಾಗಿ ದೇವರ ಹಾಡುಗಳನ್ನು ಹಾಡುತ್ತಾ ಸಾಗಿಬರುವ ದೃಶ್ಯ ಮನಮೋಹಕ. ಈಗ ಬಹುತೇಕ ಲಂಬಾಣಿ ಸ್ತ್ರೀಯರು ಸಂಪ್ರದಾಯ ಉಡುಗೆಯನ್ನು ಕೇವಲ ಉತ್ಸವ ಸಮಾರಂಭಗಳಲ್ಲಿ ಉಡುವುದು ಕಾಣಿಸಿಗುತ್ತದೆ. ಇಂತಹ ದೈವಗಳ ಕಥೆಗಳನ್ನು ಹಬ್ಬ-ಹರಿದಿನಗಳಲ್ಲಿ ಕೇಳುವುದು ವಾಡಿಕೆಯಾಗಿದೆ.

ವೃತ್ತಿಗಾಯಕರಾದ ಢಾಢಿಗಳು ಕೇವಲ ದೇವರುಗಳ ಚರಿತ್ರೆಯ ಕಥೆಯನ್ನು ಅಲ್ಲದೆ ವೀರನಾಯಕರ ಚಿತ್ರಣವನ್ನು ಮನೋಜ್ಞವಾಗಿ ತಿಳಿಸಿ ಕೊಡುತ್ತಾರೆ. ಅವರ ಜನಾಂಗದಲ್ಲಿದ್ದ ಸಾಂಸ್ಕೃತಿಕ ನಾಯಕರ ಜೀವನ ವಿಧಾನ ಹಾಗೂ ಅವರು ನಡೆಸಿರುವ ಪವಾಡಗಳನ್ನು ತಿಳಿಸುತ್ತಾರೆ. ಈ ಕತೆಗಳನ್ನು ಲಂಬಾಣಿ ಜನಾಂಗದ ಪ್ರತಿಯೊಬ್ಬರು ಕೇಳುತ್ತಾರೆ. ಹೀಗೆ ಕಥೆ ಹೇಳಿದ ಡಾಢಿಗಳೀಗೆ ಆಹಾರ ಧಾನ್ಯ ಇಲ್ಲವೆ ಬಟ್ಟೆ ಬರೆ ಅಥವಾ ಹಣದ ರೂಪದಲ್ಲಿ ದಾನ ಮಾಡುತ್ತಾರೆ.

ಧಾರ್ಮಿಕ ಕಥನ ಗೀತೆಗಳಲ್ಲಿ ಥಾಳೀರ ಗೀತೆ (ಕಂಚಿನ ಗಂಗಾಳದ ಪದಗಳು) ನಗಾರಾರ ಗೀತೆ (ನಗಾರಿ ವಾದ್ಯದ ಹಾಡು), ಮೋಡಿಗೀತೆ(ದೊಡ್ಡ ಗೀತೆ), ಪೇನಾರಗೀತೆ(ಪುರಾತನರ ಗೀತೆ)ಗಳಾಗಿ ವಿಂಗಡಿಸಿ ಡಾಢಿಗಳು ಕಥನ ಗೀತೆಗಳನ್ನು ಆಯಾ ಸಂದರ್ಭಕ್ಕೆ ತಕ್ಕಂತೆ ಹಾಡುವರು.

ಧಾರ್ಮಿಕ ಗೀತೆಗಳಲ್ಲಿ ಹೆಚ್ಚಾಗಿ ಅವರ ಕುಲಗುರುವಾದ ಸೇವಾಲಾಲ್‌ರವರ ಗೀತೆಯನ್ನು ಹಾಡು ವರು. ಸೇವಾಲಾಟ್‌ರವರ ಜನನ, ಬಾಲ್ಯ, ಯೌವನ, ಅವರು ನಡೆಸಿದ ಪವಾಡಗಳು, ತುಂಬಾ ಮಾರ್ಮಿಕ ವಾಗಿ ತಿಳಿಸುತ್ತಾರೆ.

ಲಂಬಾಣಿಗರಲ್ಲಿ ಸೇವಾಲಾಲ್‌ನಿಗೆ ತುಂಬಾ ಮಹತ್ವ ನೀಡಿದ್ದಾರೆ. ತಮ್ಮ ಮೂಲ ಕುಲ ಗುರುವಾದ ಈತನು ಸಮಾಜ ಪರಿವರ್ತನೆಗಾಗಿ ತನ್ನ ಜೀವನವನ್ನು ಮುಡುಪಾಗಿಟ್ಟ ವಿವರವನ್ನು ಕೇಳಿ ಆನಂದ ಪರವಶರಾಗುತ್ತಾರೆ. ಲಂಬಾಣಿ ಜನಾಂಗದ ರಕ್ಷಕನಾಗಿ ಪವಾಡಗಳನ್ನು ನಡೆಸಿಕೊಟ್ಟ ಧೀಮಂತ ವ್ಯಕ್ತಿಯಾಗಿ ಸಾಂಸ್ಕೃತಿಕ ನಾಯಕನಾಗಿದ್ದನೆನ್ನಲಿಕ್ಕೆ ಈಗಲೂ ಡಾಢಿಗಳು ಹೇಳುವ ಕಥೆಗಳು ಹಾಗೂ ಭಜನಾ ಹಾಡಿನಲ್ಲಿ ಇವರ ಚರಿತ್ರೆ ಹಾಸು ಹೊಕ್ಕಾಗಿರುವುದನ್ನು ಕಾಣಬಹುದಾಗಿದೆ.

ಬುಡಕಟ್ಟುಗಳಾದ ಲಂಬಾಣಿ ಜನಾಂಗದವರು ಮೂಲತಃ ವ್ಯಾಪಾರಿ ಮನೋಭಾವವುಳ್ಳವರಾಗಿದ್ದರು. ಇವರಲ್ಲಿ ಸೇವಾಲಾಲರ ಜೀವನ ಚರಿತ್ರೆಯು ತುಂಬಾ ವಿಶೇಷತೆಯನ್ನು ಪಡೆದುಕೊಂಡಿದೆ. ಲಂಬಾಣಿ ಜನರಲ್ಲಿ ಒಬ್ಬ ಮೂಲ ಪುರುಷನಾದ ರಾಂಜೀನಾಯ್ಕ ನಾಯಕನು ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದನು. ಆತನಿಗೆ ಭೀಮಾ, ಖೇಮಾ ಹಾಗೂ ಹೇಮಾ ಎಂಬ ಸಹೋದರರಿದ್ದರು. ಭೀಮಾನಾಯಕರು ಧರ್ಮಣಿ ಬಾಯಿಯೊಂದಿಗೆ ವಿವಾಹ ಮಾಡಲಾಯಿತು. ಧರ್ಮನಿಷ್ಠರಾದ ಇವರಿಗೆ ಹಲವಾರು ವರ್ಷ ಕಳೆದರೂ ಸಂತಾನಭಾಗ್ಯ ಲಭಿಸಲಿಲ್ಲ. ಅನೇಕ ಪೂಜಾ-ವ್ರತಾಚರಣೆ ಕೈಗೊಂಡ ಬಳಿಕ ಸಾತೀ ಸತ್ತಿಯ ದೇವತೆಗಳ ಅನುಗ್ರಹದಿಂದ ಭೀಮಾನಾಯಕನಿಗೆ ಪುತ್ರ ಸಂತಾನವಾಗುತ್ತದೆ. ಈ ಭೀಮ ನಾಯಕನಿಗೆ ಹುಟ್ಟಿದ ಮಗನೇ ಸೇವಾಲಾಲ್ ಎಂಬುದು ಲಂಬಾಣಿ ವಿದ್ವಾಂಸರಿಂದ ತಿಳಿದುಬರುತ್ತದೆ.

ಇದೇ ರೀತಿ ಇನ್ನಿತರೆ ದೇವತೆಗಳ ಬಗ್ಗೆ ಕಥನ ಗೀತೆಗಳು ಲಂಬಾಣಿ ಜನಾಂಗದವರಲ್ಲಿ ರಚನೆ ಗೊಂಡಿವೆ. ಇದರೊಂದಿಗೆ ಐತಿಹಾಸಿಕ ವೀರನಾಯಕರ ಚರಿತ್ರೆಯನ್ನು ತಿಳಿಸುವ ಗೀತೆಗಳನ್ನು ಅತ್ಯಂತ ಸುಶ್ರಾವ್ಯವಾಗಿ ಹಾಡುತ್ತಾರೆ. ವೀರ ನಾಯಕರಲ್ಲಿ ಹರಿದಾಸರಗೀದ ಜೊತೆಗೆ ಅದ್ಭುತ ಕಥನ ಗೀತೆಗಳನ್ನು ಗಮನಿಸಬಹುದಾಗಿದೆ. ಅಲ್ಲದೆ ಸಾಮಾಜಿಕ ಕಥನ ಗೀತೆಗಳು ರೂಢಿಯಲ್ಲಿರುವುದು ಬೆಳಕಿಗೆ ಬಂದಿವೆ. ಈ ಕುರಿತಾಗಿ ಸಾಹಿತ್ಯ ಪ್ರಕಾರಗಳಲ್ಲಿ ಕಥೆಯನ್ನು ಹೆಚ್ಚಾಗಿ ವಿವರಿಸಿದೆ.

ಲಂಬಾಣಿ ಜನಪದರು ಬಿಡುವಿನ ವೇಳೆಯಲ್ಲಿ ಹಾಡಿದ ಹಾಡುಗಳೇ ಇಂದು ಇವರಲ್ಲಿ ಜನಪದ ಗೀತೆಗಳಾಗಿವೆ. ಈ ಹಿಂದೆ ಬುಡಕಟ್ಟು ವಾಸಿಗಳಾಗಿದ್ದ ವೇಳೆಯಲ್ಲಿ ಕಾಡಲ್ಲಿರುವ ಹಣ್ಣು ಹಂಪಲುಗಳನ್ನು ಕೀಳುವಾಗ, ವ್ಯವಸಾಯ ಕಾರ್ಯಕೈಗೊಂಡಾಗ ಅದರಲ್ಲೂ ವಿಶೇಷವಾಗಿ ಕಬ್ಬು ಕಟಾವು ಮಾಡುವಾಗ ಮತ್ತು

ಸಾಂಪ್ರದಾಯಿಕ ಆಚರಣೆಯ ವೇಳೆ ಹಾಡುವ ಹಾಡುಗಳೇ ಜನಪದ ಗೀತೆಗಳಾಗಿವೆ. ಈಗಲೂ ವಿಶೇಷವಾಗಿ ಲಂಬಾಣಿ ಜನಾಂಗದಲ್ಲಿ ಲಿಪಿಸ್ವರೂಪ ಕಂಡುಕೊಂಡಿಲ್ಲ. ಆದರೆ ಆಡು ಭಾಷೆ ಲಂಬಾಣಿಯದಾಗಿದ್ದರೆ ಬರೆಯುವ ಭಾಷೆಯಾಗಿ ಕನ್ನಡವನ್ನು ಇಂದಿಗೂ ಬಳಸುತ್ತಿದ್ದಾರೆ. ಸಂಶೋಧಕರೊಬ್ಬರು ಲಂಬಾಣಿ ಭಾಷೆಗೆ ಪ್ರತ್ಯೇಕ ಲಿಪಿ ಇರಲಿ ಎಂದು ಲೇಖನವೊಂದನ್ನು ಬರೆದಿದ್ದಾರೆ. ಅದು ಸ್ವೀಕಾರಕ್ಕೆ ಇನ್ನು ಹಲವು ವರ್ಷಗಳೇ ಕಳೆಯಬೇಕಾಗಬಹುದು. ಯಾವುದೇ ವ್ಯಕ್ತಿ ತನಗಾದ ಅನುಭವಗಳನ್ನು ತನ್ನದೇ ಆದ ರೀತಿಯಲ್ಲಿ ಗೀತ ಪ್ರಕಾರವಾಗಿ ಹಂಚಿಕೊಂಡ ಸಾಹಿತ್ಯ ಗೀತಸಾಹಿತ್ಯವಾಗಿದೆ. ಇದು ಎಲ್ಲಾ ಭಾಷಿಕರಲ್ಲಿದೆ. ಈ ಕಾರಣಕ್ಕಾಗಿ ಮಾನವನ ಭಾವೋತ್ಕರ್ಷದ ಸಹಜ ಚಟುವಟಿಕೆಗಳ ಪರಿಣಾಮವಾಗಿ ಗೀತೆಗಳು ಉಗಮವಾಗಿವೆ ಎಂದು ವಿದ್ವಾಂಸರಾದ ದೇ.ಜವರೆಗೌಡರು ಹೇಳುವರು. ಆದರೆ ಇವರಲ್ಲಿ ವಿಶೇಷವಾಗಿ ಉಳಿದ ವೇಳೆಗಿಂತಲೂ ಆಳುವ ಸಂಪ್ರದಾಯವನ್ನು ಅರಿತರೆ ಒಂದು ರೀತಿಯ ಲಯಬದ್ಧವಾದ ಗೀತ ಪ್ರಕಾರದ ಮಾತುಗಳನ್ನು ಪರಸ್ಪರ ಹಂಚಿಕೊಳ್ಳುವ ವಿಧಾನವು ತುಂಬಾ ವಿಶಿಷ್ಟವಾಗಿದೆ. ಈ ರೀತಿಯಾಗಿ ವ್ಯವಸ್ಥೆ ಇನ್ನಾವುದೇ ಜನಾಂಗದಲ್ಲಿ ಕಾಣಸಿಗುವುದಿಲ್ಲ.

ಲಂಬಾಣಿ ಸಮಾಜದಲ್ಲಿ ಜಿಲ್ಲೆಯ ಯಾವುದೇ ಗ್ರಾಮದಲ್ಲಿ ಗಮನಿಸಿದರೂ ಇತರೆ ಜನಾಂಗದಲ್ಲಿರುವಂತೆ ಮಗು ಜನನದಿಂದ ಹಿಡಿದು ಮರಣ ಸಂಭವಿಸುವವರೆಗೂ ಅನೇಕ ರೀತಿಯ ಸಂಸ್ಕಾರ ಗೀತೆಗಳು ಕಂಡುಬರುತ್ತವೆ. ಇದರೊಂದಿಗೆ ವಿಶೇಷವಾಗಿ ಹಬ್ಬ-ಹರಿದಿನಗಳು, ದೈವಸ್ತುತಿ ಗೀತೆಗಳೂ, ವೈವಾಹಿಕ ಆಚರಣೆಗಳಲ್ಲಿ ಹಾಡುವ ಹಾಡುಗಳು ತುಂಬಾ ವಿಶಿಷ್ಟವಾಗಿರುತ್ತವೆ. ಹೆಚ್ಚಾಗಿ ಜನಪದ ಗೀತೆಗಳು ಮೂಡಿಬಂದಿದ್ದು ನಿರಂತರ ಶ್ರಮ ಜೀವಿಗಳಾದ ಇವರು ಕಸೂತಿ ಕಲೆ ಹಾಕುವಾಗ, ಕಟ್ಟಿಗೆ ಕಡಿಯುವಾಗ ಹಾಗೂ ಮಕ್ಕಳ ಲಾಲನೆ ಪಾಲನೆ ವೇಳೆ ಹೊರಬಂದ ಸಾಹಿತ್ಯಕ್ಕೆ ತನ್ನದೇ ಆದ ಮಹತ್ವವಿದೆ. ಈ ಗೀತ ಪ್ರಕಾರವು ಹೆಚ್ಚಿನ ವಿವರಣೆಯನ್ನು ಸಾಹಿತ್ಯದ ಬಗೆಯಲ್ಲಿ ವಿವರಿಸಲಾಗಿದೆ.

**ಗಾದೆ:** ಲಂಬಾಣಿಗರು ಗಾದೆಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿ ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡೆ ಸಾಗುತ್ತಿದ್ದಾರೆ. ಆದ್ದರಿಂದ ಈಗಲೂ ನೀತಿ-ನಿಯಮಗಳು ರೂಢಿಗತವಾಗಿರುವುದನ್ನು ತಿಳಿಯಬಹುದಾಗಿದೆ. ಜನಪದ ಸಾಹಿತ್ಯದ ಪ್ರಮುಖ ಪ್ರಕಾರವಾದ ಗಾದೆಗಳ ಬಳಕೆ ಇವರಲ್ಲಿ ಹೆಚ್ಚಾಗಿ ಬಳಸುವುದು ಕಾಣಸಿಗುತ್ತದೆ. ಮಾತಿನಲ್ಲಿ ಚತುರರಾದ ಇವರು ಗಾದೆಗಳ ಮಹತ್ವವನ್ನು ಅರಿತುಕೊಂಡೆ ತಮ್ಮ ವ್ಯವಸ್ಥಿತ ಬದುಕನ್ನು ಹಸನುಗೊಳಿಸಿಕೊಂಡಿದ್ದಾರೆ.

ಗಾದೆ ಎಂಬ ಪದವು ಮೂಲತಃ ಸಂಸ್ಕೃತದ ಗಾಥಾ ಶಬ್ದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಹೊರಗಿರುವ ದೇವರು ಬಂದು ಒಳಗಿನ ದೇವರನ್ನು ಓಡಿಸಿತು ಎಂಬಂತೆ ಸಹಜವಾಗಿ ಬಳಕೆಯಲ್ಲಿದ್ದ ನಾಣ್ಣುಡಿಗಳೇ ಗಾದೆಯ ಅರ್ಥವನ್ನು ಪ್ರತಿಬಿಂಬಿಸುತ್ತಿದ್ದವು. ಗಾದೆ ಪದ ಬಳಕೆಯಾದ ಬಳಿಕ ನಾಣ್ಣುಡಿ ಎಂಬ ಪದ ಬಳಸುವುದನ್ನು ಬಿಡಲಾಗಿದೆ. ಆದರೂ ಈಗಲೂ ಹಲವಾರು ಗ್ರಾಮಗಳಲ್ಲಿ 'ನಾಣ್ಣುಡಿ' ಎಂದೆ

ಬಳಸುತ್ತಿರುವರು. ಗಾದಗೆ ತನ್ನದೇ ಆದ ಮಹತ್ವದ ಸ್ಥಾನಮಾನ ಇದೆ. ಇತರೆ ಪ್ರಕಾರಗಳಿಗಿಂತಲೂ ಗಾದೆಗೆ ಉತ್ತಮ ಸ್ಥಾನ ನೀಡಿರುವುದು ಗಮನಾರ್ಹ. ಇಂದಿನ ಪರಿಸ್ಥಿತಿಯಲ್ಲಿಯೂ ಗಾದೆಗಳನ್ನು ಲಂಬಾಣಿಗರು ಅಳವಡಿಸಕೊಂಡೆ ಬದುಕುತ್ತಿರುವುದು ಕಾಣಸಿಗುತ್ತದೆ. ವೇದಗಳಿಗೆ ಸಮಾನವಾದ ಗಾದೆಗಳನ್ನು ಇಂದಿಗೂ ಬಳಸುತ್ತಿದ್ದಾರೆ. ಇದು ಎಲ್ಲಾ ಜನಾಂಗದಲ್ಲಿಯೂ ಬಳಕೆಯಲ್ಲಿದೆ. ಇದರಿಂದಲೇ ''ವೇದ ಸುಳ್ಳಾದರೂ ಗಾದೆ ಸುಳ್ಳಾಗದು'' ಎಂದು ಈಗಲೂ ಲಾಂಬಾಣಿ ಸಮಾಜದಲ್ಲಿದೆ. ಗಾದೆಯು ಗೂಡಾರ್ಥವನ್ನು ಒಳಗೊಂಡಿರುತ್ತದೆ. ಕೃಷ್ಣನ ಬಾಯಲ್ಲಿ ಬ್ರಾಹ್ಮಂಡ ಅಡಗಿರುವಂತೆ ಕೇವಲ ಒಂದೇ ವಾಕ್ಯದಲ್ಲಿ ವಿಶಾಲಾರ್ಥವು ಅಡಗಿರುತ್ತದೆ. ಬಹುತೇಕವಾಗಿ ಗಾದೆಗಳು ಸಂದರ್ಭಕ್ಕೆ ಅನುಗೂಣವಾಗಿ ಬಳಕೆಯಾಗುತ್ತವೆ. ಗಾದೆಗಳ ಲಕ್ಷಣಗಳನ್ನು ಪ್ರಸಿದ್ಧ ವಿದ್ವಾಂಶರಾದ ಜಿ.ಎ.ಕೇಲ್ಲೊ ಅವರು ಈ ರೀತಿ ವಿವರಿಸಿದ್ದಾರೆ. ಗಾದೆಗಳಲ್ಲಿ ಸಂಕ್ಷಿಪ್ತತೆ, ವಿವೇಕ ಪೂರ್ಣತೆ, ತೀಕ್ಷ್ಣತೆ ಮತ್ತು ಜನಪ್ರಿಯತೆಗಳೂ ಒಳಗೊಂಡಿರುತ್ತವೆ. ಇದರಿಂದ ಗಾದೆಗಳು ಸಹ ಆಯಾ ವ್ಯಕ್ತಿಗಳಲ್ಲಿ ಅನುಭವದ ಕೆನೆಯಾಗಿ ಪ್ರಸ್ತಾಪವಾಗುತ್ತವೆ. ಒಂದು ಸಾಲಿನ ಗಾದೆ ಇಲ್ಲವೆ ಎರಡು ಮೂರು ಸಾಲಿನ ಗಾದೆಗಳನ್ನು ಲಂಬಾಣಿಗರು ಬಳಸುತ್ತಾರೆ.

ಲಂಬಾಣಿಗರ ಸಹಜವಾದ ಗಾದೆಗಳಲ್ಲಿ "ಅಡಿಗೆ ಕೇಳಿ ಕತ್ತಿ ಮಸಿಯಾಲ್ಲ" ಎಂಬ ನಾಣ್ಣುಡಿಯು ಈ ರೀತಿಯಾಗಿ ಬಳಸಿದೆ. "ಭೇಳಿನ ಪೂಚನ ಭರಿ ಅಳಾವಚಕ" ಎಂದು ಬಳಸಿದ್ದಾರೆ. ಅಂತೆಯೇ ಎರಡು ಸಾಲುಗಳಲ್ಲಿ ಬಳಸುವ ಗಾದೆಗಳಾದ "ಬಯಸಿದ್ದು ಆಗೋದಿಲ್ಲ! ಬೇಡಿದ ರಾಜ್ಯ ದೊರಕುವುದಿಲ್ಲ" ಎಂಬ ಸಾಲನ್ನು ಲಂಬಾಣಿಗರು "ಚಿತ್ತೋ ಕಾಮ ಚಾಲೇನಿ, ಮಾಂಗೋ ರಾಜ ಮಳೇಣಿ" ಎಂದು ಬಳಸಿರುವರು. ಹಾಗೇನೆ ಹಾಸ್ಯಭಾವ, ದುಃಖಭಾವ ಮೂಡಿಸುವ ವೇಳೆಯೂ ಗಾದೆಗಳಿಗೆ ಬಳಕೆಯಾಗಿರುವುದು ಕಂಡುಬರುತ್ತದೆ. ಇದರಂತೆ ತೀಕ್ಷ್ಣತೆಯನ್ನು ಗುರುತಿಸುವಾಗ ಬಳಸುವ ಗಾದೆಗಳಲ್ಲಿ ಮೂರ್ಖನಿಗೆ ಹಿರಿತನ ಕೊಟ್ಟರೆ; ಬೀಸುಕಲ್ಲಿಗೂ ಸವಕಳಿಬಂತಂತೆ" ಎಂಬ ವಾಕ್ಯವನ್ನು "ಜಾಂಗಡೇನ ನಾಯಕಿ ದೀನೇತೋ, ಘಟ್ಟೀನ ಘಸೋಟೆ ಆಯತಿಕಚ್ " ಎಂಬುದಾಗಿ ಬಳಕೆ ಮಾಡಿದ್ದಾರೆ. ಹಾಗೇನೆ ಧರ್ಮದ್ದು ಧರ್ಮಕ್ಕೆ ಪಾಪದ್ದು ಪಾಪಕ್ಕೆ ಎಂಬ ವಾಕ್ಯವು "ಧರ್ಮೇರ ಧರ್ಮಜ, ಪಾಪೇರ ಪಾಪಜ ಕರೀಯ" ಎಂಬ ಪದಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಉತ್ತಮ ಗುಣಗಳನ್ನು ರೂಢಿಸಿಕೊಳ್ಳಲು ಲಂಬಾಣಿಗರ ಗಾದೆಗಳು ಸಹಕಾರಿಯಾಗಿವೆ.

ತುಂಬಾ ವಿಶಾಲಾರ್ಥವನ್ನು ಕೊಡುವ ಗಾದೆಗಳು ಒಬ್ಬರಿಂದ ಒಬ್ಬರಿಗೆ ಬಾಯಿಂದ ಬಾಯಿಗೆ ಹರಿದು ಬಂದವುಗಳಾಗಿವೆ. ಈ ಗಾದೆ ಪ್ರಕಾರದ ವೈಶಿಷ್ಟ್ಯವನ್ನು ಜನಪದ ಸಾಹಿತ್ಯದ ಪ್ರಕಾರದಲ್ಲಿ ಸವಿಸ್ತಾರವಾಗಿ ವಿವರಸಲಾಗಿದೆ.

ಲಂಬಾಣಿಗರು ಗಾದೆಗಳ ಬಳಕೆಯೊಂದಿಗೆ ಒಗಟುಗಳಿಗೂ ತಮ್ಮದೇ ಆದ ಮಹತ್ವವನ್ನು ನೀಡಿದ್ದಾರೆ. ಇವರು ಒಗಟುಗಳನ್ನು ತಮ್ಮ ಭಾಷೆಯಲ್ಲಿ ಪೋಡೇರ್ ಸಾಕಿ(ಒಡಗತ) ಜೀತೇರಸಾಕಿ(ಗೆಲ್ಲುವಕತೆ) ಎಂದು ಕರೆಯುವರು. ಇಲ್ಲಿ ಬಳಸಿದ ಕತೆ ಎಂಬ ಪದವು ಕಥೆಯನ್ನು ಪ್ರತಿನಿಧಿಸುವುದಿಲ್ಲ. ಆದರೆ ಒದಗತೆ ಮತ್ತು

ಗೆಲ್ಲುವ ಕತೆ ಎಂಬ ವಿಶೇಷ ಅರ್ಥವನ್ನು ನೀಡುತ್ತದೆ. ಒಗಟುಗಳನ್ನು ಹೆಚ್ಚಾಗಿ ಅವರು ಶಾಸ್ತ್ರಬದ್ಧವಾಗಿ ಆಚರಿಸುವ ತೀಜ್ ಹಬ್ಬದಲ್ಲಿ ಹೆಚ್ಚಾಗಿ ಬಳಸುವರು.

**ಒಗಟು:** ಲಂಬಾಣಿಗರು ಒಗಟುಗಳನ್ನು ಬಳಸುವಾಗ ಕಾಲಮಿತಿ ಇರುವುದಿಲ್ಲ. ಎಲ್ಲಾ ಸಂದರ್ಭಗಳಲ್ಲಿಯೂ ಒಗಟುಗಳನ್ನು ಬಳಸುವರು. ಹರಟೆ ಹೊಡೆಯುವಾಗ, ಎರಡು ಗುಂಪಿನ ನಡುವೆ ತಮ್ಮ ತಮ್ಮಲ್ಲಿರುವ ವಿದ್ವತ್ ದೃಷ್ಟಿಕೋನ ಎಷ್ಟಿದೆ ಎಂದು ಗುರುತಿಸುವ ಜಾಣ್ಮೆಯ ಪ್ರಸಂಗದಲ್ಲಿ ಉದ್ಭವವಾಗುತ್ತವೆ. ಒಗಟನ್ನು ಹೇಳುವವನು ಅದನ್ನು ಬಿಡುಸುವ ವ್ಯಕ್ತಿಯೂ ತುಂಬಾ ಜಾಣನಾಗಿರಬೇಕಾಗುತ್ತದೆ. ಒಗಟನ್ನು ಹೇಳಿದವನು ಅದರ ಅಂತರಾರ್ಥ ತಿಳಿದಿರಬೇಕು, ಇಲ್ಲದಿದ್ದರೆ ಗುಂಪಿನಲ್ಲಿ ನಗೆಪಾಟಲಿಗೆ ಗುರಿಯಾಗಬೇಕಾದ ಪ್ರಸಂಗ ಒದಗುತ್ತದೆ. ಒಗಟುಗಳ ಬಳಕೆಯಲ್ಲಿ ಹೆಚ್ಚಾಗಿ ಸರಿ ವಯೋಮಾನದವರು ಬಳಸುವುದರೊಂದಿಗೆ ಗಂಡ-ಹೆಂಡಿರಲ್ಲಿ ಅದರಲ್ಲೂ ಶಾಸ್ತ್ರ ಸಂಬಂಧ ಆಚರಣೆಗಳಲ್ಲಿ ತಮ್ಮ ತಮ್ಮ ಗಂಡ ಹಾಗೂ ಹೆಂಡತಿಯರ ಹೆಸರು ಹೇಳುವಾಗಲೂ ಒಳಗಡೆ ಮೂಲ ಹೆಸರು ಹೇಳುವುದು ಎಲ್ಲಾ ಜನಾಂಗದವರಲ್ಲಿದ್ದಂತೆ ಲಂಬಾಣಿ ಜನಾಂಗದವರಲ್ಲಿ ಸಹ ಕಾಣಬಹುದಾಗಿದೆ.

ಒಗಟು ಪ್ರಕಾರಗಳಲ್ಲಿ ಕೇಳುವವ ಮತ್ತು ಅದನ್ನು ತಿಳಿಸುವವ ಎಂದು ಗುರುತಿಸಲಾಗುತ್ತದೆ. ಇದನ್ನು ಪ್ರಶ್ನೆ ಮತ್ತು ಉತ್ತರ ರೂಪದಿಂದಲೂ ಕರೆಯಬಹುದಾಗಿದೆ. ಹೆಚ್ಚಾಗಿ ಮನರಂಜನೆ ವೇಳೆ ಹಾಗೂ ಕೃಷಿ ಗಾರಿಕೆ ಇಲ್ಲವೆ ಕಾಲಾಯಾಪನೆ ಮಾಡುವ ವೇಳೆ ಹೆಚ್ಚಾಗಿ ಒಗಟುಗಳ ಬಳಕೆಯಾಗುತ್ತಿರುವುದು ಕಂಡುಬರುತ್ತದೆ. ಒಗಟುಗಳು ಸರಳ ರೂಪ ಮತ್ತು ದೀರ್ಘ ರೂಪಗಳ ಪದಗಳಾಗಿ ಬಳಸುವುದು ಕಾಣಸಿಗುತ್ತದೆ. ಅವುಗಳಲ್ಲಿ ಕೆಲವು ಒಗಟುಗಳನ್ನು ಇಲ್ಲಿ ಗಮನಿಸಬಹುದು.

''ಸಾವಿರ ಆಕಳುಗಳಿದ್ದು ಒಂದೇ ಹೆಂಡಿರಾಶಿ'' ಎಂಬುದಾಗಿ ಲಂಬಾಣಿಗರು ''ಹಜಾರ ಗಾವಡೀರ ಎಕ್ಕಜ ಪೋಟಾ' ಎಂದು ಪ್ರಶ್ನಿಸಿದರೆ, ಅಂದರೆ ಇದಕ್ಕೆ ಉತ್ತರ ಜೇನು ಹುಟ್ಟು ಎಂದಾಗುತ್ತದೆ. ಇದೇ ರಿತಿ ''ಫಾಲೇನ್ ಆವಚ; ಕಾಡೇನ್ ಆಯೇನಿ'' ಎಂಬುದು ಹಾಕಕ ಬರ್ತ್ಯೆತಿ ತೆಗ್ಯಾಕ ಬರುದಿಲ್ಲ ಎಂಬು ದಾಗಿದೆ. ಅಂದರೆ ಇದರ ಅರ್ಥ 'ಹಚ್ಚೆ' ಎಂದಾಗಿದೆ. ಹಲವಾರು ಸಂದರ್ಭಗಳಲ್ಲಿ ಬಳಸುವ ವಸ್ತುಗಳನ್ನು ಒಗಟಿನ ವಾಕ್ಯಗಳಲ್ಲಿ ಬಳಸಿ ಎದುರಾಳಿ ಅಂದರೆ ಕೇಳುಗನಿಗೆ ಪೇಚಿಗೆ ಸಿಲುಕಿಸುವ ಪ್ರಸಂಗಗಳು ಗೋಚರಿಸುತ್ತದೆ.

ಒಗಟುಗಳನ್ನು ಕೇವಲ ವಸ್ತುಗಳಷ್ಟೇ ಅಲ್ಲದೆ ಪ್ರಾಣಿ, ಪಕ್ಷಿ, ಮನುಷ್ಯನಿಗೆ ಸಂಬಂಧಿಸಿದ ಅವಯವಗಳು, ಆಭರಣಗಳು, ಉಡುಗೆ-ತೊಡುಗಳನ್ನೆ ನಿಗೂಢವಾಗಿ ಹೋಲಿಕೆಯ ಮೂಲಕ ಪ್ರಶ್ನೆ ಹಾಕಿ ಉತ್ತರ ಪಡೆಯುವ ಒಂದು ವಿಶಿಷ್ಟ ಶೈಲಿಯಾಗಿದೆ.

ಈ ಒಗಟುಗಳು ಮತ್ತು ಒಗಟಿನ ರೀತಿಯಲ್ಲಿ ಬಳಸುವ ಕೊಳಸಾತ್‌ಗಳು ಅಂದರೆ ಸಂಸ್ಕೃತದಲ್ಲಿ ಬಳಸುವ ಶ್ಲೋಕಗಳನ್ನು ಲಂಬಾಣಿ ಜನಾಂಗದ ವಿಕಾಸದ ಹಾದಿಯಲ್ಲಿ ಎಂಬ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

**ಲಾವಣಿ:** ಲಂಬಾಣಿಗರು ಮೂಲತಃ ಅನಕ್ಷರಸ್ಥರಾದರೂ ಜನಪದ ಸಾಹಿತ್ಯದ ಪ್ರಕಾರದ ಲಾವಣಿಗಳು ಮತ್ತು ನುಡಿಗಟ್ಟುಗಳನ್ನು ಅಳವಡಿಸಿಕೊಂಡಿದ್ದರೆಂದು ಕ್ಷೇತ್ರಾಧ್ಯಯನದ ವೇಳೆ ದೊರೆತ ಮಾಹಿತಿಗಳಿಂದ ತಿಳಿದುಬಂದಿದೆ. ಈಗಾಗಲೇ ಬೇರೆ ಭಾಷೆಯಲ್ಲಿ ಬಳಸುವ ಲಾವಣಿಗಿಂತಲೂ ತುಂಬಾ ಭಿನ್ನವಾಗಿ ಲಂಬಾಣಿ ಜನಸಮೂಹವು ಲಾವಣಿಗಳನ್ನು ಮತ್ತು ನುಡಿಗಟ್ಟುಗಳನ್ನು ಬಳಸಿರುವುದು ಕಾಣಸಿಗುತ್ತದೆ.

ಲಾವಣಿ ಹಾಡುಗಳನ್ನು ಪುರುಷ ಮತ್ತು ಸ್ತ್ರೀಯರು ಬೇಧಭಾವ ಇಲ್ಲದೇ ಇವರು ಹೆಚ್ಚಾಗಿ ಬಳಸುವ ಕಂಚಿನ ಗಂಗಾಳ ನಗಾರಿ ವಾದ್ಯ ಬಾರಿಸುತ್ತಾ ಹಾಡುತ್ತಾರೆ. ದೈವಿ ಪುರುಷರಾದವರ ಚರಿತ್ರೆಯನ್ನು ಲಾವಣಿಯ ದಾಟಿಯಲ್ಲಿ ಹಾಡುವರು. ಅಲ್ಲದೆ ವೀರ ಪುರುಷರು ಮತ್ತು ಮನರಂಜನಾತ್ಮಕ ಸಂದರ್ಭದಲ್ಲಿ ಲಾವಣಿಗಳನ್ನು ಬಳಸಿರುವುದು ಕಂಡುಬರುತ್ತದೆ. ಲಂಬಾಣಿಗರು ಬಳಸುವ ಲಾವಣಿಗಳಲ್ಲಿ ಪ್ರಮುಖವಾದವುಗಳೆಂದರೆ ''ನಸಲೋ ಸಾಳಾ, ಬಾಂಗಳೋ ಕುಕಡೋ, ''ಡಬ್ಬಲ್ ಮಿಂಡಕಿ'' ಇನ್ನು ಮುಂತಾದವುಗಳನ್ನು ಲಾವಣಿಗಳ ದಾಟಿಯಲ್ಲಿ ಹಾಡುತ್ತಾರೆ.

ಲಂಬಾಣಿಗರು ನುಡಿಗಟ್ಟುಗಳ ಬಳಕೆಯಲ್ಲಿ ತಮ್ಮದೇ ಛಾಪನ್ನು ಮೂಡಿಸಿದ್ದಾರೆ. ಇವುಗಳು ನುಡಿಗಟ್ಟುಗಳು ಅವರ ಸೂಕ್ಷ್ಮ ಪ್ರಜ್ಞೆಗೊಂದು ಹಿಡಿದ ಕೈದೀವಿಗೆಯಾಗಿ ಪರಿಣಮಿಸಿವೆ. ತಮಗೆ ಉಂಟಾದ ನೋವು-ನಲಿವು ಸುಖ-ಸಂತೋಷಗಳನ್ನು ಅಭಿವ್ಯಕ್ತಿಸುವ ವೇಳೆ ಒಮ್ಮೊಮ್ಮೆ ಅಭಿಪ್ರಾಯ ಮಂಡನೆ ಮತ್ತು ಅಸಹಾಯಕತೆ ವ್ಯಕ್ತಪಡಿಸುವಾಗಲೂ ಜೊತೆಗೆ ಕೋಪವ್ಯಕ್ತಪಡಿಸುವ ಸಂದರ್ಭದಲ್ಲಿ ನುಡಿಗಟ್ಟುಗಳನ್ನು ಬಳಸುವುದು ಗಮನಾರ್ಹ.

ಅಂತೆಯೇ ಲಂಬಾಣಿಗರು ತಮ್ಮ ಜೀವಿತಾವಧಿಯಲ್ಲಿ ನುಡಿಗಟ್ಟುಗಳ ಬಳಕೆಯೂ ತುಂಬಾ ಮಹತ್ವದ ಸಂಗತಿಯಾಗಿದೆ. ಇವರು ಮೂಲತಃ ಅನಕ್ಷರಸ್ಥರಾದರೂ ಒಬ್ಬರಿಂದ ಒಬ್ಬರಿಗೆ ಸಾಗಿ ಬಳಕೆಯಲ್ಲಿರುವ ನುಡಿಗಟ್ಟುಗಳು ತನ್ನದೇ ಆದ ಮಾಹಿತಿಯನ್ನು ಒಳಗೊಂಡಿದೆ ಎನ್ನಬಹುದು.

ನುಡಿಗಟ್ಟುಗಳಲ್ಲಿ ''ಮಾತಿಗೆ ಮಾತು ಎದೆಗೊಂದುಲಾತು'' ಎಂದು ಬಳಸಿದ ವಾಕ್ಯವನ್ನು ಲಂಬಾಣಿಗರು' ವಾತೇಮ್ ವಾತ್, ಛಾತ್ತಿಮ್ ಏಕ್ ಲಾತ್'' ಎಂದು ಬಳಸಿದ್ದು ಸಹಜೋಕ್ತಿಯಾದರೂ ಅದರಲ್ಲಿ ಅಡಗಿರುವ ವ್ಯಂಗ್ಯ ಮೇಲ್ನೋಟಕ್ಕೆ ಕಂಡರು ಇತರರೊಂದಿಗೆ ಮಾತಾಡುವಾಗ ಸೂಕ್ಷ್ಮ ಗ್ರಹಿಕೆ ಇರಬೇಕೆಂದು ವಿಶಾಲಾರ್ಥದಲ್ಲಿ ತಿಳಿಸುತ್ತದೆ. ಈ ನುಡಿಗಟ್ಟುಗಳ ವಿವರಣೆಯಲ್ಲಿ ತುಂಬಾ ವಿಸ್ತೃತವಾದ ಪ್ರಸಂಗಗಳು ಅಡಗಿರುತ್ತವೆ. ಕೆಲವೊಮ್ಮೆ ಬಹುತೇಕರು ಸಂಭಾಷಣೆಯ ವೇಳೆ ಹಾಗೂ ಭಾಷಣದ ಸಂದರ್ಭದಲ್ಲಿ ನುಡಿಗಟ್ಟುಗಳನ್ನು ಬಳಸುವುದು ಕಂಡುಬರುತ್ತದೆ. ಲಂಬಾಣಿ ಜನಾಂಗದವರು ನುಡಿಗಟ್ಟುಗಳ ಬಳಕೆಯನ್ನು ಯಾವ ಸಂದರ್ಭದಲ್ಲಿ ಬಳಸುತ್ತಾರೆ. ಅದರ ಮಹತ್ವ ಎಂತಹದೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

೫.೫. ಆರ್ಥಿಕ ಸ್ಥಿತ್ಯಂತರಗಳು

ಲಂಬಾಣಿಗರಲ್ಲಿ ಆದ ಆರ್ಥಿಕ ಸ್ಥಿತ್ಯಂತರಗಳು ಅವರ ಸಾಹಿತ್ಯಕ್ಕೆ ನೀಡಿದ ಮಹತ್ವದ ಕೊಡುಗೆಯಾಗಿವೆ. ಮೂಲತಃ ವ್ಯಾಪಾರಿಗಳಾಗಿದ್ದರೆಂದು ಇವರ ಪ್ರಾಚೀನ ಚರಿತ್ರೆಯ ಜನಜೀವನ ವಿವರಣೆಯಿಂದಲೇ ತಿಳಿದುಬರುತ್ತದೆ. ಇಂದಿಗೂ ಈ ಜನಾಂಗದವರು ಶ್ರಮಜೀವಿಗಳಾಗಿ ಒಂದಲ್ಲ ಒಂದು ರೀತಿಯಿಂದ ತಮ್ಮ ಬದುಕನ್ನು ಕಟ್ಟಿಕೊಂಡಿರುವುದು ಗಮನಾರ್ಹ. ಪೂರ್ವದಲ್ಲಿ ಲವಣವನ್ನು ವ್ಯಾಪಾರ ಮಾಡುತ್ತಿದ್ದರು. ಆದ್ದರಿಂದ ಇವರನ್ನು ಲಮಾಣಿಗರು ಎಂದು ಕರೆಯುತ್ತಿದ್ದರೆಂಬುದರ ಬಗ್ಗೆ ದಾಖಲೆಗಳಿವೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಬಹುತೇಕ ಗ್ರಾಮಗಳಲ್ಲಿ ಈಚೆಗೆ ಇಡೀ ಪ್ರಪಂಚವೇ ಜಿಲ್ಲೆಯ ಸಂಡೂರು, ಹೊಸಪೇಟೆ ಕಡೆಗೆ ಮುಖ ಮಾಡಿ ನೋಡುವಂತಾಗಿದೆ. ಇದಕ್ಕೆ ಕಾರಣ ಗಣಿಗಾರಿಕೆ. ಗಣಿಗಾರಿಕೆಯಿಂದ ಈ ಜಿಲ್ಲೆಯ ಚರಿತ್ರೆಯೇ ಬದಲಾಗಿದೆ. ಈ ಗಣಿಗಾರಿಕೆಯಲ್ಲಿ ತೊಡಗಿಸಿಕೊಂಡ ಪ್ರಮುಖ ಕಾರ್ಮಿಕರೆಂದರೆ ಗುಡ್ಡ-ಗಾಡು ಪ್ರದೇಶದಲ್ಲಿ ವಾಸವಾಗಿದ್ದ ಲಂಬಾಣಿಗರೆನ್ನಬಹುದಾಗಿದೆ.

ಗುಡ್ಡ-ಬೆಟ್ಟಗಳಲ್ಲಿ ಪ್ರಾಣ ಭೀತಿಯನ್ನು ಲೆಕ್ಕಿಸದೇ ಈ ಭಾಗದ ಲಂಬಾಣಿಗರು ಗಣಿಗಾರಿಕೆಯಲ್ಲಿ ಕೂಲಿಕಾರ್ಮಿಕರಾಗಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಇಡೀ ದೇಶಕ್ಕೆ ಆರ್ಥಿಕ ವರಮಾನ ನೀಡಿರುವ ಅಂಶ ಜನಜನಿತವಾಗಿದೆ. ಇದರಿಂದ ಇವರ ಆರ್ಥಿಕ ಸ್ಥಿತಿ ಮಾತ್ರ ತುಂಬಾ ಶೋಚನೀಯವಾದುದಾಗಿದೆ.

ಲಂಬಾಣಿ ಸಮುದಾಯವು ಗಣಿಗಾರಿಕೆಗಿಂತ ಪೂರ್ವದಲ್ಲಿ ಕೆಲವರು ಗಣಿಗಾರಿಕೆ ವಹಿವಾಟು ಹೆಚ್ಚಾಗಿ ನಡೆಯುತ್ತಿದ್ದರೂ ತಮ್ಮ ಸಾಂಪ್ರದಾಯಿಕವಾದ ಕೃಷಿಗಾರಿಕೆಯಾದ ಕಬ್ಬಿನ ಕಟಾವು ಹಾಗೂ ಇತರೆ ಕೂಲಿ ಕೆಲಸ ಮಾಡುತ್ತಿದ್ದರು. ತಾವು ವಾಸಿಸುತ್ತಿದ್ದ ಊರನ್ನ ಬಿಟ್ಟು ಅಲೆಮಾರಿಗಳಾಗಿ ತೆರಳಿ ನಿರ್ವಾತ ಪ್ರದೇಶ ಇಲ್ಲವೆ ಆಯಾ ಹೊಲಗದ್ದೆಗಳ ಹಾಸುಪಾಸಲ್ಲೇ ಗುಡಿಸಲುಗಳನ್ನು ನಿರ್ಮಿಸಿಕೊಂಡು ತಮ್ಮ ಕುಟುಂಬದ ಆರ್ಥಿಕ ಹೊರೆಯನ್ನು ವೃದ್ಧಿಸಿಕೊಳ್ಳುವರು. ಶ್ರಮಜೀವಿಗಳಾದ ಇವರು ಇತರೆ ಜನಾಂಗದವರಿಗಿಂತಲೂ ತುಂಬಾ ಭಿನ್ನ ಎಂಬುದರಲ್ಲಿ ಸಂದೇಹವಿಲ್ಲ.

ಪುರುಷರಿಗಿಂತ ಹೆಚ್ಚಾಗಿ ಲಂಬಾಣಿ ಸ್ತ್ರೀಯರು ಸ್ವಾವಲಂಬಿಗಳಾಗಿ ಬದುಕುತ್ತಿರುವುದು ಈ ಜಿಲ್ಲೆಯಲ್ಲಿ ಯಥೇಚ್ಛವಾಗಿ ಕಂಡುಬರುತ್ತದೆ. ಮೂಲತಃ ಗುಡ್ಡ-ಬೆಟ್ಟಗಳ ಸಂಪರ್ಕ ಇರುವ ಲಂಬಾಣಿ ಹೆಣ್ಣೂ ಮಕ್ಕಳ ಕಟ್ಟಿಗೆ ಕಡಿದು ತಂದು ತಮಗೆ ಬೇಕಾದಷ್ಟನ್ನು ಉರುವಲಿಗಾಗಿ ಬಳಸಿ ಇನ್ನುಳಿದದ್ದನ್ನು ಪಟ್ಟಣ ಪ್ರದೇಶಗಳಿಗೆ ತೆರಳಿ ವ್ಯಾಪಾರ ಮಾಡಿಕೊಂಡು ತಮ್ಮ ಬದುಕನ್ನು ಸಾಗಿಸುವರು. ಈ ರೀತಿಯ ಕೆಲಸವನ್ನು ಸಂಡೂರು, ಕೂಡ್ಲಿಗೆ ತಾಲೂಕಿನ, ರಾಜಾಪುರ, ಕೆಲ್ಲಹಳ್ಳಿ, ಬಾವಳ್ಳಿಯ ಕೆಲಸವನ್ನು, ಸಂಡೂರು ತಾಲೂಕಿನ ರಾಜಾಪುರ, ಕಲ್ಲಹಳ್ಳಿ, ಬಾವಲ್ಲಿ ಮತ್ತು ಹುಣಸೆಹಟ್ಟಿ ಗ್ರಾಮಗಳ ಜನರು ಈಗಲೂ ಪೂರೈಸುತ್ತಿದ್ದಾರೆ. ಇದರೊಂದಿಗೆ ಬೆಟ್ಟಗುಡ್ಡಗಳಲ್ಲಿ ಅಲೆದಾಡುವ ಇವರ ಕಣ್ಣಿಗೆ ಬಿದ್ದ ಹಣ್ಣುಗಳಾದ ಕಾರೆಹಣ್ಣು, ಕೌವಳಿಹಣ್ಣು, ಬಿಕ್ಕೆಹಣ್ಣು ಜನರಿದ್ದಲ್ಲಿಗೆ ತಂದು ಮಾರಾಟ ಮಾಡುವುದು ಲಂಬಾಣಿ ಜನಾಂಗದ

ಮಹಿಳೆಯರು. ಇದರಿಂದ ಬಂದ ಆದಾಯದಿಂದ ತಮ್ಮ ಕುಟುಂಬ ನಿರ್ವಹಿಸುವರು. ಇವರು ಪುಟ್ಟಿಯಲ್ಲಿ ಉರಿದ ನೆಲಗಡಲೆ ಇಟ್ಟುಕೊಂಡು ದಾರಿಯಲ್ಲಿ ಹೋಗುವ ಪ್ರಯಾಣಿಕರಿಗೆ ಮಾರಾಟ ಮಾಡುತ್ತಾರೆ. ಈ ಕಾರ್ಯವನ್ನು ಹೆಚ್ಚಾಗಿ ವೃದ್ಧ ಲಂಬಾಣಿ ಮಹಿಳೆಯರು ಮಾಡುವರು.

ಇತ್ತೀಚಿಗೆ ಲಂಬಾಣಿ ಜನಸಮುದಾಯ ಹೆಚ್ಚಾಗಿ ಕೃಷಿಗಾರಿಕೆಯನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಇದರಲ್ಲಿ ಹೆಚ್ಚಾಗಿ ಭಾಗಿಯಾಗಿರುತ್ತಾರೆ. ತಮ್ಮ ಗ್ರಾಮಗಳಲ್ಲಿ ವಾಸಕ್ಕೆ ಮನೆ ಇದ್ದರೂ ಸಹ ಕಬ್ಬಿನ ಕಾರ್ಖಾನೆಯ ಸ್ಥಳಗಳಿಗೆ ತೆರಳಿ ಗದ್ದೆಗಳ ಅಸುಪಾಸಿನಲ್ಲೇ ಗುಡಿಸಲುಗಳನ್ನು ನಿರ್ಮಿಸಿಕೊಂಡು ಕಬ್ಬುಕಟಾವು ಮಾಡಲು ತೆರಳುತ್ತಾರೆ. ಈ ಕೆಲಸಕ್ಕಾಗಿ ಕುಟುಂಬದ ಎಲ್ಲಾ ಸದಸ್ಯರು ವಲಸೆ ಹೋಗುವುದು ಈಗಲೂ ಜಿಲ್ಲೆಯ ಹಲವಾರು ತಾಂಡಗಳಲ್ಲಿ ಕಾಣಬಹುದಾಗಿದೆ.

ಲಂಬಾಣಿಗರು ಆರ್ಥಿಕ ಸ್ಥಿತಿ ಸುಧಾರಣೆಗಾಗಿ ಶ್ರಮದಾಯಕ ಹುದ್ದೆಗಳನ್ನು ಮಾಡಲು ಹಿಂಜರಿಯುತ್ತಿದ್ದಿಲ್ಲ. ಇದರಿಂದ ಕೂಲಿಗಾಗಿ ಹೋಗಿ ಆಹಾರ ಧಾನ್ಯವನ್ನು ಅಂದಿನ ದಿನಕ್ಕೆ ಬಳಸಿಕೊಂಡ ಜನಪದರ ಗೀತೆಯೊಂದು ಅವರ ಆರ್ಥಿಕ ಮಟ್ಟ ಹೇಗಿತ್ತು ಎಂದು ತಿಳಿಸುತ್ತದೆ. ಅವರು ಬೀಸುವ ಹಾಡಿನಲ್ಲಿ ಈ ಪ್ರಸಂಗದಲ್ಲಿ ವ್ಯಕ್ತವಾಗಿದೆ.

''ಹಮಾರೆತಾಂಡೇಮ ಜೋಗಿ ಆಯೋಭಬಾಯ|
ಸೇರ ಪಸೋಲಾವೂಂಚು ಪೇರನ ಖಾಂವೂಚು|
ಜೋಗೀರೆ ಝೋಳಿ ಕಾಯಿ ಘಾಲೂ ಬಾಯಿ|''

ಈ ಹಾಡಿನಿಂದ ತಿಳಿದುಬರುವ ಅಂಶವೆಂದರೆ ಮನೆಯ ಮುಂದೆ ಭಿಕ್ಷೆಗಾಗಿ ಬಂದ ಜೋಗಿಗೆ ಏನನ್ನು ಹಾಕಬೇಕು, ತಾನೇ ಕೂಲಿ ಕೆಲಸ ಮಾಡಿ ಬಂದು ದವಸ ಧಾನ್ಯ ತಂದು ಉಪಜೀವಿಸುತ್ತಿದ್ದೇವೆ. ಇಂತಹದರಲ್ಲಿ ಜೋಗಿಯ ಜೋಳಿಗೆಗೆ ಏನು ಹಾಕಲಿ ಎಂದು ನಿಸ್ಸಹಾಯಕಳಾಗಿ ಪ್ರತಿಕ್ರಿಯೆ ನೀಡಿದ್ದು ವ್ಯಕ್ತವಾಗುತ್ತದೆ. ಇದೇ ರೀತಿ ಲಂಬಾಣಿಗರು ದಯನೀಯ ಸ್ಥಿತಿಯಲ್ಲಿ ಬದುಕುತ್ತಿದ್ದಾರೆಂದು ತಿಳಿದುಬರುತ್ತದೆ.

ಲಂಬಾಣಿ ಮಹಿಳೆಯರು ಸಹ ಪುರುಷರಿಗೆ ಜೊತೆಗೆ ನಿಂತು ತಮ್ಮ ಜೀವನದಲ್ಲಿ ಸ್ವಾವಲಂಬಿಗಳಾಗಿ ಬದುಕಿರುವರು. ಅದರಲ್ಲೂ ಅವರು ತೊಡುವ ವಿಶಿಷ್ಟ ತೊಡುಗೆಯೇ ಅವರಿಗೆ ಆದಾಯ ತಂದು ಕೊಡುವ ಪ್ರಮುಖ ಉದ್ಯೋಗವಾಗಿ ಪರಿಣಮಿಸಿದೆ. ಇದು ಜಿಲ್ಲೆಯ ಸಂಡೂರು ತಾಲೂಕಿನಲ್ಲಿ ಕಾಣಸಿಗುತ್ತದೆ. ಈಚೆಗೆ ಅವರು ವಾಸಿಸುವ ಗುಡ್ಡಗಳ ಖನಿಜ ಮಾರಾಟ ವಹಿವಾಟು ಹೆಚ್ಚಾಗಿದ್ದಕ್ಕೆ ಆ ಉದ್ಯೋಗದಲ್ಲಿ ಇಡೀ ಕುಟುಂಬದ ಸದಸ್ಯರು ತೊಡಗಿ ತಮ್ಮ ತಮ್ಮ ತಾಂಡಗಳನ್ನು ಮಹಡಿ ಮನೆಗಳಾಗಿ ಮಾಡಿಕೊಂಡು ಸ್ಥಿತಿವಂತರ ಸಾಲಲ್ಲಿ ತಾವು ಸೇರಿಕೊಂಡಿದ್ದಾರೆ. ಈ ಎರಡು ಉದ್ಯೋಗಗಳು ಅವರ ತಲಾ ಆದಾಯ ಗುರುತಿಸಿಕೊಟ್ಟಿರುವುದು ಗಮನಾರ್ಹ. ಅವುಗಳ ಕುರಿತಾಗಿ ಹೆಚ್ಚಿನ ವಿವರಣೆ ನೀಡಬೇಕಾದುದು ಅಗತ್ಯವಾಗಿದೆ.

ಮೂಲತಃ ವಲಸಿಗರಾಗಿ ಬಂದ ಈ ಜನ ಸಮುದಾಯದ ಮಹಿಳೆಯರ ಉಡುಗೆ ಇತರೆ ಮಹಿಳೆಯರಿಗಿಂತ ತುಂಬಾ ಭಿನ್ನವಾಗಿತ್ತು. ಇವರು ತಮ್ಮ ಪಾಡಿಗೆ ತಾವು ಕಷ್ಟದಾಯಕವಾದ ಕೆಲಸಗಳನ್ನು

ಮಾಡುತ್ತಾ ಉಳಿದ ಸಮಯದಲ್ಲಿ ತಮ್ಮಲ್ಲಿದ್ದ ಕಸುತಿ ಕೆಲಸವಾದ ಲಂಗ-ಕುಪ್ಪಸವನ್ನು ತಾವೇ ಹೊಲಿದುಕೊಳ್ಳುವುದು ತುಂಬಾ ವಿಶೇಷವಾಗಿತ್ತು. ಇದು ಈ ಜನಾಂಗದ ಪ್ರತಿಯೊಬ್ಬರು ರೂಢಿಸಿಕೊಂಡು ಬರುತ್ತಿದ್ದಾರೆ. ಆಗ ಇಡೀ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಸಂಡೂರು ಭಾಗದಲ್ಲಿ ಇನ್ನು ರಾಜರು ಆಳ್ವಿಕೆ ನಡೆಸುತ್ತಿದ್ದರು. ಅವರಲ್ಲಿ ಘೋರ್ಪಡೆ ಸಂಸ್ಥಾನದವರು. ಈ ರಾಜರಲ್ಲಿ ಪ್ರಮುಖ ವ್ಯಕ್ತಿಯಾದ ಎಂ.ವೈ.ಘೋರ್ಪಡೆಯವರು ಲಂಬಾಣಿ ಜನರಲ್ಲಿ ಹುದುಗಿರುವ ಕಸೂತಿ ಕಲೆಯಿಂದ ಉತ್ತಮ ಆದಾಯವನ್ನು ಪಡೆಯಬಹುದೆಂದು ಅರಿತು ಕಸೂತಿ ಕಲೆಗೆ ಪ್ರೋತ್ಸಾಹ ನೀಡಿದನು. ಸಂಡೂರು ಸುತ್ತಮುತ್ತ ಹಳ್ಳಿಗಳಲ್ಲಿ ವಾಸವಾದ ಲಂಬಾಣಿ ಜನರಿಗೆ ಕಸೂತಿ ಕೇಂದ್ರವನ್ನು ಸ್ಥಾಪಿಸಿ ಅವರಿಂದ ತುಂಬಾ ಭಿನ್ನವಾದ ಉಡುಗೆ-ತೊಡುಗೆಯನ್ನು ರಚನೆ ಮಾಡಲು ಕಾರಣಕರ್ತನಾದನು. ಮಹಿಳೆಯರ ಸ್ವಾವಲಂಬಿ ಬದುಕು ಹಸನಾಯಿತಾದರೂ ಈ ಉದ್ಯೋಗದಿಂದ ದೇಶ ವಿದೇಶಕ್ಕೆ ಇವರು ಕಸೂತಿ ಕಲೆಯನ್ನು ಪರಿಚಯಿಸಿಕೊಟ್ಟರು. ಅಲ್ಲದೆ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಂಡರು. ಕಸೂತಿ ಕಲೆಯ ಉಡುಗೆ ತಯಾರಿಕೆಗಾಗಿ ಬೇಕಾದ ಕಚ್ಚಾಸಾಮಗ್ರಿಯನ್ನು ತಂದು ನೀಡಿ ಅವರ ವಿಶಿಷ್ಟಶೈಲಿಯ ಬಟ್ಟೆಗಳನ್ನು ರಫ್ತು ಮಾಡಿ ವಿದೇಶದವರು ಈ ಕಡೆ ಕಣ್ಣಾಯಿಸುವಂತೆ ಮಾಡಿದರು.

ಈಗಲೂ ಕೂಡ್ಲಿಗೆ, ಹಗರಿಬೊಮ್ಮನಹಳ್ಳಿ, ಹಡಗಲಿ, ಸಿರಿಗುಪ್ಪ, ಬಳ್ಳಾರಿ, ಹೊಸಪೇಟೆ ಸಂಡೂರು ಭಾಗದ ಕೆಲವು ಗ್ರಾಮಗಳಲ್ಲಿ ಲಂಬಾಣಿಗರು ವಾಸವಾದ ತಾಂಡಾಗಳೇ ಪ್ರತ್ಯೇಕವಾಗಿವೆ. ಅವರು ವಾಸವಾದ ತಾಂಡಾಗಳ ಹೆಸರು ಮತ್ತೊಂದು ಇದ್ದರೂ ಸಹ ತಮ್ಮ ಮನೆತನದ ಸದಸ್ಯರ ಹೆಸರುಗಳನ್ನು ಆಯಾ ಗ್ರಾಮಗಳಿಗೆ ಇಟ್ಟಿರುವುದು ಕಾಣಸಿಗುತ್ತದೆ. ಅವುಗಳಲ್ಲಿ ಹೊಸಪೇಟೆ ತಾಲೂಕಿನ ರಾಜಾಪುರ, ಕಲ್ಲಹಳ್ಳಿ, ಸುಶೀಲಾ ನಗರ, ಜೈಸಿಂಗ್ ಪುರ ಮುಂತಾದವುಗಳನ್ನು ಗಮನಿಸಬಹುದಾಗಿದೆ. ಈ ರಾಜ ಮನೆತನದವರು ಕಷ್ಟ ಸಹಿಷ್ಣುಗಳಿಗೆ ಸಹಾಯ ಮಾಡಿ ಅವರ ಪ್ರತಿಭೆಗೆ ಮಾನಮನ್ನಣೆಗಳನ್ನು ತಂದು ಕೊಟ್ಟಿದ್ದಾರೆ. ಈ ಕಲಾಕುಸುರಿಯಿಂದ ಅರಳಿದ ಉಡುಗೆ ತೊಡುಗೆ ಕೈಚೀಲಗಳು ಮೇಲೊದಿಕೆ ಇನ್ನೂ ಮುಂತಾದವುಗಳನ್ನು ಇಂದು ಪ್ರಾಶ್ಚಾತ್ಯ ಸ್ತ್ರೀಯರು ಬಳಸುತ್ತಾರೆ. ಈಗ ಈ ವಿಶಿಷ್ಟ ಬಟ್ಟೆ ಐತಿಹಾಸಿಕ ಪ್ರಸಿದ್ಧ ಹಂಪಿಯಲ್ಲಿ ಮಾರಾಟದ ವಸ್ತುಗಳಲ್ಲಿ ಮಹತ್ವದ ಬೇಡಿಕೆ ಬಂದಿದೆ. ಈ ರಾಜ ಮನೆತನದವರು ಹೊಸಪೇಟೆಯಲ್ಲಿ ಕಸೂತಿ ಕಲಾ ಕೇಂದ್ರದ ಮಾರಾಟ ಮಳಿಗೆಯನ್ನು ಸ್ಥಾಪಿಸಿರುವುದು ಗಮನಾರ್ಹ.

ರಾಜ ಮನೆತನದವರು ರಾಜಕೀಯ ಪ್ರವೇಶ ಆದ ಮೇಲಂತೂ ಈ ಕಲೆಗೆ ಹೆಚ್ಚಿನ ಬೇಡಿಕೆ ಬಂತು. ಆದರೆ ಇವರ ಆಳ್ವಿಕೆಗೆ ಅಂತ್ಯವಾದ ಬಳಿಕವೇ ಕೇವಲ ತಮ್ಮದಾಗಿಯೇ ಉಡುಗೆ-ತೊಡುಗೆಗಳನ್ನು ರಚಿಸಿಕೊಳ್ಳುತ್ತಿದ್ದರು. ಇದು ಹಲವಾರು ವರ್ಷಗಳ ಬಳಿ ಅಂದರೆ ಜಾಗತೀಕರಣವು ಲಂಬಾಣಿಗರ ತಾಂಡಗೂ ಬಂದ ಬಳಿಕವೇ ಸಾಂಪ್ರದಾಯಿಕ ಉಡುಗೆ-ತೊಡುಗೆಯನ್ನು ತೊಡುವುದನ್ನು ಬಿಟ್ಟು ಲಂಬಾಣಿ ಸಮುದಾಯದ ಹೆಂಗಸರು ಇತರರಂತೆ ಸೀರೆ ಕುಪ್ಪಸ ತೊಡಲು ಆರಂಭಿಸಿದ್ದಾರೆ. ಇದರಿಂದ ಅಪಾರ ಮನ್ನಣೆಗಳಿಸಿದ ಕಸೂತಿ ಕಲೆಗೆ ಬೇಡಿಕೆ ಕಡಿಮೆ ಆಯಿತಾದರೂ ಈಗಲೂ ಅದರಿಂದ ತಯಾರಿಸಿದ ಈ ರೀತಿಯ ಉಡುಗೆಗಳು ಅಲ್ಲಲ್ಲಿ

ಮಾರಾಟ ಮಾಡಲಾಗುತ್ತದೆ. ತುಂಬಾ ವಿಭಿನ್ನವಾಗಿ ಕಾಣುವ ಈ ಉಡುಗೆಯನ್ನು ಇಂದು ಪ್ರವಾಸಿಗರು ಕೊಂಡುಕೊಳ್ಳುತ್ತಾರೆ.

ಇದೇ ರೀತಿ ಇಡೀ ದೇಶ-ವಿದೇಶದಲ್ಲಿ ಪಾರಮನ್ನಣೆಗೆ ಪಾತ್ರವಾದ ಈ ಕಲೆಯಿಂದ ಸಂಡೂರು ಪ್ರಸಿದ್ಧ ಪಡೆದುಕೊಂಡಂತೆ ಈ ಭಾಗದ ನಿಸರ್ಗ ತಾಣದಲ್ಲಿರುವ ಖನಿಜಾಂಶವು ತುಂಬಾ ಗುಣಮಟ್ಟದ್ದಾಗಿದೆ ಎಂದು ಸಾಬೀತಾದ ಕೂಡಲೇ ಅವರ ರಫ್ತು ಕಾರ್ಯವು ತುಂಬಾ ಬಿರುಸಾಗಿ ಸಾಗಿತು. ಈ ವಹಿವಾಟಿಗೆ ಆರಂಭ ಮಾಡಿದವರು ಮೊದಲು ಘೋರ್ಪಡೆ ರಾಜಮನೆತನದವರು. ಇವರುಗಳ ರಾಜಕೀಯ ಹಿನ್ನಡೆಯಾದ ಬಳಿಕವೇ ಸಂಡೂರು ಭಾಗದಲ್ಲಿ ಅತ್ಯಂತ ಕೆಳಸ್ಥರದ ವ್ಯಕ್ತಿಯೂ ರಾಜಕೀಯ ಪ್ರವೇಶ ಮಾಡಿ ಅವರ ನಿರಂಕುಶ ಪ್ರಭುತ್ವಕ್ಕೆ ಕೊಡಲಿಪೆಟ್ಟು ನೀಡಿದರು.

ಕಳೆದ ಹಲವು ವರ್ಷಗಳ ಹಿಂದೆ ಗಣಿಗಾರಿಕೆ, ಕೃಷಿ ವಹಿವಾಟಿಗೆ ದೊರಕಿದ ಸ್ಥಾನ ಈ ಭಾಗದ ಯಾವುದೇ ವ್ಯವಹಾರಕ್ಕೆ ದೊರಕಿಲ್ಲ. ದೂರದ ಊರುಗಳಿಗೆ ತೆರಳಿ ಕೆಲಸ ಮಾಡುತ್ತಿದ್ದ ಲಂಬಾಣಿಗರು ತಮ್ಮ ಊರಲ್ಲಿ ಇರುವ ಇಡೀ ಬದುಕನ್ನು ಜೊತೆಯಾಗಿಯೇ ಹಂಚಿಕೊಳ್ಳುತ್ತಿದ್ದ ಗುಡ್ಡಗಳನ್ನು ಬಗೆಯಲು ಯಂತ್ರಗಳ ಸಹಾಯದಿಂದ ಬೆಟ್ಟ-ಗುಡ್ಡಗಳನ್ನು ಕೊರೆದು ಖನಿಜವನ್ನು ಬೇರೆಡೆಗೆ ಸಾಗಿಸಿದರು.

ಈ ಕಷ್ಟದಾಯಕ ಕೆಲಸಗಳನ್ನು ದೃಢಕಾಯದ ಲಂಬಾಣಿಗರನ್ನು, ಅಲ್ಲದೆ ಸಂಡೂರು ತಾಲೂಕು ಪಕ್ಕದ ಹೊಸಪೇಟೆ ಹಾಗೂ ಇತರೆ ಹಳ್ಳಿಗಾಡಿನ ಮತ್ತು ಪಟ್ಟಣದ ಕೆಲವು ಕೂಲಿ ಕಾರ್ಮಿಕರಷ್ಟೇ ಅಲ್ಲಿ ಸ್ಥಿತಿವಂತರು. ಗಣಿಗಾರಿಕೆಯಲ್ಲಿ ತೊಡಗಿಸಿಕೊಂಡರು. ಕಷ್ಟಪಟ್ಟು ಬಿಸಿಲಿಗೆ ಮೈಹೊಡ್ಡಿ ಮಣ್ಣನ್ನು ಅಗೆದು ಖನಿಜಾಂಶದ ಪುಡಿಯನ್ನು ವಿದೇಶಕ್ಕೆ ರವಾನೆ ಮಾಡಲು ಬಳ್ಳಾರಿ ಜಿಲ್ಲೆ ಲಂಬಾಣಿಗರ ಶ್ರಮವು ಅಡಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಈ ಗಣಿಗಾರಿಕೆಯಿಂದ ಸಾಂಪ್ರದಾಯಿಕ ಕಸೂತಿ ಕಲೆ ಹಾಗೂ ಕೃಷಿಗಾರಿಕೆಯತ್ತ ಮನಸ್ಸು ಸಹ ಮಾಡಲಿಲ್ಲ. ಈ ಸಮುದಾಯವರು ಗಣಿಗಾರಿಕೆಗಾಗಿ ಬೃಹತ್ ಗಾತ್ರದ ಯಂತ್ರಗಳು ಬಾಲಂಗೋಚಿ ತರಹದ ಲಾರಿಗಳ ಆಗಮನದಿಂದ ಪ್ರಕೃತಿಯೊಂದಿಗೆ ಬೆರೆತು ಜೀವಿಸುವ ಲಂಬಾಣಿಗರು ಒಂದು ಕ್ಷಣ ದಂಗಾದರು. ಪ್ರಾಕೃತಿಕ ಸಿರಿಯಾದ ಗುಡ್ಡವನ್ನು ರಕ್ಷಿಸಿಕೊಂಡು ಬರುತ್ತಿದ್ದ ಲಂಬಾಣಿ ಸಮುದಾಯದವರಿಗೆ ಸರ್ಕಾರವು ಅದರ ಬಳಕೆಗಾಗಿ ಅನುಮತಿ ನೀಡದೆ ಉಳ್ಳವರಿಗೆ ಗಣಿಗಾರಿಕೆ ನಡೆಸಲು ಅನುಮತಿ ನೀಡಿತು. ತಾವು ಇದ್ದ ಸ್ಥಳದಲ್ಲೇ ತಮ್ಮ ಕುಟುಂಬದವರಿಗೆ ಕೆಲಸ ದೊರಕಿಲಿಲ್ಲ ಎಂಬ ಮನೋಭಾವನೆಯಿಂದ ಗಣಿಗಾರಿಕೆ ಕಾರ್ಯದಲ್ಲಿ ತಮ್ಮನ್ನು ತಮ್ಮ ಕುಟುಂಬದ ಸದಸ್ಯರನ್ನು ತೊಡಗಿಸಿಕೊಂಡರು. ಈ ಹಿಂದೆ ಕೃಷಿಕೆಲಸಕ್ಕೆ ಹೋದಾಗ ತಮ್ಮ ಮಕ್ಕಳನ್ನು ಕರೆದುಕೊಂಡು ಹೋದಂತೆ ಈ ಕಾರ್ಯದಲ್ಲೂ ತಮ್ಮ ಚಿಕ್ಕ ಮಕ್ಕಳನ್ನು ಬಳಸಿಕೊಂಡು ಆದಾಯ ಮಿತಿ ಹೆಚ್ಚಿಸಿಕೊಂಡರು. ಇದರಿಂದ ಶಾಲೆಗೆ ಹೋಗಿ ಅಭ್ಯಾಸ ಮಾಡುವ ಮನಸ್ಸು ಆ ಬಾಲ ಕಾರ್ಮಿಕ ಮಾಡಲಿಲ್ಲ. ಆದ್ದರಿಂದಲೇ ಶಿಕ್ಷಣದಿಂದ ಲಂಬಾಣಿ ಜನಾಂಗದ ಸಂತತಿ ಮತ್ತೊಮ್ಮೆ

ವಂಚಿತರಾದರು. ಅಲ್ಲಲ್ಲಿ ಸರ್ಕಾರ ಟೆಂಟ್ ಶಾಲೆಗಳನ್ನು ಆರಂಭಿಸಿತಾದರೂ ಗಳಿಕೆಗಾಗಿನಿಂತ ಆಸೆಯು ಮುಂದೆ ಕಲಿಸುವ ಆಸೆಗೆ ಮಣ್ಣೆರಚಿದರು.

ಇದರೊಂದಿಗೆ ಕೆಲವು ತಾಂಡಾದ ಜನರು ಹಟ್ಟಿಗೆ ದೂರದ ಸ್ಥಳದಲ್ಲಿ ಕಳ್ಳಬಟ್ಟಿ ವ್ಯಾಪಾರ ಮಾಡುವ ಕಾಯಕವನ್ನು ಸರ್ಕಾರ ಕಿತ್ತುಕೊಂಡಿತು. ಕಾರಣ ಈ ಸಾರಾಯಿಯಿಂದ ಅನೇಕ ಬಡಕುಟುಂಬವು ಬಲಿಯಾಗುವುದನ್ನು ಗಮನಿಸಿ, ಕಳ್ಳಬಟ್ಟಿಯನ್ನು ಸಂಪೂರ್ಣವಾಗಿ ನಿಷೇಧ ಮಾಡಿದ್ದರಿಂದ ಕೆಲಸ ಬಿಟ್ಟು ಅಲೆಯುವ ಆ ಒಂದು ಗುಂಪು ಸಹ ಗಣಿಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈ ಕಾರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

ಗಣಿಗಾರಿಕೆಯ ಕಾರ್ಯವೂ ತುಂಬಾ ಚುರುಕಾಗಿ ಸಾಗಿದ್ದರಿಂದಲೇ ತಾಂಡಗಳ ಜನರೆಲ್ಲ ಬಡತನದ ಸ್ಥಿತಿಯಿಂದ ಪಾರಾದರೂ ಸಹ ಅವರ ಜನ ಜೀವನವು ತುಂಭಾ ಭಯಾನಕವಾಗಿತ್ತು. ಗಣಿಗಾರಿಕೆಯು ಶ್ರಮದಾಯಕವಾದ ಕೆಲಸ ಬೆಟ್ಟಗುಡ್ಡಗಳ ಹಾಸುಪಾಸಿನಲ್ಲಿ ಜೀವಿಸುವ ಜನರಾದ ಲಂಬಾಣಿಗರನ್ನು ಬಳಸಿಕೊಂಡರು. ಗಣಿ ಉದ್ಯಮದಾರರು ಇವರಿಗೆ ಕೆಲಸ ನೀಡಿದರಾದರೂ ಅರವಿಗೆ ಹತ್ತು ಹಲವು ರೋಗಗಳಿಗೆ ತುತ್ತಾಗುವಂತೆ ಅಲ್ಲದೆ ಅವರನ್ನು ಹಗಲಿರುಳು ದುಡಿಮೆಯಲ್ಲಿ ಕಲ್ಲುಕೀಳುವ, ಒಡೆದು ಪುಡಿಮಾಡುವ ಕೆಲಸದಲ್ಲಿ ಬಳಸಿಕೊಂಡರು. ಅಷ್ಟೇ ಅಲ್ಲ ಗಣಿಯನ್ನು ದೂರದ ಪಟ್ಟಣದವರೆಗೂ ಸಾಗಿಸಲು ಇದೇ ಜನಾಂಗದ ಜನರನ್ನೇ ಲಾರಿಯ ಚಾಲಕ ಮತ್ತು ಕ್ಲೀನರ್‌ಗಳನ್ನಾಗಿ ಉಪಯೋಗಿಸಿಕೊಂಡರು.

ಲಾಭದ ಗಳಿಕೆಯ ಗುಂಗಿನಲ್ಲಿ ಲಾರಿಗಳನ್ನು ಬೆಟ್ಟಗುಡ್ಡಗಳ ಇಳಿಜಾರು ಮತ್ತು ಏರು ಇಲ್ಲವೇ ಕಡಿದಾದ ಸ್ಥಳಗಳಲ್ಲಿ ಚಾಲನೆ ಮಾಡುವಾಗ ಅದೆಷ್ಟೋ ಅಮಾಯಕ ಜನರು ಬಲಿಯಾಗಿರುವುದು ತುಂಬಾ ಶೋಚನೀಯ ಸಂಗತಿಯೇ ಸರಿ. ಈ ಕಾಮಗಾರಿಗೆ ತಮ್ಮ ವೃದ್ದರನ್ನಲ್ಲದೆ (ಹಸುಳೆಗಳನ್ನು) ಬಾಲಕರನ್ನು ಗಣಿಗಾರಿಕೆಯಲ್ಲಿ ತೊಡಗಿಸಿಕೊಂಡು ಶಿಕ್ಷಣದಿಂದ ವಂಚಿತರಾಗುವಂತೆ ಮಾಡಿದರು.

ಈ ಉದ್ಯಮವು ಲಂಬಾಣಿ ಜನರನ್ನು ದಿಢೀರ್ ಶ್ರೀಮಂತರನ್ನಾಗಿ ಮಾಡಿದರೂ ಸಹ ಅವರ ಯೋಗಕ್ಷೇಮಕ್ಕಾಗಿ ಕಂಪನಿಯ ಮಾಲೀಕರು ಕಿಂಚಿತ್ತು ಕಾಳಜಿ ವಹಿಸಿಲ್ಲದಿರುವುದು ಕಂಡುಬಂದಿತು. ಇವರ ನಿತ್ಯ ಕಾಯಕದಿಂದ ಸೆಟೆದುನಿಂತ ಬೆಟ್ಟಗುಡ್ಡಗಳ ಮಾರಣಹೋಮ ಅಂದರೆ ನೈಸರ್ಗಿಕ ಸಂಪತ್ತು ಇಳಿಮುಖವಾಯಿತು. ಈ ಗಣಿಗಾರಿಕೆಯಿಂದ ನಿಸರ್ಗ ತಾಣದಲ್ಲಿ ವಾಸವಾಗಿದ್ದ ಪಕ್ಷಿಸಂಕುಲ, ಪ್ರಾಣಿಗಳು ಭಯ ಬೀತಿಗೊಂಡು ಬೇರೆಡೆಗೆ ಸೇರಿಕೊಂಡವು. ಗುಡ್ಡಗಳನ್ನು ಕೊರೆಯಲು ಬೀಕರವಾದ ಯಂತ್ರಗಳನ್ನು ತರಿಸಿ, ಹಗಲು ರಾತ್ರಿ ಎನ್ನದೇ ಕಾಯಕ ಪೂರೈಸಿದವರಲ್ಲಿ ಲಂಬಾಣಿಗರ ಸೇವೆಯು ಅನುಪಮವಾದದ್ದು ಎಂದರೆ ತಪ್ಪಾಗಲಿಕ್ಕಿಲ್ಲ.

ಉಳ್ಳವರು ಶಿವಾಲಯ ಮಾಡುವರು ಎನ್ನುವಂತೆ ಸರ್ಕಾರದ ಹಾಗೂ ರಾಜಕಾರಣಿಗಳ ಕುಮ್ಮಕ್ಕಿನಿಂದ ಗಣಿಗಾರಿಕೆಗೆ ಬೆಟ್ಟಗುಡ್ಡಗಳನ್ನು ವಶಪಡಿಸಿಕೊಂಡು ಕಾಡನ್ನು ನಾಡಗಿಸಲು ಸಜ್ಜಾದವರು ಬುಡಕಟ್ಟು

ವಾಸಿಗಳಾದ ಲಂಬಾಣಿಗರೆನ್ನಬಹುದು. ಇವರ ಈ ಕಾರ್ಯವೈಖರಿಯನ್ನು ಗಮನಿಸದೆ ಇತರೆ ಸಮೂಹವು ತಮ್ಮ ಊರಲ್ಲಿದ್ದ ಕೃಷಿಗಾರಿಕೆ ಬಿಟ್ಟು ಬಂದು ಗಣಿ ಪ್ರದೇಶಗಳಲ್ಲಿ ಟೆಂಟ್‌ಗಳನ್ನು ಕಟ್ಟಿಕೊಂಡೆ ಬದುಕಿರುವುದು ತುಂಬಾ ವಿಪರ್ಯಾಸವೇ ಸರಿ. ಆ ಕಾಮಗಾರಿಗಾಗಿ ರಾಜ್ಯದ ಮೂಲೆ ಮೂಲೆಯ ಜನರು ಸಂಡೂರು ಭಾಗಕ್ಕೆ ವಲಸೆ ಬಂದರು ಎಂದರೆ ತಪ್ಪಾಗಲಿಕ್ಕಿಲ್ಲ. ದುಡಿಮೆಯ ಗಳಿಕೆಗಾಗಿ ಇವರೂ ಸಹ ತಮ್ಮ ಜನರನ್ನು ಗಣಿಗಾರಿಕೆಗಾಗಿ ಬಲಿಯಾಗಿಸಿರುವುದಕ್ಕೆ ಗಣಿಯ ಬೆಟ್ಟ ಗುಡ್ಡಗಳು ಸಾಕ್ಷಿಯಾಗಿ ನಿಂತಿರುವುದು ದೂಳಿನ ಕಣಗಳಾಗಿ ಸಾಗಿ ಹೋಗಿವೆ. ಕಷ್ಟದಾಯಕವಾದ ಕಾಯಕದಲ್ಲಿ ತಮ್ಮ ಇಡೀ ಕುಟುಂಬವನ್ನು ತೊಡಗಿಸಿಕೊಂಡು ಉಳ್ಳವರನ್ನೇ ಶ್ರೀಮಂತರನ್ನಾಗಿಸಲು ಶ್ರಮಪಟ್ಟರು. ಇದರಿಂದ 'ಬಡವ ನೀನು ಮಡಗಿದಂಗಿರು' ಎನ್ನುವಂತೆ ಬಡವ ಎಷ್ಟೇ ದುಡಿದರೂ ಬಲ್ಲಿದವನಾಗಲಿಲ್ಲ ಎನ್ನಬಹುದು.

ಇದೇ ಸರಿಸುಮಾರಲ್ಲಿ ಗಣಿಗಾರಿಕೆಯ ವಹಿವಾಟು ಯಥೇಚ್ಛವಾಗಿ ಸಾಗುವುದನ್ನು ಸರ್ಕಾರವು ಗುರುತಿಸಿ, ಹಂತ ಹಂತವಾಗಿ ಸರ್ವೇ ಕಾರ್ಯ ಮಾಡಿ ಲೋಕಾಯುಕ್ತರ ಅಪಾರ ಪರಿಶ್ರಮದಿಂದ ಈ ಹಿಂದೆ ಇದ್ದ ನಿಸರ್ಗ ಸೌಂದರ್ಯವನ್ನು ಮರುಕಳಿಸಲು ಕಾರಣಕರ್ತರಾದರು. ದೇಶ-ವಿದೇಶಗಳೇ ಬೆಚ್ಚಿ ಬೀಳುವಂತೆ ಗಣಿಗಾರಿಕೆಯ ವಹಿವಾಟನ್ನು ದಿಢೀರನೆ ಸ್ಥಗಿತಗೊಳಿಸುಲು ಲೋಕಾಯುಕ್ತರ ವರದಿಯಿಂದಲೇ ಸಾಧ್ಯವಾಯಿತೆಂದರೆ ತಪ್ಪಾಗಲಿಕ್ಕಿಲ್ಲ. ಗಣಿದೂಳಿನ ಆರ್ಭಟಕ್ಕೆ ಇವರು ನೀಡಿದ ವರದಿಯೇ ಪ್ರಮುಖ ಅಸ್ತ್ರವಾಗಿ ಪರಿಣಮಿಸಿತು.

ಅಕ್ರಮ ಗಣಿಗಾರಿಕೆಯ ಏರಿಯಾಗಳನ್ನು ಅದರಲ್ಲೂ ಜಿಲ್ಲೆಯ ಪ್ರಭಾವ ರಾಜಕಾರಣಿಗಳ ಹಗಲು ದರೋಡೆಯ ಕಾರ್ಯಕ್ಕೆ ಬ್ರೇಕ್ ಹಾಕಿದ ಬಳಿಕವೇ ಈ ಕಾಮಗಾರಿಗಾಗಿ ಹರಸಿ ಬಂದ ಜನರು ತಮ್ಮ ತಮ್ಮ ಊರುಗಳತ್ತ ಸಾಗಿದರು. ಪುನಃ ಮೂಲೆ ಸೇರಿದ ರಂಟೆ ಕುಂಟೆಗಳನ್ನು ಹೊರತೆಗೆದು ಕೃಷಿಗಾರಿಕೆಗಾಗಿ ಅವುಗಳನ್ನು ಬಳಸಿಕೊಂಡರು. ಇದರಿಂದ ಈಗ ಬೆಟ್ಟಗುಡ್ಡಗಳು ನೈಸರ್ಗಿಕ ಸೌಂದರ್ಯದಿಂದ ನಳನಳಿಸಿ ಮತ್ತೊಮ್ಮೆ ತಮ್ಮಲ್ಲಿ ವಾಸವಾಗಿದ್ದ ಪಕ್ಷಿ-ಪ್ರಾಣಿಗಳಿಗೆ ಆಶ್ರಯ ನೀಡಲು ಕೈಬೀಸಿ ಕರೆಯುವಂತೆ ಹಸಿರು ಮೈತಾಳಿದೆ.

ಸರ್ಕಾರದ ಲೋಕಾಯುಕ್ತ ಹಾಗೂ ತನಿಖಾಧಿಕಾರಿಗಳ ದಿಟ್ಟತನದಿಂದ ಈ ಭಾಗದಲ್ಲಿ ಅಕ್ರಮಗಣಿಗಾರಿಕೆ ಜೊತೆಗೆ ಸಕ್ರಮ ಗಣಿಗಾರಿಕೆಗೂ ಅನುಮತಿಯನ್ನು ನೀಡದೆ ಮಾಡಿದ ಕಾರ್ಯವನ್ನು ನಿಜಕ್ಕೂ ಹಲವಾರು ಬುದ್ಧಿಜೀವಿಗಳು ಹಾಗೂ ವಿರೋಧಪಕ್ಷದವರು, ಈ ಗಣಿಗಾರಿಕೆಯಲ್ಲಿ ತೊಡಗಿರುವವರು ಸ್ವಾಗತಿಸಿದರು.

ಗಣಿಗಾರಿಕೆಯ ಕಪ್ಪು ಹಣದ ಭರಾಟೆಯಿಂದ ಜಿಲ್ಲೆಗೆ ಬಾರದ ಐಷರಾಮಿ ಜಗತ್ತು ಜಿಲ್ಲೆಯನ್ನು ಹರಸಿ ಬಂದಿತು. ಖಾಸಗಿ ಬ್ಯಾಂಕುಗಳು ಸ್ಥಾಪನೆಗೊಂಡು ಈಗ ಸೊರಗಿ ಮುಚ್ಚುವ ಸ್ಥಿತಿಗೆ ತಲುಪಿವೆ. ಹಿಂದೊಮ್ಮೆ ತುಂಬಾ ಚಾಕಚಕ್ಯತೆಯಿಂದ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದ ಗ್ರಾಹಕ ಮನೆಯಲ್ಲಿ ಸೇರಿದ್ದಾನೆ. ಇದ್ದದ್ದರಲ್ಲಿ ತಾನು ಕೊಂಡುಕೊಂಡ ಆಭರಣಗಳನ್ನು ಅಡವಿಟ್ಟು ಜೀವನ ಸಾಗಿಸುವ

ಹಂತಕ್ಕೆ ಈ ಭಾಗದ ಬಡ ಕೂಲಿಕಾರ್ಮಿಕರು ಅದರಲ್ಲೂ ಲಂಬಾಣಿ ಸಮುದಾಯವು ಹೊರತಾಗಿಲ್ಲ ಎನ್ನಬಹುದು.

ಈ ಎಲ್ಲದರ ನಡುವೆ ಜಿಲ್ಲೆಯ ಹಲವು ತಾಂಡಾಗಳ ಜನರು ಈಗಾಗಲೇ ಕೇವಲ ಬೆರಳೆಣಿಕೆಯ ಜನರು ಸರ್ಕಾರಿ ಉದ್ಯೋಗಗಳನ್ನು ಪಡೆದಿರುವುದು ಸಂತಸದ ಸಂಗತಿಯೇ ಸರಿ. ಶಿಕ್ಷಣದಿಂದ ವಂಚಿತರಾದರೂ ಸಹ ವಿದ್ಯಾರ್ಥಿಗಳಲ್ಲಿ ಅಚಲ ನಿರ್ಧಾರದಿಂದ ಸರ್ಕಾರಿ ಹುದ್ದೆಗಳನ್ನು ಪಡೆದು ಪಟ್ಟಣ ಸೇರಿ ಬದುಕುತ್ತಿರುವವರ ಸಂಖ್ಯೆ ಕೇವಲ ಕೆಲವರೆಂದರೆ ತಪ್ಪಾಗಲಿಕ್ಕಿಲ್ಲ. ಈ ಕುರಿತಾಗಿ ಜಿಲ್ಲೆಯ ಬಹುತೇಕ ಗ್ರಾಮಗಳಿಗೆ ತೆರಳಿದಾಗ ಒಂದು ಹಟ್ಟಿಯಲ್ಲಿ ಒಬ್ಬ ಶಿಕ್ಷಕ ಇಲ್ಲವೆ ಕಾರ್ಮಿಕರ ಜೊತೆಗೆ ಅದಾವುದೇ ಕಂಪನಿಯಲ್ಲಿ ವೃತ್ತಿ ತರಬೇತಿಯ ಕಾರಣದಿಂದ ಕೆಲಸಗಿಟ್ಟಿಸಿಕೊಂಡಿರುವುದು ಕ್ಷೇತ್ರ ಅಧ್ಯಯನದಿಂದ ತಿಳಿದುಬಂದಿದೆ. ಇದರೊಂದಿಗೆ ಕೇಂದ್ರ ಸರ್ಕಾರಗಳು ಜಾರಿಗೆ ತಂದ ಗ್ರಾಮ ಪಂಚಾಯ್ತಿ ಆಡಳಿತದಿಂದ ಹಲವು ರಾಜಕಾರಣಿಗಳು ಈ ಜನಾಂಗದಲ್ಲಿ ಆಯ್ಕೆ ಆಗಿ ದೇಶಸೇವೆ ಮಾಡುತ್ತಿರುವುದು ಗಮನಾರ್ಹ. ಇಷ್ಟಾದರೂ ತೀರ ಹಿಂದುಳಿದ ಈ ಜನಾಂಗದವರ ಅಭಿವೃದ್ಧಿಗಾಗಿ ಇವರ ಸಚಿವರು ಕಾರ್ಯಕೈಗೊಳ್ಳುತ್ತಿಲ್ಲ.

ಲಂಬಾಣಿ ಸಮುದಾಯದಿಂದಲೂ ಪ್ರಮುಖ ರಾಜಕಾರಣಿಗಳು ಸಾಲಲ್ಲಿದ್ದರೂ ತಮ್ಮ ಹಟ್ಟಿಗಳ ಹೀನ ಬದುಕನ್ನು ಹಸನು ಮಾಡಿಕೊಳ್ಳುತ್ತಿಲ್ಲ. ಕೇವಲ ಸ್ವಾರ್ಥ ಲಾಲಸೆಗೆ ಬಲಿಯಾಗಿ ತಮ್ಮ ತಮ್ಮಗಳ ಅಭಿವೃದ್ಧಿಗೆ ನಿಂತಿದ್ದಾರೆ. ಕೇವಲ ರಾಜಕಾರಣಿಗಳಷ್ಟೆ ಅಲ್ಲ ಈಚೆಗೆ ಈ ಜನಾಂಗದಲ್ಲಿ ಧಾರ್ಮಿಕ ಗುರು ವನ್ನು ನೇಮಿಸಿಕೊಂಡಿದ್ದಾರೆ. ಲಂಬಾಣಿಗರು ಈ ಹಿಂದೆ ಬಳಸುತ್ತಿದ್ದ ಹೆಸರನ್ನೇ ತಮ್ಮ ಧಾರ್ಮಿಕ ಗುರುವಿಗೆ ಇಟ್ಟಿದ್ದಾರೆ. ಬಂಜಾರ ಜನಾಂಗದ ಬಳಕೆಯಿಂದ ಲಂಬಾಣಿಗರ ಗುರು ಈ ಜನಸಮೂಹದ ಒಗ್ಗೂಡಿಕೆಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ.

ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಮಾತ್ರ ಈ ಜನಸಮುದಾಯವು ಒಗ್ಗಟ್ಟಿನ ಕೊರತೆಯಿಂದ ಅಭಿವೃದ್ಧಿಯಿಂದ ವಂಚಿತರಾಗುತ್ತಿದ್ದಾರೆಂದರೆ ತಪ್ಪಾಗಲಿಕ್ಕಿಲ್ಲ. ಇಡೀ ರಾಜ್ಯದಲ್ಲೇ ಪ್ರಭಾವಿ ರಾಜಕಾರಣಿಗಳ ತೆಕ್ಕೆಯಲ್ಲಿ ಬೆಳೆದು ಪರಿಶಿಷ್ಟ ಪಂಗಡದಲ್ಲಿದ್ದ ಇವರುಗಳು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿ ಹಲವು ಉನ್ನತ ಹುದ್ದೆಗಳನ್ನು ಪಡೆದರೂ ಸಹ ಕೇವಲ ಬೆರಳೆಣಿಕೆಯಷ್ಟೇ ಜನರು ಕಾಣಸಿಗುತ್ತಾರೆ.

ಜಿಲ್ಲೆಯ ಹಲವು ಗ್ರಾಮಗಳಲ್ಲಿ ಗ್ರಾಮ ಪಂಚಾಯಿತಿಯ ಸ್ಥಾನಗಳಲ್ಲಿ ತಾವು ನೆಲೆನಿಂತರೂ ಜೆಸ್ಕಾಂ, ಸೈನಿಕರಾಗಿ, ಪೋಲಿಸ್, ಸಾರಿಗೆ, ಅಬಕಾರಿ, ಶಿಕ್ಷಣ, ಕಂದಾಯ ಹಾಗೂ ದೇಶ ಸೇವೆ ಸಲ್ಲಿಸುವವರು ಜಿಲ್ಲೆಯಲ್ಲೂ ಅಲ್ಲಲ್ಲಿ ಕಾಣಸಿಗುತ್ತಾರೆ. ಇವರೆಲ್ಲರ ನಿತ್ಯ ಸೇವೆಯೂ ಸಹ ಆರ್ಥಿಕಾಂಶಕ್ಕೆ ನೀಡಿದ ಕೊಡುಗೆಯನ್ನು ಗುರುತಿಸಬಹುದಾಗಿದೆ.

ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕನಿಂದ ಹಿಡಿದು ಮುಖ್ಯಗುರುಗಳು ಅಲ್ಲದೆ ಉನ್ನತ ಅಧಿಕಾರಿಗಳಲ್ಲದೇ ಕಾರ್ಮಿಕರಾಗಿಯೂ ಕಾಣಸಿಗುತ್ತಾರೆ. ಶಿಕ್ಷಣಾಧಿಕಾರಿ ಜೊತೆಗೆ ಉನ್ನತ ಶಿಕ್ಷಣವನ್ನು ಪೂರೈಸಿ ಕಾಲೇಜು

ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲೂ ತಮ್ಮ ಕೊಡುಗೆ ನೀಡುತ್ತಿದ್ದಾರೆ. ಇವರಲ್ಲಿ ಜಿಲ್ಲೆಯಿಂದ ನೀಡಿದ ಕೊಡುಗೆ ಕಡಿಮೆ ಎನ್ನಬಹುದು. ಕೇವಲ ಶಿಕ್ಷಕರ ಸಂಖ್ಯೆ ಹೆಚ್ಚಾಗಿ ಕಂಡುಬಂದರೂ ಈಚೆಗೆ ಸಂಶೋಧನಾ ವಿಷಯ ಗಳಲ್ಲೂ ಜನಾಂಗದ ಕೆಲವು ವ್ಯಕ್ತಿಗಳು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅನ್ಯ ಜಿಲ್ಲೆಗೆ ಹೋಲಿಸಿದರೆ ಈ ಕ್ಷೇತ್ರದ ಬೆಳವಣಿಗೆಯು ಕಡಿಮೆ ಎನ್ನಬಹುದಾಗಿದೆ.

ಪೊಲೀಸ್ ಇಲಾಖೆಯಲ್ಲಿ ಪೇದೆಯಿಂದ ಹಿಡಿದು ಜಿಲ್ಲಾಧಿಕಾರಿಯಾದ ಉನ್ನತ ಹುದ್ದೆಗಳಿಗೆ ಈಚೆಗೆ ಈ ಸಮುದಾಯ ಕೆಲವರನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬಹುದಾಗಿದೆ. ಉನ್ನತ ಹುದ್ದೆಗಳಾದ ಪೊಲೀಸ್ ಸೂಪರಿಡೆಂಟ್ ಹುದ್ದೆಯನ್ನು ಬೇರೆ ಜಿಲ್ಲೆಯ್ಲಲಿ ಕಾಣಸಿಕ್ಕರೂ ಸಹ ಇಲ್ಲಿ ಕಡಿಮೆ ಎನ್ನಬಹುದು. ಆದರೆ ಸಬ್ ಇನ್ಸ್‌ಪೆಕ್ಟರ್‌ಗಳ ಸಂಖ್ಯೆ ಅಂದರೆ ಅನ್ಯ ಜಿಲ್ಲೆಯವರು ಇಲ್ಲಿಗೆ ಬಂದು ಸೇವೆ ಸಲ್ಲಿಸಿ ಈ ಜಿಲ್ಲೆಗೆ ಸೀಮಿತರಾದವರನ್ನು ಸಹ ಗುರುತಿಸಿದಾಗ ಮಾತ್ರ ಈ ಇಲಾಖೆಗೆ ಲಂಬಾಣಿ ಜನರ ಕೊಡುಗೆ ಏನೆಂದು ತಿಳಿಯುತ್ತದೆ.

ಅಲ್ಲದೆ ಸಾರಿಗೆ ಇಲಾಖೆಯಲ್ಲಿ ಕೇವಲ ಬೆರಳೆಣಿಕೆಯ ಉದ್ಯೋಗಿಗಳನ್ನು ಕಾಣಬಹುದಾಗಿದೆ. ಈ ಇಲಾಖೆಯಲ್ಲಿ ಉನ್ನತ ಅಧಿಕಾರಿಗಳು ಆಗಿ ಹೋಗಿರುವುದು ಬಹಳ ಕಡಿಮೆ ಎಂಬುದು ಕ್ಷೇತ್ರ ಅಧ್ಯಯನ ದಿಂದ ತಿಳಿದು ಬಂದ ಸಂಗತಿಯಾಗಿದೆ.

ಕಂದಾಯ ಇಲಾಖೆಯಲ್ಲಿ ಬ್ಯಾಂಕ್ ಕ್ಷೇತ್ರದಲ್ಲಿಯೂ ಸಹ ಜವಾನನಿಂದ ಹಿಡಿದು ಉನ್ನತಾಧಿಕಾರಿಗಳು ಆಗಿ ಹೋಗಿದ್ದಾರೆ. ಆದರೆ ಇವರ ಸಂಖ್ಯೆ ಮಾತ್ರ ಇತರೆ ಜನಾಂಗದವರಿಗೆ ಹೋಲಿಸಿದರೆ ಕಡಿಮೆ ಎನ್ನಬಹುದು.

ರಾಜಕೀಯ ಕ್ಷೇತ್ರದಲ್ಲಿ ಸಲ್ಲಿಸುವ ಸೇವೆಯು ಜಿಲ್ಲೆಗೆ ಅಪಾರ ಕೊಡುಗೆ ನೀಡಿದೆ. ಗ್ರಾಮ ಪಂಚಾಯ್ತಿ ಮಟ್ಟದ ಸದಸ್ಯರಿಂದ ಅಧ್ಯಕ್ಷಸ್ಥಾನವು, ಹಾಗೇನೆ ಶಾಸಕರಿಂದ ಸಚಿವರಾಗಿರುವವರು ತುಂಬಾ ಈಚೆಗೆ ಎನ್ನಬಹುದು. ಆದರೆ ರಾಜ್ಯದ ರಾಜಕಾರಣದಲ್ಲಿ ಪ್ರಸಕ್ತ ಸಾಲಿನಲ್ಲಿ ಈ ಜನಾಂಗವನ್ನು ಪ್ರತಿನಿಧಿಸುವವರು ಕೇವಲ ಶಾಸಕರೊಬ್ಬರನ್ನೇ ಗಮನಿಸಬಹುದಾಗಿದೆ.

ಹೀಗೆ ಇನ್ನುಳಿದ ಹತ್ತು ಹಲವು ಇಲಾಖೆಗಳೊಂದಿಗೆ ಅಲ್ಲಲ್ಲಿ ದೇಶಕ್ಕೆ ಸೇವೆ ಸಲ್ಲಿಸುವವರನ್ನು ಕಾಣಬಹುದಾಗಿದೆ. ಈ ಇಲಾಖೆಗಳಲ್ಲಿ ಕೇವಲ ಕೆಲವೇ ಜನರನ್ನು ಮಾತ್ರ ಗುರುತಿಸಬಹುದಾಗಿದೆ. ಇವರಲ್ಲಿ ಇನ್ನೂ ಹೆಚ್ಚಿನ ರೀತಿಯ ಜನರು ಸಂಬಂಧಿಸಿದ ಇನ್ನಿತರೆ ಇಲಾಖೆಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಕಾರ್ಯ ಮಾಡಬೇಕಾಗಿದೆ. ಕೇವಲ ಕೆಲವು ಇಲಾಖೆಗಳಲ್ಲಿ ಲಂಬಾಣಿ ಸಮುದಾಯದವರೂ ಆರ್ಥಿಕ ಮಟ್ಟವನ್ನು ಗುರುತಿಸಿಕೊಳ್ಳುತ್ತಿದ್ದಾರೆ ಎನ್ನಬಹುದು.

ಲಂಬಾಣಿ ಸಮುದಾಯವು ಇಂದು ಜಿಲ್ಲೆಯಲ್ಲಿ ಹಲವಾರು ಇಲಾಖೆಗಳಲ್ಲಿ ಸೇರ್ಪಡೆಯಾದರೂ ಸಹ ಸಂಘಟನಾತ್ಮಕ ಮನೋಭಾವನೆ ತೀರಾ ಈಚೆಗೆ ಅವರಲ್ಲಿ ಕಂಡುಬರುತ್ತಿದೆ. ಬಂಜಾರ ಎಂಬ ಜಾತಿ ಸೂಚಕವನ್ನು ಇಟ್ಟುಕೊಂಡೆ ಸಂಘ-ಸಂಸ್ಥೆಗಳು ಜನಾಂಗದ ಅಭಿವೃದ್ಧಿಗಾಗಿ ಇನ್ನು ಶ್ರಮಿಸಬೇಕಾಗಿದೆ.

ಸಂಘ-ಸಂಸ್ಥೆಗಳಲ್ಲಿ ಈ ಸಮುದಾಯದವರು ತೊಡಗಿಸಿಕೊಳ್ಳುವುದು ಕಡಿಮೆಯಾಗಿದೆ. ಈಗಾಗಲೇ ಹಲವು ಇಲಾಖೆಗಳಲ್ಲಿರುವ ಶಿಕ್ಷಕರಿಂದ ಹಿಡಿದು ಉನ್ನತಾಧಿಕಾರಿಗಳು ಕೇವಲ ತಮ್ಮ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವುದರೊಂದಿಗೆ ಹಳ್ಳಿಗಾಡಿನ ತಾಂಡಗಳಲ್ಲಿರುವ ಜನರನ್ನು ಜಾಗೃತಿಗೊಳಿಸಿ ಅವರನ್ನು ಮುಖ್ಯವಾಹಿನಿಗೆ ತರಬೇಕಾದ ಕಾರ್ಯವು ಅತಿ ತುರ್ತಾಗಿ ಆಗಬೇಕಾಗಿದೆ.

ಅಲ್ಲದೆ ಕೇವಲ ದುಂದು ವೆಚ್ಚವನ್ನೇ ಮಾಡಿ ಬದುಕುವ ಹಲವರು ಕೆಟ್ಟ ಹವ್ಯಾಸಗಳಿಗೆ ಅಂದರೆ ಮದ್ಯಪಾನಕ್ಕೆ ದಾಸರಾಗಿ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಪ್ರತಿಯೊಬ್ಬರು ಹಳ್ಳಿಗಾಡಿಗೆ ತೆರಳಿ ಅವರನ್ನು ಜಾಗೃತರಾಗಿಸುವ ಕಾರ್ಯ ಮಾಡಬೇಕಾಗಿದೆ. ಅಲ್ಲದೆ, ತಾಂಡಗಳ ಜನರಲ್ಲಿ ಆಯಾ ಕುಟುಂಬದವರು ಮಾಡುತ್ತಿರುವ ಸಂಸಾರಕ್ಕೆ ಅತಿ ಬೇಗನೆ ಅಂದರೆ ವೈವಾಹಿಕ ಕಾರ್ಯಕ್ಕಾಗಿ ವಯಸ್ಸಿನ ಪರಿಮಿತಿಯನ್ನು ವಿಸ್ತರಿಸಿಕೊಳ್ಳಬೇಕಾಗಿದೆ. ಅತಿ ಚಿಕ್ಕ ವಯಸ್ಸಿನಲ್ಲಿ ತಮಗೆ ಖರ್ಚುವೆಚ್ಚ ಕಡಿಮೆ ಮಾಡುವ ನಿಟ್ಟಿನಲ್ಲಿ ಮಾಡುವ ವಿವಾಹ ಕಾರ್ಯಗಳು ಕಡಿಮೆ ಮಾಡಬೇಕಾಗಿದೆ.

ಜಿಲ್ಲೆಯ ಬಹುತೇಕ ತಾಂಡಗಳಲ್ಲಿ ಕಡಿಮೆ ವಯಸ್ಸಿನಲ್ಲಿ ವಿವಾಹ ಮಾಡಿರುವುದು ಕಾಣಸಿಗುತ್ತದೆ. ಇದರೊಂದಿಗೆ ಇವರ ಜನಾಂಗದ ಗುರುಗಳ ಮಾರ್ಗದರ್ಶನದಂತೆ ಖಡ್ಡಾಯವಾಗಿ ಪ್ರತಿಯೊಂದು ತಾಂಡಗಳಲ್ಲಿ ಶಿಕ್ಷಣ ಪ್ರಸರಣ ಕಾರ್ಯ ಮಾಡಿದಾಗ ಮಾತ್ರ ಈ ಜನಾಂಗವು ಇತರೆ ಮುಂದುವರಿದ ಜನಾಂಗಗಳ ಸಾಲಿಗೆ ಸೇರುವುದು ಸಾಧ್ಯ ಎನ್ನಬಹುದಾಗಿದೆ. ಆದುದರಿಂದ ಘನ ಸರ್ಕಾರವು ಲಂಬಾಣಿ ಸಮುದಾಯದವರಿಗೆ ಹೆಚ್ಚಿನ ಆಸಕ್ತಿಯನ್ನು ತೋರಿಸಿ ಲಂಬಾಣಿಗರ ಶಿಕ್ಷಣ, ಆರೋಗ್ಯ, ಆರ್ಥಿಕ, ಸಾಮಾಜಿ, ಧಾರ್ಮಿಕ ಮತ್ತು ರಾಜಕೀಯ ಸ್ಥಿತ್ಯಂತರಗಳಿಗೆ ಅನುವು ಮಾಡಿಕೊಟ್ಟರೆ ನೀಜವಾಗಿಯೂ ಲಂಬಾಣಿ ಸಮುದಾಯವು ಇತರೆ ಮುಂದುವರಿದ ಜನಾಂಗಗಳ ಸಾಲಿಗೆ ಸೇರುವುದು ಸಾಧ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಖಂಡೋಬಾ ಪಿ.ಕೆ., **ಕರ್ನಾಟಕದ ಲಂಬಾಣಿಗಳು,** ೧೯೯೧, ಪು.೪೫

೨. ನಾಯಕ ಡಿ.ಬಿ., **ಲಂಬಾಣಿ ಜನಪದ ಸಾಹಿತ್ಯ,** ೨೦೦೩, ಪು.೩೩

೩. ಅದೇ, ಪು.೩೫

೪. ಖಂಡೋಬಾ ಪಿ.ಕೆ., **ಪೂರ್ವೋಕ್ತ,** ೧೯೯೧, ಪು.೧೫೨ ೧೫೩

೫. ಗಂಗ್ಯಾನಾಯ್ಕ, **ಲಂಬಾಣಿಗಳು,** ೨೦೦೪, ಪು.೧೮

## ಅಧ್ಯಾಯ ೬

# ಲಂಬಾಣಿ ಜನಾಂಗ ಮತ್ತು ಜಾಗತೀಕರಣ

೬.೧. ಪ್ರಸ್ತಾವನೆ

೬.೨. ಸಾಂಪ್ರದಾಯಿಕ ಉಡುಗೆ ತೊಡುಗೆಗಳಲ್ಲಿ ಬದಲಾವಣೆ

೬.೩. ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು

೬.೪. ಭಾಷೆಯಲ್ಲಾಗುತ್ತಿರುವ ಪರಿವರ್ತನೆ

೬.೫. ಶೈಕ್ಷಣಿಕ ಬದಲಾವಣೆ

೬.೬. ಆರ್ಥಿಕ ಬದಲಾವಣೆ

೬.೭. ರಾಜಕೀಯ ಪರಿವರ್ತನೆ

೬.೮. ಗೋರ್ ಪಂಚಾಯತಿಯಲ್ಲಾಗಿರುವ ಬದಲಾವಣೆಗಳು

೬.೯. ಗೀತಮೇಳ ಮತ್ತು ವಾದ್ಯ ಪರಿಕರಗಳಲ್ಲಿ ಪರಿವರ್ತನೆ

೬.೧೦. ಮತಾಂತರ ಮತ್ತು ಮಕ್ಕಳ ಮಾರಾಟ

೬.೧೧. ಲಂಬಾಣಿಗರ ಸಮಸ್ಯೆ, ಸವಾರು ಮತ್ತು ಪರಿಹಾರಗಳು

೬.೧೨. ಸಮಕಾಲೀನ ಸಮಸ್ಯೆಗಳು ಮತ್ತು ಸವಾಲುಗಳು

೬.೧೩. ಲಂಬಾಣಿಗರ ಅಭಿವ್ಯಕ್ತಿಯಲ್ಲಿ ಸರಕಾರದ ಪಾತ್ರ

೭

# ಲಂಬಾಣಿ ಜನಾಂಗ ಮತ್ತು ಜಾಗತೀಕರಣ

## ೬.೧. ಪ್ರಸ್ತಾವನೆ

ಜಾಗತೀಕರಣ ಎಂಬ ವಿಷಯ ಇಂದು ಬಹು ಮಹತ್ವದ ಚರ್ಚೆ, ವಾಗ್ವಾದ-ಸಂಘರ್ಷಗಳಿಗೆ ಎಡೆಮಾಡಿಕೊಟ್ಟಿದೆ. ಜಗತ್ತಿನ ಬಹುತೇಕ ಹಿಂದುಳಿದ ರಾಷ್ಟ್ರಗಳಲ್ಲಿಯಂತೂ ಈ ವಿಷಯ ಇನ್ನಿಲ್ಲದಂತೆ ಚರ್ಚೆಯಾಗುತ್ತಿದೆ. ಮುಂದುವರೆದ ರಾಷ್ಟ್ರಗಳಿಗೆ ವರದಾನವೆಂಬಂತೆ ಭಾವಿಸಿ ಆತಂಕದ ಛಾಯೆಯಲ್ಲಿರುವ ಕೆಲವು ರಾಷ್ಟ್ರಗಳು, ಜಾಗತೀಕರಣ ಮತ್ತು ಖಾಸಗೀಕರಣಗಳನ್ನು ತಮ್ಮ ಅಭಿವೃದ್ಧಿಯ ತಳಹದಿಗೆ ತಂದುಕೊಳ್ಳಲು ಹಪಹಪಿಸುತ್ತಿವೆ. ಮುಖ್ಯವಾಗಿ ಇಂದು ನಡೆಯುತ್ತಿರುವ ವ್ಯವಹಾರಿಕ ಜಗತ್ತಿನಲ್ಲಿ ಆಧುನಿಕತೆಯ ಪರಿಣಾಮವಾಗಿ ಉಂಟಾಗುತ್ತಿರುವ ಈ ಬಗೆಯ ತಲ್ಲಣಗಳಿಗೆ ಯಾವ ರಾಷ್ಟ್ರಗಳಿಗೂ, ಯಾವ ಚಿಂತಕರಿಗೂ ಏಕತಾನತೆ ಇದ್ದಂತೆ ತೋರುವುದಿಲ್ಲ. ಅಂದರೆ ಜಾಗತೀಕರಣದ ಸ್ವರೂಪ ಮತ್ತು ಮಾದರಿಯ ನಿರ್ದಿಷ್ಟ ಪರಿಕಲ್ಪನೆಯನ್ನು ಏಕಮುಖಿಗೊಳಿಸಲು ಆಗುತ್ತಿಲ್ಲ. ಜಾಗತೀಕರಣ ಎಂದರೇನು? ಇದರ ಸ್ವರೂಪ ಹೇಗಿದೆ. ಇದು ಒಡ್ಡುತ್ತಿರುವ ಸವಾಲು ಆತಂಕಗಳೇನು, ಹಿಂದುಳಿದ ರಾಷ್ಟ್ರಗಳ ಪ್ರತಿಕ್ರಿಯೆ ಎಂಥದ್ದು ಎಂಬೆಲ್ಲಾ ವಿಷಯಗಳನ್ನು ಪ್ರಶ್ನೆಯಲ್ಲಿಯೇ ನೋಡುತ್ತಿರುವುದು ಒಂದೆಡೆಯಾದರೆ; ಈ ಎಲ್ಲಾ ಅಂಶಗಳನ್ನು ಕೇವಲ ರಾಜಕೀಯ ಒಳಗೋಲಿನಲ್ಲಿ ಅಳೆಯುವ ಮತ್ತೊಂದು ಪರಿಕ್ರಮ ಇದೆ. ಆಂತರಿಕ ಮತ್ತು ಅಂತರಾಷ್ಟ್ರೀಯ ನೆಲೆಯಲ್ಲಿ ರಾಜಕಾರಣವೆಂಬುದು ಇಂತಹ ಜಾಗತೀಕರಣ ಮತ್ತು ಖಾಸಗೀಕರಣಗಳ ನೆಲೆಯನ್ನು ಆಹ್ವಾನಿಸುತ್ತಲೇ ಆತಂಕ-ತಲ್ಲಣಗಳನ್ನು ಗೊತ್ತಿದ್ದೂ ಕರೆತಂದಂತಾಗುತ್ತದೆ ಎಂಬ ಗುಮಾನಿಯೂ ಬೌದ್ಧಿಕ ವಲಯದಲ್ಲಿದೆ. ಆದರೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ. ರಾಜಕಾರಣವೆಂಬುದು ದೇಶೀಯ ಬಂಡವಾಳ-ಶ್ರಮವನ್ನು, ಜಾಗತೀಕರಣವಂಬ ಸುಡುವ ಅಂಚಿನ ಮೇಲೆ ಎರಚಿದೆ. ಆ ಮೂಲಕ ಮೈಸುಟ್ಟುಕೊಳ್ಳುತ್ತಿದೆ ಎಂಬ ಆತಂಕ ಮತ್ತೊಂದೆಡೆಯಿದೆ. ಜಾಗತೀಕರಣವೆಂಬ ಈ ಪರಿಕ್ರಮವನ್ನು ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಎರಡು ನೆಲೆಯಲ್ಲಿ ಕಂಡುಕೊಳ್ಳಲಾಗುತ್ತಿದೆ. ಇದನ್ನು ನಮ್ಮಂತಹ

ಹಿಂದುಳಿದ ಪ್ರದೇಶಕ್ಕೆ ವರದಾನವೆಂತಲೂ ಕೆಲವರು ವಾದಿಸುತ್ತಾರೆ. ಹೆಚ್ಚು ಸಂಖ್ಯೆಯಲ್ಲಿ ಇದನ್ನು ವಿರೋಧಿಸ್ತಾರೆ. ಆದರೆ ಜಾಗತೀಕರಣವೆಂಬ ಮಾರಿಯಂತೂ ಈಗಾಗಲೇ ಪ್ರವೇಶಿಸಿ ಆಗಿದೆ. ಇದನ್ನು ಸ್ವೀಕರಿಸುವ ಬಗೆಯಲ್ಲಿ ಲಂಬಾಣಿಗರು ಜಾಣ್ಮೆಯನ್ನು ತೋರಬೇಕಾಗಿದೆಯಷ್ಟೇ.

ಯುರೋಪಿನ ಶ್ರೀಮಂತರಾಷ್ಟ್ರಗಳು ಜಗತ್ತಿನ ಮೂರನೇ ರಾಷ್ಟ್ರಗಳ ಮೇಲೆ ಒತ್ತಾಯಿಸಬಯಸುವ ಆರ್ಥಿಕ ವ್ಯವಸ್ಥೆ ಹಾಗೂ ಅದಕ್ಕೆ ಪೂರಕವಾದ ಜೀವನ ಪದ್ಧತಿ, ನಾಗರಿಕತೆಗಳನ್ನು ಒಳಗೊಂಡ ಒಂದು ಬೃಹತ್ ವ್ಯವಸ್ಥೆಯನ್ನು ಜಾಗತೀಕರಣ ಎಂದು ಕರೆಯಲಾಗುತ್ತದೆ. ಕಾರಣವಾಗಿ ಜಾಗತೀಕರಣದ ಸೂಕ್ಷ್ಮವಾದ ವಿಶ್ಲೇಷಣೆ ಮತ್ತು ವಿರೋಧಗಳು ಹಿಂದುಳಿದ ರಾಷ್ಟ್ರಗಳಿಂದ ಬಂದಿವೆ. ಜಾಗತೀಕರಣವನ್ನು ಅದೊಂದು ವರದಾನವೆಂದು ಸಮರ್ಥಿಸುವ ದೇಶೀ ಚಿಂತಕರ ಬೌದ್ಧಿಕ ದಾರಿದ್ರ್ಯ, ಪೊಳ್ಳು ವೈಚಾರಿಕತೆಗಳೂ ನಮ್ಮಲ್ಲಿ ಲಾಸ್ಯವಾಡುತ್ತಿರುವುದು ಆಶ್ಚರ್ಯವೇ. ಜಾಗತೀಕರಣ ಬಹುಮುಖವಾಗಿ ಆರ್ಥಿಕ ಕ್ಷೇತ್ರಕ್ಕೆ ಸಂಬಂಧಿಸಿದೆಯಾದರೂ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಮೇಲೆಯೂ ಅಗಾಧ ಪರಿಣಾಮವನ್ನು ಮಾಡಿದೆ. ಅಮೇರಿಕಾದಂತ ಶ್ರೀಮಂತ ರಾಷ್ಟ್ರಗಳು ಜಾಗತೀಕರಣದ ನೆಪದಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುವ ಈ ಹೊತ್ತಲ್ಲಿ ಕೆಲವಾರು ರಾಷ್ಟ್ರಗಳು ಈಗಾಗಲೇ ಕಂಬದ ಬಾಹುಗಳಲ್ಲಿ ಬಂಧಿಯಾಗಿವೆ. ಮತ್ತೆ ಕೆಲವು ಆಗುತ್ತಿವೆಯೆಂಬ ಕಾರಣಕ್ಕಾಗಿ ವಿಶ್ವ ಮಾರುಕಟ್ಟೆ ಅಥವಾ ವಿಶ್ವಹಳ್ಳಿ ಎಂಬ ನೆಪವೊಡ್ಡುವುದೊಂದು ಕುಂಟ ನೆಪ ಮಾತ್ರ.

'ವಿಶ್ವಮಾನವರಾಗಬೇಕು' ಎಂಬ ಗ್ಲೋಬಲ್ ಪರಿಕಲ್ಪನೆ ಸಾಹಿತ್ಯಿಕ, ಸಾಂಸ್ಕೃತಿಕ ವಲಯದಲ್ಲಿ ಒಂದು ಕಡೆ ಸಂದೇಶ ಹೊತ್ತು ತರುವಂಥ ಸಂದರ್ಭದಲ್ಲಿಯೇ ಅದನ್ನು ಕಿರಿದಾಗಿರುವ ಜಗತ್ತಿನಲ್ಲಿ ನಿರಾಕರಿಸುತ್ತಲಿದ್ದೇವೆ. ಈ ನಿರಾಕರಣೆಯು 'ವಿಶ್ವಮಾನವತ್ವ'ಕ್ಕೆ ಕುಂದುತಂದರೂ ಜಾಗತೀಕರಣದ ಲೂಟಿಕೋರ ಸಿದ್ಧಾಂತದಲ್ಲಿ ಆ ಜಾಗತೀಕ ಸಂದೇಶಕ್ಕೆ ವಿರೋಧವಾಗಿ ಒಳದಾರಿ ಕಂಡುಕೊಂಡಿದೆಯಾದ್ದರಿಂದ ಈ ಹೊತ್ತು ಆಲೋಚಿಸಬೇಕಾಗಿದೆ.

ಜಾಗತೀಕರಣದ ಚರ್ಚೆಯು ಬಹು ವ್ಯಾಪಕವಾದುದು. ಕಾರಣವಾಗಿ ಇದನ್ನು ನಿರ್ದಿಷ್ಟವಾಗಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರಿಗೆ ಅನ್ವಯಿಸಿ ಹೇಳುವುದು ಕಷ್ಟದ ಸಂಗತಿ. ಆದರೂ ಇದನ್ನು ಒಂದು ಮುಖ್ಯ ಸೈಟ್ ಆಶಿಸಿಕೊಂಡು ಭಾರತದಂತೆಯೇ ಒಂದು ಜಿಲ್ಲೆಯ ಕೇಂದ್ರ ಪ್ರತಿನಿಧಿಸುವ ಮತ್ತು ಪ್ರತಿಕ್ರಿಯಿಸುವ ಬಗೆಯನ್ನು ನೋಡಬಹುದು.

ಆಧುನಿಕತೆಯ ತುತ್ತತುದಿಯನ್ನು ಮುಟ್ಟುವ ಹಂಬಲದಲ್ಲಿರುವ ಪ್ರಸ್ತುತ ಸಾಮಾಜಿಕ ಜೀವನದ ಜೊತೆಗೆ ಕರಾಳತೆಯ ಮುಖ ಇರುವುದನ್ನು ನಗಣ್ಯ ಮಾಡಲಾಗಿದೆ. ನಿಜ ಜಗತ್ತಿನಲ್ಲಿ ಯಾವುದೂ ಅನಿವಾರ್ಯವಲ್ಲ ಎಂಬಂತೆ ನಟಿಸಿ ಆಧುನಿಕತೆಯ ಸೊಗನ್ನು ಹಾಕುವ ಮೂಲಕ ದೇಶಿ ರಚನೆಗಳ ಸಾಂಸ್ಕೃತಿಕ ಆಕೃತಿ, ಆಯಾಮಗಳನ್ನು ಮರೆಯಲಾಗುತ್ತಿದೆ. ವೈಜ್ಞಾನಿಕ ಯುಗದಲ್ಲಿ ಮನುಷ್ಯನ ಮನೋಭಾವದಲ್ಲೇ ಆದಂತಹ

ಮೂಲಭೂತ ಬದಲಾವಣೆಯು, ಆತನನ್ನು ವರ್ತಮಾನದಲ್ಲಿ ಬದುಕುವ ಶೈಲಿಯಿಂದ ದೂರವಿರಿಸಿ ಕೇವಲ ಪೊಳ್ಳುತನದ ಮಾರುಕಟ್ಟೆಯ ಜೀವಿಯನ್ನಾಗಿ ಮಾಡಿದೆ. ಅಲ್ಲದೇ ಆತ್ಮರತಿಯ ಇಲ್ಲವೇ ಸ್ವಸಂತೋಷದ ಸಹಜತೆಯು ಮುಖದಿಂದ ಅಸಹಜ, ಕೃತಕ ಕ್ರೌರ್ಯ ತುಂಬಿದ ಜೀವವಿರೋಧಿ ನೆಲೆಗಳಿಗೆ ಕೊಂಡೊಯ್ಯುತ್ತಿದೆ. ಅಂದರೆ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ತೀವ್ರ ಮಾರುಕಟ್ಟೆಯ ಪೈಪೋಟಿಯಿಂದಾಗಿ ಪಾರಂಪರಿಕ ಕಲೆ, ಸಾಹಿತ್ಯ, ಸಂಸ್ಕೃತಿಗಳಿಗೆ ಧಕ್ಕೆ ಒದಗಿ ಬಂದಿದೆ.

ದೇಸೀ ಚಿಂತನೆಯ ಮೂಲಕ ಹೊರಹೊಮ್ಮಿ ಬಂದ ಮತ್ತು ಮಾನವನ ಭಾವನಾತ್ಮಕ ಸಂಬಂಧವನ್ನು ಬೆಸೆಯುವ ಜಾನಪದ ಕಲೆ, ಸಾಹಿತ್ಯ, ಸಂಸ್ಕೃತಿಯು ಪರದೆಯ ಹಿಂದಕ್ಕೆ ಸರಿಯುತ್ತದೆ. ಬಯಲಾಟಗಳು, ಜಾನಪದ ಹಾಡು, ಗಾದೆ, ಒಗಟು, ಒಡಪು, ವೀರಗಾಸೆ, ಕೋಲಾಟದ ಪದಗಳು, ತತ್ವಪದಗಳು, ಮೊಹರಂ ಕುಣಿತ, ತೊಗಲುಗೊಂಬೆ ಆಟ, ವೇಷಗಾರರ ಆಟಗಳು ಮುಂತಾದ ದೇಸೀ ಕಲೆಗಳ ಅಸ್ತಿತ್ವವಂತೂ ವೈಜ್ಞಾನಿಕತೆಯ, ಆಧುನಿಕತೆಯ ನೆಪದಲ್ಲಿ ತಮ್ಮ ನೆಲೆಯಿಂದ ಸ್ಥಿತ್ಯಂತರಗೊಳ್ಳುತ್ತಿದೆ. ಬಳ್ಳಾರಿ ಜಿಲ್ಲೆಯಲ್ಲಿ ಜೀವಂತವಾಗಿರುವ ದೇಸೀ ಸಾಂಸ್ಕೃತಿಕ ಜ್ಞಾನವಾದಂತಹ ಬಯಲಾಟ, ಲಂಬಾಣಿ ಹಾಡು, ಲಂಬಾಣಿ ನೃತ್ಯ ಆಧುನಿಕತೆಯ ಅವಾಂತರದಲ್ಲಿ ಮಾಧ್ಯಮಗಳ ಮೂಲಕ ಪ್ರದರ್ಶಿತವಾದರೂ ಅವುಗಳ ನೈಜತೆಯ ಬಗ್ಗೆಯಂತೂ ಆತಂಕ ಪಡಲೇಬೇಕಿದೆ. ನಮ್ಮ ಬಯಲಾಟ, ಲಂಬಾಣಿ ನೃತ್ಯ, ಲಂಬಾಣಿ ಹಾಡು, ಇಂದು ರಾಷ್ಟ್ರಮಟ್ಟದಲ್ಲಿ ಗುರುತಿಸಲ್ಪಡುತ್ತಿವೆ. ಇದೆಲ್ಲಾ ಸಾಧ್ಯವಾದದ್ದು ಕೇವಲ ತಂತ್ರಜ್ಞಾನ, ಆಧುನಿಕತೆಯ ಪರಿಣಾಮವಾಗಿಯೆಂಬುದನ್ನು ಮರೆಯಲಾಗದು.

ಎಲ್ಲೋ ಮೂಲೆಯ ತಾಂಡದ ಭಾಗದಲ್ಲಿದ್ದ ಬಯಲಾಟದ ಕಲಾವಿದನೊಬ್ಬ ಇಂದು ಪರದೆಯ ಮೇಲೆ ಬಂದು ವ್ಯಾಪಕ ಪ್ರಚಾರವನ್ನು ಪಡೆಯುತ್ತಾನೆ. ಬಯಲಾಟದ ಕಥೆಯು ದೂರದರ್ಶನದ ಮೂಲಕ ಪ್ರಸಾರವಾಗಿ ಪ್ರಚಾರ ಪಡೆಯುತ್ತದೆ. ಆದರೆ ಮುಂಚೆಯಿದ್ದ ಅಪ್ಪಟ ರಂಗಕಲೆಯೂ ಮಾಧ್ಯಮದಲ್ಲಿ ಬಿಂಬಿಸಲಾಗುತ್ತಿದೆಯೇ ಎಂಬುದೇ ದೊಡ್ಡ ಆತಂಕ. ಅಲ್ಲದೇ ರಂಗದ ಮೇಲಿದ್ದ ಭಾವನಾತ್ಮಕ ಬೆಸುಗೆಯು ಕಳಚಿ ಭಾವರಹಿತವಾಗಿ ಮುಂದಿಡುತ್ತದೆ. ಆಧುನಿಕತೆ, ಅಲ್ಲದೇ ಬಹುರಾಷ್ಟ್ರೀಯ ಕಂಪನಿಗಳ ಜಾಹೀರಾತಿನ ಕಾಲ್ತುಳಿತಕ್ಕೆ ಒಳಗಾಗಿ ನಲುಗಿ, ಕೋಮುವಾದವನ್ನು ಅಲ್ಲಿ ಬಿಂಬಿಸಲಾಗುತ್ತದೆ.

ಹೀಗೆ ಲಂಬಾಣಿಗರ ಕಲೆ, ಸಾಹಿತ್ಯದಿಂದ ದೂರವುಳಿದು ಕೊಳ್ಳುಬಾಕ ವಿದೇಶಿ ಸಂಸ್ಕೃತಿಗೆ ಮಾರು ಹೋಗುವುದೊಂದು ಫ್ಯಾಶನ್ ಆಗಿ ಮಾರ್ಪಾಡಾಗುತ್ತಿರುವುದು ಆತಂಕದ ಸಂಗತಿಯಾಗಿದೆ. ಆಧುನಿಕ ಮನಸ್ಸಿನ ಪ್ರಗತಿಯೆಂದು ಭಾವಿಸಿರುವ ಈ ಲಂಬಾಣಿ ಮುಗ್ಧ ಜನತೆಯನ್ನು ಜಾಗತೀಕರಣವು ತನ್ನ ಪ್ರಬಲ ಬಾಹುಗಳಿಂದ ನಿರ್ಗತಿಕರನ್ನಾಗಿ ಮಾಡುತ್ತಿರುವುದು ಇನ್ನಾದರೂ ಅರಿತುಕೊಳ್ಳಬೇಕಾಗಿದೆ. ಗ್ಲೋಬಲ್ ವಿಲೇಜ್ ಎಂಬುದನ್ನು ಯಾವುದೇ ರೀತಿಯ ಭಾವನಾತ್ಮಕ ಸಂಬಂಧದಿಂದ ಮಾಧ್ಯಮಗಳಾಗಲೀ, ಮಾರುಕಟ್ಟೆಯಾಗಲೀ ಬಿಂಬಿಸುತ್ತಿಲ್ಲ. ತೋರಿಕೆಗಾಗಿ ಈ ಸಮಸುಖೀ ವಿಶ್ವಹಳ್ಳಿಯ ಕಲ್ಪನೆಯಿದೆ. ಬಳ್ಳಾರಿ ಜಿಲ್ಲೆಯ ಲಂಬಾಣಿ ತಾಂಡಗಳು ಪರಿಸರದ ಬಿಸಿಲ, ಬಡತನ, ದಾರಿದ್ರ್ಯದ ತಾಂಡಗಳನ್ನು ಯಾವ

ಮಾನದಂಡದ ಮೂಲಕ ಜಾಗತೀಕರಣ ಒಂದು ಗೂಡಿಸುತ್ತದೆಂಬುದನ್ನು ಗಮನಿಸಬೇಕು. ಎಲ್ಲಿಯೂ ಅದರ ಸಾಂಸ್ಕೃತಿಕ ಪರಂಪರೆಯ ಮೂಲಕ ಎತ್ತಿಹಿಡಿಯುತ್ತಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿ ಉಡುಪುಗಳು ತಯಾರಾಗುವ ಜೀನ್ಸ್ ಬಟ್ಟೆಗಳ ಉದ್ಯಮದಿಂದ ಮತ್ತು ಕಬ್ಬಿಣ - ಉಕ್ಕು ತಯಾರಿಕೆಯಿಂದ ಜಾಗತಿಕ ಮಾರುಕಟ್ಟೆಯಲ್ಲಿ ಕಡಿಮೆ ಬೆಲೆಯಲ್ಲಿ ಕೊಳ್ಳುವ ಮೂಲಕ ಅದನ್ನು ನಿರ್ಭೀಜೀಕರಣಗೊಳಿಸುತ್ತಿರುವುದು ಕಂಡು ಬರುತ್ತದೆ.

ಲಂಬಾಣಿಗಳು ಜಾನಪದ ಕಲೆ, ಹಾಡು, ಬಯಲಾಟ, ಲಾವಣಿಗಳು ಹಲವಾರು ಜನಾಂಗೀಯಾ ಕಲೆಗಳು ತಂತ್ರಜ್ಞಾನದ ಆವಿಷ್ಕಾರದಿಂದಾಗಿ ರೂಪಾಂತರಗೊಳ್ಳುತ್ತಿವೆ. ಹೊಸತಂತ್ರ ಜ್ಞಾನದ ದೃಷ್ಟಿಯಿಂದ ಈ ರೂಪಾಂತರವೆಂಬುದು ಅನಿವಾರ್ಯ ಕೂಡ. ಆದರೆ ಈ ಬಗೆಯ ಜನಪದೀಯ ಅಸ್ತಿ ತನ್ನ ರೂಪಾಂತರ ಕ್ರಿಯೆಯಲ್ಲಿ ಏಕಮುಖವಾಗಿ ಚಲಿಸಿ ಜಾಗತೀಕರಣಕ್ಕೆ ಬಲೆಯಾಗುತ್ತದೆಂಬುದೇ ಇಂದಿನ ಆತಂಕ ಮತ್ತು ತಲ್ಲಣ. ಲಂಬಾಣಿಗರ ಹಾಡು, ನೃತ್ಯ, ಸಾಹಿತ್ಯ, ವೇಷಭೂಷಣಗಳು ಮುಂತಾದ ಹಲವಾರು ಕಲೆಗಳು ಮೂಲತಃ ಬಹುಮುಖೀ ಚಿಂತನೆಯ ಧಾರೆಗಳು. ಅವು ಜಾಗತೀಕ ಮಾರುಕಟ್ಟೆಯಲ್ಲಿ ಏಕಮುಖವಾಗಬಾರದಷ್ಟೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಎಲ್ಲಾ ತಾಲೂಕುಗಳ ಲಂಬಾಣಿ ತಾಂಡಗಳಲ್ಲಿ ಹಲವಾರು ಕಲಾಕೌಶಲ್ಯಗಳಿವೆ. ಬೇಸಾಯಗಾರರು, ಕೈಕಸುಬುದಾರರು, ಕರಕುಶಲದಾರರು ಇನೂ ಹಲವಾರು ಸಮುದಾಯಗಳಿವೆ. ಈ ಲಂಬಾಣಿ ಸಮುದಾಯದ ಅಂತರಂಗದಲ್ಲಿ ಅದೆಷ್ಟೋ ಹಾಡುಗಳು, ಕಲಾಕುಸರಿ, ಕೌಶಲಗಳು, ಕಲೆಗಳು ಅಡಗಿಕೊಂಡಿವೆ. ಆದರೆ ಇಂದಿನ ಆಧುನಿಕತೆಯ ಪರಿಣಾಮವಾಗಿ ಇವುಗಳಿಗೂ ಹೊಡೆತ ಬಿದ್ದು ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿ ಬುಡಕಟ್ಟು ಸಮುದಾಯ ತಮ್ಮ ಮೂಲ ವೃತ್ತಿಯೊಂದಿಗೆ ಅಪಾರವಾದ ಜನಪದೀಯ ಜ್ಞಾನಭಂಡಾರವನ್ನು ಹೊಂದಿದೆ. ಅಂತೆಯೇ ಗುಡಿಕೈಗಾರಿಕೆಯ ವಸ್ತುಗಳ ತಯಾರಿಕೆಯಲ್ಲಿಯೂ ಪ್ರಸಿದ್ಧ ಪಡೆದಿದೆ. ಇಂತಹ ಕಲೆ-ಕುಸುರಿಯಿಂದಾಗಿ ಮತ್ತು ತಮ್ಮ ವಿಶಿಷ್ಟವಾದ ಜೀವನಶೈಲಿ-ಆಚಾರ-ವಿಚಾರಗಳಿಂದಲೂ ಈ ನೆಲದ ಸಂಸ್ಕೃತಿಯ ಸಂಪತ್ತಾಗಿದ್ದಾರೆ. ಅಲ್ಲದೆ ಬಹುಮುಖೀ ಸಂಸ್ಕೃತಿಯ ವಾರಸುದಾರರಾಗಿದ್ದಾರೆ. ಆದರೆ ಇಂತಹ ಬಹುಮುಖೀ ವಾರಸುದಾರರಿಗೆ ಜಾಗತೀಕರಣವು ಏಕಮುಖಿಯಾಗಿ ನುಂಗಲಾರದ ತುತ್ತಾಗಿ ಪರಿಣಮಿಸಿರುವುದು ಕಂಡುಬರುತ್ತದೆ. ನಿಜಕ್ಕೂ ಲಂಬಾಣಿಗರು ಮೂಲನಿವಾಸಿಗಳಾಗಿ ಪರಂಪರೆಯನ್ನು ಹಿಡಿದಿಟ್ಟುಕೊಂಡ ಇವರನ್ನು ಪ್ರಧಾನವಾಹಿನಿಗೆ ತರದೇ ಅನನ್ಯತೆಯಿಂದ ದೂರ ಸರಿಸಲಾಗುತ್ತಿದೆ. ಅವರು ಪಡೆದುಕೊಂಡ ಕೌಶಲಗಳು ಅಭಿವೃದ್ಧಿಯ ವ್ಯಾಖ್ಯೆಯಿಂದ ದೂರ ಉಳಿದಿವೆ. ಕಸುಬು, ಉಪಕಸಬುಗಳಿಗೆ ಬಹುರಾಷ್ಟ್ರೀಯ ಉದ್ಯಮಗಳಿಂದ ಯಾವ ಮಾನ್ಯತೆಯೂ ಇಲ್ಲದಂತಾಗಿದೆ. ಇಂಥವುಗಳನ್ನು ಪ್ರಧಾನವಾಹಿನಿಗೆ ತರುವುದು ಇಂದು ಸಾಧ್ಯವೇ ಎಂಬುದು ಆತಂಕದ ಸಂಗತಿಯಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಹೊಸಪೇಟೆ, ಸಿರುಗುಪ್ಪ, ಬಳ್ಳಾರಿ. ಎಲ್ಲಾ ತಾಲೂಕುಗಳ ತಾಂಡಗಳ ಜನರು ಕೂಲಿಗಾಗಿ ಸಂಡೂರು ತಾಲೂಕಿನಲ್ಲಿ ಹೆಚ್ಚು ಸಂಖ್ಯೆಯಲ್ಲಿ

ವಾಸಿಸುತ್ತಿದ್ದಾರೆ. ಲಂಬಾಣಿ ಸಮುದಾಯದವರು ತಮ್ಮ ಮೂಲ ವೃತ್ತಿಯೊಂದಿಗೆ ಕೈಗಾರಿಕೆಯಲ್ಲೂ ದುಡಿಯುತ್ತಿದ್ದಾರೆ. ಈ ಸಮುದಾಯದ ಮಹಿಳೆಯರಲ್ಲಿ ವಿಶೇಷವಾದ ಕರಕುಶಲ ಕಲೆಯಿದೆ. ಇದರಿಂದಾಗಿ ಇವರು ಸಾಂಸ್ಕೃತಿಕ ಪಳೆಯುಳಿಕೆಯ ದೇಸೀ ವಸ್ತುಗಳಾದ ಬುಟ್ಟಿ, ವಿವಿಧ ಕಟ್ಟಿಗೆಯ ಚಿತ್ತಾರದ ವಸ್ತುಗಳು, ಕಸೂತಿ ಹೊಂದಿದ ಕೈ ಚೀಲ, ಇವರ ಉಡುಪುಗಳು, ಬಟ್ಟೆಗಳು, ಮಹಿಳೆಯರ ಆಭರಣ ಮುಂತಾದವನ್ನು ತಯಾರಿಸುತ್ತಿದ್ದಾರೆ. ಇದರ ಮಾರುಕಟ್ಟೆಗಾಗಿ ಸಂಡೂರು ಕೇಂದ್ರದಲ್ಲಿ 'ಕರಕುಶಲ ಕೇಂದ್ರ' ಮಾಡಿಕೊಂಡಿದ್ದಾರೆ. ಇದು ನಮ್ಮ ದೇಸೀ ಮಾರುಕಟ್ಟೆಯ ಅಪ್ಪಟ ಪಾರಂಪರಿಕ ಆಸ್ತಿ. ಆದರೆ ಇಂದೂ ಇಂಥ ಕರಕುಶಲ ವಸ್ತುಗಳಿಗೆ ಸರಿಯಾದ ಮಾರುಕಟ್ಟೆಯಿಲ್ಲ ಮತ್ತು ಸರಕಾರವೂ ಬುಡಕಟ್ಟು ಜನರ ಇಂತಹ ವಸ್ತುಗಳಿಗೆ ವೇದಿಕೆಯನ್ನು ಒದಗಿಸುತ್ತಿಲ್ಲ. ಜಾಗತೀಕರಣದ ಇಂದಿನ ಮಾರುಕಟ್ಟೆಯಲ್ಲಿ ಈ ರೀತಿಯ ವಸ್ತುಗಳಿಗೆ ಸೂಕ್ತ ಬೆಲೆ ದೊರೆಯದೇ, ಬೇಡಿಕೆಯಿಲ್ಲದೇ ಲಂಬಾಣಿ ಸಮುದಾಯ ಅಂಚಿಗೆ ತಳ್ಳಲ್ಪಡುತ್ತಿದೆ. ಆ ಮೂಲಕ ಅವರು ತಮ್ಮ ಪಾರಂಪರಿಕ ದೇಸೀಜ್ಞಾನ ಕಲೆಗಳನ್ನು ಬಿಟ್ಟು ಆಚೆಗೆ ಬರುತ್ತಿದ್ದಾರೆ. ಕಬ್ಬಿಣ-ಮ್ಯಾಂಗನೀಸ್-ಉಕ್ಕು ಉದ್ಯಮಗಳಲ್ಲಿ ಕೂಲಿಗಳಾಗಿ ದುಡಿಯುತ್ತಿದ್ದಾರೆ. ಇಂತಹ ಪರ್ಯಾಯ ಸಾಧ್ಯತೆಗಳು ತೃಪ್ತಿಕರವಾಗಿಲ್ಲ. ಅಲ್ಲಿ ಅಪಾರ ಶ್ರಮದಿಂದ, ವಿಲ್ಸನ್ಸ್ ಉದ್ಯಮದಿಂದ ಉಂಟಾಗುವ ಧೂಳು, ನೈಸರ್ಗಿಕ ಹಾನಿಯಿಂದ ಆಘಾತಕ್ಕೆ ಒಳಗಾಗುತ್ತಿದ್ದಾರೆ. ಈ ರೀತಿಯಾಗಿ ಅವರು ತಮ್ಮ ಸಾಂಸ್ಕೃತಿಕತೆಯ ಮೇಲಿನ ಪರಿಣಾಮಗಳನ್ನು ಎದುರಿಸುತ್ತಾರೆ. ದುರದೃಷ್ಟವಶಾತ್ ಜಾಗತೀಕರಣವು ಈ ಪ್ರಕ್ರಿಯೆಯನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಮುಂದುವರೆಸುತ್ತಿದೆ.

ಬಳ್ಳಾರಿ ಜಿಲ್ಲೆಯ ಲಂಬಾಣಿ ಸಮುದಾಯದ ಮಕ್ಕಳು, ಮಹಿಳೆಯ ಶೈಕ್ಷಣಿಕ ಮಟ್ಟವನ್ನು ಸುಧಾರಿಸುವ ದೃಷ್ಟಿಯಿಂದ ಕೆಲವು ಎನ್.ಜಿ.ಓ.(Non-Governemnt Orgnisations)ಗಳು ಕೆಲಸ ಮಾಡುತ್ತಿವೆ. ಅವು ಮಕ್ಕಳು - ಮಹಿಳೆಯರನ್ನು ದತ್ತು ತೆಗೆದುಕೊಂಡು ಅವರ ಅಭಿವೃದ್ಧಿಗೆ ಮುಂದಾಗಿರುವುದು ಒಳ್ಳೆಯದೇ. ಅವರಲ್ಲಿರುವ ಸಾಂಸ್ಕೃತಿಕ ಅಂಶಗಳನ್ನು ಗುರುತಿಸಿ, ಅವರಲ್ಲಿರುವ ಹಾಡು, ಕಲೆ, ಕುಶಲ, ಮುಂತಾದವುಗಳನ್ನು ದಾಖಲಿಸುತ್ತಿದ್ದಾರೆ. ಇನ್ನು ಕೆಲವು ಎನ್.ಜಿ.ಓ.ಗಳು ಇಂತಹ ಸಾಂಸ್ಕೃತಿಕ ಸಂಪತ್ತನ್ನು ದುರುಪಯೋಗ ಮಾಡಿಕೊಳ್ಳುತ್ತಿವೆ. ಬರುವ ವಿದೇಶೀ ಬಂಡವಾಳವನ್ನು ಸಮುದಾಯಗಳಿಗೆ ಅಭಿವೃದ್ಧಿಯ ನೆಪದಲ್ಲಿ ಹೂಡಿ ಅವರ ದೇಸಿಜ್ಞಾನ ತಂತ್ರಜ್ಞತೆಯನ್ನು ವಿದೇಶೀ ಮಾರುಕಟ್ಟೆಗೆ ಬಳಸಲಾಗುತ್ತಿದೆ. ಇದೂ ಕೂಡ ಜಾಗತಕರಣದ ಕರಿನೆರಳೆಂಬುದನ್ನು ಗಮನಿಸಬೇಕಾಗಿದೆ.

ತಮ್ಮ ಕ್ರಿಯಾತ್ಮಕ ವೃತ್ತಿ ಕೌಶಲದಿಂದ ಗುಡಿಕೈಗಾರಿಕೆಯನ್ನು ಬೆಳೆಸುತ್ತಿದ್ದ ಲಂಬಾಣಿ ಜನರು, ತಮ್ಮ ಜ್ಞಾನ ಭಂಡಾರದಿಂದ ಎದೆಯಾಳದ ಪದಗಳನ್ನು ತಮ್ಮ ವಾದ್ಯಗಳೊಂದಿಗೆ ಹಾಡುತ್ತಿದ್ದರು. ತಮ್ಮ ಹೊಲ ಗದ್ದೆಗಳಲ್ಲಿ ದುಡಿದು ಉತ್ತಮ ಬೆಳೆಯಿಂದ ಸಂತಸಗೊಂಡು ಮನಸಾರೆ ಹಾಡಿ ಕುಣಿಯುತ್ತಿದ್ದ ರೈತಾಪಿ ಜನರು ಇಂದು ಹತಾಶರಾಗಿದ್ದಾರೆ. ಜಾಗತಿಕ ಮಾರುಕಟ್ಟೆಯ ಪ್ರಬಲವಾದ ದಾಳಿಯಿಂದಾಗಿ ನಲುಗಿದ್ದಾರೆ. ಜನಪದ ಹಾಡು ಹೇಳುತ್ತಾ ಮತ್ತೆ ಮತ್ತೆ ಹೊಲದಲ್ಲಿಯೇ ಹೊಸ ಹಾಡು ಕಟ್ಟುತ್ತಿದ್ದ ಲಂಬಾಣಿ ರೈತರು-

ಕಾರ್ಮಿಕರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಜಾಗತಿಕ ಮಾರುಕಟ್ಟೆಯ ಪೈಪೋಟಿಯಿಂದ ಕಬ್ಬು ಬೆಳೆಗಾರರ ಸ್ಥಿತಿಯು ಚಿಂತಾಜನಕವಾಗಿದೆ. ಬಳ್ಳಾರಿ ಜಿಲ್ಲೆಯ ಸಿರುಗಪ್ಪ ತಾಲೂಕು ಕೇಂದ್ರದಲ್ಲಿದ ಸಕ್ಕರೆ ಕಾರ್ಖಾನೆಯು ಮುಚ್ಚಿದೆ. ರೈತರಂತೂ ಕಂಗಾಲಾಗಿದ್ದಾರೆ. ಇದಕ್ಕೆ ರೈತರೇ ಕಾರಣವೆಂಬಂತೆ ಬಿಂಬಿಸಲಾಗಿದೆ. ಆದರೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಕ್ಕರೆಯ ಬೆಲೆ, ಗುಣಮಟ್ಟದ ಹೊಡೆತದಿಂದ ಮತ್ತು ರೈತರಿಗೆ ಸರಿಯಾದ ಸಾಲ, ವಿಮೆ, ಕುಬ್ಬು ಬೆಳೆಗೆ ಅವಶ್ಯಕವಾದ ರಾಸಾಯನಿಕ ಗೊಬ್ಬರಗಳನ್ನು ನೀಡದೇ ಬೆಳೆಗಳು ಕುಸಿದಿವೆ. ಗುಣಮಟ್ಟವೂ ಕುಸಿದಿವೆ. ಪೂರೈಕೆ ಕಡಿಮೆಯಾಗಿ ಸಿರುಗುಪ್ಪದಂತಹ ಸಣ್ಣ ಸಕ್ಕರೆ ಕೈಗಾರಿಕೆಯು ಬೀಗ ಹಾಕಿಕೊಂಡಿದೆ. ಇದರಿಂದ ಲಂಬಾಣಿ ರೈತರು ಸಂಕಷ್ಟಕ್ಕೆ ಒಳಗಾಗಿದ್ದಾರೆ. ಅಲ್ಲದೆ ಸಂಡೂರು ಮೈನ್ಸ್ ಗಣಿಗಾರಿಕೆಯ ಅದಿರು ಇಂದು ವಿದೇಶಕ್ಕೆ ರವಾನೆಯಾಗುತ್ತಿದೆ. ಅಲ್ಲಿನ ರೈತರ ಹೊಲಗಳನ್ನು ಕಡಿಮೆ ಬೆಲೆಗೆ ಕೊಂಡುಕೊಳ್ಳುವ ಮೂಲಕ ಕೊಳ್ಳುಬಾಕರು, ಶ್ರೀಮಂತರು ಆ ಗಣಿಗಾರಿಕೆಯಿಂದ ಲಾಭಗಳಿಸುವುದಲ್ಲದೇ, ವಿದೇಶೀ ಸರಕು ಸಂಸ್ಕೃತಿಗೆ ನಮ್ಮ ದೇಶದ ಕೂಲಿಕಾರರ, ಕಾರ್ಮಿಕರ, ರೈತರ ಆರ್ಥಿಕ ದುಃಸ್ಥಿತಿಗೆ ಕಾರಣವಾಗುತ್ತಿದ್ದಾರೆ.

ಆರ್ಥಿಕತೆಗೂ ಸಾಂಸ್ಕೃತಿಕ ಪಲ್ಲಟಕ್ಕೂ ಅವಿನಾಭಾವ ಸಂಬಂಧವಿದೆಯೆಂಬ ಕಾರಣಕ್ಕೆ ಮೇಲಿನ ಸಂಗತಿಗಳನ್ನು ಪ್ರಸ್ತಾಪಿಸಲಾಗಿದೆ. ಯಾವ ಒಂದು ಸಮುದಾಯವು ಆರ್ಥಿಕತೆಯ ದೃಷ್ಟಿಯಿಂದ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲಾರಂಭಿಸುತ್ತದೆಯೋ ಅಲ್ಲಿಂದಲೇ ಅವರ ಸಂಸ್ಕೃತಿಯ ಮೇಲೆ ಗಾಢವಾದ ಪ್ರಭಾವ ಬೀರುತ್ತದೆ. ಇದನ್ನು ಬಳ್ಳಾರಿ ಜಿಲ್ಲೆಯ ಕಬ್ಬಿಣ ಗಣಿಗಾರಿಕೆ ಮತ್ತು ಕೃಷಿಯಿಂದ ಸ್ಪಷ್ಟವಾಗಿ ತಿಳಿಯಬಹುದಾಗಿದೆ.

ಕಬು ಬೆಳೆಯುತ್ತಿದ್ದ ರೈತರು (ಲಂಬಾಣಿಗರು) ಸಿರುಗುಪ್ಪ ಭಾಗದಲ್ಲಿ ಸಕ್ಕರೆ ಕಾರ್ಖಾನೆಯ ಮುಚ್ಚಿದರಿಂದ ಬೆಳೆಯನ್ನು ಕಡಿಮೆ ಮಾಡಿದ್ದಾರೆ. ಅಲ್ಲದೇ ಮುಂದೆ ಬೆಳೆಯನ್ನು ಸಂಪೂರ್ಣ ಸ್ಥಗಿತಗೊಳಿಸಬಹುದು. ಇದರಿಂದ ಕಬ್ಬು ಸಂಸ್ಕೃತಿಯು ನಿಂತು ಹೋಗುವುದಲ್ಲದೇ, ಆ ಬೆಳೆಯು ಪರ್ಯಾಯ ಉತ್ಪನ್ನಗಳಿಗೆ ಪಲ್ಲಟವಾಗುತ್ತದೆ. ಕಬ್ಬು ಬೆಳೆಗೆ ಸಂಬಂಧಿಸಿದ ಆ ಲಂಬಾಣಿ ಸಮುದಾಯ ಸೃಜಿಸಿಕೊಂಡಿದ್ದ ಕೆಲವು ಆಚರಣೆಗಳು ಜನಪದ ಗೀತೆಗಳೂ ಇಲ್ಲವಾಗುತ್ತವೆ.

"ಕಬ್ಬಿನಾ ಹೊಲದಾಗ
ದುಬ್ಬನಾ ಮುಗುಳ್ಯಾಕೆ
ದಬ್ಬಂಥ ಗೆಣಿಕಿ ಮುರಿಬಾರಾs
ನನ ಚೆಲುವೆ ಗೇಮಿಕೀಯ ರಸವ ಜಿಗಿ ಜಿಗಿದು
ಮೊಣಕ್ಕೆ ತೆರೆಸೀಯ
ಸೈಯ್ಯಂತ ನನ್ನ ಮಣಿಸೀಯೆ".

ಎಂಬಂತಹ ಪಾರಂಪರಿಕ ಜನಪದ ಸೃಷ್ಟಿಯು ಆರ್ಥಿಕ ದುಷ್ಪರಿಣಾಮದ ಫಲವಾಗಿ ಅಪರೋಕ್ಷವಾಗಿಯಾದರೂ ಜಾಗತೀಕರಣ ಕರಾಳ ಪರದೆಯಲ್ಲಿ ಕಾಣೆಯಾಗುತ್ತದೆ.

ಸಂಡೂರು ಕಬ್ಬಿಣ ಅದಿರು ಕೈಗಾರಿಕೆಯಿಂದ ವಿದೇಶಿ ಮಾರುಕಟ್ಟೆಗೆ ಬೇಕಾಗುವ ಕಚ್ಚಾವಸ್ತು ರವಾನಿಸಲಾಗುತ್ತಿವೆ. ಲಂಬಾಣಿ ಸಮುದಾಯ ಕಡಿಮೆ ಕೂಲಿಯಲ್ಲಿ ಈ ಕೈಗಾರಿಕೆಯಲ್ಲಿ ತಮ್ಮ ಬಲಿಷ್ಠ ಶ್ರಮವನ್ನು ವ್ಯಯ ಮಾಡುತ್ತಿದೆ. ಅಲ್ಲದೆ ಬೆಟ್ಟದ ಅಂಚಿನಲ್ಲಿ ವಾಸಿಸುತ್ತಿರುವ ಹಲವಾರು ಸಮುದಾಯಗಳಿಗೆ ಈ ಗಣಿಗಾರಿಕೆಯ ಸ್ಫೋಟದಿಂದಾಗಿ ಸಂಚಕಾರ ಒದಗಿದೆ. ಆ ಸ್ಥಳದಿಂದ ವಲಸೆ ಹೋಗಬೇಕಾದ ದುಃಸ್ಥಿತಿಯೂ ಬಂದಿದೆ. ಈ ಕಾರಣದಿಂದಲೂ ಲಂಬಾಣಿ ಸಮುದಾಯ ಹೃದಯಾಂತರಾಳದ ಸಾಂಸ್ಕೃತಿಕ ಸಂಪತ್ತು ಸ್ಥಿತ್ಯಂತರಗೊಳ್ಳುತ್ತದೆಯೆಂಬುದರಲ್ಲಿ ಅನುಮಾನವಿಲ್ಲ. ಸಾಂಸ್ಕೃತಿಕ ಪಲ್ಲಟಗಳು ಅನಿವಾರ್ಯ. ಆದರೆ ಅವು ಧನಾತ್ಮಕವಾಗಿರಬೇಕು. ಆದರೆ ಜಾಗತೀಕರಣದಿಂದ ಅವು ಇಂದು ಋಣಾತ್ಮಕವಾಗುತ್ತಿವೆ.

ಜಾಗತೀಕರಣದ ಈ ಹೊತ್ತಲ್ಲಿ ಸಾಹಿತ್ಯಿಕ - ಸಾಂಸ್ಕೃತಿಕ ತಲ್ಲಣಗಳು ಎಲ್ಲೆಡೆಯೂ ತಾಂಡವಾಡುತ್ತಿದೆ. ಭಾಷೆಯೂ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಿದೆ. ಗಡಿ ಬಿಕ್ಕಟ್ಟು ಉಲ್ಬಣಿಸುತ್ತಲಿದೆ. ಜಾಗತೀಕರಣ ಅಹವಾಲುಗಳನ್ನು ಮುಂದು ಮಾಡಿ ಲಂಬಾಣಿ ರೈತರು, ಕಾರ್ಮಿಕರು ನಡೆಸುವಂತಹ ಚಳವಳಿಗಳನ್ನು ಹತ್ತಿಕ್ಕಲಾಗುತ್ತಿದೆ. ಅಲ್ಲದೇ ಅವರ ನಡುವೆ ಕೋಮುಗಲಭೆಯನ್ನು ಸೃಷ್ಟಿಸಲಾಗುತ್ತಿದೆ. ಈಚೆಗೆ ಮತಾಂತರವು ಜಾಗತೀಕರಣದ ಪರಿಣಾಮವಾಗಿಯೇ ಎಡೆ ಪಡೆಯುತ್ತಿದೆ. ತಾತ್ವಿಕವಾಗಿ ಸೈದ್ಧಾಂತಿಕ ನೆಲೆಯಲ್ಲಿ ಮತಾಂತರ ಪ್ರಕ್ರಿಯೆಯು ನಿಷೇಧಾತ್ಮಕವೇನೂ ಅಲ್ಲ. ಆದರೆ ಇಂದು ನಡೆಯುತ್ತಿರುವ ಹುನ್ನಾರಗಳನ್ನು ಗಮನದಲ್ಲಿಟ್ಟುಕೊಂಡು ಮತಾಂತರವಾಗುವುದು ಉಚಿತವೆನಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಅಂದರೆ ಹೊಸಪೇಟೆ ತಾಲೂಕಿನ ಹಂಪಿಯಲ್ಲಿ ಲಂಬಾಣಿಗರ ಮತಾಂತರ ಪ್ರಕ್ರಿಯೆಯು ಹೆಚ್ಚಾಗುತ್ತಿದೆ. ಕ್ರಿಶ್ಚಿಯನ್ನರು ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಸಮಾನತೆಯ ಹೆಸರಲ್ಲಿ ಅಪಾರವಾದ ಲಂಬಾಣಿ ಸಮುದಾಯವನ್ನು ತಮ್ಮ ಧರ್ಮದತ್ತ ಸೆಳೆಯುತ್ತಿದ್ದಾರೆ. ಇದು ಅಪಾಯವೇನೂ ಅಲ್ಲ. ಆದರೆ ದೇಶೀ ಸಮುದಾಯ ಮತಾಂತರದಿಂದ ವಿದೇಶಿಯರ ದಾಸ್ಯತೆಗೆ ಒಳಗಾಗುತ್ತಿರುವುದು ದುರಂತವೇ ಸರಿ. ವಿದೇಶಿ ಕ್ರಿಶ್ಚಿಯನ್ ಧರ್ಮ ಗುರುಗಳು, ರಾಜಕಾರಣಿಗಳು ಅಲ್ಲಿಂದ ಬಂಡವಾಳ ಕಳಿಸಿ ಸ್ಥಳೀಯ ಅಂದರೆ ಲಂಬಾಣಿ ಸಮುದಾಯವನ್ನು ಆಕರ್ಷಿಸುವ ಹುನ್ನಾರವೂ ಕಡೆಗಣಿಸುವಂತಿಲ್ಲ. ಬಳ್ಳಾರಿ ಜಿಲ್ಲೆಯಾದ್ಯಂತ ಲಂಬಾಣಿಗರಲ್ಲಿ ನಡೆಯುತ್ತಿರುವ ಇಂತಹ ಮತಾಂತರ ಕ್ರಮ ಅಪರೋಕ್ಷವಾಗಿಯಾದರೂ ಧರ್ಮವೆಂಬುದು ಜಾಗತಿಕ ಮಾರುಕಟ್ಟೆಯ ಮುಖೇನ ಪ್ರವೇಶಿಸಲು ಅವಕಾಶವಿದೆ. ಈ ಮತಾಂತರ ಪ್ರಕ್ರಿಯೆಯಿಂದ ಸಮುದಾಯದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಿಸ್ಮೃತಿಯು ಉಂಟಾಗುತ್ತದೆ. ಅಂದರೆ ಮತಾಂತರ ಪೂರ್ವ ಧರ್ಮದಿಂದ ಪಡೆದ ಸಾಮಾಜಿಕ, ಸಾಂಸ್ಕೃತಿ ಮತ್ತು ಆರ್ಥಿಕ ಸಂಪತ್ತನ್ನು ಒತ್ತಾಯಪೂರ್ವಕವಾಗಿಯೂ ಕಳಚಿಕೊಂಡು ಸ್ಥಿತ್ಯಂತರಗೊಳ್ಳಬೇಕಾಗುತ್ತದೆ.

ಹೀಗೆ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳು ಪ್ರಸ್ತುತ ವಿದ್ಯಮಾನದಲ್ಲಿ ಬಳ್ಳಾರಿ ಜಿಲ್ಲೆ ಯಲ್ಲಿರುವ ಎಲ್ಲಾ ಲಂಬಾಣಿ ಸಮುದಾಯದ ಬಹುಮುಖ್ಯ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಪ್ರದೇಶದಲ್ಲಿ ತನ್ನೆಲ್ಲಾ ಬಾಹುಗಳನ್ನು ಚಾಚಿದೆ. ಆ ಕಬಂಧದಿಂದ ತಪ್ಪಿಸಿಕೊಳ್ಳದೇ ಈಗಾಗಲೇ ಹೆಜ್ಜೆ ಹಾಕಿದೆ.

ಆ ಹೆಜ್ಜೆಯು ಎಚ್ಚರಿಕೆಯಾಗಿ ಮತ್ತೆ ಮತ್ತೆ ಆಲೋಚಿಸಬೇಕಾಗಿದೆ.

ಕರ್ನಾಟಕದ ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿ ಲಂಬಾಣಿಗರ ಸಮುದಾಯ ತುಂಬಾ ವರ್ಣರಂಜಿತವಾದ ಸಮುದಾಯ. ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನು ಹೊಂದಿರುವ ಲಂಬಾಣಿಗಳ ಜಾಗತೀಕರಣದ ಬದಲಾದ ಪರಿಸರದಲ್ಲಿ ಆಧುನಿಕತೆಯ ಪ್ರಭಾವದಿಂದಾಗಿ ಅವರ ಬದುಕಿನ ರೀತಿನೀತಿ, ಜೀವನಶೈಲಿ ಮತ್ತು ಸ್ಥಾನಮಾನಗಳು ಹೇಗೆ ಬದಲಾವಣೆ ಆಗಿವೆ ಎಂಬುದನ್ನು ಸಮೀಕ್ಷಿಸುವುದು ಇಲ್ಲಿನ ಪ್ರಮುಖ ಆಶಯವಾಗಿದೆ.

ಪ್ರಪಂಚದ ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ ಇರುತ್ತದೆ. ಪರಂಪರಾಗತವಾಗಿ ಬಂದ ಉಡುಗೆ-ತೊಡುಗೆ, ಆಚಾರ-ವಿಚಾರ, ನಡೆ-ನುಡಿ, ಭಾಷೆ, ಜನನ-ಮರಣ, ಮದುವೆ ಸಂಸ್ಕಾರಗಳು ಹಾಗೂ ರೀತಿ ರಿವಾಜುಗಳು ಯಾವುದೇ ಸಂಸ್ಕೃತಿಯ ಬಹುಮುಖ್ಯ ಕೊಡುಗೆಗಳಾಗಿವೆ. ಆದರೆ ಕಾಲ, ದೇಶ ಮತ್ತು ಪರಿಸರಕ್ಕನುಗುಣವಾಗಿ ಯಾವುದೇ ಸಂಸ್ಕೃತಿಯ ಬದಲಾವಣೆ ಅಥವಾ ಪರಿವರ್ತನೆ ಸಹಜ ಮತ್ತು ಅನಿವಾರ್ಯ ಕೂಡ ಹೌದು. ಸಂಸ್ಕೃತಿಯಲ್ಲಿನ ಮೌಲಿಕ ಅಂಶಗಳನ್ನು ಉಳಿಸಿಕೊಳ್ಳುವುದು ಮತ್ತು ಮೌಢ್ಯ ಹಾಗೂ ಕಂದಾಚಾರಗಳನ್ನು ತೊಡೆದು ಹಾಕುವುದರಿಂದ ಮಾತ್ರ ಸಂಸ್ಕೃತಿಯ ಸಮಗ್ರ ಬದಲಾವಣೆ ಸಾಧ್ಯ. ಮನುಷ್ಯ ಬದುಕಿಗೆ ಸಂಬಂಧಪಟ್ಟ ಸಮಸ್ತ ವ್ಯವಹಾರಗಳ ಬದಲಾವಣೆಯೇ ಇದೀಗ ಜಾಗತೀಕರಣವನ್ನು ಪ್ರವೇಶಿಸಿರುವುದರಿಂದ ಒಂದು ಬಗೆಯ ಹೊಸ ಜಗತ್ತನ್ನೇ ತೆರೆದುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಅದರ ಪ್ರಭಾವದಿಂದ ಮುಕ್ತರಾಗಲು ಯಾರಿಂದಲೂ ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಕೆಲವು ಬುಡಕಟ್ಟು ಸಂಸ್ಕೃತಿಗಳು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರೂ ಇದರಿಂದ ಸಂಪೂರ್ಣವಾಗಿ ಮುಕ್ತಿಯನ್ನು ಪಡೆಯುವುದು ಕಷ್ಟಸಾಧ್ಯವಾಗಿದೆ.

'ಜಾಗತೀಕರಣ' ಎಂಬುವುದು ಒಂದು ವಿದ್ಯಮಾನವಾಗಿದ್ದುದ್ದಲ್ಲದೆ ಬಂಡವಾಳಶಾಹಿ ಆಧುನಿಕತೆಯ ಇನ್ನೊಂದು ಹಂತವಾಗಿದ್ದು, ವಿಶ್ವ ಸಮಾಜಗಳನ್ನು ಅತ್ಯಂತ ಹತ್ತಿರದಿಂದ ಕೂಡಿಸುವ ಸಂಕೀರ್ಣವಾದ ಒಂದು ಸ್ಥಿತಿ ಆಗಿದೆ. ಇಂತಹ ಸ್ಥಿತಿಯನ್ನು ಕುರಿತು ಜಗತ್ತಿನೆಲ್ಲೆಡೆ ಚರ್ಚೆಗಳು ನಡೆಯುತ್ತಿವೆ. "ಇಡೀ ಜಗತ್ತು ಜಾಗತೀಕರಣದ ಕುರಿತು ಯೋಚಿಸುತ್ತಿರವುದು ತೀವ್ರತೆಯಿಂದಲೇ ಅದರ ಅನಿವಾರ್ಯತೆ ಮತ್ತು ಅಪಾಯಗಳೆರಡನ್ನು ಕಂಡುಕೊಳ್ಳಬಹುದು. ಜಾಗತೀಕರಣ ಚರ್ಚೆ ಹೆಚ್ಚು ತೀವ್ರವಾಗಿರುವುದು ಭಾರತದಂತಹ ಅನೇಕ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲ. ಒಂದೆಡೆ ಇಂತಹ ದೇಶಗಳು ವಸಾಹತುಶಾಹಿಯು ಜಾಗತೀಕರಣದ ಹೆಸರಲ್ಲಿ ನಡೆಸಲಿರುವ ಮರು ಆಕ್ರಮಣದ ಕುರಿತು ಆತಂಕಗೊಂಡಿದ್ದರೆ, ಜಾಗತೀಕರಣದ ಫಲವಾಗಿ ಹುಟ್ಟಿರುವ ಉದಾರೀಕರಣ ಮತ್ತು ಖಾಸಗೀಕರಣಗಳಿಂದ ಜಾಗತಿಕ ಮಟ್ಟದ ತಂತ್ರಜ್ಞಾನದ ಪ್ರವಾಹದಲ್ಲಿ ಒಂದಾಗಿ ಅಭಿವೃದ್ಧಿ ಸಾಧಿಸುವ ತವಕವು ಹೆಚ್ಚುತ್ತಿದೆ. ಒಂದು ಅರ್ಥದಲ್ಲಿ ಜಾಗತೀಕರಣ ಅಪಾಯ ಮತ್ತು ಅವಕಾಶಗಳೆರಡನ್ನು ಇಂದು ಜಗತ್ತಿನ ಮುಂದಿಟ್ಟಿದೆ."[1]

ಜಾಗತೀಕರಣವೆಂದರೆ "ವಿಶ್ವ ಆರ್ಥಿಕ ಸಂಬಂಧಗಳು. ವಿಶ್ವ ರಾಜಕೀಯ, ಸಂಪರ್ಕದಿಂದ ಹಳೆಯ ಜಗತ್ತಿನ ಹಿಂದುಳಿದ ಸಮುದಾಯಗಳ ಜೊತೆಗೆ ರೂಪಿಸಿಕೊಳ್ಳುತ್ತಿರುವ ಆಧುನಿಕ ಸಾಂಸ್ಕೃತಿಕ ರೂಪಾಂತರಗಳ

ವಿಕಾಸವಾಗಿದೆ. ಹೊಸ ಜಗತ್ತಿನ ತಂತ್ರಜ್ಞಾನ ವಿಜ್ಞಾನ ಕುಶಲತೆ ಹಾಗೂ ಬೌದ್ಧಿಕ ಸಂಯೋಗ ಕ್ರಿಯೆಗಳನ್ನು ವಿಕೇಂದ್ರೀಕರಣ ಗೊಳಿಸುವ ಹಂತವಾಗಿ ಜಾಗತೀಕರಣ ತೃತೀಯ ಜಗತ್ತಿನಲ್ಲಿ ನಾಗರಿಕ ಸವಾಲುಗಳನ್ನು ಮುಖಾಮುಖಿಯಾಗಿ ಸುವುದಾಗಿದೆ".[೨] ಅಂದರೆ ಸಮಾಜದಲ್ಲಿ ಜನರ ಜೀವನದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಇತ್ಯಾದಿ ಕ್ಷೇತ್ರಗಳು, ಸಾಮ್ರಾಜ್ಯಶಾಹಿ ಪ್ರಭಾವಕ್ಕೆ ಒಳಗಾಗುವುದಾಗಿವೆ. ಇದರ ಪರಿಣಾಮವಾಗಿ ಸಾಮಾಜಿಕ ಪರಿವರ್ತನೆಗಳು ಮತ್ತು ಸಾಂಸ್ಕೃತಿಕ ರೂಪಾಂತರಗಳು ಉಂಟಾದವು. ಸಾಂಸ್ಕೃತಿಕ ರೂಪಾಂತರವೆಂದರೆ, ವೈಚಾರಿಕವಾಗಿ ಎಚ್ಚರಗೊಳ್ಳುತ್ತಲೇ ತನ್ನ ಸಾಂಸ್ಕೃತಿಕ ಸಂಪತ್ತನ್ನು, ತಲೆಮಾರುಗಳ ಜ್ಞಾನದ ಕ್ರಮಗಳನ್ನು ಆಧುನಿಕತೆಯ ಜೊತೆಗೆ ಸಮೀಕರಿಸಿ, ಪರಿಶೀಲಿಸಿ, ಸಂಯೋಗಿಸಿ ತನ್ನ ಸಮುದಾಯದ ಹಿತಕ್ಕೆ ತಕ್ಕಂತೆ, ವಿಕಾಸವಾಗುವುದು ಎಂದು ಹೇಳಬಹುದು.

ಇಂತಹ ಸಾಂಸ್ಕೃತಿಕ ರೂಪಾಂತರವು ಜಾಗತೀಕರಣ ಪ್ರಭಾವದಿಂದ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಈ ರಾಷ್ಟ್ರಗಳ ತಳಸಮುದಾಯಗಳು, ಬುಡಕಟ್ಟುಗಳು, ಇಂತಹ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಮ್ಮಿಂದ ಒಮ್ಮೆಲೇ ಒಳಗಾಗುವುದಿಲ್ಲ. ಕಾಲದ ಏರಿಳಿತಗಳಿಗೆ ಹೊಂದಾಣಿಕೆಯಾಗುವುದಕ್ಕಾಗಿ ಅಥವಾ ಕಾಲದ ಒತ್ತಡದಿಂದ ಸ್ಥಿತ್ಯಂತರಕ್ಕೆ ಒಳಗಾಗುತ್ತವೆ. ಹೀಗೆ "ವಿಕಾಸಮುಖಿ ಸಾಂಸ್ಕೃತಿಕ ಕೋಶ ಬದಲಾವಣೆಯ ಎಲ್ಲಾ ಬಗೆಯ ಏರಿಳಿತಗಳನ್ನು ಕೈಚೆಲ್ಲಿ ಅಥವಾ ಅಸಹಾಯಕ ದೈನ್ಯ ಸ್ಥಿತಿಯಿಂದಲೇ ಸ್ವೀಕರಿಸುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ. ಸ್ವೀಕರಣ ಮತ್ತು ಪ್ರತಿರೋಧಗಳು ಏಕಕಾಲದಲ್ಲಿ ಆ ಕೋಶದ ಒಳಗೆ ಸನ್ನದ್ಧವಾಗಿರುತ್ತವೆ. ಹೀಗೆ ಸ್ಥಿತ್ಯಂತರಕ್ಕೆ ಭಾರತದ ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸಂವೇದಿಸಿದ್ದು ಗಮನಾರ್ಹ ಸಂಗತಿ. ಈ ಸ್ವೀಕರಣ ಮತ್ತು ಪ್ರತಿರೋಧಗಳು ಸಮುದಾಯಗಳನ್ನು, ಬದಲಾವಣೆಗೆ ಅರ್ಥಪೂರ್ಣವಾಗಿ ಅನ್ವಯಿಸುವ, ಬೆಸೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ".[೩] ಜಾಗತೀಕರಣವೆಂಬ ಮಹಾಪ್ರವಾಹಕ್ಕೆ ಎಲ್ಲವೂ ಕೊಚ್ಚಿಕೊಂಡು ಹೋಗುವ ಸಾಧ್ಯತೆಗಳೇ ಹೆಚ್ಚು. ಬುಡಕಟ್ಟುಗಳು(ಲಂಬಾಣಿಗರು) ತಮ್ಮದೇ ಆದ ವಿಶಿಷ್ಟ ಆಚರಣೆ, ಪದ್ಧತಿ, ಸಂಪ್ರದಾಯ, ಆಚಾರ, ವಿಚಾರ, ಇತ್ಯಾದಿ ವಿಶಿಷ್ಟತೆಗಳನ್ನು ಹೊಂದಿದೆ. ಇಂತಹ ವಿಶಿಷ್ಟತೆಯನ್ನು ಕಾಪಾಡಲು, ಲಂಬಾಣಿಗರು ಜಾಗತೀಕರಣದ ಪ್ರವಾಹವನ್ನು ತಡೆಯಲು ಶತ ಪ್ರಯತ್ನ ಮಾಡುತ್ತಿವೆ. ಆದರೆ ಪ್ರವಾಹದ ರಭಸಕ್ಕೆ ಈ ಪ್ರಯತ್ನವು ಕೂಡ ಕೊಚ್ಚಿ ಹೋಗುತ್ತಿದೆ. ಅಂದರೆ ಪ್ರತಿರೋಧವು ಕೂಡ ಕೊನೆಯಲ್ಲಿ ಐಕ್ಯವಾಗುತ್ತದೆ. ಈ ಪ್ರವಾಹವು ಎಲ್ಲವನ್ನು ನೆಲಸಮ ಮಾಡುವುದರಿಂದ ಸಮತಟ್ಟಾಗುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ. ಇದರ ಪರಿಣಾಮವಾಗಿ ಏರಿಳಿತಗಳು ಉಂಟಾಗುತ್ತವೆ. ಅಂದರೆ ಭಾರತದ ಮೇಲ್ಜಾತಿ ಉನ್ನತವರ್ಗಗಳು. ಈಗಾಗಲೇ ಜಾಗತೀಕರಣದ ಸುಂದರವಾದ ಆಸನಗಳನ್ನು ಅಲಂಕರಿಸಿವೆ. ಆದರೆ ಲಂಬಾಣಿಗರು ಈ ಆಸನಗಳನ್ನು ಇನ್ನು ನೋಡಿಲ್ಲ. ಈ ಆಸನಗಳನ್ನು ನೋಡಲು ಮತ್ತು ಪಡೆಯಲು ನಿರಂತರ ಕಷ್ಟಪಡಬೇಕಾದ ಹಾಗೂ ಕಠಿಣ ಪರಿಶ್ರಮದ ಅಗತ್ಯವಿದೆ. ಇಷ್ಟರಲ್ಲೇ ಮೇಲ್ಜಾತಿ, ಉನ್ನತ ವರ್ಗಗಳು ಮಂಚೂಣಿಯ ಆಸನಗಳನ್ನು ಅಲಂಕರಿಸಿರುತ್ತವೆ. ಅಂದರೆ ಜಾಗತೀಕರಣವು ಅವಕಾಶಗಳನ್ನು ನೀಡುವಲ್ಲಿ ತಾರತಮ್ಯವನ್ನು ಅಂತರ್ಗತ

ಮಾಡಿಕೊಂಡಿರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಪಾಶ್ಚಿಮಾತ್ಯರ ಆಳ್ವಿಕೆಯಿಂದ ಭಾರತದ ಕೆಳಜಾತಿಗಳು ಮತ್ತು ಬುಡಕಟ್ಟುಗಳಲ್ಲಿ ಬದಲಾವಣೆ ಯತ್ನ ತಂದವು. ಪಾಶ್ಚಿಮಾತ್ಯರ ಕೈಗಾರೀಕರಣ, ಅದರ ಫಲವಾದ ಆಧುನೀಕರಣ, ಇಂಗ್ಲಿಷ್ ಶಿಕ್ಷಣ, ಸುಧಾರಣಾವಾದ ಇವೆಲ್ಲವೂ ಈ ಸಮುದಾಯಗಳನ್ನು ಬದಲಾವಣೆ ತರುವುದೇ ಕಾರಣವಾಗಿವೆ. ಇವೆಲ್ಲವು ವಸಾಹತುಶಾಹಿ ಆಳ್ವಿಕೆಗೆ ಪೂರಕವಾಗಿದ್ದು ಹೊರತು ಬುಡಕಟ್ಟುಗಳ ಮತ್ತು ಕೆಳಜಾತಿಗಳ ಸುಧಾರಣೆಗಾಗಿ ಬಂದವುಗಳಾಗಿರಲಿಲ್ಲ. ಇದರಂತೆ ಜಾಗತೀಕರಣದ ಫಲವಾದ ಉದಾರೀಕರಣ, ಖಾಸಗೀಕರಣ ತೀವ್ರ ಕೈಗಾರಿಕೀಕರಣ, ತಂತ್ರಜ್ಞಾನ, ವಿಜ್ಞಾನಗಳು, ಇತ್ಯಾದಿಗಳು ಭಾರತದಂತಹ ತೃತೀಯ ಜಗತ್ತಿನ ದೇಶಗಳ ಕೆಳಜಾತಿಗಳ, ಬುಡಕಟ್ಟು ದೃಷ್ಟಿಯಿಂದ ಹುಟ್ಟಿಕೊಂಡಿಲ್ಲ. ಆದರೆ ಸಾಮ್ರಾಜ್ಯಶಾಹಿ ಆಳ್ವಿಕೆಗೆ, ಪೂರಕವಾದ ತಂತ್ರಗಳಾಗಿವೆ. ಭಾರತದ ಬುಡಕಟ್ಟುಗಳು ಇಂತಹ ಸಾಮ್ರಾಜ್ಯಶಾಹಿ ಆಳ್ವಿಕೆಯ ತಂತ್ರಗಳಿಗೆ ಒಳಗಾಗಬೇಕಾದ ಅನಿವಾರ್ಯತೆಯುಂಟಾಗಿರು ತ್ತದೆ. ಇದರ ಪರಿಣಾಮವಾಗಿ ಸ್ಥಿತ್ಯಂತಕ್ಕೆ ಒಳಗಾಗುತ್ತವೆ.

ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಲಂಬಾಣಿಗರು ಸಾಮ್ರಾಜ್ಯಶಾಹಿಯ ತಂತ್ರಗಳಿಗೆ ಒಳಗಾಗಬೇಕಾದ ಅನಿವಾರ್ಯತೆಯಿಂದ ಸ್ಥಿತ್ಯಂತರಕ್ಕೆ ಒಳಗಾಗಿವೆ. ಇವುಗಳು ಈಗಾಗಲೇ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಸ್ಥಿತ್ಯಂತರ ಸ್ವರೂಪ ಹೇಗಿದೆ. ಈ ಸಮುದಾಯ ಸ್ಥಿತ್ಯಂತಕಕ್ಕೆ ಕಾರಣಗಳೇನು? ಸ್ಥಿತ್ಯಂತರದ ಪರಿಣಾಮಗಳೇನು? ಎಂಬುದು ನಮ್ಮ ಮುಂದಿರುವ ಪ್ರಶ್ನೆಗಳಾಗಿವೆ.

ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಲಂಬಾಣಿಗರು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗಿದ್ದಾರೆ. ಈ ಬದಲಾವಣೆಯು ಯಾವುದೇ ಪ್ರತಿಭಟನೆ ಇಲ್ಲದೆ ಸರಳವಾಗಿ ಒಪ್ಪಿಕೊಳ್ಳುತ್ತಿಲ್ಲ. ರಾಜಕೀಯ, ಆರ್ಥಿಕ ಕ್ಷೇತ್ರಗಳನ್ನು ಹೊರತುಪಡಿಸಿ ಉಳಿದಂತೆ ಬದಲಾವಣೆಗೆ ವಿರೋಧಿ ಕೂಗುಗಳು ವ್ಯಾಪಕವಾಗಿವೆ. ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿಯ ಬದಲಾವಣೆಯು ಒಟ್ಟಾರೆ ಸಾಮಾಜಿಕ ವ್ಯವಸ್ಥೆಯಲ್ಲಿನ ಬದಲಾವಣೆಯನ್ನು ನಿರ್ಧರಿಸುತ್ತದೆ. ಕಾರಣ ಪ್ರತಿಭಟನೆಯು ಇದ್ದರೂ ಸಹ ಬದಲಾವಣೆ ಸ್ಥಗಿತವಾಗದೆ ಹಾಗೆಯೇ ಮುಂದುವರೆಯುತ್ತದೆ. ಪರಿಣಾಮವಾಗಿ ಸಾಮಾಜಿಕ ವ್ಯವಸ್ಥೆ ಸ್ಥಿತ್ಯಂತರಕ್ಕೆ ಒಳಗಾಯಿತು. ಸ್ಥಿತಂತರಕ್ಕೆ ಒಳಪಟ್ಟಿರುವುದರಿಂದ ಲಂಬಾಣಿ ಸಮುದಾಯದ ಕೂಡ ಇದರಿಂದ ದೂರ ಉಳಿಯಲು ಸಾಧ್ಯವಿಲ್ಲ. ಕಾರಣ ವ್ಯವಸ್ಥೆಯ ಒಂದು ಭಾಗದಲ್ಲಿ ಏರಿಳಿತಗಳು ಉಂಟಾದರೆ ಇಡೀ ವ್ಯವಸ್ಥೆಯ ಅದರ ಪರಿಣಾಮ ಉಂಟಾಗುತ್ತದೆ. ಸಾಮ್ರಾಜ್ಯಶಾಹಿಯು ಜಾಗತೀಕರಣದ ಮೂಲಕ ಆಧುನಿಕ ಬಂಡವಾಳಶಾಹಿಯ ಹಿತಾಶಕ್ತಿಯನ್ನು ಕಾಪಾಡುವುದಾಗಿದೆ. ಇದರ ಪರಿಣಾಮವಾಗಿ ತೃತೀಯ ಜಗತ್ತಿನ ರಾಷ್ಟ್ರಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಕೊಳ್ಳೆ ಹೊಡೆಯುವುದೇ ಆಗಿದೆ. ಸಾಮ್ರಾಜ್ಯಶಾಹಿ ಸೃಷ್ಟಿಸಿದ ಜಾಗತೀಕರಣದ ಜಾಲದಿಂದ ತೃತೀಯ ಜಗತ್ತಿನ ರಾಷ್ಟ್ರಗಳು ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಜಾಗತೀಕರಣವು 'ಖಾಸಗೀಕರಣ'ದ ಮೂಲಕ ತೃತೀಯ ಜಗತ್ತಿನ ರಾಷ್ಟ್ರಗಳ ಸರ್ಕಾರಗಳನ್ನು ಒಟ್ಟು ಆಡಳಿತ ವ್ಯವಸ್ಥೆಯಿಂದ ದೂರ ಮಾಡಿ, ಆಡಳಿತ ಕ್ಷೇತ್ರದ ಮಹತ್ವದ ಭಾಗಗಳನ್ನು ಖಾಸಗೀಕರಣಗೊಳಿಸುವ

ಮೂಲಕ ತನ್ನ ವಶಕ್ಕೆ ತೆಗೆದುಕೊಳ್ಳುವುದು. ಅಂದರೆ ದೇಶದ ಒಟ್ಟು ಆರ್ಥಿಕ ಸಂಪನ್ಮೂಲದ ಕ್ರೋಢೀಕರಣದಲ್ಲಿ ಮಹತ್ವದ ಪಾತ್ರವಹಿಸುವ ವಿವಿಧ ಕ್ಷೇತ್ರಗಳನ್ನು ಖಾಸಗೀಕರಣದ ಹೆಸರಿನಲ್ಲಿ ತನ್ನ ಹಿಡಿತಕ್ಕೆ ತಂದುಕೊಂಡು, ಅಧೀನ ರಾಷ್ಟ್ರಗಳ ಮೇಲೆ ಏಕಸ್ವಾಮ್ಯವನ್ನು ಸಾಧಿಸುವುದು. ಆಗ ಈ ರಾಷ್ಟ್ರಗಳ ಸರಕಾರ ಗಳು ಸಹಜವಾಗಿ ಮಹತ್ವದ ಆರ್ಥಿಕ ಕ್ಷೇತ್ರಗಳ ಮೇಲೆ ಹಿಡಿತ ಕಳೆದುಕೊಳ್ಳುವುದಷ್ಟೇ ಅಲ್ಲದೇ ದೇಶದ ಒಟ್ಟು ಆರ್ಥಿಕ ವ್ಯವಸ್ಥೆಯು ಚಲನಗಳನ್ನು ಹೊರಗಿನ ರಾಷ್ಟ್ರವೊಂದಕ್ಕೆ ನಿರ್ದೇಶಿಸಲು ಬಿಟ್ಟು ಕೊಡುವವು. ಇದು ಖಾಸಗೀಕರಣದ ನೇರ ಪರಿಣಾಮವಾಗಿದೆ".[೪] ಹೊರಗಿನ ರಾಷ್ಟ್ರಗಳಿಂದ ನಿರ್ದೇಶಿಸಲ್ಪಡುವ ಆರ್ಥಿಕ ವ್ಯವಸ್ಥೆಯು ಆಧುನಿಕ ಬಂಡವಾಳಶಾಹಿ ಹಿತಾಸಕ್ತಿಯನ್ನು ಹೊಂದಿರುತ್ತದೆ. ಬಂಡವಾಳಶಾಹಿಗಳು ತಮಗೆ ಅನುಕೂಲವಾಗುವ ರೀತಿಯಲ್ಲಿ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಆರ್ಥಿಕ ನೀತಿಯನ್ನು ಆರ್ಥಿಕ ಯೋಜನೆಗಳನ್ನು ರೂಪಿಸುತ್ತವೆ. ಕಾರಣ ಈ ಯೋಜನೆಗಳು, ತೃತೀಯ ಜಗತ್ತಿನ ಸಾಮಾಜಿಕ ವ್ಯವಸ್ಥೆಯನ್ನು ಅರಿಯದೆ ರೂಪಿಸಿದವುಗಳಾಗಿವೆ. ಹೀಗಾಗಿ ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯ ಭಾಗವಾಗಿರುವ ಲಂಬಾಣಿ ಸಮುದಾಯ ಮತ್ತು ತಳಸಮುದಾಯಗಳ ಮೇಲೂ ಇವರ ರೀತಿ ನೀತಿಗಳು ಪರಿಣಾಮ ಬೀರಿವೆ.

ಸಾಮ್ರಾಜ್ಯಶಾಹಿಯು ತಾನು ಉತ್ಪಾದಿಸಿದ ಸರಕುಗಳನ್ನು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಯಥೇಚ್ಛವಾಗಿ ಹರಡಲು ಉದಾರೀಕರಣ ನೀತಿಯನ್ನು ಕಲ್ಪಿಸಲಾಗಿದೆ. ಉದಾರೀಕೃತ ಮಾರುಕಟ್ಟೆ, ಶ್ರೀಮಂತ ದೇಶಗಳ ಮಿಗಿತ ಸರಕುಗಳ ಮಾರಾಟಕ್ಕೆ, ತೃತೀಯ ಜಗತ್ತನ್ನು ವ್ಯಾಪಾರಿ ಜಗತ್ತಿನ ಒಟ್ಟು ಮಾರುಕಟ್ಟೆಯ ನೀತಿಯನ್ನು ತಾನೇ ರೂಪಿಸುವ, ನಿಯಂತ್ರಿಸುವ ಅಧಿಕಾರವನ್ನು ಸಾಮ್ರಾಜ್ಯಶಾಹಿ ಪಡೆದುಕೊಳ್ಳುತ್ತಿದೆ.[೫]

ಹೀಗೆ ಸಾಮ್ರಾಜ್ಯಶಾಹಿ ರೂಪಿತ ಮಾರುಕಟ್ಟೆ ನೀತಿಗಳಿಂದ ಮತ್ತು ಮಾರುಕಟ್ಟೆ ನಿಯಂತ್ರಣದಿಂದ ಈ ಮಾರುಕಟ್ಟೆಯ ವಸ್ತುಗಳ ಬೇಡಿಕೆ ಮತ್ತು ಪೂರೈಕೆ, ವಸ್ತುಗಳ ಗುಣಮಟ್ಟ ವಸ್ತುಗಳ ಬೆಲೆ ಇತ್ಯಾದಿಗಳು ಆಯಾ ದೇಶಗಳ ಸಾಮಾಜಿಕ ವ್ಯವಸ್ಥೆಯ ಮೆಲೆ ಪ್ರಭಾವ ಬೀರುತ್ತವೆ. ಇಂತಹ ಸಾಮಾಜಿಕ ವ್ಯವಸ್ಥೆಯ ಭಾಗವಾದ ಲಂಬಾಣಿಗರು ಸಹ ಪ್ರಭಾವಕ್ಕೊಳಗಾಗುತ್ತದೆ. ಇದರಿಂದಾಗಿಯೇ ಲಂಬಾಣಿಗರು ತಮ್ಮ ಕುಲಕಸುಬಿನಿಂದ ಉತ್ಪಾದಿಸಿದ ವಸ್ತುಗಳು ಆಧುನಿಕ ಕಾರ್ಖಾನೆಯಿಂದ ಉತ್ಪಾದಿಸಿದ ವಸ್ತುಗಳ ಜೊತೆಗೆ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಸಾಧ್ಯವಾಗುತ್ತಿಲ್ಲ. ಕಾರಣ ಕುಲಕಸಬುಗಳು ಅವನತಿಯ ಹಾದಿ ಹಿಡಿದಿವೆ. ಇದರಿಂದ ಈ ಸಮುದಾಯಕ್ಕೆ ಹೊಸ ದುಡಿಮೆಗಳಲ್ಲಿ ತೊಡಗಬೇಕಾದ ಅನಿವಾರ್ಯ ಉಂಟಾಗಿದೆ. ಪರಿಣಾಮವಾಗಿ ಆರ್ಥಿಕ ವ್ಯವಸ್ಥೆ ಏರುಪೇರಾಗಿರು ವುದಲ್ಲದೆ, ಸಾಮಾಜಿಕ ಬದುಕು ಸಹ ಏರುಪೇರಾಗಿದೆ.

"ವಿಶ್ವಬ್ಯಾಂಕ್ WTO, IMF ಮುಂತಾದ ಜಾಗತೀಕ ಸಂಸ್ಥೆಗಳು ಈ ಕೃತಿಯ ಜಗತ್ತಿನ ರಾಷ್ಟ್ರಗಳಿಗೆ ಕೇಳಿದಾಗೆಲ್ಲಾ ಸಾಲ ಕೊಡುತ್ತಿವೆ. ಅವು ಈ ದೇಶದ ಅಭಿವೃದ್ಧಿಯ ನೆಪಗಳನ್ನು ಮುಂದೂಡುತ್ತಿವೆ. ವಿಶ್ವಬ್ಯಾಂಕ್ ತಾನು ಹೂಡುವ ಬಂಡವಾಳವನ್ನು, ಯಾವ ಕ್ಷೇತ್ರದ ಮೆಲೆ ಹೂಡಬೇಕೆಂದು ತೃತೀಯ ಜಗತ್ತಿನ ದೇಶಗಳಿಗೆ ನಿರ್ದೇಶನ ಕೊಡುತ್ತಾ ಇರುತ್ತದೆ. ಇದರಿಂದ ತೃತೀಯ ಜಗತ್ತಿನ ದೇಶಗಳನ್ನು ತನ್ನ ಹಂಗಿನ

ಚೌಕಟ್ಟಿನೊಳಗೆ ಸಿಕ್ಕಿಸಿಕೊಂಡು, ಆ ದೇಶಗಳ ಆರ್ಥಿಕ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳುವುದು ಸಾಮ್ರಾಜ್ಯಶಾಹಿ ಉದ್ದೇಶವಾಗಿದೆ. ಮುಖ್ಯವಾಗಿ ಜಾಗತೀಕರಣದ ಕಪಿಮುಷ್ಠಿಯಿಂದ, ಇಡೀ ವಿಶ್ವವೇ ಏಕಾಧಿಪತ್ಯದ ಕೆಳಗೆ ತರುವುದು ಸಾಮ್ರಾಜ್ಯಶಾಹಿಗಳ ಉದ್ದೇಶವಾಗಿದೆ". ಈ ಉದ್ದೇಶಕ್ಕೋಸ್ಕರವಾಗಿಯೇ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಯೋಜನೆಗಳು, ಕಾರ್ಯಕ್ರಮಗಳು, ಕಾನೂನುಗಳು, ಶಾಸನಗಳು ಜಾರಿಗೆ ಬರುತ್ತವೆ. ಇವುಗಳು ಆ ದೇಶದಲ್ಲಿರುವ ಸ್ಥಿತಿಯನ್ನು ಅನುಸರಿಸಿ ಬಂದವುಗಳಲ್ಲ. ಈ ರಾಷ್ಟ್ರಗಳು ಸಾಮ್ರಾಜ್ಯಶಾಹಿಯ ಕೈಗೊಂಬೆಗಳಾಗಿರುವುದರಿಂದ ದೇಶದ ಜನರ ಹಿತಾಸಕ್ತಿಗಳ ಸಾಮ್ರಾಜ್ಯಶಾಹಿ ಹಿತಾಸಕ್ತಿಯೇ ಮುಖ್ಯವಾಗಿರುತ್ತದೆ. ಆದ್ದರಿಂದ ಈ ರಾಷ್ಟ್ರಗಳ ಯೋಜನೆಗಳು ತಮ್ಮ ರಾಷ್ಟ್ರದ ತಳ ಸಮುದಾಯಗಳಿಗೆ, ಬುಡಕಟ್ಟು ಸಮುದಾಯಗಳಿಗೆ ಸಮಸ್ಯೆಗಳನ್ನು ಮತ್ತು ಸವಾಲುಗಳನ್ನು ದೇಶದ ಅಭಿವೃದ್ಧಿಯ ನೆಪದಲ್ಲಿ ತಂದೊಡುತ್ತವೆ.

ಜಾಗತೀಕರಣದ ಪರಿಣಾಮವಾಗಿ ಅನೇಕ ಬಹುರಾಷ್ಟ್ರೀಯ ಕಂಪನಿಗಳು ಭಾರತ ದೇಶದಲ್ಲಿ ತಲೆಯೆತ್ತುತ್ತಿರುವುದರಿಂದ ಬುಡಕಟ್ಟು ಸಮುದಾಯಗಳು ಅಂದರೆ ಲಂಬಾಣಿ ಜನಾಂಗದವರು ತಮ್ಮ ಹೊಟ್ಟೆಪಾಡಿಗಾಗಿ ತಮ್ಮ ಮೂಲ ವೃತ್ತಿಗಳನ್ನು ತೊರೆದು ಇಂತಹ ಕಂಪನಿಗಳನ್ನು ಅಶ್ರಯಿಸುತ್ತಿದ್ದಾರೆ. ಈ ಕಂಪನಿಗಳಲ್ಲಿ ಈ ಸಮುದಾಯಗಳಿಗೆ ಉನ್ನತ ಮತ್ತು ಆದಾಯ ಬರುವ ಹುದ್ದೆಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಕೆಳವರ್ಗದ ನೌಕರಿಗಳನ್ನು ಪಡೆಯುವರು. ಕಂಪನಿಗಳ ಪರಿಣಾಮದಿಂದಾಗಿಯೇ ಕುಲಕಸಬುಗಳು ಮಾಯವಾಗಿವೆ. ಕಾರಣ ಲಂಬಾಣಿ ಸಮುದಾಯಗಳು ಈ ಕಂಪನಿಗಳಲ್ಲಿ ದುಡಿಯುವ ಅನಿವಾರ್ಯತೆ ಉಂಟಾಗುವುದು. ಪರಿಣಾಮವಾಗಿ ಕಡಿಮೆ ವೇತನದಲ್ಲಿ ಹೆಚ್ಚಿನ ಶ್ರಮವನ್ನು ಈ ಸಮದಾಯದ ಜನರಿಂದ ಪಡೆಯುವ ಮೂಲಕ ಕಂಪನಿಗಳು ಇವರನ್ನು ಶೋಷಣೆಗೆ ಒಳಪಡಿಸುತ್ತಿವೆ. ಹೀಗೆ ಉತ್ಪಾದನೆಯ ಮೂಲ ಬದಲಾದಂತೆಯೇ ಈ ಸಮಾಜ ಸಂಸ್ಕೃತಿಯು ಬದಲಾಗುತ್ತದೆ.

ವಿಜ್ಞಾನ ಮತ್ತು ತಂತ್ರಜ್ಞಾನ ಇವು ಇಂದು ಜಗತ್ತನ್ನೇ ಆಳುವ ಎರಡು ಬಹುದೊಡ್ಡ ಪರಿಕಲ್ಪನೆಗಳು. ವೈಜ್ಞಾನಿಕ ಮನೋಧರ್ಮ ಆಧುನೀಕರಣ ಪ್ರಗತಿಪರನಿಗೆ ಅತ್ಯವಶ್ಯಕ. ಆದರೆ ಇಂದು ವಿಜ್ಞಾನವು ವಿರಾಟರೂಪ ಪಡೆದುಕೊಂಡಿದೆ ಮತ್ತು ಮಾನವನ ಚರಿತ್ರೆಯನ್ನು ರೂಪಿಸುವಲ್ಲಿ ಮಹತ್ತರ ಪಾತ್ರವಹಿಸಿದೆ. ಅಷ್ಟೇ ಅಲ್ಲದೇ ಈ ಜಗತ್ತನ್ನು ಒಂದು ಅರ್ಥದಲ್ಲಿ ತೀವ್ರವಾಗಿ ಪ್ರೀತಿಸುವಂತೆ ಮತ್ತು ಬಯಸದ ಸುಖವನ್ನು ಥಟಕ್ಕನೇ ಸಿಗುವಂತೆ ಮಾಡಿದ್ದು ವಿಜ್ಞಾನ. ಇದರ ಪ್ರತಿಫಲವಾದ ತಂತ್ರಜ್ಞಾನವು ಯಂತ್ರ ಮತ್ತು ತಾಂತ್ರಿಕ ವಿಧಾನಗಳು ಸುವ್ಯವಸ್ಥಿತವಾದ ಜ್ಞಾನದ ಮೂಲಕ ಪ್ರಕೃತಿಯಲ್ಲಿ ಅಡಗಿರುವ ರಹಸ್ಯಗಳನ್ನು ಸಂಶೋಧಿಸುತ್ತಿವೆ. ಈ ಸಂಶೋಧನೆಗಳ ಜ್ಞಾನವನ್ನು ಮಾನವನ ಹಿತಕ್ಕಾಗಿ ಮತ್ತು ಸಮಾಜದ ಕಲ್ಯಾಣಕ್ಕಾಗಿ ಬಳಸುವುದೇ ತಂತ್ರಜ್ಞಾನದ ಗುರಿಯಾಗಿರುವುದು. ಪರಿಣಾಮವಾಗಿ ಮಾನವನ ಬದುಕು ಬದಲಾವಣೆಯ ಕಡೆ ಮುಖ ಮಾಡುವುದು. ವಿಜ್ಞಾನ ಮತ್ತು ತಂತ್ರಜ್ಞಾನಗಳು ಸಾಮ್ರಾಜ್ಯಶಾಹಿಯ ಒಡಲಿನಿಂದ ಹುಟ್ಟಿ ಬಂದವುಗಳಾಗಿರುವುದರಿಂದ ಇವುಗಳ ಮೂಲಕ ತೃತೀಯ ಜಗತ್ತಿನ ರಾಷ್ಟ್ರಗಳನ್ನು ಹಿಡಿತದಲ್ಲಿಟ್ಟುಕೊಳ್ಳುತ್ತದೆ.

ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮ ಈ ರಾಷ್ಟ್ರಗಳು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗುವಂತೆ ಮಾಡುತ್ತದೆ. ಅದರಲ್ಲೂ ಲಂಬಾಣಿಗರ ಸಾಮಾಜಿಕ ವ್ಯವಸ್ಥೆ ಮತ್ತು ಸಂಸ್ಕೃತಿ ಸ್ಥಿತ್ಯಂತರಕ್ಕ ಒಳಪಡಿಸುವುದು.

ವಿಜ್ಞಾನ ಮತ್ತು ತಂತ್ರಜ್ಞಾನ ಪ್ರತಿಫಲಗಳಾದ ಮಾಹಿತಿ ತಂತ್ರಜ್ಞಾನ ಮತ್ತು ಸಮೂಹ ಮಾಧ್ಯಮಗಳು ಸಾರಿಗೆ ವ್ಯವಸ್ಥೆ ಜಗತ್ತಿನ ಮೂಲೆ ಮೂಲೆಯನ್ನು ಮಾಹಿತಿ ಸಂಪರ್ಕದ ಮೂಲಕ ಸಮೀಪಿಸುತ್ತಿದೆ. ಇದರಿಂದ ಸಂಸ್ಕೃತಿಗಳು ಸಂಗಮಿಸುತ್ತವೆ. ಇದರಿಂದ ಸಂಸ್ಕೃತಿಗಳ ಕೊಡುಕೊಳ್ಳುವಿಕೆ ಪ್ರಾರಂಭವಾಗುವುದು. ಇದರಿಂದ ಆಧುನಿಕ ಸಮಾಜ, ಮುಖ್ಯವಾಹಿನಿ ಸಮಾಜದ ಸಂಸ್ಕೃತಿಯ ಬುಡಕಟ್ಟು ಸಮುದಾಯದ ತಳಸಮುದಾಯಗಳ ಸಂಸ್ಕೃತಿಯ ಮೇಲೆ ಪ್ರಭಾವ ಬೀರುವುದು. ಇದರಿಂದ ಸುಂದರವಾದ ಅಚ್ಛಾದಿತವಾದ ಈ ಸಂಸ್ಕೃತಿಯು ಕಣ್ಮರೆಯಾಗುವ ಹಂತಕ್ಕೆ ತಲುಪುತ್ತಿದೆ. ಆದರೂ ಸಮಾಜದಲ್ಲಿ ಅವುಗಳ ಛಾಯೇ ಇನ್ನೂ ಕಂಡುಬರುತ್ತಿದೆ. ಅಂದರೆ ಬದಲಾವಣೆಯ ರೂಪದಲ್ಲಿ ಈ ಸಂಸ್ಕೃತಿಗಳು ಆಧುನಿಕ ಸಮಾಜಗಳಲ್ಲಿ ಆಚರಣೆಯಲ್ಲಿವೆ.

ವಿಜ್ಞಾನ ತಂತ್ರಜ್ಞಾನದ ಅಭಿವೃದ್ಧಿಯ ಪ್ರತಿಫಲವಾಗಿ ಕೈಗಾರಿಕೀಕರಣವು ತೀವ್ರ ಸ್ವರೂಪ ಪಡೆದುಕೊಂಡಿದೆ. ಆಧುನಿಕ ಬಂಡವಾಳಶಾಹಿಯಿಂದ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ. ಇವು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ತಮ್ಮ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಈ ದೇಶಗಳ ಸಂಪನ್ಮೂಲಗಳನ್ನು ಬಳಸಿಕೊಂಡು ಅಧಿಕ ಆರ್ಥಿಕ ಉತ್ಪಾದನೆ ಮಾಡಿದರೂ ಸಹ ಈ ದೇಶಗಳಿಗೆ ಇವುಗಳಿಂದ ಯಾವುದೇ ಲಾಭವಿಲ್ಲ. ಇವುಗಳ ಲಾಭ ಬಂಡವಾಳಶಾಹಿಗಳೇ ಪಡೆದುಕೊಳ್ಳುತ್ತಿರುವರು. ಈ ದೇಶದ ಜನರು ಇವುಗಳ ಮೇಲೆ ಯಾವುದೇ ಅಧಿಕಾರ ಹೊಂದಿರುವುದಿಲ್ಲ. ಇವುಗಳಲ್ಲಿ ಉನ್ನತ ಹುದ್ದೆಗಳನ್ನು ನಿರ್ವಹಿಸುವವರು ಬೇರೆ ಬೇರೆ ದೇಶದವರಾಗಿದ್ದರು. ಇವರು ಇಂತಹ ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಮಾನವೀಯತೆಯಿಂದ ನೋಡುವುದಿಲ್ಲ. ಇವರಿಗೆ ಕಾರ್ಮಿಕರು ವಸ್ತುಗಳಂತೆ ಕಾಣುವರು. ಹೆಚ್ಚು ಕಾರ್ಮಿಕರು ಕೆಳಜಾತಿಯವರು, ಬುಡಕಟ್ಟು ಸಮುದಾಯದವರೇ ಆಗಿರುವವರು.

ತೀವ್ರ ಕೈಗಾರಿಕೀಕರಣದ ಪರಿಣಾಮವಾಗಿ ವಸ್ತುಗಳ ಉತ್ಪಾದನೆಯ ವಿಧಾನದಲ್ಲಿ, ಉತ್ಪಾದನೆಯ ವೇಗದಲ್ಲಿ, ವಸ್ತುಗಳ ಗುಣಮಟ್ಟಗಳಲ್ಲಿ ಬದಲಾವಣೆಯಾಗಿದೆ. ಅಲ್ಲದೇ ಹೊಸ ಹೊಸ ಉದ್ಯೋಗಾವಕಾಶಗಳು ಒದಗುತ್ತಿರುವುದರಿಂದ ಜನರ ದುಡಿಮೆಯ ರೂಪ ಸ್ವರೂಪಗಳು ಬದಲಾವಣೆಯಾದವು. ಇವುಗಳಲ್ಲಿ ಕೆಲಸ ಮಾಡಲು ಅಧಿಕ ಶ್ರಮಿಕರು ಅಗತ್ಯವಿರುವುದರಿಂದ, ಕಾಡುಗಳಲ್ಲಿರುವ ಬುಡಕಟ್ಟುಗಳನ್ನು ಹಳ್ಳಿಗಳಲ್ಲಿರುವ ಕೆಳಜಾತಿಗಳನ್ನು ಒಕ್ಕಲೆಬ್ಬಿಸಿ ಇಂತಹ ದುಡಿಮೆಗಳಲ್ಲಿ ತೊಡಗುವಂತೆ ಮಾಡುವರು. ಇವರು ಇಂತಹ ಕಾರ್ಖಾನೆಗಳ ಹತ್ತಿರದಲ್ಲಿಯೇ ನೆಲೆಸಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಇದರಿಂದಾಗಿ ಹಲವಾರು ಪ್ರದೇಶಗಳ ಜಾತಿಗಳ, ಧರ್ಮಗಳ ಜನರು ಒಟ್ಟಾಗಿ ನೆಲೆಸುವುದರಿಂದ, ಇಲ್ಲಿ ವಿವಿಧ ಸಂಸ್ಕೃತಿಗಳ ಧರ್ಮಗಳ ಸಂಗಮವಾಗುವುದು. ಕಾರಣ ತಮ್ಮ ಮೂಲ ಸಂಸ್ಕೃತಿ, ಧರ್ಮಗಳನ್ನು ಆಚರಿಸಿದರೂ ಇತರ ಸಂಸ್ಕೃತಿ ಧರ್ಮಗಳ ಆಚರಣೆಗಳಲ್ಲಿ ಪಾಲ್ಗೊಳ್ಳುವರು. ಇದರಿಂದ ಧಾರ್ಮಿಕ ಸಾಮರಸ್ಯ ಜಾತಿಯ ಸಿಡಿಲಿಕ್ಕೆ ಇತ್ಯಾದಿಗಳಿಂದ ಬುಡಕಟ್ಟುಗಳಲ್ಲಿ, ತಳ ಸಮುದಾಯಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರ ಉಂಟಾಗ ತೊಡಗಿದೆ.

ಇಂತಹ ಕೈಗಾರಿಕೆಗಳಿಂದ ಕೈಗಾರಿಕಾ ನಗರಗಳು ಹುಟ್ಟಿಕೊಂಡಿವೆ. ನಗರೀಕರಣ ಪ್ರಕ್ರಿಯೆ ತೀವ್ರ ಸ್ವರೂಪ ಪಡೆದುಕೊಂಡಿದೆ. ಇದರಿಂದ ತಳಸಮುದಾಯಗಳನ್ನು ನಗರಗಳು ಆಕರ್ಷಿಸುತ್ತಿವೆ. ಇದರಿಂದ ಈ ಸಮುದಾಯಗಳಲ್ಲಿ ವಲಸೆಯು ಕಂಡು ಬರುತ್ತದೆ. ಕಾರಣ ಇಂತಹ ಸಮುದಾಯ ನಗರಗಳ ಕೊಳಚೆ ಪ್ರದೇಶಗಳಲ್ಲಿ ನೆಲೆಸಬೇಕಾದ ಅನಿವಾರ್ಯತೆ ಉಂಟಾಗುವುದು. ಈ ಕೈಗಾರಿಕೀಕರಣ ಮತ್ತು ನಗರೀಕರಣದ ಪರಿಣಾಮವಾಗಿ ಸಮುದಾಯಗಳ ಜೀವನ ಶೈಲಿ, ಸಾಮಾಜಿಕ ಸಂಬಂಧಗಳು, ಸಾಮಾಜಿಕ ವರ್ತನೆಗಳು ಸಾಮಾಜಿಕ ನಿಯಂತ್ರಣದಲ್ಲಿ ಸಾಮಾಜಿಕ ಸಂಚಲನೆಯಲ್ಲಿ ಬದಲಾವಣೆಯಾಗುತ್ತಿದೆ.[೬]

ಶಿಕ್ಷಣವು ಬದಲಾವಣೆಯನ್ನು ತರುವ ಬಹು ಪರಿಣಾಮಕಾರಿ ಸಾಧನವಾಗಿದೆ. ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಕೈಗಾರಿಕೀಕರಣ, ನಗರೀಕರಣ, ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮದಿಂದ ಶೈಕ್ಷಣಿಕ ಸ್ವರೂಪದಲ್ಲಿ, ಶೈಕ್ಷಣಿಕ ವಿಧಾನಗಳಲ್ಲಿ ಬದಲಾವಣೆಯಾಗಿರುವುದು. ಇದು ಜನರ ಮನೋಭಾವ ಮತ್ತು ದೃಷ್ಟಿಕೋನಗಳನ್ನು ಬದಲಿಸುವುದು. ಶಿಕ್ಷಣವು ಆಧುನಿಕ ಉದ್ಯೋಗಗಳನ್ನು ಗಳಿಸಲು, ಸಾಮಾಜಿಕ, ಆರ್ಥಿಕ ಪ್ರತಿಫಲಗಳನ್ನುಗಳಿಸಲು ಸಹಾಯಕವಾಗಿದೆ. ಈ ಶಿಕ್ಷಣವು ತಳಸಮುದಾಯ, ಬುಡಕಟ್ಟು ಸಮುದಾಯಗಳು, ಮುಖ್ಯವಾಹಿನಿ ಎಂದು ಕರೆಯಲ್ಪಡುವ ಸಮಾಜದ ಸಂಪರ್ಕಕ್ಕಾಗಿ, ಕೈಗಾರಿಕೆಗಳಲ್ಲಿ ಉದ್ಯೋಗ ಪಡೆಯುವಲ್ಲಿ, ನಗರ ಜೀವನ ನಡೆಸುವ ಅನಿವಾರ್ಯತೆ ಉಂಟಾಗಿದೆ. ಆದರೆ ಇಂದು ತೃತೀಯ ಜಗತ್ತಿನಲ್ಲಿ ದೇಶಗಳಲ್ಲಿ ಶಿಕ್ಷಣವು ಖಾಸಗೀಕರಣವಾಗಿದೆ. ಪರಿಣಾಮವಾಗಿ ತಳಸಮುದಾಯಗಳು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮಾತ್ರ ಪಡೆಯುವರು. ವೈದಕೀಯ ಶಿಕ್ಷಣ, ತಾಂತ್ರಿಕ ಶಿಕ್ಷಣ, ಉನ್ನತ ಶಿಕ್ಷಣಗಳು ಕೇವಲ ಉನ್ನತ ವರ್ಗದವರ, ಮೇಲ್ಜಾತಿಯವರ ವಶವಾಗಿವೆ. ಅಲ್ಲದೆ ವಿಶ್ವವಿದ್ಯಾಲಯದಲ್ಲಿ ಪಠ್ಯಕ್ರಮ, ಸಂಶೋಧನಾ ವಿಧಾನಗಳು ರಚಿತವಾಗುವುದು ಅಂತರಾಷ್ಟ್ರೀಯ ಮಟ್ಟದಲ್ಲಿ ಅಂದರೆ ಸಾಮ್ರಾಜ್ಯಶಾಹಿ ಹಿತಾಸಕ್ತಿಯನ್ನು ಅವಲಂಬಿಸಿ ರಚಿತವಾಗಿರುತ್ತವೆ.

ಇಂಗ್ಲಿಷ್ ಜಾಗತಿಕ ಭಾಷೆಯಾಗಿದೆ. ಈ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆ ತಿಳಿಯದಿದ್ದರೆ ದಿನನಿತ್ಯದ ಬದುಕು ಕಷ್ಟವಾಗುತ್ತದೆ ಎಂದು ಜನರು ತಿಳಿದಿದ್ದಾರೆ. ಜಗತ್ತಿನ ರಾಷ್ಟ್ರಗಳು ಇಂಗ್ಲಿಷ್ ಭಾಷೆಯನ್ನು ಆಡಳಿತ ಭಾಷೆಯಾಗಿ ಮಾಡಿಕೊಂಡಿವೆ. ಪರಿಣಾಮವಾಗಿ ವಾಣಿಜ್ಯ ವ್ಯಾಪಾರ ಮಾಡುವುದಕ್ಕೆ, ಉನ್ನತ ಶಿಕ್ಷಣಕ್ಕೆ, ಉನ್ನತ ಹುದ್ದೆಗಳನ್ನು ಪಡೆಯಲು ಇಂಗ್ಲಿಷ್ ಅತ್ಯಗತ್ಯವಾಗಿದೆ. ಸಾಮಾಜಿಕ ಪ್ರಜ್ಞೆಯನ್ನು ಮೂಡಿಸುವ ಮತ್ತು ಸಮಾಜದ ಅಭಿವೃದ್ಧಿಪಡಿಸುವ ಮಾನವಿಕ ವಿಜ್ಞಾನಗಳು ಮತ್ತು ಭೌತಿಕ ವಿಜ್ಞಾನಗಳು ಇಂಗ್ಲಿಷ್ ಭಾಷೆಯಲ್ಲಿಯೇ ಇವೆ. ಅಲ್ಲದೇ ಪ್ರಪಂಚದ ಮಹಾಕಾವ್ಯಗಳು ಧಾರ್ಮಿಕ ಗ್ರಂಥಗಳು, ಪ್ರಮುಖ ಕಥೆ ಕಾದಂಬರಿಗಳು ಇಂಗ್ಲಿಷ್‌ಗೆ ಭಾಷಾಂತರವಾಗಿವೆ. ಆಧುನಿಕ ಬದುಕಿಗೆ ಹೊಂದಿಕೊಳ್ಳಲು, ಬೇರೆ ಬೇರೆ ದೇಶಗಳ ಸಾಹಿತ್ಯ ಚರಿತ್ರೆಗಳನ್ನು ತಿಳಿಯಬೇಕಾದರೆ ಶಿಕ್ಷಣ ಅಗತ್ಯವಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಸಮುದಾಯವನ್ನು ಕುರಿತು ಅಧ್ಯಯನ ಮಾಡಿದ ಹಲವಾರು ಅಧ್ಯಯನಕಾರರ ಗ್ರಂಥಗಳು ಇಂಗ್ಲಿಷ್‌ನಲ್ಲಿವೆ. ಅಲ್ಲದೆ ಇವರ ಅಧ್ಯಯನದಿಂದ ಬುಡಕಟ್ಟು ಭಾಷೆಗಳು ಆಧುನಿಕ ಜಗತ್ತಿಗೆ ಪರಿಚಯವಾದವು. ಅಲ್ಲದೇ

ಇಂಗ್ಲಿಷ್ ಭಾಷೆಯನ್ನು ತಮ್ಮ ಪರಿಶುದ್ಧ ಭಾಷೆಯಲ್ಲಿ ಸೇರಿಸಿ ಮಾತನಾಡುವುದಕ್ಕೆ ಕಲಿತುಕೊಂಡರು. ಈ ಇಂಗ್ಲಿಷ್ ಭಾಷೆಯಿಂದಾಗಿಯೂ ಆಧುನಿಕ ಜಗತ್ತಿಗೆ ಮುಖ ಮಾಡಲು ಸಾಧ್ಯವಾಯಿತು.

ಒಟ್ಟಾರೆಯಾಗಿ ತೃತೀಯ ಜಗತ್ತಿನ ಆರ್ಥಿಕಾಭಿವೃದ್ಧಿಗೆ ಕಾರಣವಾಗುವ ಮಹತ್ವದ ಕ್ಷೇತ್ರಗಳನ್ನು ಖಾಸಗೀಕರಣದ ಹೆಸರಲ್ಲಿ ಸಾಮ್ರಾಜ್ಯಶಾಹಿಗಳು ವಶಪಡಿಸಿಕೊಂಡಂತೆ, ಉದಾರೀಕರಣದ ನೆಪದಲ್ಲಿ ತೃತೀಯ ಜಗತ್ತಿನ ಒಟ್ಟು ಮಾರುಕಟ್ಟೆಯ ನೀತಿಯನ್ನು ರೂಪಿಸುವ, ನಿಯಂತ್ರಿಸುವ ಅಧಿಕಾರವನ್ನು ಪಡೆದುಕೊಂಡಿವೆ. ಅಲ್ಲದೇ ಜಾಗತಿಕ ಸಂಸ್ಥೆಗಳು ಹೂಡುವ ಬಂಡವಾಳವು ತೃತೀಯ ಜಗತ್ತಿನ ದೇಶಗಳ ಅಭಿವೃದ್ಧಿಗಾಗಿ ಎಂದು ಹೇಳಿಕೊಂಡರೂ ಅವುಗಳ ಉದ್ದೇಶ ಆರ್ಥಿಕ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳುವುದಾಗಿದೆ. ಅಂದರೆ ಸಾಮ್ರಾಜ್ಯಸಾಹಿಯು ತೃತೀಯ ಜಗತ್ತಿನ ಆರ್ಥಿಕ ಸಂಪನ್ಮೂಲಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದೇ ಇದರ ಉದ್ದೇಶವಾಗಿದೆ. ಇದರ ಪರಿಣಾಮದಿಂದ ಸಮಾಜ, ಸಂಸ್ಕೃತಿ ಸ್ಥಿತ್ಯಂತರಗೊಂಡಿವೆ. ಕಾರಣ ಆರ್ಥಿಕ ಅಂಶಗಳು ಧರ್ಮವನ್ನೊಳ ಗೊಂಡಂತೆ ಇತರ ಅಂಶಗಳನ್ನು ಪ್ರಭಾವಿಸುತ್ತವೆ ಎಂಬ ಮಾರ್ಕ್ಸ್‌ನ ನಿಲುವು ಸ್ಪಷ್ಟವಾಗುವುದು.

ಜಾತೀಕರಣದಿಂದ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿನ ಬದಲಾವಣೆಯು ಈ ದೇಶದ ತಳಸಮುದಾಯಗಳು, ಬುಡಕಟ್ಟು ಸಮುದಾಯಗಳು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಬರಲು ಕಾರಣವಾಯಿತು. ಅದರಂತೆ ಲಂಬಾಣಿ ಸಮುದಾಯವು ಸಾಂಸ್ಕೃತಿಕ ಸ್ಥಿತ್ಯಂತರಗೊಂಡಿದೆ.

ಸಾಮಾನ್ಯವಾಗಿ ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಬುಡಕಟ್ಟು ನೆಲೆಯಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದವು. ಆದರೆ ಲಂಬಾಣಿ ಸಮುದಾಯದಲ್ಲಿ ಬುಡಕಟ್ಟು ಲಕ್ಷಣಗಳು ಮರೆಯಾಗಿ ಜಾತಿಯ ಸ್ವರೂಪ ಮೂಡಿವೆ. ಕಾರಣ ಈ ಜಾಗತೀಕರಣ ಸಂದರ್ಭದಲ್ಲಿ ಈ ಸಮುದಾಯದಲ್ಲಿ ಶೇ.೭೦ರಷ್ಟು ವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ಅಷ್ಟೇ ಅಲ್ಲದೆ ನಗರಗಳಲ್ಲಿ ಕೇಂದ್ರಿತ ಕುಟುಂಬಗಳು ಮತ್ತು ಅಣು ಕುಟುಂಬಗಳು ಸಹ ಕಂಡು ಬರುತ್ತಿವೆ. ಇದರ ಪರಿಣಾಮವಾಗಿ ಕುಟುಂಬದ ಮುಖ್ಯಸ್ಥನು ಕುಟುಂಬದ ಹಿರಿಯನು ಪುರುಷನೇ ಆಗಿರಬೇಕಾದ ಅನಿವಾರ್ಯತೆ ಯಲ್ಲ. ಈಗ ಸಾಮಾನ್ಯವಾಗಿ ವಿಭಕ್ತ ಮತ್ತು ಅಣುಕುಟುಂಬಗಳು ಹೆಚ್ಚಾಗಿರುವುದರಿಂದ, ಈ ಕುಟುಂಬದ ಮುಖ್ಯಸ್ಥರು ಸ್ತ್ರೀ-ಪುರುಷರಿಬ್ಬರೂ ನಿಭಾಯಿಸುವವರು ಮತ್ತು ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಕುಟುಂಬದ ಎಲ್ಲರೂ ಸೇರಿ ಚರ್ಚಿಸಿ ತೆಗೆದುಕೊಳ್ಳುವರು. ಲಂಬಾಣಿ ಸ್ತ್ರೀಯರು ಆಧುನಿಕ ಸಮಾಜದಲ್ಲಿಯ ಸ್ತ್ರೀಯರಷ್ಟು ಕೌಟುಂಬಿಕ ಸ್ವಾತಂತ್ರ್ಯ ಪಡೆಯದಿದ್ದರೂ ಸಹ ಕೌಟುಂಬಿಕವಾಗಿ ಸ್ವಲ್ಪಮಟ್ಟಿಗಾದರೂ ಸ್ವತಂತ್ರರಾಗಿದ್ದಾರೆ. ಒಟ್ಟಾರೆಯಾಗಿ ಲಂಬಾಣಿಗರ ಕುಟುಂಬದ ಮುಖ್ಯಸ್ಥನ ಅಧಿಕಾರದಲ್ಲಿ ಮತ್ತು ಕೌಟುಂಬಿಕ ಸಂಬಂಧಗಳಲ್ಲಿ ಸ್ಥಿತ್ಯಂತರವಾಗಿವೆ.

ಈ ಎರಡು ಸಮುದಾಯಗಳು ಜಾತಿಯ ಸ್ವರೂಪವನ್ನು ಪಡೆದಿದ್ದರಿಂದ, ಜಾತಿಯ ಶ್ರೇಣೀಕರಣದಲ್ಲಿ ಕೆಳಸ್ಥಾನವನ್ನು ಪಡೆದಿವೆ. ಅಲ್ಲದೆ ಇತರ ಜಾತಿಗಳಿಗಿಂತ ಹಿಂದುಳಿದ ಜಾತಿಗಳು ಆಗಿವೆ. ವರ್ತಮಾನದಲ್ಲಿ

ಜಾತಿಯ ಅಂತರ ಕಡಿಮೆಯಾಗಿದ್ದಕ್ಕೆ ಮತ್ತು ಜಾತಿ ಜಾತಿಗಳ ಮಧ್ಯೆ ಇರುವ ನಿರ್ಬಂಧಗಳಲ್ಲಿ ಸಡಿಲಿಕೆಯಾಗಿದೆ. ಜಾಗತೀಕರಣದ ಪರಿಣಾಮವಾಗಿ ಎಲ್ಲಾ ಜಾತಿಗಳು ಸ್ವಾಲಂಬಿಗಳಾಗಿದ್ದರಿಂದ ಇನ್ನೊಂದು ಜಾತಿಯ ಅಧೀನದಲ್ಲಿರಬೇಕಾದ ಅನಿವಾರ್ಯತೆಯಿಲ್ಲ.

ಲಂಬಾಣಿ ಸಮುದಾಯಗಳಲ್ಲಿ ಏರ್ಪಾಡು ಮದುವೆಗಳಿವೆ. ಈ ಮದುವೆಗಳು ಸಾಮಾನ್ಯವಾಗಿ ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಆದರೆ ಇವುಗಳ ರೂಪ, ಸ್ವರೂಪ ಬದಲಾಗಿರುವವು. ವಧು-ವರರು ಬಾಳ ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರ್ಯವನ್ನು ಪಡೆದುಕೊಂಡಿರುವರು. ಇವುಗಳು ತಮ್ಮ ಮೂಲ ಆಚರಣೆಗಳನ್ನು ರೂಪಾಂತರಿಸಿಕೊಂಡಿವೆ. ಆಧುನಿಕ ಆಚರಣೆಗಳಾದ ಹುಟ್ಟುಹಬ್ಬದ ಆಚರಣೆಗಳು, ವಿವಾಹದ ವಾರ್ಷಿಕೋತ್ಸವ ಇತ್ಯಾದಿ ಹಲವಾರು ಆಚರಣೆಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.

ಲಂಬಾಣಿ ಸಮುದಾಯದ ಜನರು ಸಾಮಾನ್ಯವಾಗಿ, ಹೊಸ ಹೊಸ ಉದ್ಯೋಗಾವಕಾಶಗಳಿಂದಾಗಿ, ಸ್ವಾವಲಂಬಿಗಳು, ಸ್ವಾರ್ಥಿಗಳು ಇತ್ಯಾದಿ ಸಾಮಾಜಿಕ ವರ್ತನೆಗಳಿಗೆ, ಸ್ಥಿತ್ಯಂತರಗೊಂಡಿದ್ದಾರೆ. ಅಂದರೆ ಸಮುದಾಯದ ಐಕ್ಯತೆ ಸಡಿಲಗೊಂಡಿದೆ. ಸಾಮಾಜಿಕ ಸಂಬಂಧಗಳಲ್ಲಿ ಆತ್ಮೀಯತೆ, ಅನ್ಯೋನ್ಯತೆ ಕಾಣುತ್ತಿಲ್ಲ ಹಾಗೂ ಸಾಮಾಜಿಕ ವರ್ತನೆಗಳಲ್ಲಿಯೂ ವಿನಯ ವಿಧೇಯತೆಗಳು ಮಾಯವಾಗಿವೆ. ಒಟ್ಟಾರೆಯಾಗಿ ಸಮುದಾಯದ ರಚನೆ ಮತ್ತು ಕಾರ್ಯಗಳು ಸ್ಥಿತ್ಯಂತರಗೊಂಡಿದೆ.

ಅರಿಸ್ಟಾಟಲನು ಮಾನವನು ಸಂಘಜೀವಿ ಎಂದು ಹೇಳುವುದರ ಮೂಲಕ ರಾಜಕೀಯ ಜೀವಿಯಾಗಿದ್ದಾನೆ ಎಂದು ಹೇಳಿದ್ದಾರೆ. ಇರಿಂದ ಮಾನವನಿಗೆ ರಾಜಕೀಯವು ಅತ್ಯಗತ್ಯವಾಗಿದೆ ಎಂದು ಸ್ಪಷ್ಟವಾಗುತ್ತದೆ. ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ತಾಂಡಗಳಲ್ಲಿ ಹರಡಿರುವ ರಾಜಕೀಯ ಪ್ರಭಾವ ನೋಡಿದಾಗ ಈ ಮೇಲಿನ ಮಾತು ಸ್ಪಷ್ಟವಾಗುವುದು. ಈ ಸಮುದಾಯ ಪ್ರಜಾಸತ್ತಾತ್ಮಕ ಸರ್ಕಾರ ಪದ್ಧತಿಯಲ್ಲಿದ್ದು, ಸಂವಿಧಾನಬದ್ಧವಾಗಿ ಮತ ಹಾಕುವ ಹಕ್ಕನ್ನು ಹೊಂದಿದ್ದಾರೆ. ಆದರೆ ಶೇ. ೫ಂರಷ್ಟು ಜನರು ಸ್ವತಂತ್ರವಾಗಿ, ರಾಜಕೀಯ ಪ್ರಜ್ಞೆಯಿಂದ ಮತ ಚಲಾಯಿಸುತ್ತಿಲ್ಲ. ಇದರಿಂದ ಇವರ ಹಕ್ಕು ದುರುಪಯೋಗವಾಗುತ್ತಿದೆ. ಈ ಸಮುದಾಯದ ಜನರು ಸಾಮಾನ್ಯವಾಗಿ ಎಲ್ಲಾ ಪಕ್ಷಗಳ ಬೆಂಬಲಿಗರಾಗಿದ್ದಾರೆ. ಈ ಸಮುದಾಯ ಬೇರೆ ಬೇರೆ ಚುನಾವಣೆಯಲ್ಲಿ ಬೇರೆ ಬೇರೆ ಪಕ್ಷಗಳನ್ನು ಬೆಂಬಲಿಸಿರುವುದರಿಂದ ಇವರು ಯಾವುದೇ ರಾಜಕೀಯ ಬದ್ಧತೆ ಮತ್ತು ರಾಜಕೀಯ ಸಂಹಿತೆಯನ್ನು ಹೊಂದಿಲ್ಲ. ಅದ್ದರಿಂದ ಈ ಮೇಲಿನ ಮಾತು ಸ್ಪಷ್ಟವಾಗುವುದು. ಈ ಸಮುದಾಯ ಮೀಸಲಾತಿಯ ಮೂಲಕ ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿಗಳ ಮಟ್ಟಗಳಲ್ಲಿ ಅಧಿಕಾರವನ್ನು ಪಡೆದಿವೆ. ಆದರೆ ಈ ಅಧಿಕಾರಗಳನ್ನು ಮೇಲ್ಜಾತಿಯವರು, ಬಂಡವಾಳಶಾಹಿಗಳ ಅಧೀನವಾಗಿ ಚಲಾಯಿಸುತ್ತಿದ್ದಾರೆ. ಇಂತಹ ಅಧಿಕಾರ ಇವರಿಗೆ ನಾಮಮಾತ್ರವಾಗಿದೆ.

ಲಂಬಾಣಿ ಸಮುದಾಯದಲ್ಲಿ ಕುಲ ಪಂಚಾಯಿತಿ ಇದೆ. ಆದರೆ ಆಧುನಿಕ ಜಗತ್ತಿನಲ್ಲಿರುವುದರಿಂದ ಯಾವುದೇ ಅಂತಿಮ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿಲ್ಲ. ಈ ಸಮುದಾಯದಲ್ಲಿ

ಯಾವುದೇ ದಂಡ ವಿಧಿಸುವ ಅಥವಾ ಶಿಕ್ಷೆ ವಿಧಿಸುವ ಅಧಿಕಾರ ಕಳೆದುಕೊಂಡಿದೆ. ಆದ್ದರಿಂದ ಇದರ ಒಟ್ಟಾರೆಯ ಸ್ವರೂಪವು ಬದಲಾಗಿದೆ. ಕುಲ ಪಂಚಾಯಿತಿ ನಿರ್ವಹಣೆ ಮಾಡುವವರಲ್ಲಿ ಭಿನ್ನತೆ ಉಂಟಾಗಿರುವುದರಿಂದ ಇದನ್ನು ಯಾರು ಗೌರವಿಸುವಂತಿಲ್ಲ. ಕಾರಣ ಸಮುದಾಯದ ವ್ಯಾಜ್ಯಗಳು ಕೋರ್ಟು, ಕಛೇರಿ ಮೆಟ್ಟಿಲುಗಳನ್ನು ತುಳಿಯುತ್ತಿವೆ. ಆದುದರಿಂದ ಆಧುನಿಕ ಯುಗದಲ್ಲಿ ಕುಲ ಪಂಚಾಯಿತಿಗಳು ಮರೆಯಾಗುತ್ತಿವೆ.

ಈ ಸಮುದಾಯ ಯಾವುದೇ ವಾದ ಸಿದ್ಧಾಂತ ತತ್ವಗಳಿಗೆ ಜೋತುಬಿದ್ದಿಲ್ಲ. ಶೇ. ೫೦ರಷ್ಟು ಜನರು ದಿನನಿತ್ಯದ ಬದುಕು ನಡೆಸಲು ತೊಂದರೆ ಇರುವುದರಿಂದ ಇವರು ರಾಜಕೀಯದಿಂದ ದೂರ ಉಳಿದಿದ್ದಾರೆ. ಈ ಸಮುದಾಯದಲ್ಲಿ ಹೆಚ್ಚಿನ ಮಟ್ಟದಲ್ಲಿ ಜಾತಿ ಸಂಘಟನೆಗಳಿದ್ದರೂ ಅವು ಯಾವುದೇ ಅಭಿವೃದ್ಧಿಯನ್ನು ಹೊಂದಿರುವುದಿಲ್ಲ ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವ ಮಟ್ಟದಲ್ಲಿಲ್ಲ. ಅವು ಕೇವಲ ಲೇಟರ್ ಪ್ಯಾಡ್ ಸಂಘಟನೆಗಳಾಗಿ ಉಳಿದಿವೆ.

''ಬುಡಕಟ್ಟುಗಳಲ್ಲಿ ಯಾವುದೇ ಧರ್ಮವಿರಲಿಲ್ಲ, ಅದಕ್ಕೆ ಬದಲಾಗಿ ಆಧ್ಯಾತ್ಮ ಅಥವಾ ಅನುಭಾವವಿತ್ತು. ಆಧುನಿಕ ಧರ್ಮಗಳಂತೆ ಪೂರ್ವಾಗ್ರಹ ಪೀಡಿತವಾದ ಮತ್ತು ಮೂಲಭೂತವಾದ ಧರ್ಮವಾಗಿರಲಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಲಂಬಾಣಿ ಸಮುದಾಯಗಳ ಅಧ್ಯಯನದಿಂದ ಈ ಸಮುದಾಯಗಳು ಪೂರ್ವಾಗ್ರಹ ಪೀಡಿತವಾದ ಮತ್ತು ಮೂಲಭೂತವಾದ ಧರ್ಮದಲ್ಲಿ ಸೇರಿ ಹೋಗಿದೆ. ಪೂರ್ವದಲ್ಲಿ ಸಮುದಾಯಗಳ ಆಧ್ಯಾತ್ಮ ಮತ್ತು ಹಿಂದೂ ಧರ್ಮ ಭಿನ್ನವಾಗಿದ್ದವು. ಆದರೆ ಈ ದಿನಗಳಲ್ಲಿ ಆ ಸಮುದಾಯ ಆಧ್ಯಾತ್ಮ ಮರೆಯಾಗಿ ಹಿಂದೂ ಧರ್ಮದ ಛಾಯೆ ಅತಿಯಾಗಿರುವುದು ಕಂಡು ಬರುತ್ತದೆ.''[೭]

ವೈದಿಕ ಧರ್ಮಕ್ಕೆ ಸಂಬಂಧಿಸಿದ ಹಬ್ಬ ಹರಿದಿನಗಳಾದ ಯುಗಾದಿ, ದೀಪಾವಳಿ. ಮಹಾನವಮಿಯನ್ನು ಆಚರಿಸುತ್ತಾರೆ. ಅಲ್ಲದೆ ಹೊಸ ಮನೆಯನ್ನು ಕಟ್ಟುವಾಗ ಅಥವಾ ಇನ್ನು ಬೇರೆ ಕಾರಣಗಳಲ್ಲಿ ಸತ್ಯನಾರಾಯಣ ಪೂಜೆ, ಲಕ್ಷ್ಮಿವ್ರತ, ಗೌರಿವ್ರತ, ಇತ್ಯಾದಿ ವ್ರತಗಳನ್ನು ಈ ಸಮುದಾಯ ಮಾಡುತ್ತದೆ. ಇತ್ತೀಚಿನ ದಿನಗಳಲ್ಲಿ ಅಲ್ಲಲ್ಲಿ ಮಠಗಳು, ಭಕ್ತರು ಮತ್ತು ಶಿಷ್ಯರನ್ನು ನೋಡುತ್ತೇವೆ. ಪ್ರಸ್ತುತ ಪ್ರಖ್ಯಾತಿ ಪಡೆದ ದೇವರುಗಳಾದ ತಿರುಪತಿ ತಿಮ್ಮಪ್ಪ, ಧರ್ಮಸ್ಥಳದ ಮಂಜುನಾಥ, ಮಂತ್ರಾಲಯದ ರಾಘವೇಂದ್ರ, ತುಳಜಾಭಾವನಿ, ಹುಲಿಗೆಮ್ಮ, ಗಾಳೆಮ್ಮ ಇನ್ನೂ ಮುಂತಾದ ದೇವರುಗಳಿಗೆ ಈ ಸಮುದಾಯ ನಡೆದುಕೊಳ್ಳುತ್ತದೆ.

ಈ ಸಮುದಾಯ ಹಿಂದೂ ಧರ್ಮದ ಸಂಸ್ಕಾರಗಳಾದ ಗರ್ಭದಾನ, ಸೀಮಂತ, ನಾಮಕರಣ, ಜಾತಕರ್ಮ, ಇತ್ಯಾದಿ ಸಂಸ್ಕಾರಗಳನ್ನು ಆಚರಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಆಚರಣೆಯು ವಿಧಿವಿಧಾನಗಳಲ್ಲಿ ಸಮುದಾಯದ ಒತ್ತಡದಿಂದ ರೂಪಾಂತರವಾಗಿದೆ. ಅಲ್ಲದೆ ಲಂಬಾಣಿಗಳು ಮೂಲ ಕ್ರಿಯಾ ವಿಧಿಗಳು ನಂಬಿಕೆಗಳು. ಮೌಲ್ಯಗಳ ಜೊತೆಗೆ ಹಿಂದೂ ಧರ್ಮವೂ ಸೇರಿಕೊಂಡಿರುವುದು ಇವು ಪ್ರಸ್ತುತ ಕಾಲಾನುಕ್ಕನುಗುಣವಾಗಿ ರೂಪಾಂತರ ಹೊಂದಿದೆ.

ಬುಡಕಟ್ಟು ಸಮುದಾಯಗಳಲ್ಲಿ ಶೈಕ್ಷಣಿಕ ಸಂಸ್ಥೆಗಳು ಎಂಬ ಪ್ರತ್ಯೇಕ ಸಂಸ್ಥೆಗಳೇ ಇದ್ದಿರಲಿಲ್ಲ. ಇವರಲ್ಲಿ ಅನೌಪಚಾರಿಕ ಶಿಕ್ಷಣವು ಆಚರಣೆಯಲ್ಲಿತ್ತು. ಇಂತಹ ಶಿಕ್ಷಣ ನೀಡುವ ಹೊಣೆಗಾರಿಕೆ ಕುಟುಂಬದ್ದಾಗಿತ್ತು. ಸಂಸ್ಕೃತಿಗಳು ಸಂಕೀರ್ಣಗೊಳ್ಳುತ್ತಾ ಬಂದಂತೆ ಕುಟುಂಬದೊಳಗಿನ ಕಲಿಕೆ ಅಸಾಧ್ಯವಾಗಿ ಶೈಕ್ಷಣಿಕ ಸಂಸ್ಥೆಗಳು ಹುಟ್ಟಿಕೊಂಡವು. ಲಂಬಾಣಿ ಸಮುದಾಯವು ಸಹ ಸರಳತೆಯಿಂದಲೇ ಸಂಕೀರ್ಣಗೊಂಡಿದೆ. ಈ ಸಮುದಾಯ ಸಹ ಅನೌಪಚಾರಿಕ ಶಿಕ್ಷಣದಿಂದ ಔಪಚಾರಿಕ ಶಿಕ್ಷಣವನ್ನು ಪಡೆಯುತ್ತಿದೆ. ಇಂತಹ ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ಸಂವರ್ಧನೆಗೆ, ಉದ್ಯೋಗಗಳನ್ನು ಪಡೆದುಕೊಳ್ಳಲು ಉನ್ನತ ಸಾಮಾಜಿಕ ಸ್ಥಾನಮಾನಗಳನ್ನು ಹೊಂದಲು ಶಿಕ್ಷಣವು ಅವಶ್ಯಕ. ಸಮುದಾಯ ಸಂವರ್ಧನೆಗೂ ಇಂತಹ ಶಿಕ್ಷಣದ ಅವಶ್ಯಕವಾಗಿವೆ. ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಅತ್ಯಂತ ಚಿಕ್ಕ ತಾಂಡಗಳಲ್ಲಿ ಪ್ರಾಥಮಿಕ ಶಾಲೆಗಳಿವೆ. ೪ ಅಥವಾ ೫ ಕಿ.ಮೀ. ದೂರದಲ್ಲಿ ಮಾಧ್ಯಮಿಕ ಮತ್ತು ಪ್ರೌಢ ಶಾಲೆಗಳಿವೆ. ಈ ಕಾರಣಕ್ಕಾಗಿ ಈ ಸಮುದಾಯದ ಪ್ರಾಥಮಿಕ ಮತ್ತು ಮಾಧ್ಯಮ ಶಿಕ್ಷಣ ಅಧಿಕ ಸಂಖ್ಯೆಯಲ್ಲಿದೆ. ಆದರೆ ಈ ಸಮುದಾಯದಲ್ಲಿ ಇಂಜಿನಿಯರಂಗ್ ಪದವಿ, ವೈದ್ಯಕೀಯ ಪದವಿ, ಸ್ನಾತಕೋತ್ತರ ಶಿಕ್ಷಣದಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳಿರುವುದು ಕಂಡುಬರುತ್ತದೆ. ಕರ್ನಾಟಕ ಸರ್ಕಾರದ ಕೆಲವು ಸವಲತ್ತುಗಳಿಂದ ಅಂದರೆ ಮೀಸಲಾತಿಯಿಂದಾಗಿ ಇತ್ತೀಚಿನ ದಿನಗಳಲ್ಲಿ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣದಲ್ಲಿ ಸ್ವಲ್ಪಮಟ್ಟಿಗೆ ವಿದ್ಯಾರ್ಥಿಗಳು ಮುಂದುವರಿಯುತ್ತಿದ್ದಾರೆ. ಜೊತೆಗೆ ಆರ್ಥಿಕ ಹಿನ್ನೆಲೆ, ಕೌಟುಂಬಿಕ ಹಿನ್ನೆಲೆ, ರಾಜಕೀಯ ಹಿನ್ನೆಲೆಯನ್ನು ಹೊಂದಿದವರಾಗಿದ್ದಾರೆ. ಆದುದರಿಂದ ವೈದಕೀಯ ಮತ್ತು ತಾಂತ್ರಿಕ ವಿಭಾಗಗಳಲ್ಲಿ ಲಂಬಾಣಿ ಸಮುದಾಯದ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯುವಲ್ಲಿ ಈಗ ಹಿಂದೆ ಉಳಿಯುತ್ತಿಲ್ಲ.

ಈ ಸಮುದಾಯಗಳಲ್ಲಿ ಶಾಲೆ ಬಿಡುವ ಮಕ್ಕಳ ಸಂಖ್ಯೆ ಗಣನೀಯವಾಗಿ ಹೆಚ್ಚಳವಾಗಿರುವುದು. ಅದರಲ್ಲೂ ಹೆಣ್ಣುಮಕ್ಕಳ ಸಂಖ್ಯೆ ಇನ್ನೂ ಅಧಿಕವಾಗಿರುವುದು ಇತ್ತೀಚಿನ ದಿನಗಳಲ್ಲಿ ಬಹಳ ಕಂಡುಬರುತ್ತಿದೆ. ಕೃಷಿ ಕೆಲಸಕ್ಕೆ ಬಹಳ ಜನರು ಬೇಕಾಗುವುದು, ಶಾಲೆಯಿಂದ ದುಡಿಯುವ ವಯಸ್ಸು ಕಡಿಮೆಯಾಗುವುದು, ಸಂಪ್ರದಾಯದ ಜಾಡ್ಯ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸದೇ ಇರುವುದು ಇತ್ಯಾದಿಗಳು ಶಾಲೆ ಬಿಡುವ ಮಕ್ಕಳ ಸಂಖ್ಯೆಯ ಹೆಚ್ಚಳಕ್ಕೆ ಕಾರಣವಾಗಿದೆ. ಸಾಮಾನ್ಯವಾಗಿ ಈ ಸಮುದಾಯದ ವಿದ್ಯಾರ್ಥಿಗಳು ಹೆಚ್ಚಾಗಿ ಕಲಾ ವಿಭಾಗವನ್ನು ತಮ್ಮ ಅಭ್ಯಾಸಕ್ಕಾಗಿ ಹೆಚ್ಚಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಯಾಕೆಂದರೆ ಅವರ ಆರ್ಥಿಕ ಪರಿಸ್ಥಿತಿಯ ಉತ್ತಮವಾಗಿಲ್ಲ ದಿರುವುದೇ ಇದಕ್ಕೆ ಕಾರಣ. ಇತ್ತೀಚಿನ ದಿನಗಳಲ್ಲಿ ಈಗಿನ ವಿದ್ಯಾರ್ಥಿಗಳ ಬುದ್ಧಿವಂತಿಕೆಯಿಂದ ಹೆಚ್ಚಾಗಿ ವಿಜ್ಞಾನ, ಐಟಿಟಿ., ಡಿಐಪಿ ಇನ್ನು ಮುಂತಾದ ವಿಷಯಗಳನ್ನು ತಮ್ಮ ಅಭ್ಯಾಸಕ್ಕಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ. ಇದರಿಂದಾಗಿ ಈ ಸಮುದಾಯದಲ್ಲಿ ನಿರುದ್ಯೋಗಿಗಳ ಪ್ರಮಾಣ ಅಧಿಕವಾಗಿರುವುದು. ಅದಕ್ಕಾಗಿ ಈ ಸಮುದಾಯದ ವಿದ್ಯಾರ್ಥಿಗಳು ಐಟಿಐ ಡಿಪ್ಲೋಮಾದಂತಹ ಶಿಕ್ಷಣದ ಕಡೆಗೆ ಮುಖ ಮಾಡಿವೆ. ಶಿಕ್ಷಿತ ಕುಟುಂಬಗಳು ಮತ್ತು ನಗರಗಳಲ್ಲಿಯ ಕುಟುಂಬಗಳು ತಮ್ಮ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸುತ್ತಿದ್ದಾರೆ. ಆದರೆ ದುಡಿಯುವ ವರ್ಗದವರು ಇನ್ನು ಅದೇ

ಹಂತದಲ್ಲಿ ಇದ್ದಾರೆ. ಜಾಗತೀಕರಣದ ಪ್ರಭಾವದಿಂದ ಇತ್ತೀಚಿನ ದಿನಗಳಲ್ಲಿ ತಾಂಡಗಳಲ್ಲಿ ಇಂಗ್ಲೀಷ್ ಶಿಕ್ಷಣವನ್ನು ಪಡೆಯಲು ಹತ್ತಿರದ ತಾಲೂಕು ಕೇಂದ್ರಗಳಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

ಜಾಗತೀಕರಣದಿಂದ ಬಂದು ಖಾಸಗೀಕರಣದಿಂದ ಶಿಕ್ಷಣವೂ ಖಾಸಗೀಕರಣ ಗೊಂಡಿರುವುದು. ಖಾಸಗೀ ಶಿಕ್ಷಣ ಸಂಸ್ಥೆಗಳಲ್ಲಿ ಅಧಿಕ ಶಾಲಾ ಶುಲ್ಕ, ಶಾಲಾ ಅಭಿವೃದ್ಧಿ ಶುಲ್ಕ ಇತ್ಯಾದಿ ಶುಲ್ಕಗಳ ಏರಿಕೆ ಅಧಿಕವಾಗಿದೆ. ಆದರೆ ಶಿಕ್ಷಣದ ಗುಣಮಟ್ಟ ಉತ್ತಮವಾಗಿದೆ. ಆದರೆ ಈ ಸಮುದಾಯವು ಆರ್ಥಿಕವಾಗಿ ಹಿಂದುಳಿದಿದ್ದರಿಂದ ಇಂತಹ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಲು ಸಾಧ್ಯವಾಗುವುದಿಲ್ಲ. ಜಾಗತೀಕರಣದ ಯುಗದಲ್ಲಿ ಕಂಪ್ಯೂಟರ್ ಶಿಕ್ಷಣ ಮತ್ತು ವ್ಯಕ್ತಿತ್ವ ಅಭಿವೃದ್ಧಿ ಶಿಕ್ಷಣವು ಅತ್ಯಾವಶ್ಯಕವಾಗಿದೆ. ಆದರೆ ಲಂಬಾಣಿ ಸಮುದಾಯಗಳಿಗೆ ಇವುಗಳ ಕೊರತೆಯಿದೆ. ಇದು ಸ್ಪರ್ಧಾಲೋಕವಾಗಿರುವುದರಿಂದ ಇಲ್ಲಿ ಎಲ್ಲರೂ ಸಮಾನವಾಗಿ ಸ್ಪರ್ಧೆ ಮಾಡಬೇಕಾಗಿರುವುದು. ಈ ಸಮುದಾಯವು ಶೈಕ್ಷಣಿಕವಾಗಿ ಹಿಂದುಳಿದಿದ್ದರಿಂದ ಸ್ಪರ್ಧೆಯಲ್ಲಿ ಗೆಲವು ಸಾಧಿಸಲು ಅಸಾಧ್ಯವಾಗಿದೆ. ಲಂಬಾಣಿ ಸಮುದಾಯಗಳಿಗಾಗಿಯೇ ಸ್ಥಾಪಿತವಾದ ಆಶ್ರಮ ಶಾಲೆಗಳು ಅಥವಾ ಇತರೆ ಶಾಲೆಗಳು ಈ ಪ್ರದೇಶಗಳಲ್ಲಿಲ್ಲ. ಆದರೆ ಸರಕಾರಿ ಶಾಲೆಗಳಲ್ಲಿ ಪರಿಶಿಷ್ಟ ಜಾತಿಗಾಗಿಯೇ ಕೆಲವು ಸ್ಥಾನಗಳು ಮೀಸಲಿರುತ್ತವೆ. ಸರ್ಕಾರದ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀತಿಯಿಂದ ಪ್ರಾಥಮಿಕ ಹಂತದವರೆಗೂ ಸರಳವಾಗಿ ಶಿಕ್ಷಣ ಪಡೆಯುವ ಅಲ್ಲದೆ ಪೋಷಕರು ಅನಕ್ಷರಸ್ಥರಾಗಿದ್ದರಿಂದ ತಮ್ಮ ಮಕ್ಕಳಾದರೂ ಶಿಕ್ಷಿತರಾಗಲಿ ಎಂಬ ಉದ್ದೇಶದಿಂದ ಮತ್ತು ಶಿಕ್ಷಣ ಪಡೆದರೆ ಮೀಸಲಾತಿ ಸೌಲಭ್ಯದಿಂದಲಾದರೂ ಸರ್ಕಾರಿ ನೌಕರಿ ಸಿಗಬಹುದೆಂಬ ಆಶಾದಾಯಕ ಮನೋಭಾವನೆಯನ್ನು ಹೊಂದಿರುವರು.

ಯಾವುದೇ ಬುಡಕಟ್ಟು ಸಮುದಾಯಗಳು ತಮ್ಮ ವೃತ್ತಿ ಅಥವಾ ಕುಲ ಕಸುಬಿನೊಂದಿಗೆ ತಮ್ಮದೇ ಆದ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತವೆ. ಹಾಗೆಯೇ ಲಂಬಾಣಿ ಸಮುದಾಯ ತಮ್ಮದೇ ಆದ ಮೂಲ ಕಸಬನ್ನು ಹೊಂದಿದೆ. ಈ ಸಮುದಾಯದ ಮೂಲ ಕಸಬು ಸಣ್ಣ ವ್ಯಾಪಾರ, ಕೂಲಿ ಮತ್ತು ಕೃಷಿಯನ್ನು ಅವಲಂಬಿಸಿದ್ದಾರೆ. ಇವರು ಹೆಚ್ಚಾಗಿ ತಾಂಡಗಳಲ್ಲಿ ವಾಸಿಸುತ್ತಾರೆ ಮತ್ತು ಜೊತೆಗೆ ಹೆಚ್ಚಾಗಿ ಕೃಷಿ ಕೂಲಿ ಕೆಲಸಗಳನ್ನು ಮಾಡುತ್ತಾರೆ. ಆದುದರಿಂದ ಹೆಚ್ಚಾಗಿ ತಾಂಡಗಳ ಸುತ್ತಮುತ್ತ ಇರುವ ನಗರ ಪ್ರದೇಶಗಳಲ್ಲಿ ಕೂಲಿಗಾಗಿ ವಲಸೆ ಹೋಗುತ್ತಾರೆ.

ಒಟ್ಟಾರೆಯಾಗಿ ಪ್ರಸ್ತುತ ಜಾಗತೀಕರಣದಿಂದ ಸಮಾಜವು ಸ್ಥಿತ್ಯಂತರಗೊಂಡಿದೆ. ಇದರ ಪರಿಣಾಮವಾಗಿ ಜಾಗತೀಕರಣವು ಸಮುದಾಯದ ತಮ್ಮ ಕುಲಕಸಬನ್ನೇ ಆಧರಿಸಿ ಜೀವನ ಸಾಗಿಸಬೇಕಾದ ಅನಿವಾರ್ಯತೆಯಿಂದ ದೂರ ಮಾಡಿ ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡುವಂತೆ ಅವಕಾಶಗಳನ್ನು ಒದಗಿಸಿದೆ. ಇದು ಕಡಿಮೆ ಸಂಬಳಕ್ಕೆ ಹೆಚ್ಚು ದುಡಿಯಬೇಕಾದ ಅನಿವಾರ್ಯತೆಯನ್ನುಂಟು ಮಾಡಿದೆ. ಶೈಕ್ಷಣಿಕ ಅರ್ಹತೆ, ಶೈಕ್ಷಣಿಕ ಗುಣಮಟ್ಟ, ಸಾಮರ್ಥ್ಯಗಳ ಹೆಸರಲ್ಲಿ ಮತ್ತು ತಂತ್ರಜ್ಞಾನಗಳ ಬಳಕೆಯಿಂದ ನಿರುದ್ಯೋಗವನ್ನು ಸೃಷ್ಟಿಸಿದೆ. ಇದು ಕೈಗಾರಿಕೀಕರಣ ಮತ್ತು ನಗರೀಕರಣದಿಂದ ಈ ಸಮುದಾಯವನ್ನು ಒಕ್ಕಲೆಬ್ಬಿಸಿ ತೀರ ಹೀನಾಯ

ಪ್ರದೇಶದಲ್ಲಿ ನೆಲೆಸುವಂತೆ ಮಾಡಿದೆ. ಇದರಿಂದ ಇವರ ಆರೋಗ್ಯದ ಮೇಲೆ ಪರಿಣಾಮಬೀರಿದೆ.

ಜಾಗತೀಕರಣದಿಂದ ಲಂಬಾಣಿ ಸಮುದಾಯ ತಮ್ಮ ಮೂಲ ಸಂಪ್ರದಾಯ, ಆಚರಣೆ, ಆಚಾರ ವಿಚಾರಗಳು, ನಂಬಿಕೆಗಳು, ಕರಕುಶಲಕಲೆ, ನೃತ್ಯ ಮುಂತಾದವುಗಳು ಪರ್ಯಾಯವಾಗಿ ಆಧುನಿಕ ಮೌಲ್ಯಗಳ ಹೇರಿಕೆಯ ಅನಿವಾರ್ಯತೆಯಿಂದ ಇವುಗಳು ವಿನಾಶದ ಹಂಚಿನಲ್ಲಿವೆ. ಈ ಸಮುದಾಯ ಬೆಳೆಸಿಕೊಳ್ಳುವ ಆಧುನಿಕ ಮೌಲ್ಯಗಳು ಆಧುನಿಕ ಸಮಾಜದ ಜನರ ಆಧುನಿಕ ಮೌಲ್ಯಗಳಷ್ಟು ಪರಿಪಕ್ವವಾಗಿಲ್ಲ. ಇವರಲ್ಲಿ ಕೆಳಮಟ್ಟದ ಮನೋಭಾವನೆಯನ್ನು ಬೆಳೆಸುತ್ತಿವೆ. ಈ ಸಮುದಾಯದವರು ಮೌಲ್ಯಗಳನ್ನು ಉಳಿಸಿಕೊಳ್ಳುವಲ್ಲಿ ಸಮಸ್ಯೆಗಳು ಮತ್ತು ಸವಾಲುಗಳನ್ನು ಎದುರಿಸುತ್ತಿದ್ದಾರೆ. ಕೊನೆಯಲ್ಲಿ ಅವರು ಕೂಡ ಜಾಗತೀಕರಣದ ಆಧುನಿಕತೆಯಲ್ಲಿ ಅಂತರ್ಗತವಾಗಿ ಬೀಡುತ್ತಾರೆ.

ಜಾಗತೀಕರಣ, ಕೈಗಾರಿಕೀಕರಣ, ನಗರೀಕರಣಗಳಿಂದ ಎಲ್ಲಾ ಜಾತಿ, ಧರ್ಮ, ಪ್ರದೇಶ, ಲಿಂಗದವರು ಕೂಡಿ ದುಡಿಯಬೇಕಾದ ಅನಿವಾರ್ಯತೆ ಉಂಟಾಗಿ ಜಾತ್ಯಾತೀತ ಮನೋಭಾವಗಳು ವೃದ್ಧಿಸುತ್ತದೆ. ಇದರಿಂದ ಜಾತಿ ವ್ಯವಸ್ಥೆಯಲ್ಲಿಯ ಅಸ್ಪೃಶ್ಯತೆ, ಜಾತಿಯ ನಿರ್ಬಂಧಗಳಲ್ಲಿ, ಜಾತಿ ಮಧ್ಯದ ಸಂಬಂಧದಲ್ಲಿಯೆ ಅಂತರವನ್ನು ಕಡಿಮೆ ಮಾಡಿದೆ. ಆದರೆ ಜಾಗತೀಕರಣವು ಜಾತಿ ವ್ಯವಸ್ಥೆಗೆ ಪರ್ಯಾಯವಾಗಿ ವರ್ಗ ವ್ಯವಸ್ಥೆಯನ್ನು ಹುಟ್ಟು ಹಾಕಿದೆ. ಇದು ಜಾತಿ ಜಾತಿಗಳಲ್ಲಿ ಬೆಳೆಸಿದೆ.

### ೬.೨. ಸಾಂಪ್ರದಾಯಿಕ ಉಡುಗೆ ತೊಡುಗೆಗಳಲ್ಲಿ ಬದಲಾವಣೆ

ರಂಗುರಂಗಿನ ಅಲಂಕಾರಿಕ ಉಡುಗೆ ತೊಡುಗೆಗಳ ಆಧಾರದಿಂದಲೇ ಲಂಬಾಣಿ ಸಮುದಾಯದವರನ್ನು ಥಟ್ಟನೆ ಗುರುತಿಸಲಾಗುತ್ತಿದೆ. ಅವರ ಸಾಂಪ್ರದಾಯಿಕವಾಗಿರುವ ಈ ಉಡುಗೆ ತೊಡುಗೆಗಳು ತುಂಬಾ ವಿಶಿಷ್ಟವಾಗಿದ್ದು ಕಲಾತ್ಮಕತೆಯನ್ನು ಪಡೆದಿವೆ. ಯಾವ ಕಾರಣಕ್ಕೋ ನೆಲೆ ಕಳೆದುಕೊಂಡಿದ್ದ ಅವರ ಪೂರ್ವಜರು ವ್ಯಾಪಾರಕ್ಕಾಗಿ ಊರಿಂದೂರಿಗೆ ಕಾಡು ಮೇಡುಗಳ ಮೂಲಕ ಸಂಚರಿಸುತ್ತಿದ್ದ ಸಂದರ್ಭದಲ್ಲಿ ಅವರು ಒಂದು ಬಗೆಯ ಒರಟಾದ ಉಡುಗೆ ತೊಡುಗೆಗಳನ್ನು ಧರಿಸುತ್ತಿದ್ದರು. ಕಾಡು ಪ್ರಾಣಿ ಹಾಗೂ ಕಾಡಿನ ಕಲ್ಲುಮುಳ್ಳುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಅವು ಹೆಚ್ಚು ಉಪಯುಕ್ತವಾಗಿದ್ದವು. ಆದರೆ ಈಗ ಈ ಜನರಿಗೆ ಆ ಬಗೆಯ ಉಡುಗೆ ತೊಡುಗೆಗಳ ಅಗತ್ಯತೆ ಹಾಗೂ ಅನಿವಾರ್ಯತೆ ಕಂಡುಬರದು. ಅವರೀಗ ಇತರ ನಾಗರಿಕ ಸಮಾಜದವರೊಂದಿಗೆ ಬೆರೆತಿರುವ ಕಾರಣ ತಮ್ಮ ಪರಿಸರಕ್ಕೆ ತಕ್ಕ ಹಾಗೆ ಮೂಲದ ಉಡುಗೆ ತೊಡುಗೆಗಳನ್ನು ಬಿಟ್ಟು ಪರಿವರ್ತಿತರಾಗುತ್ತಿದ್ದಾರೆ. ಇತರ ನಾಗರಿಕ ಸಮೂಹಗಳೊಂದಿಗೆ ಸ್ಪರ್ಧಿಸುತ್ತಿರುವ ಅವರಿಗೆ ತುಂಡು ತುಕುಡಿಗಳನ್ನು ಜೋಡಿಸಿ ಕಸೂತಿ ಮಾಡಿ ಉಡುಪುಗಳನ್ನು ಸಿದ್ಧಪಡಿಸಿಕೊಳ್ಳುವಷ್ಟು ಸಮಯ, ವ್ಯವಧಾನ ಉಳಿದಿಲ್ಲ. ಓದು, ಬರಹ ಹಾಗೂ ಇನ್ನಿತರ ಉದ್ಯೋಗ ಹವ್ಯಾಸಗಳಲ್ಲಿ ತೊಡಗಿಸಿಕೊಂಡಿರುವ ಮತ್ತು ಹಿಂದಿಗಿಂತ ಇಂದು ಬೇರೆ ಜಾಡಿನಲ್ಲಿ ಹೊರಟಿರುವ ಅವರಿಗೆ ಅವುಗಳು ಅರ್ಥಹೀನವಾಗಿ ಕಾಣುತ್ತಿವೆ. ಹಳೆಯ ತಲೆಮಾರಿನ ಜನ ಇದನ್ನು ವಿರೋಧಿಸಿದರೂ ಹೊಸ ತಲೆಮಾರಿನವರು

ಆಧುನಿಕತೆಗೆ ಒಳಗಾಗಿ ಅನ್ಯ ಸಂಸ್ಕೃತಿಯ ಉಡುಗೆ-ತೊಡುಗೆಗಳಿಗೆ ಮಾರುಹೋಗುತ್ತಿದ್ದಾರೆ. ಅತ್ತ ಹಳೆಯ, ಇತ್ತ ಹೊಸ ತಲೆಮಾರಿನವರಲ್ಲದ ಮಧ್ಯಮ ಸಂಸ್ಕೃತಿಯ ಲಂಬಾಣಿಗರು ಮಾತ್ರ ತಮ್ಮ ಮೂಲದ ಉಡುಗೆ ತೊಡುಗೆಗಳಲ್ಲಿಯೇ ಒಂದಿಷ್ಟು ಮಾರ್ಪಾಟುಗಳನ್ನು ಮಾಡಿಕೊಂಡು ಸಂಕೀರ್ಣ ಸ್ಥಿತಿಯಲ್ಲಿ ನಿಂತಿರುವುದನ್ನು ಕಾಣುತ್ತೇವೆ.

ಕಲಾತ್ಮಕವಾಗಿರುವ ಲಂಬಾಣಿಗರ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ಇಂದು ನಾಗರಿಕ ಸಮೂಹಗಳು ಅದರಲ್ಲೂ ವಿಶೇಷವಾಗಿ ವಿದೇಶಿ ಪ್ರವಾಸಿಗರು ಮೆಚ್ಚಿಕೊಂಡು ಆಕರ್ಷಿತರಾಗಿ ಕೇಳಿದಷ್ಟು ಹಣಕೊಟ್ಟು ಖರೀದಿಸಿಕೊಂಡು ಹೋಗುತ್ತಿರುವದು ಈ ಸಮುದಾಯದವರಿಗೆ ಒಂದು ಬಗೆಯ ಆತಂಕವನ್ನುಂಟುಮಾಡಿದೆ. ಪೂರ್ವದ ಅವರ ಈ ಉಡುಗೆ-ತೊಡುಗೆಗಳು ಮುಂದೊಂದು ದಿನ ಅವರಿಗೇ ಕೈಗೆಟುಕದೆ ಹೋಗುವ ಮುನ್ಸೂಚನೆಗಳು ಕಂಡುಬರುತ್ತಿವೆ.

ಆಧುನಿಕತೆಯ ಪರಿಣಾಮದಿಂದಾಗಿ ಲಂಬಾಣಿ ಸಮುದಾಯದ ಜನ ಈಗೀಗ ಕೆಲವು ಮಹಾನಗರಗಳಲ್ಲಿ ತಮ್ಮ ಉಡುಗೆ-ತೊಡುಗೆಗಳ ಉತ್ಪಾದನಾ ಕೇಂದ್ರ ಹಾಗೂ ಮಾರಾಟ ಕೇಂದ್ರಗಳನ್ನು ನಿರ್ಮಿಸಿಕೊಂಡು ಅದನ್ನು ಒಂದು ಉದ್ಯಮವನ್ನಾಗಿ ಮಾಡಿಕೊಂಡು ಆರ್ಥಿಕವಾಗಿ ಸಬಲರಾಗುತ್ತಿದ್ದಾರೆ. ಆಧುನಿಕ ಸಮಾಜಕ್ಕೆ ಜನೋಪಯೋಗಿ ಯಾಗುವ ದೃಷ್ಟಿಯನ್ನು ಇಟ್ಟುಕೊಂಡು ಲಂಬಾಣಿಗರು ತಮ್ಮ ಕಲೆಗೆ ಇನ್ನಷ್ಟು ಮೆರಗು ಬರುವಂತೆ ಮಾಡಿ, ಆಧುನಿಕ ಶೈಲಿಯ ವ್ಯಾನಿಟಿ, ಪರ್ಸ್, ಮೊಬೈಲ್ ಕವರ್, ಫೈಲು, ಬಾಗಿಲು ಹಾಗೂ ಕಿಟಕಿ ಪರದೆಗಳನ್ನು ತಯಾರಿಸಿ ಮಾರಾಟ ಮಾಡುತ್ತಿದ್ದಾರೆ. ಸೀರೆ, ಲಂಗ, ಧಾವಣಿ ಇತ್ಯಾದಿಗಳಿಗೆ ಕನ್ನಡಿ ಕಸೂತಿ ಮಾಡಿ ಕೈತುಂಬಾ ಸಂಪಾದನೆ ಮಾಡಿಕೊಳ್ಳುತ್ತಿದ್ದಾರೆ. ಗಾಜಿನ ಬಿಲ್ಲೆ ಹಾಕಿ ಕಸೂತಿ ಮಾಡುವ ತರಬೇತಿ ಕೇಂದ್ರ ಹಾಗೂ ಕಸೂತಿ ಕೇಂದ್ರಗಳನ್ನು ಅಲ್ಲಲ್ಲಿ ಸ್ಥಾಪಿಸಿಕೊಂಡು ಈ ಉದ್ಯಮದಲ್ಲಿ ಪ್ರಗತಿಯನ್ನು ಸಾಧಿಸುತ್ತಿದ್ದಾರೆ.

ಜಾಗತೀಕರಣದ ಸಂದರ್ಭದಲ್ಲಿ ಇತರ ನಾಗರಿಕ ಸಮುದಾಯಗಳಂತೆ ಲಂಬಾಣಿ ಸಮುದಾಯದವರೂ ಸಹ ತಮ್ಮ ಜೀವನವಿಧಾನ ಮತ್ತು ಉಡುಗೆ ತೊಡುಗೆಗಳನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ. 'ಆಧುನಿಕ ಲಂಬಾಣಿ' ಮಹಿಳೆಯರು ತಮ್ಮ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ತ್ವರಿತವಾಗಿ ಬದಲಾಯಿಸಿಕೊಳ್ಳುತ್ತಿದ್ದಾರೆ. ಈ ಬಗೆಯ ಬದಲಾವಣೆಯನ್ನು ಯಾರೂ ಅವರ ಸಂಸ್ಕೃತಿಯ ನಾಶವೆಂದು ಭಾವಿಸುವ ಅಗತ್ಯವಿಲ್ಲ. ಇದು ಅವರ ಜೀವನಶೈಲಿಯಲ್ಲಾದ ಮಹತ್ವದ ಪರಿವರ್ತನೆ ಮತ್ತು ಅದು ಇಂದಿನ ಅನಿವಾರ್ಯತೆ ಕೂಡ ಹೌದು. ಆಧುನಿಕ ಲಂಬಾಣಿ ಮಹಿಳೆಯರು ತಾವು ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ನಿರಾಕರಿಸಲು ಇರುವ ಕಾರಣಗಳನ್ನು ಹೀಗೆ ಹೇಳುತ್ತಾರೆ:

* ಸಾಂಪ್ರದಾಯಿಕ ಉಡುಗೆ-ತೊಡುಗೆಗಳ ತಯಾರಿಕೆಗೆ ಸಮಯಾಭಾವ ಮತ್ತು ದುಬಾರಿ ವೆಚ್ಚ.

* ಈ ಉಡುಗೆ ತೊಡುಗೆಗಳನ್ನು ಸ್ವಚ್ಛಗೊಳಿಸುವಲ್ಲಿ ಆಗುವ ತೊಂದರೆ. ಅವು ತುಂಬಾ ಒರಟಾಗಿರುವುದರಿಂದ

ಮತ್ತು ಕಾಜಿನ ಬಿಲ್ಲೆಗಳು ಒಡೆದು ಹೋಗುವ ಸಂಭವವಿರುವುದರಿಂದ ವಾರಕ್ಕೊಂದು ಸಲ ಮಾತ್ರ ಸ್ವಚ್ಛಮಾಡಿಕೊಂಡು ಧರಿಸುವುದರಿಂದ ದುರ್ವಾಸನೆಗೆ ಒಳಗಾಗುತ್ತವೆಂದು ಭಾವಿಸಿದ್ದಾರೆ.

* ಅವುಗಳನ್ನು ಧರಿಸುವುದರಿಂದ ಇತರ ನಾಗರಿಕ ಸಮಾಜದವರು ತಮ್ಮನ್ನು ಅನಾಗರಿಕರೆಂದು ಅಗೌರವಿಸುತ್ತಾರೆ ಎಂಬ ಭಾವನೆ ಇದೆ. ಸಾಮಾಜಿಕ ಗೌರವಕ್ಕಾಗಿ ಅವರು ಇತರರೊಂದಿಗೆ ಹೊಂದಿಕೊಳ್ಳಲು ತಮ್ಮ ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ಬದಲಾಯಿಸಿಕೊಳ್ಳಲು ಬಯಸುತ್ತಾರೆ.

* ಯಾವುದೇ ಕಾಲದಲ್ಲಿ ಯಾವ ಕಾರಣಕ್ಕೊ ಸಿದ್ಧಪಡಿಸಿಕೊಂಡ ಲಂಬಾಣಿಗರ ಈ ಉಡುಪುಗಳು ಇಂದು ಅನಿರ್ವಾಯವೂ, ಅಗತ್ಯವೂ ಅಲ್ಲ. ಅರೆಬರೆಯಾಗಿರುವ ಈ ಉಡುಪುಗಳಿಗಿಂತ ಮಹಿಳೆಯರು ತಮ್ಮ ಮೈಮುಚ್ಚಿಕೊಳ್ಳಲು ಆಧುನಿಕ ಉಡುಪುಗಳಿಗೆ ಮೊರೆ ಹೋಗಿರುವುದಾಗಿ ಹೇಳುತ್ತಾರೆ.

* ಕಲಾತ್ಮಕವಾಗಿರುವ ತಮ್ಮ ಉಡುಗೆ-ತೊಡುಗೆಗಳನ್ನು ಕೆಲವು ತೀರ ಬಡಕುಟುಂಬದ ಲಂಬಾಣಿ ಮಹಿಳೆಯರು ಹೆಚ್ಚಿನ ಹಣ ದೊರಕುತ್ತದೆಂಬ ಆಸೆಯಿಂದ ಅವುಗಳನ್ನು ಮಾರಾಟ ಮಾಡಿಕೊಳ್ಳುತ್ತಿದ್ದಾರೆ. ಇದು ತುಂಬಾ ಶೋಚನೀಯ ಸಂಗತಿ.

* ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ನಿತ್ಯ ಧರಿಸಲು ನಿರಾಕರಿಸುವ ಕೆಲವು ಆಧುನಿಕ ಮಹಿಳೆಯರು ಸಭೆ ಸಮಾರಂಭ, ಹಬ್ಬ-ಹರಿದಿನ ಹಾಗೂ ತಮ್ಮ ಪ್ರಮುಖ ಆಚರಣೆಗಳಲ್ಲಿ ಸಾಂದರ್ಭಿಕವಾಗಿ ಅವುಗಳನ್ನು ಧರಿಸಲು ಇಷ್ಟಪಡುತ್ತಾರೆ.

* ಲಂಬಾಣಿ ಮಹಿಳೆಯರ ಕೇಶಾಲಂಕಾರ ಮತ್ತು ಮೈಮೇಲೆ ಹಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯವೂ ಅವರಿಂದ ಮರೆಯಾಗುತ್ತಿವೆ. ಕಾರಣ ಇವುಗಳೂ ಕೂಡ ಅವರಲ್ಲಿ ಅನಾಗರಿಕತೆಯ ಭಾವನೆ ಮೂಡಿಸುತ್ತವೆ.

* ಲಂಬಾಣಿಗರ ಸಾಂಪ್ರದಾಯಿಕ ಉಡುಗೆ-ತೊಡುಗೆಗಳ ಅತಿಯಾದ ಭಾರವೂ ಆಧುನಿಕ ಮಹಿಳೆಯರ ನಿರಾಕರಣೆಗೆ ಪ್ರಮುಖ ಕಾರಣವಾಗಿದೆ. ಅವರ ಈ ಉಡುಪುಗಳ ಭಾರ ಕನಿಷ್ಠ ೫-೬ ಕಿಲೊ, ಆಭರಣಗಳ ಭಾರ ೧-೨ ಕಿಲೊ ಆಗಿದ್ದು, ಅವುಗಳನ್ನು ಧರಿಸಿಕೊಂಡು ನಡೆದಾಡುವುದೂ ಇಂದು ಆಧುನಿಕ ಮಹಿಳೆಯರಿಗೆ ಕಷ್ಟದ ಕೆಲಸವಾಗಿದೆ. ಈ ಕಷ್ಟದಿಂದ ಪಾರಾಗಲು ಇಂದು ಕೆಲವು ಪ್ರದೇಶಗಳಲ್ಲಿ ತೀರ ಸರಳವಾದ, ಹಗುರವಾದ ಉಡುಪುತೊಡಪುಗಳನ್ನು ಸಿದ್ಧಪಡಿಸಿಕೊಂಡು ಧರಿಸುವ ಮೂಲಕ ಕೆಲವು ಮಹಿಳೆಯರು ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಲು ಮುಂದಾಗಿದ್ದಾರೆ.

ಲಂಬಾಣಿ ಗಂಡಸರ ವೇಷಭೂಷಣಗಳಲ್ಲಿ ಅಂತಹ ಯಾವ ಮಹತ್ತರವಾದ ಬದಲಾವಣೆಗಳು ಕಂಡುಬರುವುದಿಲ್ಲ.

**೬.೩. ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು**

ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನುಳ್ಳ ಲಂಬಾಣಿ ಸಮುದಾಯದಲ್ಲಿ ಈಚೆಗೆ ಗಮನಾರ್ಹವಾದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳಾಗಿರುವುದನ್ನು ಕಾಣುತ್ತೇವೆ. ಸಾಕ್ಷರತೆಯ ಪರಿಣಾಮ ಹಾಗೂ

ಆಧುನಿಕತೆಯ ಪ್ರಭಾವದಿಂದ ಅವರು ತಮ್ಮ ಸಾಮಾಜಿಕ ರೀತಿ-ರಿವಾಜುಗಳಿಂದ ದೂರವಾಗುತ್ತಿದ್ದಾರೆ. ಅರ್ಥಹೀನವಾಗಿರುವ ಕಂದಾಚಾರ, ಮೂಢನಂಬಿಕೆ ಹಾಗೂ ಅನಿಷ್ಟ ಪದ್ಧತಿಗಳನ್ನು ಬಿಟ್ಟು ಹೊರಬರುತ್ತಿದ್ದಾರೆ. ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಗೆ ಕಾಲಿರಿಸುತ್ತಿದ್ದಾರೆ. ಕತ್ತಲೆಯಿಂದ ಬೆಳಕಿನೆಡೆಗೆ ದಾಪುಗಾಲು ಹಾಕುತ್ತಿದ್ದಾರೆ.

ಅಲೆಮಾರಿ ಬುಡಕಟ್ಟಿನ ಲಂಬಾಣಿ ಸಮುದಾಯದ 'ಮದುವೆ'ಯ ರೀತಿ-ರಿವಾಜುಗಳಲ್ಲಿ ಸಾಕಷ್ಟು ಪರಿವರ್ತನೆಗಳಾಗಿರುವುದನ್ನು ಕಾಣುತ್ತೇವೆ. ಹಿಂದೆ, ತಿಂಗಳುಗಟ್ಟಲೆ ನಡೆಯುತ್ತಿದ್ದ ಅವರ ಸಾಂಪ್ರದಾಯಿಕ ವಿವಾಹ ಪದ್ಧತಿ ಇಂದು ಒಂದೇ ದಿನದಲ್ಲಿ ಮುಗಿದು ಹೋಗುವಷ್ಟು ಬದಲಾಗಿದೆ. ರಾತ್ರಿವಿಡೀ ನಡೆಯುತ್ತಿದ್ದ ಇವರ ವಿವಾಹ ಆಚರಣೆಗಳು ಹಗಲು ಹೊತ್ತಿನಲ್ಲಿ ನಡೆಯುತ್ತಿವೆ. ತಾವು ನಾಗರಿಕರೆನ್ನುವ ರೀತಿಯಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆದು ಮದುವೆ ನಡೆಸುತ್ತಾರೆ. ಇವರಲ್ಲಿ ಬಳಕೆಯಲ್ಲದ್ದ ವಧುದಕ್ಷಿಣೆ ಪದ್ಧತಿ (ಕರಾರ್) ಮಾಯವಾಗಿ ವರದಕ್ಷಿಣೆ ಪದ್ಧತಿ, ಬಳಕೆಗೆ ಬಂದಿದೆ. ಮದುವೆಯ 'ವದಾಯಿ' ಎನ್ನುವ ಧರ್ಮದೀಕ್ಷೆ ಪದ್ಧತಿ, ಮದುಮಗಳನ್ನು ಎತ್ತಿನ ಮೇಲೆ ನಿಲ್ಲಿಸಿ ಬೀಳ್ಕೊಡುವ 'ಹವೇಲಿ' ದೃಶ್ಯ 'ಗೋಟ್' ಎನ್ನುವ ಬಲಿಸಂಪ್ರದಾಯ ಹಾಗೂ ಮದುವೆಯ ಮೋಜಿನ ಆಚರಣೆಗಳು ಇಂದು ಕೆಲವು ಕಡೆಗಳಲ್ಲಿ ಸಂಪೂರ್ಣ ಕಣ್ಮರೆಯಾಗಿವೆ. ಹಿಂದೆ ಸಂಚಾರಿಗಳಾಗಿದ್ದರಿಂದ ಹೆಣ್ಣು ಮದುವೆಯಾಗಿ ಹೋದರೆ ಹಿಂತಿರುಗಿ ತವರನ್ನು ನೋಡುವುದು ಅಸಂಭವವಾಗಿತ್ತು. ಈಗ, ಅವರು ನಿಶ್ಚಿತ ನೆಲೆಗಳಲ್ಲಿ ವಾಸವಾಗಿರುವುದರಿಂದ ಈ ಪ್ರಶ್ನೆಯೇ ಉದ್ಭವಿಸುವುದಿಲ್ಲ. ತನಗೆ ಬೇಕೆನಿಸಿದಾಗ ಹೆಣ್ಣು ತವರು ಮನೆಗೆ ಬಂದು ಹೋಗಲು ಅವಕಾಶವಿದೆ. ಅವರಲ್ಲಿ ಪ್ರಚಲಿತವಾಗಿದ್ದ ಬಾಲ್ಯವಿವಾಹ ಪದ್ಧತಿ, ಅತ್ತಿಗೆ - ಮೈದುನರ ವಿವಾಹ, ವಿಧವಾ ವಿವಾಹ, ಕೂಡಾವಳಿ ಮದುವೆ ಇತ್ಯಾದಿ ಪದ್ಧತಿಗಳನ್ನು ಅವರು ಕೈಬಿಟ್ಟಿದ್ದಾರೆ. ಆಧುನಿಕತೆ ಹಾಗೂ ಅನ್ಯ ಸಂಸ್ಕೃತಿಗಳ ಪ್ರಭಾವದಿಂದಾಗಿ ಅವರಲ್ಲಿಯೂ ಅಂತರ್ಜಾತಿ ವಿವಾಹ ಪದ್ಧತಿ ಪ್ರಚಲಿತವಾಗಿದೆ. ವಲಸೆ ಹೋಗಿ ಮಹಾನಗರಗಳಲ್ಲಿ ನೆಲೆಯಾಗಿರುವ ಹಾಗೂ ಲಂಬಾಣಿ ಗೋತ್ರಶಾಸ್ತ್ರಗಳನ್ನರಿ ಯದವರಲ್ಲಿ ಸ್ವಗೋತ್ರವಿವಾಹಗಳು ಅಲ್ಲಲ್ಲಿ ನಡೆದಿರುವುದು ದುರದೃಷ್ಟಕರ ಸಂಗತಿಯಾಗಿದೆ. ಸ್ವಗೋತ್ರ ವಿವಾಹ ನಿಷಿದ್ಧವಾಗಿದ್ದರೂ ಅಜ್ಞಾನದಿಂದ ಇಂಥ ಕೆಲವು ಅಚಾತುರ್ಯಗಳು ನಡೆದಿರುವ ಉದಾಹರಣೆಗಳಿವೆ. ಅವಿಭಕ್ತ ಕುಟುಂಬಗಳು ಹೋಗಿ ಇಂದು ವಿಭಕ್ತ ಕುಟುಂಬಗಳೇ ಅವರಲ್ಲಿ ಜಾಸ್ತಿಯಾಗಿವೆ.

'ಹುಟ್ಟು-ಸಾವು' ಮೊದಲಾದ ಸಂಸ್ಕಾರಕಾರ್ಯಗಳಲ್ಲಿ ಅಂತಹ ಮಹತ್ತರವಾದ ಬದಲಾವಣೆಗಳು ಕಂಡುಬರು ವುದಿಲ್ಲ. ಸಾಮಾನ್ಯವಾಗಿ ಪರಂಪರೆಯಿಂದ ಉಳಿದು ಬಂದಿರುವ ಆಚರಣೆಗಳನ್ನೇ ಮುಂದುವರೆಯಿಸಿಕೊಂಡು ಬಂದಿದ್ದಾರೆ. ಪ್ರಸೂತಿಗೃಹದ ದಾದಿಗಳು ಮಕ್ಕಳನ್ನು ಬದಲಾಯಿಸುತ್ತಾರೆಂಬ ಭೀತಿಯಿಂದ ಮನೆಯಲ್ಲಿಯೇ ನಡೆಯುತ್ತಿದ್ದ ಅವರ ಹೆರಿಗೆಗಳು ಇಂದು ಯಾವ ಭಯ - ಭೀತಿಗಳಿಲ್ಲದೆ ಆಸ್ಪತ್ರೆಗಳಲ್ಲಿ ನಡೆಯುತ್ತಿವೆ. ಈಗ ಆಸ್ಪತ್ರೆಗಳಿಗೆ ಹೋಗಲು ಅವರು ಹಿಂಜರಿಯುವುದಿಲ್ಲ. ಮುಟ್ಟುಚಟ್ಟು ಕಾಯ್ದುಕೊಳ್ಳುವುದಕ್ಕಾಗಿ ಬಾಣಂತಿಯನ್ನು ಒಂದು ತಿಂಗಳವರೆಗೆ ಮನೆಯಲ್ಲಿ ಕರೆದುಕೊಳ್ಳುತ್ತಿರಲಿಲ್ಲ.

ಊಟಕ್ಕಾಗಿ ಪಾತ್ರೆಗಳ ಬದಲಾಗಿ ಮಣ್ಣಿನ ಚಿಪ್ಪು ಕುಡಿಕೆಗಳನ್ನು ಕೊಡುತ್ತಿದ್ದರು. ಈಗ ಬಾಣಂತಿಗೆ ಇಂಥ ಯಾವ ನಿರ್ಬಂಧಗಳೂ ಇಲ್ಲ.

ಲಂಬಾಣಿಗರ 'ಮರಣ ಸಂಸ್ಕಾರ' ವಿಧಿ ಕರ್ಮಗಳಲ್ಲಿಯೂ ಅಧುನಿಕತೆಯ ಬಲವಾದ ಪ್ರಭಾವದಿಂದ ಒಂದಿಷ್ಟು ಬದಲಾವಣೆಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಅವರಲ್ಲಿ ಮೃತನ ದೇಹದ ಕೈಕಾಲುಗಳನ್ನು ಮಡಚುವುದಾಗಲಿ, ಗೋಡೆಗೆ ಒರಗಿಸಿ ಕೂರಿಸುವುದಾಗಲಿ, ಶೃಂಗರಿಸುವುದಾಗಲಿ ಮಾಡುವುದಿಲ್ಲ. ಮೃತ ದೇಹವನ್ನು ಅಡ್ಡಲಾಗಿ ಮಲಗಿಸಿ ತಲೆಯ ಹಿಂಭಾಗದಲ್ಲಿ ಒಂದು ಹಣತೆ ಹಚ್ಚಿಡುತ್ತಾರೆ. ಆದರೆ ಇಂದು ಇತರ ನಾಗರಿಕ ಸಮುದಾಯದವರಂತೆ ಹೆಣಗಳನ್ನು ಶೃಂಗರಿಸಿ ಮೆರವಣಿಗೆ ಮೂಲಕ ಸಿಡಿಮದ್ದುಗಳನ್ನು ಹಾರಿಸಿ ಸ್ಮಶಾನಕ್ಕೆ ಸಾಗಿಸುವುದನ್ನು ಕಾಣುತ್ತೇವೆ. ಹೆಂಗಸರು ಮೊದಲು ಸ್ಮಶಾನಕ್ಕೆ ಹೋಗುತ್ತಿರಲಿಲ್ಲ. ಈಗ ಅಂಥ ನಿರ್ಬಂಧಗಳನ್ನು ಸಡಲಿಸಲಾಗಿದೆ. ಮೂರನೆಯ ದಿನ ಮಾಡುವ ದಿನಕರ್ಮದಲ್ಲೂ ಈಗ ಸಾಕಷ್ಟು ಬದಲಾವಣೆಗಳಾಗಿವೆ. ಮೊದಲು ಸ್ಮಶಾನದ ಸಮೀಪದಲ್ಲಿ ಗೋಧಿ ಮಾದ್ಲಿ ತಯಾರಿಸಿ ಎಲ್ಲರೂ ತಿಂದು ಬರುತ್ತಿದ್ದರು. ಈಗ ಕಾಲ ಮತ್ತು ಪರಿಸರದ ಬದಲಾವಣೆಯ ಹಿನ್ನೆಲೆಯಲ್ಲಿ ಅವರವರ ಅಂತಸ್ತಿಗೆ ತಕ್ಕ ಹಾಗೆ ಅಂಗಡಿಗಳಲ್ಲಿ ತಯ್ಯಾರಿಸಿಟ್ಟ ಬೂಂದಿ ಲಾಡುಗಳನ್ನು ತಂದು ಸತ್ತವನ ಮನೆಯ ಮುಂದೆ ದಿನಕಾರ್ಯವನ್ನು ಮಾಡುವ ಪದ್ಧತಿ ರೂಢಿಗೆ ಬಂದಿದೆ. ಇನ್ನುಳಿದಂತೆ ವಿಧಿಕರ್ಮಗಳಲ್ಲಿ ಯಾವುದೇ ಬಗೆಯ ಬದಲಾವಣೆಗಳು ಕಂಡುಬರುವುದಿಲ್ಲ.

ಲಂಬಾಣಿಗರಲ್ಲಿ ಬಲವಾದ ರೋಗರುಜಿನಗಳು ಕಾಣಿಸಿಕೊಂಡರೆ ಅದು ದೇವರು, ದೈವ, ಇಲ್ಲವೆ ಭೂತ ಪಿಶಾಚಿಗಳ ಕಾಟವೆಂದು ನಂಬಿ ದೇವರಿಗೆ ಹರಕೆ ಮಾಡಿಕೊಳ್ಳುವುದು, ಮಂತ್ರ ಮಾಟ ಮಾಡಿಸುವುದು ತಾಯಿತಗಳನ್ನು ಕಟ್ಟಿಸಿಕೊಳ್ಳುವುದು, ಬಲಿಕೊಡುವುದು, ಬೂದಿ ಮಂತ್ರಿಸಿ ತರುವುದು, ಭೂತ ಬಿಡಿಸುವುದು ಇತ್ಯಾದಿಗಳು ಕ್ರಮೇಣ ಅವರಿಂದ ದೂರವಾಗುತ್ತಿವೆ. ಅವೆಲ್ಲ ಅವೈಜ್ಞಾನಿಕವೆಂಬ ತಿಳಿವಳಿಕೆ ಅವರಲ್ಲಿ ಮೂಡುತ್ತಿವೆ. ಇಂಥ ರೋಗರುಜಿನ ಗಳು ಕಾಣಿಸಿಕೊಂಡಾಗ ಈಗ ಅವರು ಹತ್ತಿರದ ವೈದ್ಯರಲ್ಲಿಗೆ ಕೂಡಲೆ ಹೋಗಿ ಚಿಕಿತ್ಸೆ ಪಡೆಯುತ್ತಾರೆ. ಈ ಸಮುದಾಯದಲ್ಲಿ ವಿದ್ಯಾವಂತರ ಸಂಖ್ಯೆ ಆಶಾದಾಯಕವಾದ ರೀತಿಯಲ್ಲಿ ಬೆಳೆಯುತ್ತಿರುವುದರಿಂದ ಅಜ್ಞಾನ, ಅಂಧ ವಿಶ್ವಾಸ, ನಂಬಿಕೆ, ಕಂದಾಚಾರ, ಬಡತನ, ದಾರಿದ್ರ್ಯ ಮೊದಲಾದವುಗಳು ದೂರವಾಗುತ್ತಿವೆ.

'ದೇವರು ಧರ್ಮದ' ವಿಷಯದಲ್ಲಿ ಲಂಬಾಣಿಗರಲ್ಲಿ ಅಂಥ ವಿಶೇಷವಾದ ಬದಲಾವಣೆಗಳು ಕಂಡುಬರುವುದಿಲ್ಲ. ಎಂದಿನಂತೆ ತಮ್ಮ ಕುಲದೇವರು ಮತ್ತು ಕುಲದೇವತೆಗಳನ್ನು ಹಾಗೂ ಸಂತ ಶ್ರೀ ಸೇವಾಲಾಲನನ್ನು ಭಯಭಕ್ತಿಯಿಂದ ಪೂಜಿಸುತ್ತಾರೆ. ಶಕ್ತಿದೇವತೆಗಳ ಆರಾಧಕರಾದ ಅವರು ಇಂದಿಗೂ ಬಲಿ ಕೊಡುವುದನ್ನು ನಿಲ್ಲಿಸಿರುವುದಿಲ್ಲ. ಆದರೆ ದೇವರ ಪೂಜಾರಿಗಳಿಗೆ ಹಾಗೂ ಮಂತ್ರವಾದಿಗಳಿಗೆ ಮೊರೆ ಹೋಗುವುದನ್ನು, ಹರಕೆ ವ್ರತಗಳನ್ನು ಮಾಡುವುದನ್ನು ಗಣನೀಯ ಪ್ರಮಾಣದಲ್ಲಿ ನಿಲ್ಲಿಸುತ್ತಿದ್ದಾರೆ. ಮುಸ್ಲಿಂ ಪೀರರಿಗೆ, ದರ್ಗಾಗಳಿಗೆ

ಹಾಗೂ ಚರ್ಚುಗಳಿಗೆ ಹೋಗಿ ಕ್ರಿಸ್ತನನ್ನು ಆರಾಧಿಸುವುದು ಹಾಗೆಯೇ ಶೈವ, ವೈಷ್ಣ ದೇವರುಗಳನ್ನೂ ಆರಾಧಿಸುವುದು ಈಚಿನ ದಿನಗಳಲ್ಲಿ ವಿಶೇಷ ಬದಲಾವಣೆಗಳಾಗಿವೆ.

ಈ ಸಮುದಾಯದ ಹಬ್ಬಾಚರಣೆಗಳಲ್ಲಿ ಕೆಲವು ವಿಶೇಷತೆಗಳು ಇರುವಂತೆ ಹಲವು ಅನಿಷ್ಟ ಪದ್ಧತಿಗಳೂ ಇವೆ. ಹೋಳಿ ಹಬ್ಬವನ್ನು ಅಶ್ಲೀಲವಾಗಿರುವ ಲೇಂಗಿ ಗೀತೆಗಳನ್ನು ಹಾಡುವ ಮೂಲಕ ಆಚರಿಸುವುದು ಮತ್ತು ದೀಪಾವಳಿ ಹಬ್ಬವನ್ನು ಬಲಿ ಕೊಡುವ ಮೂಲಕ ಆಚರಿಸುವುದು ಅವರಲ್ಲಿ ಕಂಡುಬರುವ ಅನಿಷ್ಟ ಸಂಪ್ರದಾಯಗಳಾಗಿವೆ. ಈಗ ಈ ಬಗೆಯ ಆಚರಣೆಗಳನ್ನು ಕೆಲವು ಕಡೆ ನಿಷೇಧಿಸಲಾಗಿದೆ. ಅಂತೆಯೇ ಹೋಳಿ ಸಂದರ್ಭದಲ್ಲಿ ಮಹಿಳೆಯರು ಗುಂಪು ಗುಂಪಾಗಿ ಊರೂರುಗಳಿಗೆ ಅಲೆದು, ಕುಣಿತ ಮಾಡಿ ಚಂದಾ ವಸೂಲು ಮಾಡುವುದನ್ನೂ ನಿಲ್ಲಿಸಿದ್ದಾರೆ. ಶ್ರಮಜೀವಿಗಳೂ ಹಾಗೂ ಸ್ವಾಭಿಮಾನಿಗಳೂ ಆಗಿರುವ ಲಂಬಾಣಿಗರು ತಮ್ಮ ಗೌರವಕ್ಕೆ ಧಕ್ಕೆ ತರುವ ಇಂಥ ಅನಿಷ್ಟ ಆಚರಣೆಗಳನ್ನು ಕೈಬಿಟ್ಟು ನಾಗರಿಕ ಸಂಸ್ಕೃತಿಗೆ ಒಗ್ಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

## ೬.೪. ಭಾಷೆಯಲ್ಲಾಗುತ್ತಿರುವ ಪರಿವರ್ತನೆ

ಲಿಪಿಯೇ ಇಲ್ಲದ **'ಗೋರ್ ಬೋಲಿ'** ಭಾಷೆಯನ್ನಾಡುವ ಲಂಬಾಣಿಗಳು ಊರೂರು ಸುತ್ತಿದರೂ, ಒಂದೆಡೆ ನೆಲೆನಿಂತರೂ ತಮ್ಮ ಭಾಷೆಯನ್ನು ಮಾತ್ರ ಜೀವಂತವಾಗಿಬಿಟ್ಟಿದ್ದಾರೆ. ಅವರಿಗೆ ತಮ್ಮ ಭಾಷೆಯ ಬಗೆಗೆ ತುಂಬಾ ಅಭಿಮಾನ. ಇಬ್ಬರು ಲಂಬಾಣಿಗರು ಪರಸ್ಪರ ಸಂಧಿಸಿದಾಗ ತಮ್ಮ ಭಾಷೆಯಲ್ಲೇ ಸಂವಾದಿಸುತ್ತಾರೆ. ಆದರೆ ಈಚೆಗೆ ಈ ಜನ ಹೊಟ್ಟೆಪಾಡಿಗಾಗಿ ಗೋವಾ, ಮುಂಬೈ, ಚಿಕ್ಕಮಗಳೂರು, ಮೈಸೂರು, ಮಂಡ್ಯ ಮೊದಲಾದ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದರಿಂದ ಹಾಗೂ ಆಧುನಿಕತೆಯ ಪ್ರಭಾವದಿಂದ ಲಂಬಾಣಿಗರಾಡುವ 'ಗೋರ್ ಬೋಲಿ' ಭಾಷೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ ಮಾತ್ರವಲ್ಲ, ಅದನ್ನಾಡುವ ಕೆಲವರಲ್ಲಿ ಕೀಳರಿಮೆಯನ್ನು ಮೂಡಿಸುತ್ತಿದೆ.

ನಗರ ಪ್ರದೇಶಗಳಲ್ಲಿ ನೆಲೆಯಾಗಿರುವ ಕೆಲವು ವಿದ್ಯಾವಂತ ಲಂಬಾಣಿ ಕುಟುಂಬಗಳು ತಮಗೆ ಆ ಭಾಷೆ ಬಂದರೂ ಮಾತನಾಡಲು ಹಿಂಜರಿಯುತ್ತಾರೆ ಹಾಗೂ ತಮ್ಮ ಮಕ್ಕಳಿಗೆ ಅದನ್ನು ಕಲಿಸದಿರುವುದು ತೀರ ದುರದೃಷ್ಟಕರ ಸಂಗತಿಯಾಗಿದೆ. ತಮ್ಮದಲ್ಲದ ಇನ್ನೊಂದು ಭಾಷೆಯಲ್ಲಿ ಮಾತನಾಡುವುದರಿಂದ ತಾವು ತುಂಬಾ ಸುಶಿಕ್ಷಿತರು ಮತ್ತು ಪ್ರತಿಷ್ಠಿತರು ಎಂದು ಭಾವಿಸಿದಂತಿದೆ. ಕೂಲಿನಾಲಿ ಮಾಡುವ ಕಾರ್ಮಿಕರೂ ಕೂಡ ತಮ್ಮದಲ್ಲದ ಭಾಷೆಯಲ್ಲಿ ಮಾತನಾಡುವುದೆಂದರೆ ಅದೊಂದು ಬಗೆಯ ದೊಡ್ಡಸ್ಥಿಕೆ ಎಂದು ಭಾವಿಸಿಕೊಂಡಿದ್ದಾರೆ. ಮುಂಬೈ, ಗೋವಾ, ಮೈಸೂರು, ಮಂಡ್ಯ, ಶಿವಮೊಗ್ಗ ಮೊದಲಾದ ನಗರ ಪ್ರದೇಶಗಳಿಗೆ ವಲಸೆ ಹೋಗಿರುವ ಲಂಬಾಣಿ ಕುಟುಂಬಗಳಲ್ಲಿ ಲಂಬಾಣಿ ಭಾಷೆಯ ಬದಲಾಗಿ ಅವರಲ್ಲಿ ಮರಾಠಿ, ಕೊಂಕಣಿ, ತೆಲುಗು ಹಾಗೂ ಹಸಿಬಿಸಿಯಾದ ಇಂಗ್ಲೀಷ್ ಭಾಷೆ ಧಾರಾಳವಾಗಿ ಬಳಕೆಯಾಗುತ್ತಿರುವುದು ಅತ್ಯಂತ ಶೋಚನೀಯ. ಹೈದ್ರಾಬಾದ್ ಕರ್ನಾಟಕ ಭಾಗದ ಬೀದರ್ ಕಲಬುರ್ಗಿಯ ಕೆಲವು ಲಂಬಾಣಿ ಕುಟುಂಬಗಳಲ್ಲಿ ಉರ್ದು

ಮತ್ತು ತೆಲುಗು ಭಾಷೆಯೇ ಪ್ರಾಧ್ಯಾನತೆಯನ್ನು ಪಡೆದುಕೊಂಡಿದೆ.

ನಾಮ ಕ್ಷೇತ್ರ ಕಾರ್ಯ ಕೈಗೊಂಡಾಗ ಬಳ್ಳಾರಿ ಜಿಲ್ಲೆಯ, ಬಳ್ಳಾರಿ ತಾಲೂಕಿನ ಹೊನ್ನಳ್ಳಿ ತಾಂಡ, ಬೆಳಗಲ್ಲು ತಾಂಡ, ಅನೆಕುಂಟ ತಾಂಡ ಹಾಗೂ ಸಿರುಗುಪ್ಪ ತಾಲೂಕಿನ ಕೆಂಚದಗುಡ್ಡ ತಾಂಡದಲ್ಲಿ ಲಂಬಾಣಿ ಭಾಷೆ ಜೊತೆಗೆ ತೆಲುಗು ಭಾಷೆಯನ್ನು ಮಿಶ್ರಣವಾಗಿ ಮಾತಾಡುವುದು ನನ್ನ ಅಧ್ಯಯನದಿಂದ ತಿಳಿದುಬಂದಿರುತ್ತದೆ.

ಇಲ್ಲಿನ ಕೆಲವು ಲಂಬಾಣಿಗಳಂತೂ ತಾವು ಉರ್ದು ಭಾಷಿಕರೆಂಬಂತೆ ವರ್ತಿಸುತ್ತಿರುವುದು ಇನ್ನೂ ಆಶ್ಚರ್ಯವನ್ನುಂಟು ಮಾಡಿದೆ. ಭಾಷೆಯ ವಿಷಯದಲ್ಲಿ ಬದ್ಧತೆ ಇಲ್ಲದೆ ಹೋದಲ್ಲಿ ಆ ಭಾಷೆಯ ಜಾಯಮಾನವನ್ನು ಅಳಿಸಿಹಾಕಿದಂತಾಗುತ್ತದೆ. ಇದು ಎಲ್ಲ ಭಾಷಿಕರಿಗೂ ಅನ್ವಯವಾಗುವ ಸಂಗತಿಯಾಗಿದೆ.

### ೬.೫. ಶೈಕ್ಷಣಿಕ ಬದಲಾವಣೆ

ಲಂಬಾಣಿ ಸಮುದಾಯದಲ್ಲಿ ಶೈಕ್ಷಣಿಕ ಪ್ರಸಾರ ಹೆಚ್ಚು ಗಮನಾರ್ಹವಾಗಿರದಿದ್ದರೂ ಅಲ್ಲಲ್ಲಿ ಕ್ರಮೇಣ ಈ ಜನ ಶಿಕ್ಷಣಕ್ಕಾಗಿ ಆಕರ್ಷಿತರಾಗಿರುವುದು ಕಂಡುಬರುತ್ತದೆ. ತಮ್ಮ ಮಕ್ಕಳನ್ನು ಶಾಲೆ ಕಾಲೇಜುಗಳಿಗೆ ಕಳಿಸಿ ವಿದ್ಯಾವಂತರನ್ನಾಗಿ ಮಾಡುತ್ತಿದ್ದಾರೆ. ಸಾಕ್ಷರತೆಯಿಂದ ಮಾತ್ರ ತಮ್ಮ ಜೀವನ ಶೈಲಿ ಬದಲಾಯಿಸಿಕೊಳ್ಳಲು ಸಾಧ್ಯವೆಂಬುದನ್ನು ಈ ಜನ ಮನಗಂಡಿದ್ದಾರೆ. ಹಿಂದೆ ಅವಿದ್ಯಾವಂತರಾಗಿದ್ದ ಅವರು ಅಜ್ಞಾನದಿಂದ ಹತ್ತಾರು ಜನ ಮಕ್ಕಳನ್ನು ಪಡೆಯುತ್ತಿದ್ದರು. ಹೀಗೆ ಹುಟ್ಟಿದ ಮಕ್ಕಳು ತಮಗೆ ಕೂಲಿನಾಲಿ ಕೆಲಸಗಳಲ್ಲಿ ಹಾಗೂ ಜೀವನ ನಿರ್ವಹಣೆಗೆ ನೆರವಾಗುತ್ತಾರೆಂದು ಬಲವಾಗಿ ನಂಬಿದ್ದರು. ಆದರೆ ಇಂದು ಸಾಕ್ಷರತೆಯ ಪ್ರಭಾವದಿಂದ ಅವರಲ್ಲಿ ಕುಟುಂಬ ಯೋಜನೆಯ ಪ್ರಜ್ಞೆ ಮೂಡಿ ಹಿತಮಿತವಾದ ಕುಟುಂಬ ಹೊಂದಲು ಮುಂದಾಗುತ್ತಿದ್ದಾರೆ. ಹತ್ತಾರು ಮಕ್ಕಳನ್ನು ಪಡೆಯುವುದರಿಂದ ಯಾವುದೇ ಸುಖವಿಲ್ಲವೆಂಬುದನ್ನು ಅನುಭವದಿಂದ ಹೇಳುತ್ತಾರೆ. ಶಿಕ್ಷಣದ ಪರಿಣಾಮವಾಗಿ ಅವರು ತಮ್ಮದೇ ಆದ ಹೊಲಮನೆ ಮಾಡಿಕೊಂಡು ಅನ್ಯಸಮಾಜದವರೊಂದಿಗೆ ಸರಿಸಮಾನವಾಗಿ ಸ್ಪರ್ಧಿಸುವ ಮನೋಭಾವ ತಾಳಿದ್ದಾರೆ. ಸರಕಾರದಿಂದ ಲಭ್ಯವಾಗುವ ಎಲ್ಲ ಬಗೆಯ ಸವಲತ್ತುಗಳನ್ನು ಪಡೆದು ತಮ್ಮ ಜೀವನಶೈಲಿಯನ್ನು ಬದಲಾಯಿಸಿಕೊಂಡಿದ್ದಾರೆ.

ಆಧುನಿಕತೆಯ ಪ್ರಭಾವ ಹಾಗೂ ಪರಿಣಾಮದಿಂದ ಈ ಸಮುದಾಯದಲ್ಲಿ ಈಗ ನಿರೀಕ್ಷಿತ ಮಟ್ಟದಲ್ಲಿ ಅಲ್ಲದಿದ್ದರೂ ಸಮಾಧಾನಕರವಾದ ರೀತಿಯಲ್ಲಿ ವಿವಿಧ ಪದವೀಧರರು ಲಭ್ಯವಾಗುತ್ತಾರೆ. IAS, IPS, IFS, KAS ಶ್ರೇಣಿಯ ಉನ್ನತ ಅಧಿಕಾರಿಗಳು, ಮೆಡಿಕಲ್, ಇಂಜಿನಿಯರಿಂಗ್, ಟೆಕ್ನಿಕಲ್ ಪದವೀಧರರು, ಪ್ರಾಥಮಿಕ ಹಂತದಿಂದ ವಿಶ್ವವಿದ್ಯಾಲಯದ ಮಟ್ಟದವರೆಗಿನ ಶಿಕ್ಷಕರು ಹಾಗೂ ಪ್ರೊಫೆಸರ್‌ಗಳಿಗೆ ಈ ಸಮಾಜದಲ್ಲಿ ಈಗ ಕೊರತೆ ಇಲ್ಲ. ಉದ್ಯಮಪತಿಗಳು, ಪತ್ರಕರ್ತರು, ಸಾಹಿತಿಗಳು, ಕಲಾವಿದರು, ವಿಜ್ಞಾನಿಗಳು ಈ ಜನಾಂಗದಲ್ಲಿ ಈಗೀಗ ಕಾಣಿಸಿಕೊಳ್ಳುತ್ತಿದ್ದಾರೆ.

ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಾಲಾವಧಿಯಲ್ಲಿ ಲಂಬಾಣಿಗರು ಅಪರಾಧಿ ಜನಾಂಗ(Criminal Tribes)ವೆಂದು ಪರಿಗಣಿಸಲ್ಪಟ್ಟು ಶಿಕ್ಷಣವನ್ನೂ ಒಳಗೊಂಡಂತೆ ಎಲ್ಲ ಬಗೆಯ ಸವಲತ್ತುಗಳಿಂದ ವಂಚಿತರಾಗಿದ್ದ

ಈ ಸಮುದಾಯ ಈಗ ಪರಿಶಿಷ್ಟ ಜಾತಿ(Scheduled Caste)ಯ ಪಟ್ಟಿಗೆ ಸೇರಿದ್ದರಿಂದ ಸರಕಾರದ ಎಲ್ಲ ಬಗೆಯ ಸವಲತ್ತುಗಳನ್ನು ನಿಜಕ್ಕೂ ಸದುಪಯೋಗಪಡಿಸಿಕೊಂಡು ಸಮಾಜದ ಎಲ್ಲ ರಂಗಗಳಲ್ಲೂ ಕಾಣಿಸಿಕೊಳ್ಳುತ್ತಿದ್ದಾರೆ. ಅವರಲ್ಲಿ ಸ್ತ್ರೀ ಶಿಕ್ಷಣ ಹೆಚ್ಚು ಆಶಾದಾಯಕವಾಗಿಲ್ಲವಾದರೂ ಆ ನಿಟ್ಟಿನಲ್ಲಿಯೂ ಪ್ರಯತ್ನಗಳು ನಡೆದಿವೆ. ಕಷ್ಟಪಟ್ಟು ಓದಿ ಪದವೀಧರರಾಗಿ ತಮ್ಮ ಬಡತನವನ್ನು ದೂರ ಮಾಡಿಕೊಳ್ಳಬೇಕೆಂಬ ಛಲ ಇಂದಿನ ಯುವಕರಲ್ಲಿ ಮೂಡಿರುವುದರಿಂದ ಈ ಜನಾಂಗಕ್ಕೆ ಒಳ್ಳೇ ಭವಿಷ್ಯ ಕಾದಿದೆ.

**೬.೫. ಆರ್ಥಿಕ ಬದಲಾವಣೆ**

ಮೂಲತಃ ವ್ಯಾಪಾರಿಗಳಾಗಿದ್ದ ಲಂಬಾಣಿಗರು ಕಾರಣಾಂತರಗಳಿಂದ ಅವರ ಮೂಲ ಉದ್ಯೋಗ ಕೈಬಿಟ್ಟ ಪರಿಣಾಮದಿಂದಾಗಿ ಈಗೀಗ ಅವರು ಕೃಷಿಕರಾಗಿ, ಕೃಷಿಕಾರ್ಮಿಕರಾಗಿ ಉಪಜೀವಿಸುತ್ತಿದ್ದಾರೆ. ಹೆಚ್ಚಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಈ ಜನ ಕಾಡು ಕಡಿದು ಒಂದಿಷ್ಟು ತುಂಡು ಜಮೀನು ಸಾಗುವಳಿ ಮಾಡಿಕೊಂಡಿದ್ದರೂ ಹೆಚ್ಚು ಜನ ಕೂಲಿಯನ್ನೇ ಅವಲಂಬಿಸಿದ್ದಾರೆ. ಮೂಲದ ವ್ಯಾಪಾರಿ ಮನೋವೃತ್ತಿ ಕೆಲವರಲ್ಲಿ ಇಂದಿಗೂ ಉಳಿದು ಬಂದಿದೆ. ಈ ಜನ ತುಂಬಾ ಕಷ್ಟಸಹಿಷ್ಣುಗಳಾಗಿದ್ದು ಬೆವರಿನ ಬೆಲೆಯನ್ನು ಮನವರಿಕೆ ಮಾಡಿಕೊಂಡಿದ್ದಾರೆ. ಮಳೆ, ಗಾಳಿ, ಬಿಸಿಲೆನ್ನದೆ ಬೆವರು ಸುರಿಸಿ ಬದುಕನ್ನು ಸಾಗಿಸುತ್ತಿರುವ ಅವರು ಹಿಂದೆಂದಿಗಿಂತ ಇಂದು ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಯತ್ನಿಸುತ್ತಿದ್ದಾರೆ. ಮೇಲ್ವರ್ಗದವರಿಂದ ಆಗುತ್ತಿರುವ ಶೋಷಣೆ ಹಾಗೂ ಜೀತ ಪದ್ಧತಿಗಳಿಂದ ಈ ಜನ ಸಂಪೂರ್ಣವಾಗಿ ಹೊರಬಂದಿದ್ದಾರೆ. ಕಠಿಣ ಪರಿಶ್ರಮ ಸ್ವಾವಲಂಬನೆ ಹಾಗೂ ಆತ್ಮವಿಶ್ವಾಸಗಳಿಂದ ಈ ಜನ ಆರ್ಥಿಕವಾಗಿ ಇಂದು ಸಬಲರಾಗುತ್ತಿದ್ದಾರೆ. ಸಣ್ಣಪುಟ್ಟ ವ್ಯಾಪಾರ ಉದ್ದಿಮೆಗಳಲ್ಲಿಯೂ ತೊಡಗಿಸಿಕೊಂಡು ಮೇಲುಗೈ ಸಾಧಿಸಿದ್ದಾರೆ. ದುಡಿಮೆಗೆ ತಕ್ಕ ಪ್ರತಿಫಲವನ್ನು ಪಡೆದು ನಿಷ್ಠೆ ಹಾಗೂ ಪ್ರಾಮಾಣಿಕತನದಿಂದ ಬದುಕು ಸಾಗಿಸಿದ್ದಾರೆ. ಮಂಡ್ಯ, ಮೈಸೂರು, ಶಿವಮೊಗ್ಗ ಹಾಗೂ ಇನ್ನಿತರ ರಾಜ್ಯಗಳಾದ ಗೋವಾ, ಮುಂಬೈ, ಮೊದಲಾದ ನಗರ ಪ್ರದೇಶಗಳಿಗೆ ವಲಸೆ ಹೋಗಿರುವ ಕೆಲವು ಲಂಬಾಣಿ ಕುಟುಂಬಗಳು ಉದ್ಯಮಪತಿಗಳಾಗಿ ಅಲ್ಲಿಯೇ ನೆಲೆಯಾಗಿರುವ ನಿದರ್ಶನಗಳಿವೆ. ಕೃಷಿಕಾರ್ಮಿಕರು ಭೂಮಿ ಖರೀದಿಸಿಯೋ ಇಲ್ಲವೆ ತುಂಡು ಭೂಮಿಯನ್ನು ಸಾಗುವಳಿ ಮಾಡಿಯೋ ಸ್ವತಂತ್ರವಾಗಿ ಭೂಮಾಲೀಕರಾಗಿ ಸಮಾಜದಲ್ಲಿ ತಮ ಸ್ಥಾನಮಾನಗಳನ್ನು ಬದಲಾಯಿಸಿಕೊಂಡಿದ್ದಾರೆ. ಬಡತನ ರೇಖೆಗಿಂತ ಕೆಳಗಿನ ಕೂಲಿ ಕಾರ್ಮಿಕರು ಮಾತ್ರ ರಸ್ತೆ, ಕೆಲಸ, ಗೌಂಡಿ ಕೆಲಸ, ಗಣಿ ಕೆಲಸ, ಕಲ್ಲು ಒಡೆಯುವುದು, ಕಟ್ಟಿಗೆ ಕಡಿದು ಮಾರುವುದು, ಇತ್ಯಾದಿ ಕೆಲಸಗಳನ್ನು ಮಾಡಿ ತಮ್ಮ ಉಪಜೀವನ ಮಾಡುತ್ತಿದ್ದಾರೆ. ಮೊದಮೊದಲು ಗುಡಿಸಲು ವಾಸಿಗಳಾಗಿದ್ದ ಅವರು ಇಂದು ಆರ್ಥಿಕ ಸಬಲತೆಯಿಂದಾಗಿ ಕಲ್ಲಿನ ಮನೆ ಆರ್.ಸಿ.ಸಿ. ಮನೆ, ಬಹುಮಹಡಿ ಕಟ್ಟಡಗಳನ್ನು ನಿರ್ಮಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಲಂಬಾಣಿ ಸಮುದಾಯದ ಪರಿಸ್ಥಿತಿ ಹಿಂದೆಂದಿಗಿಂತ ಇಂದು ಒಂದಿಷ್ಟು ಉತ್ತಮವಾಗಿದ್ದು, ಬಹುಮಟ್ಟಿಗೆ ಅವರಲ್ಲಿ ಆರ್ಥಿಕ ಪರಿವರ್ತನೆ ಕಾಣುತ್ತಿದೆ.

## ೬.೬. ರಾಜಕೀಯ ಪರಿವರ್ತನೆ

ಮೂಲತಃ **'ಗೋರ್ ಪಂಚಾಯತ್'** ವ್ಯವಸ್ಥೆಗೆ ಒಳಗಾಗಿರುವ ಲಂಬಾಣಿ ಸಮುದಾಯ ನೂರಾರು ವರ್ಷ ರಾಜಮಹಾರಾಜರ ಮತ್ತು ಆಳರಸರ ಅಧೀನದಲ್ಲಿದ್ದು ಶೋಷಣೆಗೆ ಒಳಗಾಗಿದ್ದಾರೆ. ಸ್ವಾತಂತ್ರ್ಯಾನಂತರ ಇದುವರೆಗೆ ಅವರು ರಾಜಕೀಯ ಕಾವಲುಗಾರರಾಗಿ ಪ್ರಮುಖ ರಾಜಕೀಯ ಪಕ್ಷಗಳನ್ನು ಗೆಲ್ಲಿಸುತ್ತ ಅವರ ಸೇವಕರಾಗಿ ಕಾರ್ಯಕರ್ತರಾಗಿ, ಕೇವಲ ಮಣ್ಣು ಹೊರುವ ಕೆಲಸವನ್ನು ಮಾಡಿಕೊಂಡು ಬಂದಿದ್ದಾರೆ. ಸಾಕ್ಷರತೆಯ ತೀವ್ರ ಪರಿಣಾಮದಿಂದ ಈಗೀಗ ಅವರಲ್ಲಿಯೂ ರಾಜಕೀಯ ಪ್ರಜ್ಞೆ ಹೆಚ್ಚಾಗುತ್ತಿದೆ. ಈಗ ಭಾರತದುದ್ದಕ್ಕೂ ರಾಜಕೀಯವಾಗಿ ಸಂಘಟಿತರಾಗುತ್ತಿದ್ದಾರೆ. ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಸಮುದಾಯವನ್ನು ಬಲಿಷ್ಠಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ. ಭಾರತದ ಎಲ್ಲ ರಾಜ್ಯಗಳಲ್ಲೂ ಪ್ರಚಲಿತವಿರುವ ಪ್ರಮುಖ ರಾಜಕೀಯ ಪಕ್ಷಗಳಲ್ಲಿ ಈಗೀಗ ಈ ಸಮುದಾಯದ ಕೆಲವು ರಾಜಕೀಯ ಮುಖಂಡರು ಕಾಣಸಿಕೊಳ್ಳುತ್ತಿದ್ದಾರೆ.

ಕರ್ನಾಟಕ ಸರಕಾರದ ಪಂಚಾಯತ್ ರಾಜ್ ವ್ಯವಸ್ಥೆಯಡಿಯಲ್ಲಿ ಈ ಸಮುದಾಯವರಿಗೂ ಹೆಚ್ಚಿನ ಸ್ಥಾನಮಾನಗಳು ಲಭಿಸಿವೆ. ಪ್ರತಿಯೊಂದು ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯಿತಿಗಳಲ್ಲಿ ಸ್ಪರ್ಧಿಸಿ ಚುನಾಯಿತರಾಗಿ ಅವರು ಹಲವು ಸ್ಥಾನಮಾನಗಳನ್ನು ಪಡೆದುಕೊಂಡಿದ್ದಾರೆ. ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ವಿರೋಧ ಪಕ್ಷದ ನಾಯಕರಾಗಿ, ಪಕ್ಷದ ವರಿಷ್ಠರಾಗಿ, ರಾಜಕೀಯ ಉನ್ನತ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಮೀಸಲು ಕ್ಷೇತ್ರಗಳಲ್ಲಂತೂ ಈ ಸಮುದಾಯದ ಪ್ರತಿನಿಧಿಗಳು ಸೋಲರಿಯದ ಸರ್ದಾರರು! ಈ ಕಾರಣಕ್ಕಾಗಿಯೇ ಎಲ್ಲ ಪ್ರಮುಖ ರಾಜಕೀಯ ಪಕ್ಷಗಳು ಇವರಿಗೆ ಸುಲಭವಾಗಿ ಪಕ್ಷದ ಟಿಕೇಟುಗಳನ್ನು ದೊರಕಿಸಿಕೊಡುತ್ತಿದ್ದಾರೆ. ಈ ಸಮುದಾಯದವರು ಹಿಂದಿನಂತೆ ಯಾವುದೋ ಒಂದು ಪ್ರಮುಖ ರಾಜಕೀಯ ಪಕ್ಷವನ್ನು ಕಣ್ಣುಮುಚ್ಚಿ ಬೆಂಬಲಿಸದೆ ಇತರ ಪ್ರಮುಖ ಪಕ್ಷಗಳನ್ನೂ ಬೆಂಬಲಿಸಿ ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಳ್ಳುತ್ತಿದ್ದಾರೆ. ಕೆಲವು ಕಡೆಗಳಲ್ಲಂತೂ ಯಾವುದೇ ಅಭ್ಯರ್ಥಿಯ ಗೆಲುವಿನಲ್ಲಿ ಈ ಸಮುದಾಯದ್ದೇ ನಿರ್ಣಾಯಕ ಪಾತ್ರವಾಗಿರುತ್ತದೆ. ಹೀಗಾಗಿ ಯಾವುದೇ ಪಕ್ಷವು ಈ ಸಮುದಾಯವನ್ನು ಮೊದಲಿನಂತೆ ಸುಲಭವಾಗಿ ನಿರ್ಲಕ್ಷಿಸುವಂತಿಲ್ಲ.

ಲಂಬಾಣಿ ಸಮುದಾಯ ಈಗಾಗಲೇ ವಿಧಾನಸಭೆ, ವಿಧಾನಪರಿಷತ್, ರಾಜ್ಯಸಭೆ, ಲೋಕಸಭೆ ಇತ್ಯಾದಿ ಚುನಾವಣೆಗಳಿಗೆ ಪ್ರಬಲವಾಗಿ ಸ್ಪರ್ಧಿಸಿ ಚುನಾಯಿತರಾಗಿ, ಶಾಸಕರಾಗಿ, ಮಂತ್ರಿಗಳಾಗಿ, ಸಂಸದರಾಗಿ, ರಾಜ್ಯಸಭಾ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಎಲ್ಲ ರಾಜ್ಯಗಳಲ್ಲೂ ಅವರ ಜನಸಂಖ್ಯೆಗನುಗುಣವಾಗಿ ರಾಜಕೀಯ ಪ್ರಾತಿನಿಧ್ಯ ದೊರಕದಿರುವುದು ಈ ಸಮುದಾಯದವರಿಗೆ ಅಸಮಾಧಾನವನ್ನುಂಟುಮಾಡಿದೆ. ಕರ್ನಾಟಕದಲ್ಲಿಯೇ ೪೦ ಲಕ್ಷದಷ್ಟು ಲಂಬಾಣಿಗಳಿದ್ದರೂ ಪ್ರಮುಖ ಪಕ್ಷಗಳು ಅವರಿಗೆ ವಿಧಾನ ಸಭೆಗೆ ಸ್ಪರ್ಧಿಸಲು ಕೇವಲ ೩-೪ ಜನರಿಗೆ ಮಾತ್ರ ಅವಕಾಶವನ್ನು ಕಲ್ಪಿಸಿದೆ. ಹಳ್ಳಿಯಿಂದ ದಿಲ್ಲಿಯವರೆಗೆ ಯಾವುದೇ

ಬಗೆಯ ಚುನಾವಣೆಗಳಿಗೆ ಯಾವುದೇ ರಾಜಕೀಯ ಪಕ್ಷಗಳ ಉಮೇದುವಾರರಾಗಲು ಅರ್ಹತೆಯನ್ನು ಪಡೆದಿರುವ ಈ ಸಮುದಾಯದ ಮುಖಂಡರು ಇನ್ನೂ ಹೆಚ್ಚಿನ ಎಚ್ಚರಿಕೆಯಿಂದ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡು ಹೆಚ್ಚೆಚ್ಚು ಪ್ರಾತಿನಿಧ್ಯವನ್ನು ಪಡೆದುಕೊಂಡು ಚುನಾಯಿತರಾಗಿ ಅಧಿಕಾರದ ಚುಕ್ಕಾಣಿಯನ್ನು ಹಿಡಿಕೊಳ್ಳುವುದು ಅಗತ್ಯವಾಗಿದೆ.

### ೬.೮. ಗೋರ್ ಪಂಚಾಯತಿಯಲ್ಲಾಗಿರುವ ಬದಲಾವಣೆಗಳು

ಲಂಬಾಣಿ ಸಮುದಾಯದ ಗೋರ್ ಪಂಚಾಯತ್ ಪ್ರಶ್ನಾತೀತ ಅಧಿಕಾರ ಹೊಂದಿದ ಒಂದು ವಿಶಿಷ್ಟ ಸಂಘಟನೆ. ಸಾಮಾನ್ಯವಾಗಿ ತಾಂಡಾದ ನಾಯಕನು ಆಯಾ ಸಮುದಾಯಗಳ ಆಗುಹೋಗುಗಳನ್ನು ನಿಯಂತ್ರಿಸಿಕೊಂಡು ಹೋಗುತ್ತಾನೆ. ತಾಂಡಾಗಳಲ್ಲಿ ನಡೆಯುವ ಯಾವುದೇ ಬಗೆಯ ಅಂತಃಕಲಹಗಳು, ವ್ಯಾಜ್ಯ, ಕಳ್ಳತನ, ಕೊಲೆ, ಸುಲಿಗೆ, ಅತ್ಯಾಚಾರಗಳಂತಹ ಅಪರಾಧಗಳನ್ನು ಇವರ ಗೋರ್ ಪಂಚಾಯತ್ ಇದುವರೆಗೆ ನಿಯಂತ್ರಿಸುತ್ತ ಬಂದಿದೆ. ಆದರೆ ಈಚೆಗೆ ಆಧುನಿಕತೆಯ ಬಲವಾದ ಪ್ರಭಾವದಿಂದಾಗಿ ಕ್ರಮೇಣ ಈ ಗೋರ್ ಪಂಚಾಯತ್ ತನ್ನ ಸ್ಥಾನಮಾನವನ್ನು ಕಳೆದುಕೊಳ್ಳುತ್ತಿದೆ. ಈಗೀಗ ಅವರು ಇಂಥ ಸಂದರ್ಭಗಳಲ್ಲಿ ನ್ಯಾಯ ಕೇಳಲು ಕೋರ್ಟು, ಕಚೇರಿ, ಪೊಲೀಸರಲ್ಲಿಗೆ ಹೋಗಲು ಹಿಂಜರಿಯುವುದಿಲ್ಲ. ಅಕ್ಷಮ್ಯ ಅಪರಾಧಗಳಿಗೆ ಸಮೂಹದಿಂದ ಬಹಿಷ್ಕಾರಗೊಳಿಸುವ ಶಿಕ್ಷೆಯನ್ನು ವಿಧಿಸುತ್ತಿದ್ದ ಗೋರ್ ಪಂಚಾಯತ್ ಅವರಿಗೆ ಈಗ ಯಾವ ಲೆಕ್ಕಕ್ಕಿಲ್ಲ. ಸಾಮಾನ್ಯವಾಗಿ ಯುವಕರು ಹಿರಿಯರ ಮಾತುಗಳನ್ನು ಕೇಳುವ ಸ್ಥಿತಿ ಅವರಲ್ಲಿಯೂ ಉಳಿದಿಲ್ಲ. ಪ್ರತಿಯೊಬ್ಬನಲ್ಲೂ ಕಾಯ್ದೆ, ಕಾನೂನು ತೋರಿಸುವ ಎದೆಗಾರಿಕೆ ಬಂದಿದೆ. ಗೋರ್ ಪಂಚಾಯಿತಿ ಸೇರಿದ ಸಂದರ್ಭದಲ್ಲಿ ಸಾಕ್ಷಿ ಹೇಳಲು ಇಲ್ಲವೆ ಪ್ರತಿವಾದ ಮಾಡಲು ಹಿಂದೆ ಮಹಿಳೆಯರಿಗೆ ಪ್ರವೇಶವನ್ನು ನೀಡುತ್ತಿರಲಿಲ್ಲ. ಆದರೆ ಇಂದು ಬದಲಾದ ಪರಿಸರದಲ್ಲಿ ಮಹಿಳೆಯರಿಗೂ ಅವಕಾಶವನ್ನು ನೀಡಲಾಗುತ್ತಿದೆ.

### ೬.೯. ಗೀತಮೇಳ ಮತ್ತು ವಾದ್ಯಪರಿಕರಗಳಲ್ಲಿ ಪರಿವರ್ತನೆ

ಜನಪದ ಸಂಸ್ಕೃತಿಯ ಅನೇಕ ಕ್ರಿಯಾಚರಣೆಗಳಲ್ಲಿ ವಾದ್ಯಗಳು ಅತ್ಯಂತ ಪ್ರಮುಖವಾಗಿವೆ. ಲಂಬಾಣಿ ಸಮುದಾಯದ ಜನಪದ ಗಾಯಕರಿಗೆ ಪಕ್ಕವಾದ್ಯಗಳ ಬಗೆಗೆ ದೇವರಲ್ಲಿ ಇಷ್ಟಷ್ಟೇ ಭಕ್ತಿ ಗೌರವ. ಅಂತೆಯೇ ಹಾಡಿಗೆ ಮೊದಲು ಪಕ್ಕವಾದ್ಯಗಳಿಗೆ ಪೂಜೆ ಸಲ್ಲುತ್ತದೆ. ಬಡುಕಟ್ಟಿನ ಲಂಬಾಣಿಗರಲ್ಲಿ ತಮ್ಮದೇ ಆದ ವಾದ್ಯ ವಿಶೇಷಗಳಿವೆ. ತಮ್ಮ ಹಾಡು, ಕುಣಿತ, ಲಾವಣಿ, ಭಜನೆ, ಪೂಜೆ, ಪುನಸ್ಕಾರ, ದೇವತಾಕಾರ್ಯ ಹಾಗೂ ಪುತ್ರ ಜನನ ಮೊದಲಾದ ಸಂದರ್ಭಗಳಲ್ಲಿ ವಾದ್ಯಪರಿಕರಗಳನ್ನು ಬಳಸುತ್ತಾರೆ.

ನವನಾಗರಿಕತೆಯ ಹೊಸ್ತಿಲಲ್ಲಿ ನಿಂತಿರುವ ಲಂಬಾಣಿಗರು ತಮ್ಮ ಉಡುಗೆ-ತೊಡುಗೆ ಇತ್ಯಾದಿಗಳಲ್ಲಿ ಪರಿವರ್ತಿತರಾಗಿರುವಂತೆ ವಾದ್ಯಪರಿಕರ, ಹಾಡುಗಾರಿಕೆಯಲ್ಲಿಯೂ ಕಾಲ ಹಾಗೂ ಪರಿಸರಕ್ಕನುಗುಣವಾಗಿ

ಬದಲಾವಣೆ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಲಂಬಾಣಿಗಳಲ್ಲಿ ಪ್ರಚಲಿತವಿರುವ ಜನಪದ ಲಾವಣಿ ಮತ್ತು ಕಥನ ಗೀತೆಗಳನ್ನು ತಮ್ಮ ಪೂರ್ವದ ವಾದ್ಯಪರಿಕರಗಲಾದ ನಗಾರಿ, ಕಂಚಿನತಾಳ ಹಾಗೂ ಕಂಚಿನ ಗಂಗಾಳ (ತಟ್ಟೆ)ದೊಂದಿಗೆ ಹಾಡುವುದು ಇಂದು ಸಂಪೂರ್ಣವಾಗಿ ನಿಂತುಹೋಗಿದೆ. ಆಧುನಿಕ ಮೇಳದವರು ಪೂರ್ವದ ಚರ್ಮವಾದ್ಯ ನಗಾರಿಗೆ ಬದಲಾಗಿ ತಬಲಾ ವಾದ್ಯವನ್ನು ಹೊಸ ತಾಳಗತ್ತಿಗಳಿಂದ ನುಡಿಸುತ್ತಾರೆ. ಪ್ರಾಚೀನರಂತೆ ಮೇಳದಲ್ಲಿ ಕುಳಿತವರೆಲ್ಲ ಒಂದೊಂದು ಗಂಗಾಳವನ್ನು ಹಿಡಿದುಕೊಳ್ಳದೆ ಮೇಳದ ಒಬ್ಬ ವ್ಯಕ್ತಿ ಮಾತ್ರ ಹಿಡಿದು ಮೇಳವನ್ನು ನಡೆಯಿಸಿಕೊಡುತ್ತಾನೆ. ಹಾಗೆಯೇ ಚಪ್ಪರದಾಳದ ಬದಲಾಗಿ ಕೆಲವು ವಾದ್ಯವಿಶೇಷಗಳೊಂದಿಗೆ ಆಧುನಿಕ ಝುಮ್ಮರಕಾ, ಖಂಜೀರಾ (ಖಂಜರಿ) ಮೊದಲಾದ ಪಕ್ಕವಾದ್ಯಗಳನ್ನು ಉಪಯೋಗಿಸಿಕೊಂಡು ಪೂರ್ವದ ಗೀತಮೇಳದ ಒಟ್ಟು ಸ್ವರೂಪವನ್ನು ಬದಲಾಯಿಸಿಕೊಂಡಿದ್ದಾರೆ. ಲಂಬಾಣಿಗರು ತಮ್ಮ ಮದುವೆ ಸಂದರ್ಭದಲ್ಲಿ ಹೆಣ್ಣಿನ ತವರಿನವರು ಮೊದಲಿನಂತೆ ಕಂಚಿನ ತಟ್ಟೆಯನ್ನು ಕೊಡುವುದನ್ನು ನಿಲ್ಲಿಸಿ ಸ್ಟೀಲಿನ ತಟ್ಟೆಗಳನ್ನು ಕೊಡುತ್ತಿರುವುದರಿಂದ ಅವರಲ್ಲಿ ಕಂಚಿನ ಗಂಗಾಳಗಳ ಕೊರತೆ ಉಂಟಾಗಿದ್ದರಿಂದ ಪೂರ್ವದ ಗೀತಮೇಳದಲ್ಲಿಯಂತೆ ಈಗ ಎಲ್ಲರೂ ಕಂಚಿನತಟ್ಟೆಯನ್ನು ಹಿಡಿದು ಮೇಳ ನಡೆಯಿಸುವುದಿಲ್ಲ. ಲಂಬಾಣಿಗರಲ್ಲಿ ವಾದ್ಯ ಪರಿಕರಗಳು ಎಷ್ಟೇ ಬದಲಾವಣೆಯಾಗಿದ್ದರೂ ಇಂದಿಗೂ ತಮ್ಮ ಪುತ್ರಜನನ ಸಂದರ್ಭದಲ್ಲಿ ನಗಾರಿ ಬಾರಿಸಿಯೇ ವಿಷಯವನ್ನು ತಿಳಿಸುತ್ತಾರೆ. ಈ ವಾದ್ಯ ಘೋಷ ಪುತ್ರಪ್ರಾಪ್ತಿಯ ಸಂತೋಷದ ಸಂಕೇತ ಹಾಗೆಯೇ ನಗಾರಿ ವಾದ್ಯದ ಗತ್ತಿಗೆ ತಕ್ಕಂತೆ ಕೆಲವೊಮ್ಮೆ ಹೋಳಿ ಸಂದರ್ಭದಲ್ಲಿ ವಿಶೇಷವಾಗಿ ಕುಣಿತಗಳನ್ನು ಮಾಡುತ್ತಾರೆ.

### ೬.೧೦. ಮತಾಂತರ ಮತ್ತು ಮಕ್ಕಳ ಮಾರಾಟ

ಲಂಬಾಣಿ ಸಮುದಾಯದವರನ್ನು ಮತಾಂತರಿಸುವ ಪ್ರಯತ್ನ ತುಂಬಾ ಹಿಂದಿನಿಂದ ನಡೆದು ಬಂದಿದೆ. ಮುಸ್ಲಿಂ ದೊರೆ ಔರಂಗಜೇಬನು ಲಂಬಾಣಿಗರನ್ನು ಬಲವಂತವಾಗಿ ಮತಾಂತರಿಸಲು ಪ್ರಯತ್ನಿಸಿದಾಗ ಈ ಜನ ಅಲ್ಲಿಂದ ತಪ್ಪಿಸಿಕೊಂಡು ಬೇರೆ ಕಡೆಗೆ ಹೋದರೆಂಬುದು ಇತಿಹಾಸ. ಆದರೆ ಈಚೆಗೆ ಮುಗ್ಧ ಲಂಬಾಣಿಗಳಲ್ಲಿ ಈ ಪಿಡುಗು ಮತ್ತೆ ಉಲ್ಬಣಗೊಂಡಿದೆ. ಹಲವು ಆಸೆ ಆಮಿಷಗಳಿಗೆ ಒಳಗಾಗಿ ಈ ಜನ ಮತಾಂತರ ಮತ್ತು ಮಕ್ಕಳ ಮಾರಾಟಕ್ಕೆ ಇಳಿಯುತ್ತಿರುವುದು ಶೋಚನೀಯ ಸಂಗತಿ. ಅನ್ಯಧರ್ಮೀಯರ ದೌರ್ಜನ್ಯ, ಬಲತ್ಕಾರಗಳಿಂದ ಈ ಸಮುದಾಯ ಮತಾಂತರಕ್ಕೆ ಒಳಗಾಗುತ್ತಿರುವುದನ್ನು ಉಗ್ರವಾಗಿ ತಡೆಗಟ್ಟದೆ ಹೋದಲ್ಲಿ ಈ ಸಮಾಜಕ್ಕೆ ಘೋರ ಅನ್ಯಾಯ ಮಾಡಿದಂತಾಗುತ್ತದೆ. ಲಂಬಾಣಿಗಳಲ್ಲಿ ಪ್ರಮುಖವಾಗಿ ಎರಡು ಕಾರಣಗಳಿಂದ ಈಚೆಗೆ ಮತಾಂತರ ಕ್ರಿಯೆ ನಡೆದಿರುವುದು ಸ್ಪಷ್ಟ.

೧. ಅನ್ಯ ಸಮಾಜದವರೊಂದಿಗೆ ವಾಸ ಮತ್ತು ವ್ಯವಹಾರಿಕ ಸಂಬಂಧ

೨. ಹಣ, ಉದ್ಯೋಗ ಮತ್ತಿತರ ಸೌಲಭ್ಯಗಳ ಆಸೆ, ಆಮಿಷ

ಲಂಬಾಣಿ ಸಮುದಾಯದ ಕೆಲವು ಜನ ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲು ಈಚೆಗೆ ಗೋವಾ, ಮುಂಬೈ ಮೊದಲಾದ ಪ್ರದೇಶಗಳಿಗೆ ವಲಸೆ (ಗುಳೇವು) ಹೋಗುತ್ತಿದ್ದಾರೆ. ಹೀಗೆ ನಗರ

ಪ್ರದೇಶಗಳಿಗೆ ವಲಸೆ ಹೋಗುವವರಿಗೆ ವಸತಿ ಸಮಸ್ಯೆ ಅನಿವಾರ್ಯವಾಗಿ ಕೊಳಚೆ ಪ್ರದೇಶಗಳಲ್ಲಿ ನೆಲೆಸುತ್ತಾರೆ. ಈ ಕೊಳಚೆ ಪ್ರದೇಶಗಳು ವಿವಿಧ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯ ಜನ ಸಮೂಹಗಳಿಂದ ಕೂಡಿರುತ್ತವೆ. ಇಲ್ಲಿ ಪ್ರತ್ಯೇಕತೆಗೆ ಅವಕಾಶಗಳು ಕಡಿಮೆಯಾದರೂ ಕೆಲವು ಜನಾಂಗಗಳು ಸಮಾನ ಆಹಾರಾಭ್ಯಾಸಗಳ ಮಾದರಿಯನ್ನನುಸರಿಸಿ ಒಂದೇ ಕಡೆಯಲ್ಲಿ ವಾಸಿಸುವುದರಿಂದ ಈ ಬಾಂಧವ್ಯ ವೈವಾಹಿಕ ಸಂಬಂಧಗಳಿಗೆ ತಿರುಗುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಲಂಬಾಣಿಗಳು ಕ್ರಿಸ್ತ ಮತ್ತು ಮುಸ್ಲೀಂ ಜನರೊಂದಿಗೆ ಹೆಚ್ಚಿನ ಸಂಪರ್ಕ ಹಾಗೂ ಬಾಂಧವ್ಯವನ್ನು ಇಟ್ಟುಕೊಂಡಿದ್ದರ ಪರಿಣಾಮವಾಗಿ ಆ ಸಮುದಾಯಗಳೊಂದಿಗೆ ವೈವಾಹಿಕ ಸಂಬಂಧಗಳು ಏರ್ಪಟ್ಟು ಪರಸ್ಪರ ಮತಾಂತರಗೊಂಡಿರುವ ಕೆಲವು ನಿದರ್ಶನಗಳಿವೆ. ಇನ್ನು ಕೆಲವು ಲಂಬಾಣಿ ತಾಂಡಾಗಳು ಇತರ ನಾಗರಿಕ ಸಮುದಾಯಗಳ ಊರು, ಪಟ್ಟಣಗಳಿಗೆ ಅಂಟಿಕೊಂಡು ಅಥವಾ ಅವುಗಳಲ್ಲೇ ಸೇರಿಕೊಂಡಿರುವ ಕಡೆಗಳಲ್ಲಿ ಈ ಮತಾಂತರ ಕ್ರಿಯೆಗಳು ಹೆಚ್ಚಾಗಿ ನಡೆದಿವೆ. ಮತಾಂತರಕ್ಕೆ ಮದುವೆಯೊಂದೇ ಕಾರಣವಾಗಿರದೆ ಬೇರೆ ಬೇರೆ ಆಸೆ, ಆಮಿಷ ಹಾಗೂ ವ್ಯವಹಾರಗಳು ಇದ್ದಿರಬಹುದು.

ಲಂಬಾಣಿಗಳನ್ನು ಮತಾಂತರಗೊಳಿಸಲು ಕೆಲವು ಕಡೆಗಳಲ್ಲಿ ವ್ಯವಸ್ಥಿತ ಪ್ರಯತ್ನಗಳು ನಡೆದಿವೆ. ಇದಕ್ಕೆ ಅವರ ಆರ್ಥಿಕ ದೌರ್ಬಲ್ಯ ಪ್ರಮುಖ ಕಾರಣವಾಗಿದೆ. ಹಣ, ಉದ್ಯೋಗ ಹಾಗೂ ಇನ್ನಿತರ ಸೌಲಭ್ಯಗಳ ಆಸೆ ಆಮಿಷಗಳಿಂದ ಲಂಬಾಣಿಗಳು ಮತಾಂತರಗೊಳ್ಳುತ್ತಿದ್ದಾರೆ. ಕ್ರೈಸ್ತ ಮಿಶನರಿಗಳು ವಸತಿ ಉದ್ಯೋಗ ಹಾಗೂ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಪ್ರವೇಶ ನೀಡುವ ಆಸೆ ಆಮಿಷ ತೋರಿಸಿ ಲಂಬಾಣಿಗರ ಮನವೊಲಿಸಲು ಪ್ರಯತ್ನಿಸುತ್ತಿದ್ದಾರೆ. ಆಹಾರ ಪದಾರ್ಥ ಬಟ್ಟೆಬರೆ ಮೊದಲಾದವುಗಳನ್ನು ಕೊಟ್ಟು ಮತಾಂತರಕ್ಕೆ ಪ್ರೇರೇಪಿಸುತ್ತಿದ್ದಾರೆ. ಆಸೆಗೆ ಬಲಿಯಾಗಿರುವ ಕೆಲವು ಲಂಬಾಣಿ ತಾಂಡಾಗಳಲ್ಲಿ ಪ್ರಾರ್ಥನೆಗಾಗಿ ಚರ್ಚ್‌ಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ದೇವರು, ಧರ್ಮದ ಮೌಢ್ಯವನ್ನು ಬಿತ್ತಿ ಅವರನ್ನು ಮತಾಂತರಿಸುವ ಕುತಂತ್ರಗಳು ನಡೆದಿವೆ.

ಮತಾಂತರದ ಹಿನ್ನೆಲೆಯಲ್ಲಿ ಮಕ್ಕಳ ಮಾರಾಟದ ಜಾಲವನ್ನು ಈಚೆಗೆ ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನ ಕೆಲವು ಲಂಬಾಣಿ ತಾಂಡಾಗಳಲ್ಲಿ ಪತ್ತೆ ಹಚ್ಚಲಾಗಿದೆ. ಹಸಿವು ಮತ್ತು ಬಡತನದ ಹಿನ್ನೆಲೆಯಲ್ಲಿ ಅಲ್ಲಿನ ಲಂಬಾಣಿಗಳಿಗೆ ಎಲ್ಲಿಲ್ಲದ ಆಸೆ, ಆಮಿಷಗಳನ್ನೊಡ್ಡಿ ಕ್ರೈಸ್ತ ಕಾರ್ಯಕರ್ತರು ಹಸುಗೂಸುಗಳನ್ನು ಖರೀದಿಸಿರುವ ಸಂಗತಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಕಷ್ಟು ಪ್ರಚಾರ ಪಡೆಯಿತು. ತಮ್ಮ ಮಕ್ಕಳನ್ನು ಹಸಿವು ಮತ್ತು ಬಡತನದಿಂದ ಬಳಲುವುದಕ್ಕಿಂತ ಕ್ರಿಸ್ತಧರ್ಮೀಯರಲ್ಲಿ ಒಳ್ಳೇ ಆಹಾರ ಉಡುಪು, ತೊಡಪು ಹಾಗೂ ಇಂಗ್ಲಿಷ್ ಶಿಕ್ಷಣ ಪಡೆದು ಸುಖೀಗಳಾಗುತ್ತಾರೆ ಎಂಬ ಭಾವನೆ ಅವರಲ್ಲಿದೆ. ಇದನ್ನು ಹಾಗೆ ಮುಂದುವರಿಸಿದರೆ ಲಂಬಾಣಿ ಸಮುದಾಯದ ಮೇಲೆ ಅಗಾಧವಾದ ಪರಿಣಾಮ ಬೀರುತ್ತದೆ. ಆದುದರಿಂದ ಇಂದಿನ ಸಂಘ ಸಂಸ್ಥೆಗಳು, ರಾಜಕೀಯ ಧುರೀಣರು, ಇದ್ಯಾರ್ಥಿ ಸಮೂಹ, ಧಾರ್ಮಿಕ ಗುರುಗಳು ಮತ್ತು ಸರಕಾರ ಮತಾಂತರದ ಎಚ್ಚರವಹಿಸಿ ಲಂಬಾಣಿ ಅವಿದ್ಯಾವಂತ ಜನರಿಗೆ ಮತಾಂತರವಾಗದಂತೆ

ಅವರಿಗೆ ಸಲಹೆ ಸೂಚನೆಗಳನ್ನು ಕೊಟ್ಟು ಅವರ ಮನಸ್ಸನ್ನು ಪರಿವರ್ತನೆಗೊಳಿಸಬೇಕು. ಹೀಗಿದ್ದಾಗ ಮಾತ್ರ ಲಂಬಾಣಿ ಸಮುದಾಯವು ಉಳಿಯಲಿಕ್ಕೇ ಸಾಧ್ಯ ಹಾಗೂ ಸರಕಾರ ಲಂಬಾಣಿ ಸಮುದಾಯಗಳ ಕಡೆ ಗಮನಹರಿಸಿ ಮತಾಂತರವನ್ನು ತಡೆವಡೆಬೇಕು. ಒಂದು ವೇಳೆ ಮತಾಂತರವಾದರೆ ಸರಕಾರವು ನೀಡುವ ಎಸ್.ಸಿ./ಎಸ್.ಟಿ. ಸವಲತ್ತುಗಳನ್ನು ಮತಾಂತರಗಳಿಗೆ ಸಂಪೂರ್ಣವಾಗಿ ನಿಲ್ಲಿಸಬೇಕು. ಯಾವುದೇ ಕಾರಣಕ್ಕೆ ಅವರನ್ನು ಪ್ರೋತ್ಸಾಹ ನೀಡಬಾರದು.

ಜಾಗತೀಕರಣ ಮತ್ತು ಆಧುನಿಕತೆ ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯ ಮೇಲೆ ವಿಶೇಷವಾಗಿ ಲಂಬಾಣಿ ಸಮುದಾಯದ ಮೇಲೆ ಬೀರಿರುವ ಪರಿಣಾಮಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧. ಅನಕ್ಷರಸ್ಥರು ಅವಿದ್ಯಾವಂತರ ಪ್ರಮಾಣ ಹೆಚ್ಚಾಗಿರುವ ನಮ್ಮ ದೇಶದಲ್ಲಿ ಆಧುನೀಕರಣ ಮತ್ತು ಜಾಗತೀಕರಣ ದಿನಕೂಲಿ ಕಾರ್ಮಿಕರ ಸಂಖ್ಯೆಯನ್ನು ಹೆಚ್ಚಿಸುತ್ತಿದೆ.

೨. ಜಾಗತೀಕರಣದ ಪ್ರಭಾವದಿಂದಾಗಿ ಸರಕಾರವು ತನ್ನ ಕಲ್ಯಾಣ ಯೋಜನೆಗಳಿಂದ ಹಿಂದೆ ಸರಿಯುತ್ತಿರುವಾಗ, ಕೃಷಿ, ಕೈಗಾರಿಕೆ ಅಥವಾ ಸೇವಾಕ್ಷೇತ್ರಗಳು ಖಾಸಗೀಕರಣಗೊಂಡು ವೇತನ, ಉದ್ಯೋಗ, ಸಾಮಾಜಿಕ ಭದ್ರತೆ ಇತ್ಯಾದಿ ಸೌರ್ಯಗಳೆಲ್ಲವೂ ಖಾಸಗಿಯವರ ಕೃಪೆಯಲ್ಲಿರುವ ಕಾರ್ಮಿಕರ ಸ್ಥಿತಿ ಶೋಚನೀಯವಾಗುವ ಸಾಧ್ಯತೆ ಇದೆ.

೩. ಜಾಗತೀಕರಣ ಮಾರುಕಟ್ಟೆಯಲ್ಲಿ ಲಂಬಾಣಿದಾರರ ಸರಕು, ಸೇವೆಗಳು ಮಾರಾಟವಾಗುವ ಸಾಧ್ಯತೆಗಳು ಕಡಿಮೆ.

೪. ಜಾಗತೀಕರಣದಿಂದಾಗಿ ಲಂಬಾಣಿದಾರರು ನಿರುದ್ಯೋಗಿಗಳಾಗಿ ಬೀದಿ ಪಾಲಾಗುವ, ಭೂಸುಧಾರಣೆ ಕ್ರಮವನ್ನು ತಡೆಹಿಡಿಯುವ, ಭೂ ಒಡೆತನಕ್ಕೆ ಇದ್ದ ಮಿತಿಯನ್ನು ಸಡಿಲಿಸುವ, ಸಾಮಾಜಕ ಭದ್ರತೆ ಮತ್ತು ರಕ್ಷಣಾ ಕ್ರಮಗಳನ್ನು ಪರಿಗಣನೆಗೆ ತೆಗೆದುಕೊಳ್ಳದೇ ಕಾರ್ಮಿಕರ ಸುಧಾರಣೆಯನ್ನು ಯೋಜಿಸುವ ಸಾಧ್ಯತೆಗಳಿವೆ.

೫. ಲಂಬಾಣಿದಾರರು ತಮ್ಮ ಮೂಲವೃತ್ತಿಗಳನ್ನು ಬಿಟ್ಟುಕೊಟ್ಟು ಕೂಲಿಕಾರರಾಗುವ, ಗುಡಿಕೈಗಾರಿಕೆಗಳ ಬೇಡಿಕೆ ಹಂತ ಹಂತವಾಗಿ ಕಡಿಮೆಯಾಗುವ, ಬ್ಯಾಂಕು ಮತ್ತು ಹಣಕಾಸಿನ ಸಂಸ್ಥೆಗಳ ಖಾಸಗೀಕರಣವು ಗೃಹ, ಸಣ್ಣ ಹಾಗೂ ಲಂಬಾಣಿದಾರರ ಹಾಗೂ ಹಿಂದುಳಿದವರಿಗೆ ಸಾಲ ನೀಡುವ ಆದ್ಯತೆಯಿಂದ ನಿಧಾನವಾಗಿ ದೂರ ಸರಿಯುತ್ತವೆ.

೬. ಜಾಗತೀಕರಣದಿಂದ ಆರ್ಥಿಕವಾಗಿ ಹಿಂದುಳಿದಿರುವ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ಲಾಭದಾಯಕ ಹುದ್ದೆಗಳು ಸಿಗುವ ಸಾಧ್ಯತೆ ಕಡಿಮೆ.

೭. ಕೂಲಿಕಾರರು ನಿಶ್ಚಿತ ಕೂಲಿಯಿಂದ ಅನಿಶ್ಚಿತ ಕೂಲಿಯ ಕಡೆಗೆ ಸಾಗುವ, ಕೃಷಿ ನೀಡುವ ಸಹಾಯಧನ ಕಡಿಮೆ ಅಥವಾ ಇಲ್ಲವಾಗಿಸುವ ಸಾಧ್ಯತೆ ಇರುವುದರಿಂದ ಕೃಷಿ ಉತ್ಪಾದನೆ ಕಡಿಮೆಯಾಗಿ ಆಹಾರದ

ಸಮಸ್ಯೆ ಉಂಟಾಗುವ ಸಾಧ್ಯತೆ ಇದೆ. ಕಾರ್ಮಿಕರ ಉದ್ಯೋಗ ಭರವಸೆ ಕಡಿಮೆಯಾಗುವ ಹಾಗೂ ಸರ್ಕಾರಿ ಸೇವೆಗಳು ಖಾಸಗಿಗೊಳ್ಳುತ್ತಿರುವಾಗ ಮೀಸಲಾತಿ ನೀತಿ ಅರ್ಥ ಕಳೆದುಕೊಳ್ಳುತ್ತದೆ.

* ಖಾಸಗೀಕರಣದ ಪ್ರಭಾವದಿಂದ ಶೈಕ್ಷಣಿಕ ಸೌಲಭ್ಯಗಳಿಂದ ಹಿಂದುಳಿದ ಜನಾಂಗ ದೂರ ಸರಿಯುತ್ತಾರೆ.

* ಜಾಗತೀಕರಣವು ಬಂಡವಾಳ ಪ್ರಧಾನ ತಂತ್ರಜ್ಞಾನಕ್ಕೆ ಹೆಚ್ಚಿನ ಪ್ರಧಾನ್ಯತೆ ನೀಡುತ್ತದೆ.

* ಆದಾಯ-ಸಂಪತ್ತಿನ ಹಂಚಿಕೆಯಲ್ಲಿ ಅಸಮತೋಲನ ಕಂಡು ಬರುತ್ತದೆ. ಖಾಸಗೀ ಒಡೆತನದ ಉದ್ದಿಮೆಗಳು ಲಾಭದ ಆಸೆಗಾಗಿ ಕಾರ್ಮಿಕರನ್ನು ಶೋಷಿಸುವ, ದೇಶದೊಳಗಿನ ನೈಸರ್ಗಿಕ ಸಂಪನ್ಮೂಲ ಬರಿದಾಗುವ ಸಾಧ್ಯತೆ.

* ದೇಶದ ಸಾರ್ವಸೌಮತ್ವಕ್ಕೆ ಧಕ್ಕೆ, ಬಹುರಾಷ್ಟ್ರೀಯ ಕಂಪನಿಗಳು ತಾವು ಅತಿಥೇಯ ದೇಶಗಳಲ್ಲಿನ ಉತ್ಪಾದನೆಯಲ್ಲಿ ಗಳಿಸಿದ ಲಾಭವನ್ನು ಮರು ಹೂಡಿಕೆ ಮಾಡುವುದರ ಬದಲು ಸ್ವದೇಶಕ್ಕೆ ಹೊತ್ತೊಯ್ಯ ಬಹುದು.

* ಬಹುರಾಷ್ಟ್ರೀಯ ಕಂಪನಿಗಳು ನಗರ ಪ್ರದೇಶಗಳಲ್ಲಿ ಸ್ಥಾಪನೆಯಾಗುವುದರಿಂದ ಪ್ರಾದೇಶಿಕ ಅಸಮತೋಲನ ಉಂಟಾಗುವುದು.

* ಆಧುನಿಕತೆ, ಜಾಗತೀಕರಣ ಮತ್ತು ಖಾಸಗೀಕರಣಗಳಿಂದಾಗಿ ಸರಕಾರದ ಧನಸಹಾಯ, ಪ್ರೋತ್ಸಾಹ ಹಾಗೂ ಇತರೆ ಸಾಲಭ್ಯಗಳ ಪ್ರಮಾಣ ಗಣನೀಯವಾಗಿ ಕಡಿಮೆಯಾಗುತ್ತಿದೆ. ಸಾಮಾಜಿಕ, ಭದ್ರತಾ ಸೌಲಭ್ಯಗಳು ಸಾಕಷ್ಟು ಪ್ರಮಾಣದಲ್ಲಿಲಂಬಾಣಿದಾರರಿಗೆ ದೊರೆಯುತ್ತಿಲ್ಲ.

ಲಂಬಾಣಿದಾರರು ತಮ್ಮ ವೃತ್ತಿಗಳನ್ನು ಆಧುನೀಕರಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅವರಿಗೆ ಬೇಕಾದ ಸೂಕ್ತವಾದ ಆಧುನಿಕ ಯಂತ್ರೋಪಕರಣಗಳು, ಸಾಧನ ಸಲಕರಣೆಗಳು ಸುಲಭ ಬೆಲೆಗೆ ಲಭ್ಯವಾಗುತ್ತಿಲ್ಲ. ಹಣಕಾಸಿನ ಸಂಸ್ಥೆಗಳು ಲಂಬಾಣಿದಾರರಿಗೆ ಸಾಲ ಕೊಡುವ ಆದ್ಯತೆಯಿಂದ ಹಿಂದೆ ಸರಿಯುತ್ತಿವೆ. ತಯಾರಿಸಿದ ಸರಕು ಸೇವೆಗಳ ಮಾರಾಟಕ್ಕೆ ವ್ಯವಸ್ಥೆ ಇಲ್ಲ. ಸರಕುಗಳ ಬೇಡಿಕೆಯು ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ಲಂಬಾಣಿಗಳು ಮುಂದುವರಿಯಲು ಸಾಧ್ಯವೇ? ಅವುಗಳನ್ನು ನಂಬಿ ಜೀವನ ಮಾಡಲು ಲಂಬಾಣಿದಾರರಿಗೆ ಸಾಧ್ಯತೆ ಇದೆಯೇ? ಎಂಬ ಪ್ರಶ್ನೆಗಳು ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಉದ್ಭವಾಗುತ್ತಿವೆ.

ಪ್ರಸ್ತುತ ಪರಿಸ್ಥಿತಿಯಲ್ಲಿ ಎಷ್ಟೋ ಲಂಬಾಣಿಗಳು ಕಣ್ಮರೆಯಾಗಿವೆ. ಮತ್ತೆ ಕೆಲವು ಕಣ್ಮರೆಯಾಗುವ ಹಂತದಲ್ಲಿವೆ. ಇಂತಹ ಸನ್ನಿವೇಶದಲ್ಲಿ ಉಳಿದುಕೊಂಡಿರುವ ಪ್ರಮುಖವಾದ ಲಂಬಾಣಿಗಳ ಮೇಲೆ ಆಧುನೀಕರಣ, ಜಾಗತೀಕರಣ ಕೆಟ್ಟ ಪರಿಣಾಮಗಳು ಬೀಳದಂತೆ ನೋಡಿಕೊಂಡು ಅವುಗಳನ್ನು ಉಳಿಸಿ ಬೆಳೆಸುವುದು ಸರಕಾರದ ಹಾಗೂ ಸಂಘ ಸಂಸ್ಥೆಗಳ ಮತ್ತು ಧಾರ್ಮಿಕ ಗುರುಗಳ ಪ್ರಮುಖ ಜವಾಬ್ದಾರಿಯಾಗಿದೆ.

## ೬.೧೧. ಲಂಬಾಣಿಗಳ ಸಮಸ್ಯೆ, ಸವಾಲು ಮತ್ತು ಪರಿಹಾರಗಳು

ಲಂಬಾಣಿಗಳ ಕುಲಕಸುಬುಗಳು ದೈನಂದಿನ ಬದುಕಿನ ಉಪಯೋಗಿ ನೆಲೆಯಿಂದ ಹುಟ್ಟಿಕೊಂಡಿವೆ. ಮಾನವನ ಕರಕೌಶಲ್ಯ ಸೃಜನಶೀಲವಾದುದು. ಅದರ ಜೊತೆಗೆ ಮಾನವನ ಕಲ್ಪನೆ, ಪ್ರಯೋಗಶೀಲತೆ ಮತ್ತು ತಂತ್ರ ಕೌಶಲ್ಯವು ಸೇರಿ ನನಗೆ, ತನ್ನ ಕುಟುಂಬಕ್ಕೆ, ಜನಾಂಗದ ಉಪಯೋಗಕ್ಕೆ ಬೇಕಾದವಸ್ತು, ಉಪಕರಣ, ಪರಿಕರ, ಸಾಧನ, ಸಲಕರಣೆಗಳನ್ನು ತಯಾರಿಸಿಕೊಂಡ, ಹಾಗೆಯೇ ತಯಾರಿಸಿದ ವಸ್ತುಗಳು ಹಾಗೂ ನೀಡುವ ಸೇವೆಗಳು ತನ್ನ ಬದುಕಿನ ಅವಶ್ಯಕ ಭಾಗವಾಗಿ ದಾಖಲಾದವು. ಬಳ್ಳಾರಿ ಜಿಲ್ಲೆಯ ಲಂಬಾಣಿಗರಿಗೆ ಒಂದು ದೀರ್ಘವಾದ ಸಾಂಪ್ರದಾಯಿಕ ಪರಂಪರೆ ಹಾಗೂ ಇತಿಹಾಸವಿದೆ.

ನಾಗರೀಕತೆ ಬೆಳೆದಂತೆಲ್ಲಾ ಲಂಬಾಣಿಗಳು ಹೊಸ ಹೊಸ ಅವಿಷ್ಕಾರಗಳನ್ನು ಮಾಡುತ್ತಾ ಹೊಸದನ್ನು ಅಳವಡಿಸಿಕೊಳ್ಳುತ್ತಾ ಬಂದಿದೆ. ಪ್ರಪಂಚದಾದ್ಯಂತ ವಿವಿಧ ಬಗೆಯ ಇಂದು ವಿಶ್ವದ ಎಲ್ಲಾ ದೇಶಗಳಲ್ಲಿ ಪರಂಪರಾಗತವಾಗಿ, ವಂಶಾಪಾರಂಪರ್ಯವಾಗಿ ಬೆಳೆದುಬಂದಿರುವ ವೃತ್ತಿಗಳನ್ನು ಕಾಣಬಹುದು. ಭಾರತ ದೇಶದಲ್ಲಿ ಪುರಾತನ ಕಾಲದಿಂದಲೂ ಕೆಲವು ಸರಕು ಸೇವೆಗಳಿಗೆ ಪ್ರಸಿದ್ಧವಾಗಿದೆ. ನಮ್ಮ ದೇಶ ವಿದೇಶಗಳಲ್ಲಿ ಮಾರಾಟ ಮಾಡಿರುವುದನ್ನು ಇತಿಹಾಸದಲ್ಲಿ ದಾಖಲಾಗಿದೆ. ಲಂಬಾಣಿಗರು ಸಣ್ಣ ಸಣ್ಣ ವ್ಯಾಪಾರ ವೃತ್ತಿ ಅಂದರೆ ಲವಣ ಮಾರಾಟ ಮಾಡುವುದು, ಕವಳೆಹಣ್ಣು, ಕಾರೆಹಣ್ಣು, ಬಿಕ್ಕೆಹಣ್ಣು, ಶೇಂಗಾ, ಮಾರಾಟ ಮಾಡುವ ಹಾಗೂ ಜೊತೆಗೆ ಸುಣ್ಣ ಮಾರಾಟ, ಮಾಡುವ ವೃತ್ತಿಯನ್ನು ಅವಲಂಬಿಸಿದ್ದರು. ಅಂದು ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ನೀಡಲಾಗಿತ್ತು. ಅವರ ಸೇವೆಗಳನ್ನು ಅವಶ್ಯಕ ಸೇವೆಗಳೆಂದು ಪರಿಗಣಿಸಿ ಸಮಾಜ ಅವರಿಗೆ ಮನ್ನಣೆಯನ್ನು ನೀಡಿತ್ತು. ಇಂದು ಸಹ ರಾಜ್ಯ ಹಾಗೂ ಜಿಲ್ಲೆಯಾದ್ಯಂತ ಇಂತಹ ಲಂಬಾಣಿ ಕುಲಕಸುಬುಗಳನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಇತಿಹಾಸ ಕ್ರಿ.ಪೂ.೩೫೦೦ ರಿಂದ ಕ್ರಿ.ಪೂ.೧೦೦೦ರ ಅವಧಿಯಲ್ಲಿ ಹಳೆಯ ಶಿಲಾಯುಗದ ಜನರಿಂದ ಪ್ರಾರಂಭವಾಗುತ್ತದೆ! ತೆಕ್ಕಲಕೋಟೆ, ಜೋಗ, ಸಂಗನ ಕಲ್ಲು, ಮೊದಲಾದ ಸ್ಥಳಗಳಲ್ಲಿ ಹಳೆ-ಶಿಲಾಯುಗದ ಜನರ ನೆಲೆಗಳನ್ನು ವಿದ್ವಾಂಸರು ಶೋಧಿಸಿದ್ದಾರೆ. ಅನಂತರ ವಿವಿಧ ರಾಜಮನೆತನದವರು ಬಳ್ಳಾರಿ ಜಿಲ್ಲೆಯನ್ನು ಆಳಿದ್ದಾರೆ. ಬಳ್ಳಾರಿ ಜಿಲ್ಲೆಯ ಬಹುಭಾಗಗಳು ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಗಂಗರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಸೇವುಣರು, ಹೊಯ್ಸಳರು, ವಿಜಯನಗರ ಅರಸರು, ಮರಾಠರು, ಪಾಳೆಗಾರರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಾಗಿದ್ದವು. ಈ ಎಲ್ಲಾ ರಾಜ ಮನೆತನಗಳ ಆಳ್ವಿಕೆಯಲ್ಲಿ ಲಂಬಾಣಿಗರು ವಿವಿಧ ಕಡೆಗಳಿಂದ ಬಂದು ವ್ಯಾಪಾರಕ್ಕಾಗಿ ಬಳ್ಳಾರಿ ಜಿಲ್ಲೆಯಲ್ಲಿದ್ದರೆಂಬುದು ಇತಿಹಾಸದ ಪುಟಗಳಲ್ಲಿ ದಾಖಲಾಗಿರುವುದು ಕಂಡುಬರುತ್ತದೆ.

ವಿಜಯನಗರ ಅರಸರ ಕಾಲದಲ್ಲಿ ವಿವಿಧ ವೃತ್ತಿಗಳ ವರ್ಣನೆಯನ್ನು ಇತಿಹಾಸಕಾರರು ದಾಖಲೆ ಮಾಡಿದ್ದಾರೆ. ಕವಿಗಳು ಕೊಡುವ ಪುರ ವರ್ಣನೆಯ ಚಿತ್ರದಲ್ಲಿ ನಾನಾ ವೃತ್ತಿ ಬಾಂಧವರು ವಾಸಿಸುತ್ತಿದ್ದ

ಕೇರಿಗಳ ಚಿತ್ರಣವು ದೊರೆಯುತ್ತದೆ. ಬಡಗಿ, ಕಮ್ಮಾರ, ಲವಣ ವ್ಯಾಪಾರಿ, (ವಿಪ್ರ) ಕಾಡಿನ ಉತ್ಪನ್ನಗಳಾದ ಕಾರೆಹಣ್ಣು, ಕವಳೆಹಣ್ಣು, ಗೋಂದು, ಬಿಕ್ಕೆಹಣ್ಣು, ಸುಣ್ಣ ವ್ಯಾಪಾರ, ಕೃಷಿ ಆಹಾರ ಉತ್ಪನ್ನಗಳು, ಮುಂತಾದ ವೃತ್ತಿಗಾರರನ್ನು ಚಿತ್ರಿಸಲಾಗಿದೆ. ವಿಜಯನಗರ ವೈಭವದ ಬೆಳವಣಿಗೆಯಲ್ಲಿ ವಿವಿಧ ವೃತ್ತಿದಾರರ ಕೊಡುಗೆ ಅಪಾರ. ಅದರಲ್ಲಿ ವಿಶೇಷವಾಗಿ ಲಂಬಾಣಿಗರು ತಯಾರಿಸುವ ಉಡುಗೆ-ತೊಡುಗೆ ವ್ಯಾಪಾರ ಅತ್ಯಂತ ಪ್ರಮುಖವಾಗಿರುವುದು ಕಂಡುಬರುತ್ತದೆ.

ವಿಜಯನಗರ ಅರಸರ ಆಳ್ವಿಕೆ ನಂತರ ಪಾಳೆಗಾರರು, ಮೈಸೂರು ಅರಸರು ಹೈದರಾಲಿ, ಟಿಪ್ಪುಸುಲ್ತಾನ್ ಈ ಭಾಗವನ್ನು ತಮ್ಮ ಅಳ್ವಿಕೆಗೆ ಒಳಪಡಿಸಿಕೊಂಡಿದ್ದರು. ನಂತರ ಬ್ರಿಟಿಷರ ಆಡಳಿತಕ್ಕೆ ಬಳ್ಳಾರಿ ಜಿಲ್ಲೆ ಒಳಪಟ್ಟಿತ್ತು. ಇವರ ಕಾಲದಲ್ಲೂ ವಿವಿಧ ವೃತ್ತಿದಾರರು ತಮ್ಮ ವೃತ್ತಿಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಭಾರತದ ಸ್ವಾತಂತ್ರ್ಯ ನಂತರ ಭಾಷಾವಾರು ರಾಜ್ಯಗಳು ನಿರ್ಮಾಣವಾದವು. ಬಳ್ಳಾರಿಯು ಹಲವಾರು ಹೋರಾಟಗಳ ನಡುವೆ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು. ಹಿಂದೆ ಎಂಟು ತಾಲೂಕುಗಳನ್ನು ಹೊಂದಿದ್ದ ಬಳ್ಳಾರಿ ಜಿಲ್ಲೆ ಇಂದು ಏಳು ತಾಲೂಕುಗಳನ್ನು ಹೊಂದಿದೆ. ಹರಪನಹಳ್ಳಿ ತಾಲೂಕನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಗಿದೆ. ಇಂದು ಬಳ್ಳಾರಿ ಜಿಲ್ಲೆ, ಬಳ್ಳಾರಿ ಸಿರುಗುಪ್ಪ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಹಗರಿಬೊಮ್ಮನಹಳ್ಳಿ, ಹೂವಿನ ಹಡಗಲಿ ತಾಲೂಕುಗಳನ್ನು ಒಳಗೊಂಡಿದೆ. ಬಳ್ಳಾರಿಯು ಜಿಲ್ಲಾ ಕೇಂದ್ರವಾಗಿದ್ದು, ಹೊಸಪೇಟೆ ವಿಭಾಗೀಯ ಕೇಂದ್ರಸ್ಥಾನವಾಗಿದೆ.

ಬಳ್ಳಾರಿ ಜಿಲ್ಲೆ ಕೃಷಿ, ಕೋಳಿ ಸಾಗಾಣಿಕೆ, ಪಶುಪಾಲನೆ, ಗಣಿಗಾರಿಕೆ ಮತ್ತು ಕಬ್ಬಿಣ, ಉಕ್ಕು ಕೈಗಾರಿಕೆಗಳಿಗೆ ತುಂಬಾ ಹೆಸರಾಗಿದೆ. ಜಿಲ್ಲೆಯಲ್ಲಿ ಪುರಾತನ ಕಾಲದಿಂದಲೂ ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ ಲಂಬಾಣಿಗಳ ಕೃಷಿ, ಕೂಲಿ, ಸಣ್ಣ ವ್ಯಾಪಾರಗಳನ್ನು ಕಾಣಬಹುದು. ಗಣಿಗಾರಿಕೆ ಹಾಗೂ ಕೈಗಾರಿಕರಣ ಭರಾಟೆಯಲ್ಲೂ ಲಂಬಾಣಿಗರು ಜಿಲ್ಲೆಯಲ್ಲಿ ಪ್ರಾಮುಖ್ಯತೆಯನ್ನು ಹೊಂದಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವ ಲಂಬಾಣಿಗರು, ಅವರ ಮೂಲ ಕಸಬುಗಳೆಂದರೆ ಕೃಷಿ ಮಾಡುವುದು, ಕೂಲಿ ಹಾಗೂ ಇತ್ತೀಚಿನ ದಿನಗಳಲ್ಲಿ ಗಣಿಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿ ಬಹುಮಟ್ಟಿಗೆ ಹೆಚ್ಚಾಗಿ ಲಂಬಾಣಿಗರು ಗಣಿಗಾರಿಕೆಯಲ್ಲಿ ಕಂಡುಬರುವುದು ತಿಳಿದಿದೆ. ಪ್ರಸ್ತುತ ಪ್ರಬಂಧದಲ್ಲಿ ಕೆಲವು ಪ್ರಮುಖವಾದ ಲಂಬಾಣಿಗಳ ವೃತ್ತಿಗಳನ್ನು ವಿಶ್ಲೇಷಣೆಗೆ ಒಳಪಡಿಸಿದೆ.

ಜಿಲ್ಲೆಯ ಲಂಬಾಣಿ ಸಮುದಾಯದ ಪ್ರಮುಖ ಕಸುಬು ಕೃಷಿ-ಈ ಕೃಷಿ ಯಾವುದೇ ಒಂದು ಸಮುದಾಯದಲ್ಲಿ ಸೀಮಿತವಾಗಿಲ್ಲ. ಈ ಕಸುಬನ್ನು ಸಮಾಜದಲ್ಲೂ ಎಲ್ಲ ಜಾತಿ-ಜನಾಂಗಗಳು ನಿರ್ವಹಿಸುತ್ತವೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಕೃಷಿ ಮಾಡುತ್ತಿರುವವರು ಹೆಚ್ಚಾಗಿ ವೀರಶೈವ ಲಿಂಗಾಯಿತರೂ, ಇತ್ತೀಚಿನ ದಿನಗಳಲ್ಲಿ ಲಂಬಾಣಿಗರೂ ಸಹಿತ ಕೃಷಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಅವರ ಮೂಲ

ಕಸುಬು ಒಕ್ಕಲುತನವಾಗಿದೆ. ಜಿಲ್ಲೆಯಲ್ಲಿ ತುಂಗಭದ್ರ ಅಣೆಕಟ್ಟೆ ಹಾಗೂ ಕರೆ ಕಾಲುವೆ, ಹಳ್ಳಿಕೊಳ್ಳಗಳು ಹೆಚ್ಚಾಗಿರುವುದರಿಂದ ಒಕ್ಕಲುತನ ಉತ್ತಮ ಸ್ಥಿತಿಯಲ್ಲಿದೆ. ಒಕ್ಕಲಿಗರು ಆಹಾರ ಹಾಗೂ ಆಹಾರೇತರ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಆದುದರಿಂದ ಜಿಲ್ಲೆಯ ಕೃಷಿ ಆಧುನೀಕರಣಗೊಳ್ಳುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಸುಣ್ಣ ಸುಡುವುದು, ಚಾಪೆ ಎಣೆಯುವುದು ಪ್ರಮುಖವಾದ ಕುಲಕಸುಬಾಗಿದೆ. ಜಿಲ್ಲೆಯಲ್ಲಿ ಇವರುಗಳ ನೆಲೆಗಲು ಕೂಡ್ಲಿಗಿ ತಾಲೂಕಿನ, ಗೂಡೇಕೋಟೆ ಹೋಬಳಿಗೆ ಸಂಬಂಧಿಸಿದ ಶ್ರೀಕಂಠಪುರ ತಾಂಡ ಈ ತಾಂಡವು ಕೂಡ್ಲಿಗಿ ತಾಲೂಕಿಗೆ ಸುಮಾರು ೩೫ ಕಿ.ಮೀ.ಅಂತರದಲ್ಲಿದೆ. ಹಾಗೂ ಚಾಪೆಯನ್ನು ಎಣೆಯುವುದು (ತಯಾರಿಸುವುದು) ಅದು ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿನ ಹಳ್ಳಿ ತಾಂಡದಲ್ಲಿ ಚಾಪೆಯನ್ನು ತಯಾರಿಸುವ ಕೇಂದ್ರವಾಗಿದೆ. ಮೊದಲು ಶ್ರೀಯುತ ವೆಂಕಟಪ್ಪನವರು ಇಡೀ ಕೂಡ್ಲಿಗಿ ತಾಲೂಕಿಗೆ ಅತ್ಯಂತ ಜನಪ್ರಿಯ ನಾಯಕರಾಗಿ ಅತ್ಯಂತ ಶ್ರೀಮಂತ ವ್ಯಕ್ತಿಯೂ ಆಗಿದ್ದರು. ಅಂದಿನ ಪರಿಸ್ಥಿತಿಯಲ್ಲಿ ಶ್ರೀಯುತ ವೆಂಕಟಪ್ಪನವರು ಚಿಕ್ಕಜೋಗಿಹಳ್ಳಿ ತಾಂಡದವರಿಗೆ ಒಂದು ಸಹಕಾರಿ ಕೇಂದ್ರವನ್ನು ಸ್ಥಾಪಿಸಿ, ಅವರು ತಯಾರಿಸಿದ ಚಾಪೆಗಳನ್ನು ಅವರ ಸಹಕಾರ ಕೇಂದ್ರ ವತಿಯಿಂದ ತೆಗೆದುಕೊಳ್ಳುತ್ತಿದ್ದರು. ಆದುದರಿಂದ ತಾಂಡದವರಿಗೆ ಅದರಿಂದ ಜೀವನ ನಡೆಸಿಕೊಂಡು ಹೋಗಲು ಅನುಕೂಲ ಮಾಡಿದರು. ಅಂದಿನಿಂದ ಇಂದಿನವರೆಗೂ ಆ ತಾಂಡದಲ್ಲಿ ಚಾಪೆ ತಯಾರಿಸುವ ರೂಢಿಯನ್ನು ಈಗಲೂ ನಾವು ಕಾಣಬಹುದು.

ಕೃಷಿಯೂ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ತಾಂಡಗಳಲ್ಲಿ ಕಾಣಬರುತ್ತದೆ. ಅವರು ಉತ್ಪಾದಿಸುವ ಕೃಷಿ ಮತ್ತು ಕೃಷೇತರ ಸರಕುಗಳನ್ನು ತಮ್ಮ ಜೀವನಕ್ಕೆ ಎಷ್ಟು ಬೇಕೋ ಅಷ್ಟನ್ನು ತೆಗೆದುಕೊಂಡು ಉಳಿದಿದ್ದನ್ನು ತಮ್ಮ ಆದಾಯ ಅಂದರೆ ಹಣದ ಅವಶ್ಯಕತೆ ಬಿದ್ದಾಗ ಅದನ್ನು ಮಾರಾಟ ಮಾಡಿ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಈ ರೀತಿಯಾಗಿದ ಕುಲಕಸುಬನ್ನು ಬಳ್ಳಾರಿ ಜಿಲ್ಲೆದಾದ್ಯಂತ ಲಂಬಾಣಿಗಳನ್ನು ನಾವು ಕಾಣಬಹುದಾಗಿದೆ. ಆದರೂ ಲಂಬಾಣಿಗರು ಹೆಚ್ಚಾಗಿ ಕೃಷಿಯಲ್ಲಿ ಸ್ಥಿತ್ಯಂತರವಾಗಿಲ್ಲದಿರುವುದು ಕಂಡುಬರುತ್ತದೆ. ಇವರು ಹೆಚ್ಚಾಗಿ ಕೃಷಿ ಕೂಲಿಯನ್ನೇ ನಂಬಿ ಬಾಳಿ ಬದುಕುತ್ತಿದ್ದಾರೆ. ಕಾರಣ ಇವರಿಗೆ ಶಿಕ್ಷಣದ ಕೊರತೆಯಿರುವುದರಿಂದ ಇವರಿಗೆ ಸಾಕ್ಷರದ ಕೊರತೆ ಎದ್ದು ಕಾಣುವುದು ಕಂಡುಬರುತ್ತದೆ.

**ಲಂಬಾಣಿಗಳ ಬೆಳವಣಿಗೆ**

ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ, ಗಣಿಗಾರಿಕೆ, ಕೃಷಿಯ ಆಧುನೀಕರಣ ಪ್ರಕ್ರಿಯೆಯ ಸಂದರ್ಭದಲ್ಲಿ ಕೆಲವು ಲಂಬಾಣಿಗರು ಸವಾಲುಗಳನ್ನು ಮೆಟ್ಟಿನಿಂತಿವೆ. ಜಿಲ್ಲೆಯ ಲಂಬಾಣಿಗರ ಬೆಳವಣಿಗೆ ಕುರಿತು ಈ ಕೆಳಗೆ ವಿವರಣೆ ನೀಡಲಾಗಿದೆ.

೧. ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಲಂಬಾಣಿ ತಾಂಡಗಳ ನೆಲೆಯನ್ನು ಕಾಣುವುದು.

೨. ಜಿಲ್ಲಾ ಹಾಗೂ ತಾಲೂಕು ಕೇಂದ್ರಗಳಲ್ಲಿ ಮತ್ತು ವ್ಯಾಪಾರ ಕೇಂದ್ರಗಳಲ್ಲಿ ಲಂಬಾಣಿಗರ ಕುಟುಂಬಗಳ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ.

೩. ಲಂಬಾಣಿಗಳಲ್ಲಿ ಸಾಮಾನ್ಯವಾಗಿ ಅನಕ್ಷರಸ್ಥರು ಅಥವಾ ಪೂರ್ವ ತರಬೇತಿ ಇಲ್ಲದವರು ನೆಲೆ ನಿಂತಿದ್ದಾರೆ.

೪. ಇತ್ತೀಚಿನ ದಿನಗಳಲ್ಲಿ ಕೃಷಿ ಕೆಲಸಕ್ಕೆ ಲಂಬಾಣಿಗರು ಅಗತ್ಯವೆನಿಸಿದಾಗ ಕೂಲಿಕಾರರನ್ನು ನೇಮಿಸಿಕೊಳ್ಳುವರು.

೫. ಲಂಬಾಣಿಗರು ಹಣವನ್ನು ಸಾಮಾನ್ಯವಾಗಿ ಜಮೀನುದಾರರಿಂದ, ಲೇವಾದೇವಿ ವ್ಯವಹಾರದಾರರಿಂದ ಹಾಗೂ ಸಂಬಂಧಿಕರಿಂದ ತಮ್ಮ ಕೃಷಿ ಕೆಲಸ ಕಾರ್ಯಗಳಿಗೆ ಪಡೆದು ಕೊಳ್ಳುತ್ತಾರೆ.

೬. ಲಂಬಾಣಿಗರ ಕೆಲಸಕ್ಕೆ ಪ್ರತ್ಯೇಕವಾದ ತರಬೇತಿ ಕೇಂದ್ರಗಳಿಲ್ಲ. ಅವರ ಸ್ವಂತ ಬುದ್ಧಿಯಿಂದ ಕೃಷಿ ಅಥವಾ ಬೇರಾವದೇ ಕೆಲಸಗಳು ನಿರ್ವಹಿಸಿಕೊಳ್ಳಬೇಕು.

೭. ಲಂಬಾಣಿಗರು ವಂಶಾಪಾರಂಪರ್ಯವಾಗಿ ಪಡೆದುಕೊಂಡ ಕೌಶಲ್ಯತೆ, ತರಬೇತಿಯನ್ನು ಬಳಸಿ ಸಾಮಗ್ರಿಗಳನ್ನು ತಯಾರಿಸುವುರು.

೮. ಲಂಬಾಣಿಗರು ಬಳಸುವ ಸಾಧನ-ಸಲಕರಣೆಗಳು ಹಳೆಯ ಮಾದರಿಗಳಾಗಿರುತ್ತವೆ.

೯. ಲಂಬಾಣಿಗರು ಶಾಲಾ ಕಾಲೇಜುಗಳಿಂದ ಶಿಕ್ಷಣ ಪಡೆದುಕೊಳ್ಳುವ ಪ್ರಮಾಣ ಕಡಿಮೆ.

೧೦. ಇತ್ತೀಚಿನ ದಿನಗಳಲ್ಲಿ ಲಂಬಾಣಿಗರ ಮಕ್ಕಳನ್ನು ಶಾಲಾ-ಕಾಲೇಜುಗಳಿಗೆ ಕಳಿಸುವ ಪ್ರಮಾಣ ಹೆಚ್ಚಾಗಿವೆ.

೧೧. ಕೆಲವು ಲಂಬಾಣಿಗರ ಅಭಿವೃದ್ಧಿಗೆ ಸರ್ಕಾರದ ಸೌಲಭ್ಯಗಳು ವಿರಳವಾಗಿವೆ.

೧೨. ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರ ಭೂಮಿಯು ಕಡಿಮೆ ಇರುವುದರಿಂದ ಇವರು ಹೆಚ್ಚಾಗಿ ಬೇರೆಯವರ ಭೂಮಿಯಲ್ಲಿ ಕೆಲಸ ಮಾಡಲು ಕೂಲಿಗಾರರಾಗಿ ದುಡಿಯುತ್ತಾರೆ. ಆದ್ದರಿಂದ ಹೆಚ್ಚಾಗಿ ಕೂಲಿಯನ್ನೇ ಅವಲಂಬಿಸಿದ್ದಾರೆ.

### ೬.೧೨. ಲಂಬಾಣಿ ಜನಾಂಗ ಸಮಕಾಲೀನ ಸಮಸ್ಯೆಗಳು ಮತ್ತು ಸವಾಲುಗಳ

ಲಂಬಾಣಿ ಬುಡಕಟ್ಟುಗಳ ಅಭಿವೃದ್ಧಿಗಾಗಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಕೈಗೊಂಡಿರುವ ಕಾರ್ಯಕ್ರಮಗಳು ಹಾಗೂ ಕಾರ್ಯ ತಂತ್ರಗಳಿಂದಾಗಿ, ದೇಶದ ಎಲ್ಲಾ ಬುಡಕಟ್ಟುಗಳ ಸಮಗ್ರಾಭಿವೃದ್ಧಿ ಆಗುತ್ತದೆಂಬ ಭ್ರಮೆ ಹುಟ್ಟಿಸುತ್ತದೆ. ವಾಸ್ತವದಲ್ಲಿ ಯೋಜನೆಗಳಿಗಿಂತ ಯೋಜನೆಗಳು ಉನ್ನತವಾಗಿದೆ ಎಂದು ಕಲ್ಪಿಸಿ, ಯೋಜನೆಗಳ ಸಂಖ್ಯೆ ಮತ್ತು ಇದಕ್ಕೆ ಮೀಸಲೀಡುವ ಹಣ ಮಾತ್ರ ಬೃಹದಾಕಾರವಾಗಿ ಆಗುತ್ತಿವೆಯೇ ಹೊರತು ಬುಡಕಟ್ಟುಗಳ ಬೇಕುವಿಗೆ ಅನುಗುಣವಾಗಿ ಯೋಜಿತವಾಗುತ್ತಿಲ್ಲದಿರುವುದರಿಂದ ಯೋಜನೆಗಳು ಆ ಯಶಸ್ಸಿ ಹೊಂದುತ್ತಿವೆ. ಈ ನೀತಿ ಲಂಬಾಣಿ ಜನಾಂಗದವರಿಗೂ ಅನ್ವಯಿಸುತ್ತದೆ. ಜೀವನಕ್ಕೆ ಮೂಲಾಧಾರವಾಗಿರುವ ಕೂಲಿ, ಕೃಷಿಯನ್ನೇ ತಾಂತ್ರಿಕ ಹಾಗೂ ವೈಜ್ಞಾನಿಕ ಒಳಗಾಗುವಿಕೆಯ ಕುರಿತು ಇದುವರೆಗೂ ಸಮಗ್ರ ಚಿಂತನೆ ಮಾಡದಿರುವುದು ಈ ಸಮುದಾಯ ಇಂದಿಗೂ ಅನೇಕ ಸಮಸ್ಯೆ ಸವಾಲುಗಳನ್ನು ಎದುರಿಸುತ್ತಿವೆ. ಕುಲಕಸೂತಿ, ಕೃಷಿಯನ್ನೆ ಪರ್ಯಾಯ ಆಕರ್ಷಕ ಸರಕುಗಳ ಉತ್ಪಾದನೆಗೆ ಬೇರುಮಟ್ಟದ ಚಿಂತನೆಗಳಾಗದೇ ಇರುವುದು, ಸೂಕ್ತ ಮಾರುಕಟ್ಟೆಗಳಿಲ್ಲದೆ ಸೊರಗುತ್ತಿರುವ ಈ ವೃತ್ತಿಗೆ

ಜನಾಕರ್ಷಣೆಯಾಗುವಂತೆ ಮಾರುಕಟ್ಟೆ ಒದಗಿಸಿ, ಈ ವೃತ್ತಿಯ ಸಾಂಪ್ರದಾಯಿಕ ಜ್ಞಾನ ಪರಂಪರೆಯನ್ನು ಉಳಿಸಿಕೊಳ್ಳುವ ಕಾಳಜಿ ಯಾರಿಗೂ ಇದ್ದಂತಿಲ್ಲ. ಈ ವೃತ್ತಿಯು ಜೊತೆಗೆ ಕಷ್ಟ ಸಹಿಷ್ಣುತೆಯನ್ನು ಲಂಬಾಣಿಗರಿಗೆ ಸರ್ಕಾರದಿಂದ ದೊರೆಯುವ ಭೂಮಿ ಮರಿಚಿಕೆಯಾಗಿದೆ. ರಾಜಕೀಯ, ಶಿಕ್ಷಣ, ಇತರೆ ಉದ್ಯೋಗಗಳಲ್ಲಿ ಸ್ಪರ್ಧಾತ್ಮಕತೆಯ ಕೊರತೆಯಿಂದಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ ಮಜಲಿನ ಕೆಳಸ್ತರದಲ್ಲಿ ಲಂಬಾಣಿಗರು ಉಳಿದಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ.

೧. **ಆರ್ಥಿಕ ಸಮಸ್ಯೆ :** ಲಂಬಾಣಿಗಳು ಮೊದಲು ಸಣ್ಣ ವ್ಯಾಪಾರದಲ್ಲಿ ತೊಡಗಿದ್ದು, ಕಲಾತಂಡದಿಂದ ಅಲೆಮಾರಿಯಾಗಿ ಜೀವಿಸುತ್ತಿದ್ದು, ಇತ್ತೀಚಿನ ದಿನಗಳಲ್ಲಿ ನೆಲೆನಿಂತಿದ್ದಾರೆ. ಇವರು ಕುಲಕಸುಬನ್ನು ಮಾಡಿಕೊಂಡು ಬರುತ್ತಿರುವ ಲಂಬಾಣಿಗಳ ಬದುಕು ಸ್ಥಿರವಾಗಿಯೇ ಇದೆ. ಸರ್ಕಾರದ ಅನೇಕ ಯೋಜನೆಗಳ ಲಾಭ ಪಡೆದಿರುವ ಲಂಬಾಣಿ ಆರ್ಥಿಕ ಸ್ಥಿತಿ ಅಷ್ಟೇನು ಉತ್ತಮವಾಗಿಲ್ಲ. ನಿರಂತರ ಆದಾಯಗಳಿಸಿ ಜೀವನ ಮಟ್ಟ ಸುಧಾರಿಸಿಕೊಳ್ಳುವ ಪ್ರವೃತ್ತಿ ಲಂಬಾಣಿಗರಲ್ಲಿ ಕಾಣುತ್ತಿಲ್ಲ. ಸರ್ಕಾರಿ ಯೋಜನೆಗಳಲ್ಲಿ ಕೆಲವು ಯೋಜನೆಗಳು ಲಂಬಾಣಿಗಳ ಮೇರೆ ಹೇರಲ್ಪಟ್ಟು ಸರ್ಕಾರದ ಲೆಕ್ಕಕ್ಕಷ್ಟೇ ಎಂಬಂತೆ ಕಂಡುಬಂದಿದೆ. ಲಂಬಾಣಿಗರು ಸಣ್ಣ ಸಣ್ಣ ವ್ಯಾಪಾರದ ಜೊತೆಯಲ್ಲಿ ವ್ಯವಸಾಯ, ಪಶುಸಂಗೋಪನೆ, ಕುರಿಸಾಗಾಣಿಕೆ, ನಾಟಿ ಕೋಳಿಸಾಗಾಣಿಕೆ ಕೂಲಿ ಇತ್ಯಾದಿ ಮಾಡುತ್ತಿದ್ದರೂ ಅವುಗಳಿಂದ ಬರುವ ಆದಾಯ ದೈನಂದಿನ ಖರ್ಚಿಗಷ್ಟೇ ಸಾಕಾಗುವುದು ಎಂದು ತಿಳಿಸಿರುತ್ತಾರೆ.

ಕೈಗಾರೀಕರಣದ ಪ್ರಭಾವದಿಂದಾಗಿ ಕರಕುಶಲ ವೃತ್ತಿಗಳು ಮೂಲೆಗುಂಪಾಗಿ ಕಾರ್ಖಾನೆಯಿಂದ ತಯಾರಾದ ವಸ್ತುಗಳು ಲಂಬಾಣಿಗರ ಪರಿಕರಗಳೊಂದಿಗೆ ಮುಖಾಮುಖಿಯಾಗಿ ಕೊಳ್ಳುವ ಗ್ರಾಹಕ ಅಂತಿಮವಾಗಿ ನಯವಾದ, ಕಡಿಮೆ ಬೆಲೆ, ಹೆಚ್ಚು ಬಾಳಿಕೆ ಬರುವ ಕೈಗಾರಿಕಾ ಪದಾರ್ಥಗಳಿಗೇ ಮನಸೊಲುತ್ತಿರುವುದು, ಕ್ರಮೇಣದಲ್ಲಿ ಲಂಬಾಣಿಗಳು ತಯಾರಿಸಿದ ವಸ್ತುಗಳನ್ನು ಉಪೇಕ್ಷಿಸುತ್ತಿರುವುದನ್ನು ಸಮೀಕ್ಷೆಯಿಂದ ಮನಗಾಣಲಾಯಿತು.

ಲಂಬಾಣಿಗಳ ವಸ್ತುಗಳ ಮಾರಾಟದಿಂದ ಕುಟುಂಬವಾರು ಸರಾಸರಿ ತಲಾ ರೂ.೫೦೦ಗಳ ಗಳಿಕೆಯ ಕುಟುಂಬದ ದುಸ್ಥಿತಿಯನ್ನು ತಿಳಿಸುತ್ತದೆ. ಲಂಬಾಣಿಗಳು ವ್ಯಾಪಾರದ ಜೊತೆಗೆ ಕೃಷಿ, ಕೂಲಿ, ಚಟುವಟಿಕೆಯಲ್ಲಿ ತೊಡಗಿರುವ ಲಂಬಾಣಿ ಭೂಹಿಡುವಳಿಗಳ ಗಾತ್ರವೂ ಅತ್ಯಂತ ಕಡಿಮೆಯಾಗಿದೆ. ಉದಾ : ೦-೨ ಎಕರೆಯೊಳಗೆ ಭೂಮಿಯನ್ನು ಹೊಂದಿರುವ ಕುಟುಂಬಗಳು ೨೦೦೦ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೮೦೦೦ ಕುಟುಂಬಗಳಿದ್ದು, ಇದರಲ್ಲಿ ಶೇ.೪.೨ ಕುಟುಂಬಗಳು ಅತ್ಯಂತ ಕಡಿಮೆ ಭೂ ಹಿಡುವಳಿಯನ್ನು ಹೊಂದಿದೆ. ೦.೦೨ ಎಕರೆಯೊಳಗೆ ಇರುವ ಭುಮಿಯ ಪ್ರಮಾನ ಕೇವಲ ೨೦೦ ಎಕರೆ ಮಾತ್ರ ೦.೨ ಎಕರೆ ಮೇಲ್ಪಟ್ಟ ಭೂ ಹಿಡುವಳಿಗಳ ಪ್ರಮಾಣ ಅತ್ಯಂತ ಕಡಿಮೆಯಿದ್ದು, ಈ ಭೂಮಿಯಿಂದ ಸುಧಾರಿತ ಯಂತ್ರೋಪಕರಣಗಳನ್ನ ಬಳಸಲಾಗಿದೆ. ಲಾಭದಾಯಕ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗಿದೆ. ಲಂಬಾಣಿಗರು ಹೆಸರಿಗಷ್ಟೇ ಕೃಷಿಕರಾಗಿದ್ದಾರೆಯೇ ಹೊರತು ಕೃಷಿಯಿಂದ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಲಾಗಿಲ್ಲ. ತಾವು ಬೆಳೆದ ಬೆಳೆಗಳಿಗೆ ವೈಜ್ಞಾನಿಕ

ಬೆಲೆ ಸಿಗದೆ ಮತ್ತಷ್ಟು ಆರ್ಥಿಕ ಹಿನ್ನಡೆ ಅನುಭವಿಸುತ್ತಿದ್ದಾರೆ. ಸಕಾಲದಲ್ಲಿ ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ, ಕೃಷಿನಾಟಿ ಇತ್ಯಾದಿಗಳಿಗಾಗಿ ಸಾಲ ಮಾಡುವ ಪ್ರಮೇಯದಿಂದಾಗಿ ಸಾಲದ ಹೊರೆಯೂ ಜಾಸ್ತಿಯಾಗಿ ಆರ್ಥಿಕ ದುಸ್ಥಿತಿ ತಲುಪಿದ್ದಾರೆ. ಕುಟುಂಬವಾರು ಪಡೆದಿರುವ ಸಾಲದ ಮೂಲಗಳನ್ನು ಗಮನಿಸಿದಾಗ ಲಂಬಾಣಿಗರು ವಿವಿಧ ಉದ್ದೇಶಗಳಿಗಾಗಿ ಸಾಲ ಮಾಡುವುದು ಕಂಡುಬರುತ್ತದೆ. ಆದುದರಿಂದ ಲಂಬಾಣಿಗರು ಆರ್ಥಿಕ ಸಮಸ್ಯೆಯಲ್ಲಿ ಸಿಲುಕಿರುವುದು ಕಂಡುಬರುತ್ತದೆ. ಇವರ ಸಾಲ ಅಭಿವೃದ್ಧಿಗಿಂತಲೂ, ಸಾಮಾಜಿಕ ಕಾರ್ಯಗಳಂತಹ ಜವಾಬ್ದಾರಿ ನಿರ್ವಹಣೆ ಮತ್ತು ಅನಭಿವೃದ್ಧಿಗಾಗಿಯೇ ಸಾಲ ಮಾಡುತ್ತಿರುವುದು ಸಂಶೋಧನೆಯಿಂದ ದೃಢಪಟ್ಟಿದೆ. ಆದಾಯ ಕಡಿಮೆ ಇರುವುದರಿಂದ ಉಳಿತಾಯದ ಬಗ್ಗೆ ಅಷ್ಟಾಗಿ ಒಲವಿಲ್ಲದಿರುವುದು ಕಾಣಬಹುದು.ಸಮಸ್ಯೆ ಮತ್ತು ಸವಾಲುಗಳು

ಉತ್ಪಾದನೆಯಲ್ಲಿ ಲಂಬಾಣಿಗರ ಪ್ರಮಾಣ ಕಡಿಮೆ ಇದ್ದರೂ, ಉದ್ಯೋಗಾವಕಾಶಗಳನ್ನು ಒದಗಿಸುವುದರಲ್ಲಿ ಲಂಬಾಣಿ ಜನಾಂಗದ ಪ್ರಮಾಣದೊಡ್ಡದು. ಸರಕಾರವು ಲಂಬಾಣಿಗರ ಅಭಿವೃದ್ಧಿಗೆ ಅನೇಕ ಕ್ರಮಗಳನ್ನು ಕೈಗೊಂಡಿದ್ದರೂ ಅವುಗಳ ಪ್ರಗತಿ ನಿರೀಕ್ಷಿಸಿದಷ್ಟು ಆಗಿಲ್ಲ. ಈ ಜನರು ಅನೇಕ ತೊಂದರೆಗಳನ್ನು ಮತ್ತು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ವಿವರಿಸಲಾಗಿದೆ.

**೧. ಕಚ್ಚಾ ಸರಕುಗಳ ಅಭಾವ :** ಲಂಬಾಣಿಗರಿಗೆ ತಾವು ತಯಾರಿಸುವ ಉಡುಪುಗಳಿಗೆ ಬೇಕಾಗುವ ಕಚ್ಚಾಸರಕುಗಳು ಸಾಕಷ್ಟು ಪ್ರಮಾಣದಲ್ಲಿ ಸರಿಯಾದ ಮತ್ತು ಯೋಗ್ಯವಾದ ಬೆಲೆಯಲ್ಲಿ ಕಚ್ಚಾಸರಕುಗಳು ಸಿಗುತ್ತಿಲ್ಲ. ಲಂಬಾಣಿ ಕೃಷಿಕರಿಗೆ ಸರಿಯಾದ ಯೋಗ್ಯ ಬೆಲೆಯಲ್ಲಿ ಕೃಷಿಗೆ ಸಂಬಂಧಿಸಿದ ಸಾಧನ ಸಲಕರಣೆಗಳು, ಬೀಜ ಗೊಬ್ಬರಗಳು, ಔಷಧಿಗಳು ಸಾಕಷ್ಟು ಪ್ರಮಾಣದಲ್ಲಿ ಯೋಗ್ಯ ಬೆಲೆಯಲ್ಲಿ ಸಿಗುತ್ತಿಲ್ಲ. ಕಚ್ಚಾವಸ್ತುಗಳ ಬೆಲೆ ನಿರಂತರವಾಗಿ ಏರಿಕೆಯಾಗುತ್ತಿದ್ದು. ಅವುಗಳನ್ನು ಪಡೆದುಕೊಳ್ಳಲು ಲಂಬಾಣಿಗರು ಹರಸಾಹಸ ಪಡಬೇಕಾಗಿದೆ. ಲಂಬಾಣಿಗರಲ್ಲಿ ಹಣಕಾಸಿನ ತೊಂದರೆ ಇರುವುದರಿಂದ ಅವರು ಕಡಿಮೆ ದರದ, ಕಡಿಮೆ ಗುಣಮಟ್ಟದ ಕಚ್ಚಾ ಸರಕುಗಳನ್ನು ಉಪಯೋಗಿಸುತ್ತಾರೆ. ಅದ್ದರಿಂದ ಅವರು ತಯಾರಿಸಿದ ಉಡುಪುಗಳ ಗುಣಮಟ್ಟವು ಸ್ವಾಭಾವಿಕವಾಗಿ ಕಡಿಮೆ ಇರುತ್ತದೆ.

**೨. ಹಣಕಾಸು ಕೊರತೆ :** ಲಂಬಾಣಿಗರು ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಹಣಕಾಸಿನ ಕೊರತೆಯು ತುಂಬಾ ಗಂಭೀರ ಸಮಸ್ಯೆಯಾಗಿದೆ. ಇವರಿಗೆ ಹಣಕಾಸು ಪೂರೈಸಲು ಸಾಕಷ್ಟು ಹಣಕಾಸಿನ ಸಂಸ್ಥೆಗಳು ಸ್ಥಾಪನೆಯಾಗಿಲ್ಲ. ಇವರಿಗೆ ಅಗ್ಗದ ಬಡ್ಡಿದರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹಣಕಾಸು ಸಿಗುತ್ತಿಲ್ಲ. ಸಾಮಾನ್ಯವಾಗಿ ಲಂಬಾಣಿಗರು ಅತಿಹೆಚ್ಚು ಬಡ್ಡಿದರದಿಂದ ಸ್ಥಳೀಯ, ಸಾಹುಕಾರರು, ಶೆಟ್ ರು, ದಲ್ಲಾಳಿಗಳು ಹಾಗೂ ವಿವಿಧ ಲೇವಿದೇವಿದಾರರ ಹತ್ತಿರ ಸಾಲ ಪಡೆಯುತ್ತಾರೆ. ಇಂತಹ ಸಾಲಗಳನ್ನು ಬೇಗನೆ ಹಿಂತಿರುಗಿಸಲು, ತಾವು ತಯಾರಿಸಿದ ಸರಕುಗಳನ್ನು ಅವರು ಶೀಘ್ರ ಮಾರಾಟ ಮಾಡಬೇಕಾಗಿರುವುದರಿಂದ ಅವರ ವಸ್ತುಗಳಿಗೆ ಹೆಚ್ಚಿನ ಬೆಲೆಸಿಗುತ್ತಿಲ್ಲ. ಇವರಿಗೆ ಸಾಲ ಹಿಂದಿರುಗಿಸುವ ಸಾಮರ್ಥ್ಯ ಕಡಿಮೆ. ಸಾಲಕ್ಕೆ ಭದ್ರತೆ ನೀಡಲು ಇವರುಗಳಲ್ಲಿ ಆಸ್ತಿಗಳಿಲ್ಲದೆ ಇರುವುದು ಸಾಲವನ್ನು ಪಡೆದುಕೊಳ್ಳುವುದು ಕಷ್ಟಕರವಾಗಿದೆ.

ಹಣಕಾಸು ಇಲ್ಲದೆ ಕಚ್ಚಾ ವಸ್ತುಗಳನ್ನು ಕೊಳ್ಳುವುದಾಗಲಿ, ಯಂತ್ರ ಸಾಮಗ್ರಿಗಳನ್ನು ಕೊಂಡು ಉಪಯೋಗಿಸುವುದಕ್ಕೆ ಸಾಧ್ಯವಾಗುತ್ತಿಲ್ಲ. ಇದು ಲಂಬಾಣಿ ಜನಾಂಗದವರ ಸಾಮರ್ಥ್ಯ ಕಡಿಮೆಯಾಗಲು ಹಾಗೂ ಸಾಲದ ಹೊರೆಯನ್ನು ಕಡಿಮೆ ಮಾಡಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಲಂಬಾಣಿಗರು ಅಳಿವಿನ ಅಂಚಿಗೆ ಹಣಕಾಸಿನ ಕೊರತೆಯೇ ಮೂಲಕಾರಣ.

೩. **ಮಾರುಕಟ್ಟೆಯ ಸಮಸ್ಯೆ :** ಲಂಬಾಣಿಗರ ಅತ್ಯಂತ ಪ್ರಮುಖ ಸಮಸ್ಯೆಯೆಂದರೆ ಮಾರುಕಟ್ಟೆಯ ಸಮಸ್ಯೆ. ಲಂಬಾಣಿಗರು ಯಾವುದೇ ರೀತಿಯ ಸಂಘಟಿತ ಮಾರಕಟ್ಟೆ ವ್ಯವಸ್ಥೆಯನ್ನು ಹೊಂದಿರುವುದಿಲ್ಲ. ಹಾಗೂ ಮಾರುಕಟ್ಟೆಯ ಬಗ್ಗೆ ಪೂರ್ಣಮಾಹಿತಿ ಇರುವುದಿಲ್ಲ. ಉತ್ಪನ್ನಗಳ ಗುಣಮಟ್ಟ ಕಡಿಮೆ ಇದೆ ಹಾಗೂ ಉತ್ಪನ್ನಗಳ ಬೆಲೆ ನಿಷ್ಕರ್ಷ. ವಿಂಗಡಣೆ, ಪ್ರಚಾರ ಸಾರಿಗೆ ವ್ಯವಸ್ಥೆ ಮುಂತಾದ ಸೌಲಭ್ಯಗಳು ದೊರೆಯದೆ ಲಂಬಾಣಿಗರು ತಮ್ಮ ಸರಕುಗಳನ್ನು ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲ. ಲಂಬಾಣಿಗರು ತಮ್ಮ ಉತ್ಪನ್ನಗಳನ್ನು ಹತ್ತಿರದ ಪಟ್ಟಣದಿಂದ ಪಟ್ಟಣಕ್ಕೆ, ಅಲೆದು, ಮನೆ-ಮನೆಗೆ ಹೋಗಿ ಮಾರಾಟ ಮಾಡುತ್ತಾರೆ. ಇವರಿಗೆ ವಾರದ ಸಂತೆ, ಜಾತ್ರೆ, ಹಬ್ಬ ಇತ್ಯಾದಿಗಳೇ ಮಾರಾಟದ ಕೇಂದ್ರಗಳು. ನಗರದಲ್ಲಿ ಜನಸಾಂದ್ರತೆ ಹೆಚ್ಚು ಇರುವ, ಸಾರ್ವಜನಿಕ ಸ್ಥಳ. ರಸ್ತೆ ದಿನಗಳಲ್ಲಿ ಉತ್ಪನ್ನಗಳನ್ನು ಇಟ್ಟು ಮಾರಾಟ ಮಾಡುತ್ತಾರೆ. ಇವುಗಳಿಗೆ ನಿರ್ದಿಷ್ಟ ಬೆಲೆ ಎಂಬುದೇ ಇಲ್ಲ. ಜೊತೆಗೆ ದೊಡ್ಡ ಉದ್ದಿಮೆದಾರರ ಪೈಪೋಟಿ ಹಾಗೂ ಜಾಹಿರಾತು ಭರಾಟೆಯಲ್ಲಿ, ಇವರ ವಸ್ತುಗಳನ್ನು ಕೊಳ್ಳುವವರಿಲ್ಲವಾಗಿದೆ. ಮಾರುಕಟ್ಟೆಯ ಅಭಾವ ಮತ್ತು ಹಣದ ಅಡಚಣೆಯಿಂದಾಗಿ ಅವರು ತಮ್ಮ ಸರಕುಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಲು ಹಿಂಜರಿಯುವುದಿಲ್ಲ. ಇದರಿಂದ ಅವರಿಗೆ ಸಿಗುವ ಲಾಭದ ಪ್ರಮಾನವು ಕಡಿಮೆ.

೪. **ಯೋಗ್ಯ ಉಪಕರಣಗಳ ಅಭಾವ :** ದೊಡ್ಡ ಕೈಗಾರಿಕೆಗಳಿಗೆ ಬೇಕಾಗುವಂತೆ ಲಂಬಾಣಿದಾರರಿಗೆ ಭಾರಿ ಯಂತ್ರೋಪಕರಣಗಳೇನೂ ಬೇಕಾಗುವುದಿಲ್ಲ. ಅವುಗಳಿಗೆ ಬೇಕಾದುದು ಸಣ್ಣ ಮತ್ತು ಸೂಕ್ತ ಯೋಗ್ಯ ಯಂತ್ರೋಪಕರಣಗಳು ಮಾತ್ರ. ಆದರೆ ಅವು ಸಹ ತುಂಬಾ ಕೊರತೆಯಲ್ಲಿವೆ. ಕೆಲವು ಕೆಲಸಗಳಿಗೆ ಯಂತ್ರೋಪಕರಣಗಳೇ ಇಲ್ಲ. ಅವರು ತಮ್ಮ ಕೈಗಳಿಂದಲೇ ಸರಕುಗಳನ್ನು ತಯಾರಿಸುತ್ತಾರೆ. ಉದಾ : ಲಂಬಾಣಿಗರು ಅಂದರೆ ಲಂಬಾಣಿ ಮಹಿಳೆಯರು ತಮ್ಮ ಉಡುಪುಗಳನ್ನು ತಯಾರಿಸಲು ತಮ್ಮ ಕೈಗಳಿಂದಲೇ ವರ್ಷಾಗಟ್ಟಲೆ ತಯಾರಿಸಿಕೊಳ್ಳುತ್ತಾರೆ. ಆದುದರಿಂದ ಇವರಿಗೆ ಯಾವುದೇ ಯಂತ್ರೋಪಕರಣಗಳು ಬೇಕಾಗಿರುವುದಿಲ್ಲ. ಆಧುನಿಕ ಯಂತ್ರೋಪಕರಣಗಳು ತುಂಬಾ ದುಬಾರಿಯಾಗಿದ್ದು, ಅವುಗಳನ್ನು ಪಡೆಯುವುದು ಲಂಬಾಣಿಗಳಿಗೆ ಸಾಧ್ಯವಾಗುತ್ತಿಲ್ಲ. ಆದುದರಿಂದ ಅವರು ಹಳೆಯ ಉಪಕರಣಗಳನ್ನೇ ಉಪಯೋಗಿಸುತ್ತಾರೆ ಹಾಗೂ ಹಳೆಯ ಉತ್ಪಾದನಾ ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ಅವರು ಉತ್ಪಾದಿಸುವ ವಸ್ತುಗಳು ಹಳೆಯ ಮಾದರಿಯವುಗಳಾಗಿವೆ. ಲಂಬಾಣಿಗರು ಹೆಚ್ಚಾಗಿ ನಿರಕ್ಷರಿಗಳೂ, ಅಜ್ಞಾನಿಗಳೂ ಮತ್ತು ಸಂಪ್ರದಾಯ ಶರಣರೂ ಆಗಿರುವುದರಿಂದ ತಾಂಡಗಳಲ್ಲಿ ತಮ್ಮ ಕಸೂತಿ ಕಲೆಯನ್ನು ಅಭಿವೃದ್ಧಿಗೊಳಿಸುವುದು ಕಠಿಣವಾಗಿದೆ.

**೫. ತರಬೇತಿ ಮತ್ತು ಸಂಶೋಧನೆ ಸೌಲಭ್ಯ ಕೊರತೆ :** ತಮ್ಮ ವೃತ್ತಿ ಕುರಿತ ತರಬೇತಿಯಾಗಲಿ ಮತ್ತು ಅವುಗಳಿಗೆ ಸಂಬಂಧಿಸಿದಂತೆ ಸಂಶೋಧನ ಕಾರ್ಯ ಚಟುವಟಿಕೆಗಳ ಕೊರತೆ ಇದೆ. ವೃತ್ತಿಗಳು ವಂಶಾಪಾರಂಪರ್ಯವಾಗಿ ಬೆಳೆದು ಬಂದವುಗಳು. ಮನೆಯ ಹಿರಿಯರು ನೀಡಿರ ತರಬೇತಿ ಹಾಗೂ ಮಾಹಿತಿಗಳೇ ಇವುಗಳಿಗೆ ಆಧಾರ. ಕೆಲಸಗಳನ್ನು ನೋಡಿ-ತಿಳಿದು ಕಲಿತುಕೊಳ್ಳಬೇಕಾಗಿದೆ. ಅವುಗಳಿಗೆ ಸಂಬಂಧಿಸಿದಂತೆ ಶಾಲೆ-ಕಾಲೇಜು ಹಾಗೂ ಸಂಸ್ಥೆಗಳಲ್ಲಿ ಮಾಹಿತಿ ಮತ್ತು ತರಗತಿ ವ್ಯವಸ್ಥೆ ಇರುವುದಿಲ್ಲ. ಇದರಿಂದಾಗಿ ಲಂಬಾಣಿಗಳ ಆಧುನೀಕರಣ ಸಾಧ್ಯವಾಗುತ್ತಿಲ್ಲವಾದ ಕಾರಣ ಅವುಗಳ ಉತ್ಪಾದನಾ ವೆಚ್ಚ ಹೆಚ್ಚದೆ ಹಾಗೂ ಸರಕುಗಳ ಗುಣಮಟ್ಟ ಕಡಿಮೆ ಇದೆ. ಅವುಗಳ ಸ್ಥಿತ್ಯಂತರ ನಿಧಾನಗತಿಯಲ್ಲಿ ನಡೆಯುತ್ತದೆ.

**೬. ಕೈಗಾರಿಕಾ ವಸ್ತು ಪೈಪೋಟಿ :** ಲಂಬಾಣಿಗರು ತಯಾರಿಸುವ ಅನೇಕ ವಸ್ತುಗಳನ್ನು ದೊಡ್ಡ ಕೈಗಾರಿಕೆಗಳು ಉತ್ಪಾದಿಸುತ್ತದೆ. ದೊಡ್ಡ ಕೈಗಾರಿಕೆಗಳ ಅತ್ಯಾಧುನಿಕ ತಂತ್ರಜ್ಞಾನ ಮತ್ತು ಯಂತ್ರೋಪಕರಣಗಳನ್ನು ಬಳಸಿ ಉತ್ತಮ ಗುಣಮಟ್ಟದ ವಸ್ತುಗಳನ್ನು ಉತ್ಪಾದಿಸುತ್ತಾರೆ. ಅವುಗಳ ಉತ್ಪಾದನಾ ವೆಚ್ಚವು ಕಡಿಮೆ. ಬೆಲೆಯೂ ಕಡಿಮೆ ಹಾಗೂ ಹೆಚ್ಚು ಕಾಲ ಬಳಕೆ ಬರುತ್ತವೆ. ಆದರೆ ಲಂಬಾಣಿಗರ ಸರಕುಗಳ ಉತ್ಪಾದನಾ ವೆಚ್ಚ ಹೆಚ್ಚು, ಗುಣಮಟ್ಟ ಕಡಿಮೆ ಹಾಗೂ ಬಾಳಿಕೆಯು ಕಡಿಮೆ ಇರುವುದರಿಂದ ಬೇಡಿಕೆ ಕಡಿಮೆ. ದೊಡ್ಡ ಕೈಗಾರಿಕೆಗಳು ಒಡ್ಡುವ ಪೈಪೋಟಿಯನ್ನು ಎದುರಿಸುವ ಶಕ್ತಿ ಹೊಂದಿಲ್ಲ.

ಇಂದಿನ ಮಾರುಕಟ್ಟೆಯಲ್ಲಿ ಆಧುನಿಕ ಬಟ್ಟೆ ಕೈಗಾರಿಕೆಗಳ ಪೈಪೋಟಿಯಿಂದಾಗಿ ಲಂಬಾಣಿಗರು ತಯಾರಿಸುವ ಉಡುಪು-ಆಭರಣಗಳಿಗೆ ಬೇಡಿಕೆ ಕಡಿಮೆಯಾಗಿದೆ. ಲಂಬಾಣಿಗರು ತೊಡುವ ಆಭರಣದ ಪರವಾಗಿ ಹೊಸ ಹೊಸ ಮಾದರಿಯ ಬಂಗಾರದ ಆಭರಣಗಳು ಮಾರುಕಟ್ಟೆಗೆ ಬರುವುದರಿಂದ ಲಂಬಾಣಿಗಳ ಉಡುವ ತೊಡಿಗೆಗೆ ತುಂಬಾ ಕಡಿಮೆ ಬೇಡಿಕೆ ಬರುತ್ತವೆ. ಬಣ್ಣ ತಯಾರಿಸುವ ಕೈಗಾರಿಕೆಗಳು ಲಂಬಾಣಿಗರ ಸುಣ್ಣ ತಯಾರಿಸಿ ಮಾರಾಟ ಮಾಡುವ ಬದುಕನ್ನು ಮೂಲೆ ಗುಂಪಾಗಿಸಿದೆ. ಕೂಡ್ಲಿಗಿಯ ತಾಲೂಕು ಗುಡೇಕೋಟಿ ಹೋಬಳಿಗೆ ಸಂಬಂಧಿಸಿದ ಶ್ರೀ ಕಂಠಪುರ ತಾಂಡದಲ್ಲಿ ಅಲ್ಲಿ ವಾಸಿಸುವ ೬೦ ಲಂಬಾಣಿಗರು ಸುಣ್ಣ ಸುಡುವ(ಬಳ್ಳಾರಿ ಜಿಲ್ಲೆಯಲ್ಲಿ) ಕೆಲಸದಲ್ಲಿ ನಿರತರಾಗಿರುತ್ತಾರೆ. ಅವರ ಆರ್ಥಿಕ ಅಭಿವೃದ್ಧಿಗೆ ಸುಣ್ಣ ಉತ್ಪಾದಿಸಿ ಇಡೀ ಬಳ್ಳಾರಿ ಜಿಲ್ಲೆಯಲ್ಲಿರುವ ತಾಂಡಗಳಿಗೆ ಸುಣ್ಣ ಮಾರಾಟ ಮಾಡುತ್ತಾರೆ. ಕೆಲವೊಮ್ಮೆ ಅವರುಗಳು ಸುಣ್ಣದ ಬದಲಾಗಿ ಜೋಳ, ರಾಗಿ, ಭತ್ತ ಮುಂತಾದ ಧಾನ್ಯಗಳಿಗೆ ಮಾರಾಟ ಮಾಡುತ್ತಾರೆ. ಆದುದರಿಂದ ಆಧುನಿಕ ಮಾರುಕಟ್ಟೆಯಲ್ಲಿ ಕೈಗಾರಿಕರಣದ ಪ್ರಭಾವದಿಂದ ಲಂಬಾಣಿಗರು ತೀವ್ರ ಪೈಪೋಟಿಯನ್ನು ಎದುರಿಸುತ್ತಿವೆ.

ಇಂದು ಲಂಬಾಣಿಗರು ತಂತ್ರಜ್ಞಾನದಿಂದ ಸಮಸ್ಯೆ, ಕಚ್ಚಾವಸ್ತುಗಳ ನಿರಂತರ ಪೂರೈಕೆಯ ಸಮಸ್ಯೆ, ಸಂಘಟನೆಯ ಕೊರತೆ, ಮಾರುಕಟ್ಟೆಯ ಕೊರತೆ, ಸಾಲಸೌಲಭ್ಯಗಳ ಸಮಸ್ಯೆ, ನಿರ್ವಹಣೆ ಕೌಶಲ್ಯದ ಕೊರತೆ, ಮೂಲ ಸೌಲಭ್ಯದ ಕೊರತೆ, ಶಕ್ತಿ ಸಂಪನ್ಮೂಲಗಳ ಕೊರತೆ, ಸಾರಿಗೆ ಸಂಪರ್ಕದ ಕೊರತೆ, ವಾಸಕ್ಕೆ ಯೋಗ್ಯವಾದ ಮನೆ ಹಾಗೂ ಕಾರ್ಯ ನಿರ್ವಹಣೆಗೆ ಸ್ಥಳದ ಕೊರತೆ, ಸಾಮಾಜಿಕ ಭದ್ರತಾ ಸೌಲಭ್ಯಗಳ ಕೊರತೆ ಹಾಗೂ ಇತ್ಯಾದಿ ಸಮಸ್ಯೆಗಳನ್ನು ಎದುರಿಸುತ್ತಾರೆ.

ಕೆಲವು ಪ್ರಮುಖ ಸಮಸ್ಯೆಗಳನ್ನು ಈ ಕೆಳಗೆ ತಿಳಿಸಲಾಗಿದೆ.

೧. ಬಳ್ಳಾರಿ ಜಿಲ್ಲೆಯಲ್ಲಿ ತಾಂಡಗಳು ಆರಂಭವಾಗಿ ೬೩-೬೪ ವರ್ಷಗಳು ತುಂಬಿದರೂ ಇನ್ನು ಒಂದು ಕಂದಾಯ ಗ್ರಾಮವಾಗಿ ರೂಪಿತವಾಗುವಲ್ಲಿ ವಿಫಲವಾಗಿದೆ. ತಾಂಡಗಳಲ್ಲಿ ದೀಪದ ವ್ಯವಸ್ಥೆ, ಸರಿಯಾದ ರಸ್ತೆಗಳು, ಕುಡಿಯುವ ನೀರಿನ ತೊಂದರೆಗಳು ಸಾಕಷ್ಟು ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಹೀಗಾಗಿ ತಾಂಡಗಳಲ್ಲಿ ವಿದ್ಯುತ್, ಕುಡಿಯುವ ನೀರು, ರಸ್ತೆಗಳು ಇನ್ನು ಮುಂತಾದ ಸೌಲಭ್ಯದಿಂದ ವಂಚಿತರಾಗಿದ್ದಾರೆ.

೨. ಭೂಮಿಯ ಹಂಚುವಿಕೆಯಲ್ಲಿ ಮೂಲಭೂತ ವಂಚಿತರಾಗಿದ್ದಾರೆ.

೩. ಮೂಲಭೂತ ಸೌಲಭ್ಯಗಳ ಕೊರತೆ ಎದ್ದು ಕಾಣುತ್ತದೆ.

೪. ಗ್ರಾಮ ಪಂಚಾಯಿತಿಯ ಮೀಸಲು ಹಣದಲ್ಲಿನ ಸೌಲಭ್ಯಗಳು ತಾಂಡಗಳಲ್ಲಿ ಕಡೆಗೆ ಮುಖ ಸಹ ಮಾಡಿಲ್ಲ.

೫. ಪ್ರಾಥಮಿಕ ಆರೋಗ್ಯ ಕೇಂದ್ರವಿಲ್ಲ.

೬. ಪಡಿತರ ಚೀಡಿಯ ದಿನಸಿ(ಧಾನ್ಯ) ತರುವುದಕ್ಕಾಗಿ ತಮ್ಮ ತಾಂಡದಿಂದ ೩ ಮತ್ತು ೪ ಕಿ.ಮೀ. ದೂರ ಪ್ರತ್ಯೇಕ ಹಳ್ಳಿಗೆ ಬರಬೇಕು.

೭. ತಾಂಡಗಳಲ್ಲಿ ಸರಿಯಾದ ರೀತಿಯಲ್ಲಿ ಜನರು ಸೇರುವ ಸಮುದಾಯ ಭವನವಿಲ್ಲ.

೮. ಇನ್ನು ತಾಂಡಗಳಲ್ಲಿ ಬಹುತೇಕ ಕುಟುಂಬಗಳು ಗುಡಿಸಲುಗಳಲ್ಲಿಯೇ ವಾಸಿಸುತ್ತಾರೆ. ಆದುದರಿಂದ ತಾಂಡಗಳಲ್ಲಿ ವಾಸಿಸಲು ಮನೆಗಳ ಸಮಸ್ಯೆಗಳು ಇವೆ.

೯. ಅರಣ್ಯ ಇಲಾಖೆಯವರು ಮತ್ತು ಶ್ರೀಮಂತ ಭೂಮಾಲೀಕರು ಲಂಬಾಣಿಗರ ಭೂಮಿಯನ್ನು ಒತ್ತುವರಿ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯ ಲಂಬಾಣಿಗರಲ್ಲಿ ಹಲವಾರು ಇತಿ ಮತ್ತು ದೋಷಗಳಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

೧. ಬಳ್ಳಾರಿ ಜಿಲ್ಲೆಯಲ್ಲಿ ಬಹಳಷ್ಟು ಲಂಬಾಣಿಗರ ಕಸುಬುಗಳು ಅಳುವಿನಂಚಿನಲ್ಲಿವೆ.

೨. ಜಿಲ್ಲೆಯ ಗಣಿಗಾರಿಕೆ, ಕೈಗಾರಿಕರಣ ಮತ್ತು ತುಂಗಭದ್ರಾ ಅಣೆಕಟ್ಟಿನ ನೀರಾವರಿ ಸೌಲಭ್ಯಗಳಿಂದಾಗಿ ಲಂಬಾಣಿಗರ ಕುಲಕಸುಬು ಬೆಳವಣಿಗೆಗೆ ಕುಂಟಿತವಾಗಿದೆ.

೩. ಬಳ್ಳಾರಿ ಜಿಲ್ಲೆಯಲ್ಲಿರುವ ತಾಂಡಗಳ್ಲಿ ಕ್ರಿಯಾಶೀಲ ಸಂಘಗಳನ್ನು ಹೊಂದಿಲ್ಲ.

೪. ಲಂಬಾಣಿಗಳಲ್ಲಿ ಉತ್ತಮ ಸಂಘಟನೆಯಿಲ್ಲ.

೫. ಲಂಬಾಣಿಗರು ಹಳೆಯ ಮಾದರಿಯ ಯಂತ್ರೋಪಕರಣ ಹಾಗೂ ಉತ್ಪಾದನಾ ವಿಧಾನಗಳ ಮೂಲಕ ಕಾರ್ಯನಿರ್ವಹಿಸುತ್ತಿದ್ದಾರೆ.

೬. ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಿಗೆ ಸಿಕ್ಕಷ್ಟು ಮಾನ್ಯತೆ ಸರ್ಕಾರದಿಂದ ಲಂಬಾಣಿಗಳಿಗೆ ಸಿಕ್ಕುತ್ತಿಲ್ಲ.

೭. ಲಂಬಾಣಿಗರ ಉಡುಪು ತಯಾರಿಕೆಯಲ್ಲಿ ಹೆಚ್ಚಾಗಿ ಮಹಿಳೆಯರೇ ಕಾರ್ಯನಿರ್ವಹಿಸುತ್ತಿದ್ದಾರೆ.

೮. ಲಂಬಾಣಿಗರಲ್ಲಿ ಕಾರ್ಯನಿರ್ವಹಿಸುವವರು ಹಾಗೂ ಕೆಲಸಗಾರರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥ ರಾಗಿದ್ದಾರೆ.

೯. ಲಂಬಾಣಿಗರು ಕಚ್ಚಾ ಸರಕುಗಳ ಕೊರತೆಯನ್ನು ಎದುರಿಸುತ್ತಿವೆ.

೧೦. ಲಂಬಾಣಿಗರಿಗೆ ಹೆಚ್ಚಾಗಿ ಕಾಡುವ ಹಣಕಾಸಿನ ಕೊರತೆ.

೧೧. ಲಂಬಾಣಿಗರಿಗೆ ಸರಕುಗಳ ಗುಣಮಟ್ಟ ಕಡಿಮೆಯದಾಗಿರುತ್ತವೆ.

೧೨. ಸರಕುಗಳ ಗಾತ್ರ ಹಾಗೂ ಗುಣಮಟ್ಟದಲ್ಲಿ ಏಕರೂಪತೆ ಇರುವುದಿಲ್ಲ.

೧೩. ಲಂಬಾಣಿಗರ ಸರಕುಗಳಿಗೆ ಮಾರುಕಟ್ಟೆ ಸೌಲಭ್ಯವಿಲ್ಲ. ಸ್ಥಳೀಯ ವಾರದ ಸಂತೆ, ಜಾತ್ರೆ, ಉತ್ಸವ ಇತ್ಯಾದಿಗಳೇ ಮಾರುಕಟ್ಟೆ ಕೇಂದ್ರಗಳಾಗಿವೆ.

೧೪. ಸರಕು ಸೇವೆಗಳ ಬೆಲೆ ನಿರ್ಧಾರಕ್ಕೆ ಯಾವುದೇ ವೈಜ್ಞಾನಿಕ ಮಾನದಂಡಗಳನ್ನು ಅಳವಡಿಸಿಕೊಂಡಿರುವುದಿಲ್ಲ.

೧೫. ಲಂಬಾಣಿಗಳಲ್ಲಿ ಹೆಚ್ಚಿನವು ಋತುಮಾನ ಉದ್ಯೋಗಗಳು ವರ್ಷದ ಎಲ್ಲ ಕಾಲಗಳಲ್ಲಿ ಇವುಗಳನ್ನು ನೆಚ್ಚಿಕೊಂಡು ಜೀವನ ಸಾಗಿಸುವುದು ಕಷ್ಟ.

೧೬. ಲಂಬಾಣಿಗರು ವಿದ್ಯುತ್, ಡೀಸಲ್, ಸೀಮೆಎಣ್ಣೆ ಇತ್ಯಾದಿ ಶಕ್ತಿ ಸಂಪನ್ಮೂಲಗಳ ಕೊರತೆಯನ್ನು ಎದುರಿಸುತ್ತಿವೆ.

೧೭. ಲಂಬಾಣಿಗರಿಗೆ ಸರಿಯಾದ ತರಬೇತಿ ಹಾಗೂ ಸಂಶೋಧನಾ ಕೇಂದ್ರಗಳಿಲ್ಲ.

೧೮. ಲಂಬಾಣಿಗಳಿಗೆ ವಸತಿ ಹಾಗೂ ಶೆಡ್ ಸ್ಥಾಪನೆಗೆ ಸ್ಥಳದ ಕೊರತೆ ಇದೆ.

೧೯. ಕುಲಕಸುಬುಗಳು ಆಧುನಿಕ ಕೈಗಾರಿಕೆಗಳಿಂದ ಪೈಪೋಟಿ ಎದುರಿಸುತ್ತಿವೆ.

೨೦. ಲಂಬಾಣಿಗರು ಉತ್ಪಾದಿಸುವ ಸರಕುಗಳಿಗೆ ಬ್ರಾಂಡ್ ನೇಮ್ ಇರುವುದಿಲ್ಲ.

೨೧. ವಸ್ತು ವಿನಿಮಯ ಪದ್ಧತಿ ಇನ್ನೂ ತಾಂಡಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

೨೨. ಸರಕು ತಯಾರಿಕೆಯಲ್ಲಿ ಕಡಿಮೆ ದರದ ಹಾಗೂ ಕಡಿಮೆ ಗುಣಮಟ್ಟದ ಕಚ್ಚಾ ವಸ್ತುಗಳ ಬಳಕೆ ಕಂಡುಬರುತ್ತದೆ.

೨೩. ಲಂಬಾಣಿಗಳಿಗೆ ಹಣಕಾಸಿನ ಸಂಸ್ಥೆಗಳಿಂದ ಸಾಲ ಸೌಲಭ್ಯ ಪಡೆದುಕೊಳ್ಳುವುದು ಕಷ್ಟಕರ.

೨೪. ಲಂಬಾಣಿಗರ ಕುಟುಂಬಗಳಲ್ಲಿ ಹೆಚ್ಚನವು ಅವಿಭಕ್ತ ಕುಟುಂಬಗಳು ಮತ್ತು ಅವರ ಜೀವನ ಮಟ್ಟ ಕಡಿಮೆ.

**ಲಂಬಾಣಿಗಳಿಗಿರುವ ಅಡೆತಡೆಗಳು**

ಬಳ್ಳಾರಿ ಜಿಲ್ಲೆಯ ಲಂಬಾಣಿಗರು ಜಾಗತೀಕರಣದ ಸಂದರ್ಭದಲ್ಲಿ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ಅಡೆತಡೆಗಳನ್ನು ಎದುರಿಸುತ್ತಿವೆ.

೧. ಉತ್ಪಾದನಾ ವೆಚ್ಚದಲ್ಲಿನ ಹೆಚ್ಚಳ.

೨. ಜೀವನ ವೆಚ್ಚದಲ್ಲಿ ಹೆಚ್ಚಳ ಆಧುನಿಕ ಕೈಗಾರಿಕೆಗಳಿಂದ ಪೈಪೋಟಿ.

೩. ಹಳೆಯ ವೃತ್ತಿಗಳು ಸುಧಾರಣೆಗೊಳ್ಳದಿರುವುದು.

೪. ಸೂಕ್ತವಾದ ಯಂತ್ರೋಪಕರಣಗಳು ಲಭ್ಯವಾಗದಿರುವುದು.

೫. ಲಂಬಾಣಿಗರು ಬೇರೆ ಬೇರೆ ಉದ್ಯೋಗಗಳಲ್ಲಿ ಸೇರುತ್ತಿರುವುದು.

೬. ಪದೇ ಪದೇ ವೃತ್ತಿಗಳನ್ನು ಬದಲಾಯಿಸುವುದು.

೭. ಗ್ರಾಮೀಣ ಪ್ರದೇಶಗಳಲ್ಲಿ ಲಂಬಾಣಿಗರ ಸರಕು/ಸೇವೆಗಳಿಗೆ ಬೇಡಿಕೆ ಕಡಿಮೆಯಾಗುತ್ತಿರುವುದು.

೮. ಸರಿಯಾದ ಸಮಯಕ್ಕೆ ಸಾಲ ಸೌಲಭ್ಯ ದೊರೆಯದೆ ಇರುವುದು.

೯. ಉತ್ತಮವಾದ ಮಾರುಕಟ್ಟೆ ಸೌಲಭ್ಯವಿಲ್ಲದಿರುವುದು.

೧೦. ಉತ್ತಮ ಸಾರಿಗೆ ಸಂಪರ್ಕದ ಕೊರತೆ.

೧೧. ಮಾರುಕಟ್ಟೆ ಮಾಹಿತಿಗಳ ಕೊರತೆ.

೧೨. ವಸ್ತುಗಳ ಗುಣಮಟ್ಟವನ್ನು ನಿರ್ಧರಿಸುವ ಸರಿಯಾದ ಮಾನದಂಡಗಳಿಲ್ಲದಿರುವುದು.

೧೩. ವೈಜ್ಞಾನಿಕ ಬೆಲೆ ನಿರ್ಧರಿಸುವ ವಿಧಾನಗಳಿಲ್ಲದಿರುವುದು. ವಸ್ತುಗಳ ಗುಣಮಟ್ಟವನ್ನು ಹೆಚ್ಚಿಸಿ ಕೊಳ್ಳದಿರುವುದು.

೧೪. ವೃತ್ತಿ ತರಬೇತಿ ಸಂಸ್ಥೆಗಳಿಲ್ಲದಿರುವುದು.

೧೫. ಸರಕಾರ ಲಂಬಾಣಿಗರ ಅಭಿವೃದ್ಧಿಗೆ ಗಮನ ಹರಿಸದಿರುವುದು.

೧೬. ಮುಖ್ಯವಾಗಿ ಲಂಬಾಣಿಗರು ಹೆಚ್ಚಿನ ಅನಕ್ಷರಸ್ಥರು, ಅವಿದ್ಯಾವಂತರೂ ಹಾಗೂ ಸಮಾಜದ ಪರಿಶಿಷ್ಟ ವರ್ಗಗಳಿಗೆ ಸೇರಿರುವುದು.

೧೭. ಸಾಗುವಳಿ ಪತ್ರದೊರಕಿಸಿ ಕೊಡದೆ ಇರುವುದು ಮುಖ್ಯವಾದ ಸಮಸ್ಯೆಯಾಗಿದೆ.

### ೬.೧೩. ಲಂಬಾಣಿಗಳ ಅಭಿವೃದ್ಧಿಯಲ್ಲಿ ಸರಕಾರದ ಪಾತ್ರ

ಪುರಾತನ ಕಾಲದಿಂದಲೂ ವಂಶಾಪಾರಂಪರ್ಯವಾಗಿ ಬಂದಿರುವ ಲಂಬಾಣಿಗರು ವೃತ್ತಿಗಳು ಆಧುನಿಕರಣದ ಹಾಗೂ ಜಾಗತೀಕರಣದ ಪ್ರಭಾವದಿಂದಾಗಿ ಸಮಸ್ಯೆಗಳನ್ನು ಎದುರಿಸುತ್ತಿವೆ. ಕೆಲವು ಲಂಬಾಣಿಗಳ ವೃತ್ತಿಗಳು ಸಮಾಜದಿಂದ ಕಣ್ಮರೆಯಾಗುತ್ತದೆ. ಇವುಗಳ ಉಳಿಯುವಿಕೆಗೆ, ಅಭಿವೃದ್ಧಿಗೆ ಸಮಾಜ ಹಾಗೂ ಸರಕಾರದ ಪಾತ್ರ ಅನನ್ಯವಾದುದು. ಇಲ್ಲಿ ಸರಕಾರ ಕೈಗೊಳ್ಳಬೇಕಾದ ಅಭಿವೃದ್ಧಿ ಕ್ರಮಗಳನ್ನು ಸೂಚಿಸಲಾಗಿದೆ.

೧. ಲಂಬಾಣಿಗಳಿಗೆ ಸಂಬಂಧಿಸಿದಂತೆ ಸರ್ಕಾರಿ ನೀತಿಯ ರಚನೆ.

೨. ಲಂಬಾಣಿಗರು ಅವುಗಳನ್ನು ಅನುಸರಿಸಿಕೊಂಡು ಬಂದಿರುವವರ ಸಂಪೂರ್ಣ ಅಂಕಿ-ಅಂಶಗಳ ಸಂಗ್ರಹ.

೩. ಲಂಬಾಣಿಗಳಿಗೆ ವೃತ್ತಿ ತರಬೇತಿ ಸಂಸ್ಥೆಗಳ ಸ್ಥಾಪನೆ.

೪. ತರಬೇತಿ ಪಡೆಯುವವರಿಗೆ ಶಿಷ್ಯ ವೇತನ ಹಾಗೂ ವೃತ್ತಿಗೆ ಸಂಬಂಧಿಸಿದ ಸಾಮಾಗ್ರಿಗಳನ್ನು ನೀಡುವುದು.

೫. ಲಂಬಾಣಿಗಳಿಗೆ ಹಣಕಾಸು ನೀಡುವ ಹಣಕಾಸಿನ ಸಂಸ್ಥೆಗಳ ಸ್ಥಾಪನೆ.

೬. ಲಂಬಾಣಿಗಳಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡಿಕೆ.

೭. ಲಂಬಾಣಿ ಕೃಷಿಕರಿಗೆ ಕಡಿಮೆ ಬೆಲೆಯಲ್ಲಿ ಬೀಜ, ಗೊಬ್ಬರಗಳನ್ನು ಪೂರೈಸುವುದು.

೮.ಮಾರುಕಟ್ಟೆ ಸೌಲಭ್ಯ

೯. ದಾಸ್ತಾನು ಮಳಿಗೆಗಳ ಸ್ಥಾಪನೆ

೧೦. ಸರಕು ಸೇವೆಗಳಿಗೆ ಬೆಂಬಲ ಬೆಲೆ ನೀಡುವುದು.

೧೧. ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಬೇಕು.

೧೨. ಲಂಬಾಣಿಗರಿಗೆ ರಿಯಾಯ್ತಿ ದರದಲ್ಲಿ ವಿದ್ಯುತ್ ಹಾಗೂ ಶಕ್ತಿ ಸಂಪನ್ಮೂಲಗಳ ನೀಡಿಕೆ.

೧೩. ಲಂಬಾಣಿಗಳ ಮಕ್ಕಳ ಶಿಕ್ಷಣಕ್ಕೆ ಆರ್ಥಿಕ ನೆರವು ನೀಡಿಕೆ.

೧೪. ವಸತಿ ಸೌಲಭ್ಯ ಒದಗಿಸಬೇಕು.

೧೫. ಲಂಬಾಣಿ ತಾಂಡಗಳಲ್ಲಿ ನ್ಯಾಯಬೆಲೆ ಅಂಗಡಿಯನ್ನು ಸ್ಥಾಪಿಸಬೇಕು.(ಜನಸಂಖ್ಯೆ ಆಧಾರದ ಮೇಲೆ)

೧೬. ಲಂಬಾಣಿ ತಾಂಡಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ, ವೈದಕೀಯ ನೆರವು ಒದಗಿಸಬೇಕು.

೧೭. ಲಂಬಾಣಿಗಳಿಗೆ ಆಧುನಿಕ ಯಂತ್ರೋಪಕರಣಗಳನ್ನು ಕಡಿಮೆ ಬೆಲೆಗೆ ಒದಗಿಸಬೇಕು.

೧೮. ಲಂಬಾಣಿಗಳ ಸಂಘ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಬೇಕು.

೧೯. ಧನಸಹಾಯ ಮತ್ತು ತೆರಿಗೆ ಪ್ರೋತ್ಸಾಹಗಳನ್ನು ನೀಡುವುದು.

**ಸರಕಾರದ ಪ್ರಮುಖವಾದ ಯೋಜನೆಗಳು**

ಗ್ರಾಮ ವೃತ್ತಿಗಳ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಹಲವು ಪ್ರಮುಖ ಯೋಜನೆಗಳನ್ನು ಜಾರಿಗೆ ತಂದಿವೆ. ಅವುಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

೧. ಚಿಕ್ಕ ಕೈಗಾರಿಕೆಗಳ ಅಭಿವೃದ್ಧಿ ಸಂಸ್ಥೆ

೨. ಕೇಂದ್ರ ರೇಷ್ಮೆ ಮಂಡಳಿ

೩. ರಾಜ್ಯ ಹಣಕಾಸಿನ ನಿಗಮಗಳು

೪. ಭಾರತದ ಚಿಕ್ಕ ಕೈಗಾರಿಕೆಗಳ ಅಭಿವೃದ್ಧಿ ಬ್ಯಾಂಕು

೫. ಏಕ ಗವಾಕ್ಷಿ ಯೋಜನೆ

೬. ಜಿಲ್ಲೆ ಕೈಗಾರಿಕ ಕೇಂದ್ರಗಳು

೭. ಗ್ರಾಮೀಣ ಉದ್ಯೋಗ ದಿಢೀರ್ ಯೋಜನೆ

೮. ಸಾಂದ್ರ ಗ್ರಾಮೀಣ ಉದ್ಯೋಗ ಯೋಜನೆ

೯. ಗ್ರಾಮೀಣ ಭೂರಹಿತರ ಉದ್ಯೋಗ ಖಾತ್ರಿ ಯೋಜನೆ

೧೦. ಸ್ವಯಂ ಉದ್ಯೋಗ ಯೋಜನೆಗಳು

೧೧. ಇಂದಿರಾ ಆವಾಸ್ ಯೋಜನೆ

೧೨. ವಿಶೇಷ ಉದ್ಯೋಗ ಯೋಜನೆಗಳು

೧೩. ಉದ್ಯೋಗ ಭರವಸೆ ಯೋಜನೆ

೧೪. ಸ್ವರ್ಣ ಜಯಂತಿ ರೋಜಗಾರ ಯೋಜನೆ

೧೫. ಪ್ರಧಾನ ಮಂತ್ರಿ ಗ್ರಾಮ ಸಡಾಕ್ ಯೋಜನೆ

೧೬. ವಾಲ್ಮೀಕಿ ಅಂಬೇಡ್ಕರ್ ಆವಾಸ ಯೋಜನೆ

೧೭. ಗಂಗಾ ಕಲ್ಯಾಣ ಯೋಜನೆ

೧೮. ರಾಷ್ಟ್ರೀಯ ಉದ್ಯೋಗ ಭರವಸೆ ಯೋಜನೆ

೧೯. ಸ್ವರೋಜಗಾರ್ ಕ್ರೆಡಿಟ್ ಕಾರ್ಡ್ ೯ ಸ್ಕಿಂ

೨೦. ವಿಶ್ವ ಯೋಜನೆ

೨೧. ಎಸ್.ಎಸ್ ಡಿ ಅಭಿವೃದ್ಧಿ ನಿಗಮ

೨೨. ತಾಂಡ ಅಭಿವೃದ್ಧಿ ನಿಗಮ ಮಂಡಳಿ

೨೩. ಹಿಂದುಳಿದ ಮತ್ತು ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ

೨೪. ಕರ್ನಾಟಕ ಮಹಿಳಾ ಅಭಿವೃದ್ಧಿ ನಿಗಮ

೨೫. ಸ್ವಸಹಾಯ ಸಂಘಗಳು

ಕರ್ನಾಟಕ ಸರಕಾರವು ಗೃಹ ಕೈಗಾರಿಕಗಳ ಹಾಗೂ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಬಳ್ಳಾರಿಯಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರವನ್ನು ಸ್ಥಾಪಿಸಿದೆ. ಕೈಗಾರಿಕಾ ಕೇಂದ್ರ ಗೃಹ ಮತ್ತು ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಮತ್ತು ಸ್ಥಾಪನೆಗಾಗಿ ವಿವಿಧ ಕಾರ್ಯಕ್ರಮಗಳನ್ನು ಜಾರಿಗೆ ತರುತ್ತಿದೆ. ಲಂಬಾಣಿ ಜನಾಂಗದವರು ಕೇವಲ ಕೂಲಿ ಮತ್ತು ಕೃಷಿಗಾಗಿ ದುಡಿಯದೇ ಸರಕಾರವು ಕೆಲವು ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಿದೆ. ಅದರ ಸದುಪಯೋಗವನ್ನು ಪಡೆದು ತಮ್ಮ ಆರ್ಥಿಕ ಮಟ್ಟವನ್ನು ಹೆಚ್ಚಿಸುವುದಕ್ಕಾಗಿ ಇದ್ದಂತಹ ಸಣ್ಣ ಕೈಗಾರಿಕಾ ಕಡೇ ಗಮನ ಹರಿಸಬೇಕು. ಸರಕಾರವು ಪ್ರಥಮವಾಗಿ ಸಣ್ಣ ಮತ್ತು ಗೃಹ ಕೈಗಾರಿಕಾ ಸ್ಥಾಪನೆ ಮಾಡಿದ ಯುವಕರಿಗೆ ತರಬೇತಿ ಶಿಬಿರಗಳನ್ನು ಏರ್ಪಡಿಸುತ್ತಿದೆ. ಆದುದರಿಂದ ಇಂಥ ಶಿಬಿರದಲ್ಲಿ ಲಂಬಾಣಿ ಯುವಕರು ಭಾಗವಹಿಸಬೇಕು. ಶಿಬಿರದಲ್ಲಿ ಪಾಲ್ಗೊಳುವರಿಗೆ ಸರಕಾರವತಿಯಿಂದ ಶಿಷ್ಯ ವೇತನ ನೀಡುತ್ತದೆ. ಜೊತೆಗೆ ಸಾಧನ-ಸಾಮಗ್ರಿಗಳ ಕಿಟ್ ನ್ನು ಸಹ ಪೂರೈಸುತ್ತದೆ.

ಅಲೆಮಾರಿ ಬುಡಕಟ್ಟಿನ ಲಂಬಾಣಿ ಸಮುದಾಯವು ಹಿಂದಿನಂತೆ ಇಂದು ಅಲೆಮಾರಿಯಾಗಿರದೆ, ಒಂದಿಷ್ಟು ಹೊಲಮನೆ ಮಾಡಿಕೊಂಡು ಅಲ್ಲಲ್ಲಿ ನಿಶ್ಚಿತ ಸ್ಥಳಗಳನ್ನಾಯ್ದುಕೊಂಡು ನೆಲೆಸಿ ಬಿಟ್ಟಿದೆ. ಹೊಟ್ಟೆಪಾಡಿಗಾಗಿ ತಮ್ಮ ತಾಂಡಾಗಳನ್ನು ಬಿಟ್ಟು ದೂರದ ಮುಂಬೈ, ಗೋವಾ ನಗರಗಳಿಗೆ ವಲಸೆ ಹೋಗಿ ಉಪಜೀವನವನ್ನು ಮಾಡುತ್ತಿರುವ ಅವರು ಈಗೀಗ ಕಾಡಿನ ನೆಲೆಯನ್ನು ಕಳೆದುಕೊಂಡು ನಗರ ಇಲ್ಲವೆ ಪಟ್ಟಣಗಳಿಗೆ ಹೊಂದಿಕೊಂಡು ಕೆಲವೆಡೆ ಹತ್ತಿರದ ಊರುಗಳಲ್ಲೇ ನೆಲೆಸಿ ಖಾಯಂ ನಿವಾಸಿಗಳಾಗುತ್ತಿದ್ದಾರೆ. ಇದರಿಂದ ಮುಂದುವರಿದ ಸಮಾಜ ಸಂಸ್ಕೃತಿಗಳಿಂದ ಸಾಕಷ್ಟು ಪ್ರಭಾವಿತರಾಗಿರುವುದು ಕಂಡುಬರುತ್ತದೆ. ಹೀಗಾಗಿ ತಮ್ಮ ಸುತ್ತಲಿನ ಪ್ರಬಲ ಸಂಸ್ಕೃತಿಯ ಪ್ರಭಾವ ಹಾಗೂ ಪರಿಣಾಮದಿಂದಾಗಿ ಈ ಸಮುದಾಯ ಪರಿವರ್ತನೆಗೆ ಒಳಗಾಗಿರುವುದರಿಂದ ಅವರ ಸಾಮಾಜಿಕ ಸ್ಥಾನಮಾನಗಳು ಇಂದು ಸಾಕಷ್ಟು ಬದಲಾಗಿವೆ. ಹೊಟ್ಟೆಪಾಡಿಗಾಗಿ ದೂರದ ಪಟ್ಟಣಗಳಿಗೆ ವಲಸೆ ಹೋಗುತ್ತಿರು ವುದರಿಂದ ಮತ್ತು ಅಲ್ಲಿನ ಪರಿಸರಕ್ಕೆ ಸಹಜವಾಗಿ ಒಗ್ಗಿಸಿಕೊಳ್ಳುತ್ತಿರುವುದರಿಂದ ಈ ಸಮುದಾಯದ ಜನರಲ್ಲಿ ಆಧುನಿಕತೆಯು ಅವರಿಗರಿವಿಲ್ಲದಂತೆ ಆವರಿಸಿಕೊಳ್ಳುತ್ತಿದೆ. ಈ ಹಿನ್ನೆಲೆಯಲ್ಲಿ ಲಂಬಾಣಿ ಸಮುದಾಯದಲ್ಲಿ ಕಂಡುಬರುವ ಬದಲಾವಣೆಯ ಕೆಲವು ಸ್ವರೂಪಗಳನ್ನು ಪರಿಶೀಲಿಸಬಹುದು.

**ಅಡಿಟಿಪ್ಪಣಿಗಳು**

೧. ಮೊಗಳ್ಳಿ ಗಣೇಶ್, ೧೯೯೯, **ದಲಿತರು ಮತ್ತು ಜಾಗತೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨

೨. ಪ್ರಭಾಕರ ಎ.ಎಸ್., ೨೦೦೦, **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೬

೩. ಮೊಗಳ್ಳಿ ಗಣೇಶ್, ೧೯೯೯, **ಪೂರ್ವೋಕ್ತ**, ಪು.೧೪

೪. ಪ್ರಭಾಕರ ಎ.ಎಸ್., ೨೦೦೦, **ಪೂರ್ವೋಕ್ತ**, ಪು.೧

೫. ಜಗದೀಶ್ ಕೊಪ್ಪ, ೨೦೦೪, **ಜಾಗತೀಕರಣ ಮತ್ತು ಗ್ರಾಮ ಭಾರತ**

೬. ರವೀಂದ್ರನಾಥ್ ಕೆ., **ಬಳ್ಳಾರಿ ಜಿಲ್ಲಾ ದರ್ಶನ**,

೭. ಹೆಬ್ಬಾಲೆ ಕೆ.ನಾಗೇಶ್, ೨೦೧೧, **ಪರಿವರ್ತನೆ ಮತ್ತು ಜಾಗತೀಕರಣ**, ಪು.೫

೭

# ಸಮಾರೋಪ

ಪ್ರಸ್ತುತ ಅಧ್ಯಯನವು ಒಂದು ಅಲೆಮಾರಿ ಸಮುದಾಯದ ವರ್ತಮಾನದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ವಿವರಿಸಿಕೊಳ್ಳುವ ಒಂದು ಪ್ರಯತ್ನವಾಗಿದೆ. ಅಲೆಮಾರಿ ಸಮುದಾಯವೊಂದು ನೆಲೆನಿಲ್ಲುವ ಸಂದರ್ಭದಲ್ಲಿ ಎದುರಿಸುವ ತಲ್ಲಣ ಮತ್ತು ಅದು ಮುಖಾಮುಖಿಯಾಗುವ ಸಂಘರ್ಷಗಳನ್ನು ಅವಲೋಕಿಸುವ ನಮ್ರ ಪ್ರಯತ್ನವಾಗಿದೆಯೆಂದು ಭಾವಿಸಿದ್ದೇನೆ. ಈ ದೇಶದ ವಿಷಯ ಸಾಮಾಜಿಕ, ಸಾಂಸ್ಕೃತಿ ಮತ್ತು ಆರ್ಥಿಕ ಸ್ಥಿತ್ಯಂತರಗಳ ವ್ಯವಸ್ಥೆಯಲ್ಲಿ ಲಂಬಾಣಿಗಳಂತಹ ಸಮುದಾಯಗಳು ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳಿಗೋಸ್ಕರ ನಡೆಸಿದ ಹೋರಾಟದ ಚರಿತ್ರೆ ನಮ್ಮೆಲ್ಲರಿಗೂ ಗೊತ್ತೇ ಇದೆ. ದುಡಿದ ಶ್ರಮ ಜೀವಿಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯಗಳನ್ನೇ ಕಿತ್ತುಕೊಂಡ ಈ ದೇಶದಲ್ಲಿ ಅಲೆಮಾರಿಗಳಂತಹ ಸಮುದಾಯಗಳು ತಮ್ಮ ಹಕ್ಕುಗಳಿಗಾಗಿ ಕಾಲೂರಿ ನಿಲ್ಲುವ ಕಾಲಘಟ್ಟದಿಂದ ಹೀಗೆ ಎಚ್ಚೆತ್ತುಕೊಳ್ಳುವ ಹಂತದಲ್ಲಿ ಶೋಷಿತ ಸಮುದಾಯಗಳೂ ಹಲವು ಸಂಘರ್ಷಗಳನ್ನೆದುರಿಸಬೇಕಾಗುತ್ತದೆ. ಆಳುವ ವರ್ಗದ ಪಿತೂರಿಗಳ ಜೊತೆಯಲ್ಲಿಯೇ ಆಂತರಿಕ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ಈ ಬಗೆಯ ಬಿಕ್ಕಟ್ಟುಗಳು ಚಾರಿತ್ರಿಕವಾಗಿ ಎಲ್ಲಾ ಸಮುದಾಯಗಳನ್ನು ಬೆನ್ನಟ್ಟಿ ಶೋಷಣೆಗೊಳಗಾದ ಸಮುದಾಯಗಳನ್ನು ಸಬಲೀಕರಿಸುವುದು ಸುಲಭದ ಮಾತೇನಲ್ಲ. ಆದರೆ ಸಬಲೀಕರಣಗೊಳ್ಳುವ ಮತ್ತು ಬದಲಾಗುವ ಸಮುದಾಯಗಳ ವರ್ತಮಾನದ ಬದುಕಿನ ಚಲನೆಗಳನ್ನು ವಿವರಿಸಿಕೊಳ್ಳುವುದು ಇಂದಿನ ಹಲವು ತುರ್ತುಗಳಲ್ಲೊಂದಾಗಿದೆ. ಈ ಬಗೆಯ ಪ್ರಯತ್ನ ಕೇವಲ ಸಮುದಾಯಗಳ ಬಾಹ್ಯ ಒತ್ತಡಗಳನ್ನು ಅರ್ಥಮಾಡಿಕೊಳ್ಳುವ ಹಂತಕ್ಕೆ ಮಾತ್ರ ನಿಲ್ಲುವುದಿಲ್ಲ. ಅದು ಸಮುದಾಯಗಳು ಬಯಸುವ ರೂಪಾಂತಗಳ ತವಕಗಳನ್ನು ವಿವರಿಸಿಕೊಳ್ಳುವ ಪ್ರಯತ್ನವಾಗಿರುತ್ತದೆ.

ಈ ಕಾರಣಕ್ಕಾಗಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ತಾಂಡಾಗಳನ್ನು ಆಯ್ದುಕೊಂಡು ಲಂಬಾಣಿಗರ ಬದಲಾಗದ ಬದುಕಿನ ಏರಿಳಿತಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಿದ್ದೇನೆ. ಕೆಳಜಾತಿಗಳ ಬದಲಾವಣೆಯನ್ನು ''ಸಂಸ್ಕೃತೀಕರಣ, ಪಾಶ್ಚಾತೀಕರಣ' ಎಂಬ ಪರಿಭಾಷೆಯಲ್ಲಿ ಮಾತ್ರ ವಿವರಿಸಿಕೊಳ್ಳಲಾಗಿದೆ. ಆದರೆ

ಬದಲಾವಣೆಯನ್ನು ಅದಕ್ಕೂ ಮೀರಿದ ನಿತ್ಯದ ಬವಣೆಗಳನ್ನು ಪೂರೈಸಿಕೊಳ್ಳುವ ಪ್ರಕ್ರಿಯೆಯೆಂದು ಭಾವಿಸುವ ಅಗತ್ಯವಿದೆಯೆಂದು ಇಲ್ಲಿ ಭಾವಿಸಲಾಗಿದೆ. ಏಕೆಂದರೆ ನಾನು ಆಯ್ದುಕೊಂಡ ಎಲ್ಲಾ ತಾಂಡಗಳಲ್ಲಿ 'ಸಂಸ್ಕೃತೀಕರಣ' ಎಂಬ ಬದಲಾವಣೆಯ ಚೌಕಟ್ಟಿಗೆ ಒಗ್ಗುವರು ಮೇಲ್ ಮಧ್ಯಮ ವರ್ಗದವರು ಮಾತ್ರ, ನಿತ್ಯ ದುಡಿವ ಮತ್ತು ದುಡಿದುಣ್ಣಲೇಬೇಕಾದ ಸ್ಥಿತಿಯಲ್ಲಿರುವ ಲಂಬಾಣಿಗರಂತಹ ಜನಕ್ಕೆ ಬದಲಾವಣೆಯ ಪ್ರಶ್ನೆಯನ್ನುವುದು ಕೇವಲ ಒಪ್ಪತ್ತಿನ ಊಟದ ಪ್ರಶ್ನೆಯೇ ಆಗಿದೆ. ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸ್ವಾವಲಂಬಿ ಮತ್ತು ಆತ್ಮ ಪ್ರತ್ಯಯಗಳನ್ನು ಹೊಂದುವ ನಿಟ್ಟಿನಲ್ಲಿ ಲಂಬಾಣಿಗರು ಹಲವು ಪ್ರಯತ್ನಗಳನ್ನು ಮಾಡಿದ್ದಾರೆ. ಕೆಲವು ಕಡೆ ಇವರು ಯಶಸ್ಸನ್ನು ಕಂಡಿದ್ದರೂ, ಹಲವು ಕಡೆ ಈ ಪ್ರಯತ್ನಗಳು ಫಲ ನೀಡಿಲ್ಲ. ಇದಕ್ಕೆ ಅನೇಕ ಕಾರಣಗಳಿರಬಹುದು. ಹೇಗೆ ತಮ್ಮ ಸ್ಥಾನಮಾನಗಳನ್ನು ಉತ್ತಮ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಸದರಿ ಸಮುದಾಯ ಕೈಗೊಂಡ ಪ್ರಯತ್ನಗಳು ಸೋತು ಹೋಗಿಲ್ಲ. ಅವು ಸಮುದಾಯ ಬದಲಾವಣೆಯ ಕಡೆ ಮತ್ತು ಆತ್ಮ ಪ್ರತ್ಯಯದ ಕಡೆ ಸಾಗುವ ರಚನಾತ್ಮಕ ಹೆಜ್ಜೆಗಳೆಂದೇ ಹೇಳಬೇಕಾಗುತ್ತದೆ.

ಈ ನಿಟ್ಟಿನಲ್ಲಿ ಸದರಿ ಮಹಾಪ್ರಬಂಧವನ್ನು ಲಂಬಾಣಿ ಜನಾಂಗದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ನಾನು ಅಧ್ಯಯನಕ್ಕೆ ಆಯ್ದುಕೊಂಡ ಎಲ್ಲಾ ತಾಂಡಗಳಿಂದ ಅಂಕಿ ಅಂಶಗಳನ್ನು ಕಲೆ ಹಾಕಿದ್ದೇನೆ. ಅಲ್ಲದೆ ಈ ತಾಂಡಗಳ ಜೊತೆ ನಿರಂತರ ಸಂಪರ್ಕದಲ್ಲಿದ್ದು, ಪಡದ ಮತ್ತು ನನ್ನ ಸ್ವಂತ ಅನುಭವದ ಮಾಹಿತಿಗಳನ್ನು ಇಲ್ಲಿ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿನ ಅಧ್ಯಾಯಗಳಲ್ಲಿ ನಾನು ಬಳಸಿಕೊಂಡಿರುವ ಅಂಕಿ-ಅಂಶಗಳನ್ನು ಮತ್ತು ಮಾಹಿತಿಗಳನ್ನು ಸದ್ಯದ ಸಮಾಜಶಾಸ್ತ್ರದ ಪ್ರಮೇಯಗಳ ಮೂಲಕ ವಿವರಿಸಿಕೊಳ್ಳುವ ಪ್ರಯತ್ನವನ್ನು ಮಾಡಿದ್ದೇನೆ.

ಮೂಲತಃ ಆದಿವಾಸಿಯಾಗಿದ್ದ ಮಾನವ ಹಂತ ಹಂತವಾಗಿ ತನ್ನನ್ನು ಬದಲಾಯಿಸಿಕೊಳ್ಳುತ್ತಾ ಇಂದಿನ ನಾಗರಿಕ ಸ್ಥಿತಿಗೆ ಬಂದಿದ್ದಾನೆ. ಹೀಗೆ ಪರಿವರ್ತನೆಯಾಗುತ್ತಾ ಸಮಾನತೆ ಇದ್ದ ಸಮಾಜದಲ್ಲಿ ಸ್ವಾರ್ಥವೆಂಬುದು ಅಸಮಾನತೆಯನ್ನ ಹುಟ್ಟು ಹಾಕಿತು. ಸಮುದಾಯ ಸಮುದಾಯಗಳ ನಡುವೆ ಸಮಾಜ ಸಮಾಜಗಳ ನಡುವೆ ಇದು ಹೆಚ್ಚಾಗಿ ಗೋಚರವಾಗುತ್ತಾ ಸೃಷ್ಟಿಯಲ್ಲಿ ಮೇಲು, ಕೀಳು, ಉಳ್ಳವ, ಉಳ್ಳದೆ ಇರುವವ, ಬಡವ, ಶ್ರೀಮಂತ ಎಂಬ ವರ್ಗಗಳು ರೂಪಗೊಂಡವು. ಈ ವರ್ಗ ತಾರತಮ್ಯ ಎಷ್ಟರ ಮಟ್ಟಿಗೆ ಪ್ರಚಲಿತದಲ್ಲಿದೆಯೆಂದರೆ ಶ್ರೀಮಂತ ಬಂಡವಾಳಶಾಹಿ ಗಣ್ಯರಿಗೆ ಮಾತ್ರ ಬದುಕುವ ಹಕ್ಕಿದೆ ಹೊರತು ಬಡವರಿಗೆ ಇಲ್ಲ ಎನ್ನುವಷ್ಟರ ಮಟ್ಟಿಗೆ ಶೋಷಣೆ ಸಮಾಜದಲ್ಲಿ ರಾರಾಜಿಸುತ್ತದೆ. ಹಾಗೆಯೇ ಸಮಾಜದಲ್ಲಿ ಸಾಂಪ್ರದಾಯಿಕ ಮತ್ತು ಆಧುನಿಕತೆಗಳೆಂದೂ ಅಸ್ತಿತ್ವವನ್ನು ಏಕ ಕಾಲದಲ್ಲಿ ತಮ್ಮ ಅಸ್ತಿತ್ವವನ್ನು ಪ್ರಕಟಿಸುತ್ತಿವೆ.

ಅತ್ಯಂತ ಪುರಾತನ ಹಾಗೂ ಅತ್ಯಂತ ಆಧುನಿಕ ಮೌಲ್ಯಗಳು ಇಂದಿಗೂ ಸಮುದಾಯದೊಳಗಡೆ ಜೀವಂತವಾಗಿವೆ. ಆಧುನೀಕ ತಂತ್ರಜ್ಞಾನವನ್ನು ಅಳವಡಿಸುವ ಹಾಗೂ ದೇಶಿಯ ಜ್ಞಾನವನ್ನು ಬಳಸಿಕೊಳ್ಳುವುದನ್ನು

ಸಹ ನಾವು ಕಾಣುತ್ತೇವೆ. ಸಮುದಾಯಗಳ ಜನಜೀವನದಲ್ಲಿ ಕಂಡುಬರುವ ವೈವಿಧ್ಯತೆ ಹಾಗೂ ಭಿನ್ನತೆ ಈ ಸಮುದಾಯದ ವೈಶಿಷ್ಟಗಳಲ್ಲಿ ಒಂದು. ಅಸಮಾನತೆ ಎಂಬುದು ಸಮಾಜದಲ್ಲಿ ಅಸ್ತಿತ್ವದಲ್ಲಿರುವುದು ಜಾತಿಯ ಮೂಲಕ, ಈ ಅಸಮಾನತೆಯನ್ನು ಗುರುತಿಸಲಾಗುತ್ತಿದ್ದು ಇಂದೂ ಆರ್ಥಿಕ ಅಂಶಗಳ ಮೂಲಕ ಇದು ಹೆಚ್ಚು ಪ್ರಚಲಿತದಲ್ಲಿ ಇರುವುದನ್ನು ಕಾಣಬಹುದಾಗಿದೆ.

ಇಂಡಿಯಾದಂತಹ ಶ್ರೇಣೀಕೃತ ಸಮಾಜದಲ್ಲಿ ಹಲವು ಬಗೆಯ ಮಿತಧರ್ಮ, ಜಾತಿ, ವರ್ಗಗಳಿದ್ದು, ಏಣಿ ಶೇಣಿಯನ್ನು ಸತತವಾಗಿ ಘೋಷಿಸಿಕೊಂಡು ಬರಲಾಗಿದೆ. ದೇಶದ್ಯಾಂತ ಸಮುದಾಯಗಳನ್ನು ಅವರ ಜಾತಿಯಿಂದ ಗುರುತಿಸಲ್ಪಟ್ಟು ಹುಟ್ಟಿನಿಂದಲೇ ಅವರ ಸಾಮಾಜಿಕ ಸ್ಥಾನಮಾನ ನಿರ್ಧರಿಸಲಾಗುತ್ತಿದೆ. ಜಾತಿ ವ್ಯವಸ್ಥೆ ತನ್ನೆಲ್ಲ ಶಿಥಿಲ ಅವಸ್ಥೆಯ ಜೊತೆಗೂ ಇಂದೂ ಬದುಕಿದೆ ಎಂಬುದೇ ಆಧುನಿಕ ಜಗತ್ತಿನ ವ್ಯಂಗ್ಯಗಳಲ್ಲೊಂದಾಗಿದೆ.

ಇಂದು ಆರ್ಥಿಕ ಸ್ಥಿತ್ಯಂತರ ಸಮುದಾಯದ ಸಾಮಾಜಿಕ ಸ್ಥಾನವನ್ನು ನಿರ್ಧರಿಸುತ್ತದೆ. ಆರ್ಥಿಕ ಅಸಮಾನತೆ ಸಮುದಾಯವೊಂದರ ಮುಂದುವರಿಕೆ ಹಾಗೂ ಹಿಂದುಳಿಯುವಿಕೆಯ ಮೇಲೆ ಪ್ರಭಾವ ಬೀರುತ್ತಲೇ ಇರುತ್ತದೆ. ಸ್ವಾತಂತ್ರ್ಯ ನಂತರ ಜಾತಿ ವ್ಯವಸ್ಥೆಯ ಬಿಗಿಪಟ್ಟು ಸ್ವಲ್ಪ ಮಟ್ಟಿಗೆ ಸಡಿಲವಾಗಿರುವುದು ನಿಜ. ಆದರೆ ಶತಮಾನಗಳಿಂದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಅಧಿಕಾರಿಗಳಿಂದ ದೂರ ಉಳಿದು ಸಮುದಾಯಗಳು ಇಂದು ಬರ್ಬರ ವರ್ತಮಾನದಲ್ಲಿ ಬದುಕುತ್ತಿದ್ದಾರೆ.

ಆದರೆ ಬಹುಪಾಲು ಕೆಳಸಮುದಾಯಗಳು ಇಂದೂ ಮುಖ್ಯ ಪ್ರವಾಹದ ಜೊತೆಗೆ ಸೇರಲಾಗದೆ ಸ್ಥಗಿತ ನಿಲುವಿನಲ್ಲಿ ಉಳಿದು ಬಿಟ್ಟಂತೆ ಭಾಸವಾಗುತ್ತದೆ. ಇಂಡಿಯಾದ ಶ್ರೇಣಿಕೃತ ವ್ಯವಸ್ಥೆ ದುರ್ಬಲ ಸಮುದಾಯಗಳ, ಆಳುವ ವರ್ಗಗಳ ನಡುವೆ ಅಂತರ್ ಸೃಷ್ಟಿಯಾಗಿದ್ದು, ಉತ್ಪಾದನಾ ಸಾಧನಗಳ ಒಡೆತನ ಆಳುವ ವರ್ಗಗಳ ಕೈಯಲ್ಲಿದ್ದು, ಹೀಗೆ ಕೆಳ ಸಮುದಾಯಗಳಿಗೆ ಇವು ಸಮರ್ಪಕವಾಗಿ ದೊರೆತಿಲ್ಲ. ಇದರಿಂದಾಗಿಯೇ ಹಲವು ಸಲ ಬಹಿರಂಗ ಹೋರಾಟಕ್ಕಿಳಿಯುವುದನ್ನ ನಾವು ಚರಿತ್ರೆಯಲ್ಲಿ ಕಾಣಬಹುದಾಗಿದೆ. ಶೋಷಿತರ ಪ್ರತಿಭಟನೆ, ಹೋರಾಟಗಳು ಹೇಗೆ ಸಂಕೇತದ ಹಂತದಲ್ಲಿಯೇ ಉಳಿದು ಬಿಡುವುದಕ್ಕೆ ಲೌಕಿಕದಲ್ಲಿಯೂ ಅನೇಕ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಒತ್ತಡ ಕಾರಣಗಳಾಗಿರುತ್ತವೆ. ಈ ರೀತಿ ನಮ್ಮ ಸಮಾಜದಲ್ಲಿ ಆಳುವ ವರ್ಗಕ್ಕೆ ಸಂವಾದಿಯಾಗಿ ದುಡಿವ ಶೋಷಿತ ವರ್ಗಗಳು ಪ್ರತಿ ರಾಜಕಾರಣವನ್ನು ಕಲ್ಪಿಸಿಕೊಂಡು ವ್ಯವಸ್ಥಿತ ಹೋರಾಟಕ್ಕಿಳಿದಿರುವುದು ನಮ್ಮ ಚರಿತ್ರೆಯುದ್ದಕ್ಕೂ ಕಂಡುಬರುತ್ತದೆ.

ಈ ರೀತಿ ಕೆಳ ಸಮುದಾಯ ಬುಡಕಟ್ಟು, ಆದಿವಾಸಿಗಳು, ದುಡಿವ ಶ್ರಮಿಕ ವರ್ಗಗಳು ಹೋರಾಟಕ್ಕಿಳಿಯುವುದನ್ನು ಬಹುಪಾಲು ಶಮನಗೊಳಿಸಲು ವಸಾಹತುಶಾಹಿ ಸರಕಾರ ಪ್ರಯತ್ನಿಸಿತು. ನಂತರ ನಮ್ಮ ಇಂದಿನ ಸರಕಾರ, ವ್ಯವಸ್ಥೆಯ ಒಳಗಡೆ ತಂತ್ರಗಳನ್ನು ರೂಪಿಸುತ್ತಲೇ ಇರುತ್ತದೆ. ಒಟ್ಟಿನಲ್ಲಿ ಈ ಬಗೆಯ ಹೋರಾಟಗಳನ್ನು ಸೃಷ್ಟಿಯಾಗುವಂತೆ ಆಡಳಿತಾರೂಢ ಸರಕಾರ ಎಚ್ಚರ ವಹಿಸಿ ತಮ್ಮ ಸ್ವಾರ್ಥಕ್ಕಾಗಿ ಈ

ಸಮುದಾಯಗಳನ್ನು ಅಂತಿಮವಾಗಿ ಬಲಿಕೊಡುತ್ತದೆ. ಆದರೆ ಹೀಗೆ ಶೋಷಿತ ಸಮುದಾಯಗಳ ಪ್ರತಿರೋಧಕ ಧ್ವನಿಗಳನ್ನು ಅಭಿವ್ಯಕ್ತಿಗೊಳಿಸುವುದನ್ನು ಅವುಗಳ ಸಾಮುದಾಯಿಕ ಆಗುಹೋಗುಗಳ ಭಾಗವಾಗಿಯೇ ನೋಡಬೇಕಾದ ಜರೂರಿದೆ.

ಈ ಸಮುದಾಯಗಳ ವಸಾಹತುಶಾಹಿ ಕಾಲದಲ್ಲಿ ಯಂತ್ರ ನಾಗರಿಕತೆ ಮುಂದೆ ಸ್ಪರ್ಧಿಸಲಾಗಿದೆ. ತಮ್ಮ ಪಾರಂಪರಿಕ ವೃತ್ತಿಗಳನ್ನು ಕಳೆದುಕೊಂಡು ಸಂದಿಗ್ಧ ಸ್ಥಿತಿಯಲ್ಲಿ ಸಿಲುಕಿದವು. ಇದನ್ನ ಪ್ರತಿಭಟಿಸುವ, ವಸಾಹತುಶಾಹಿಯನ್ನು ಎದುರಿಸುವ ಅಗಾಧ ಶಕ್ತಿಯು ದುರ್ಬಲ ವರ್ಗದ ಅಂತರಂಗದಲ್ಲಿ ಒಟ್ಟುಗೂಡುತ್ತಿದ್ದರೂ ವಸಾಹತುಶಾಹಿ ಸರಕಾರ ಇಂತಹ ಸಮುದಾಯಗಳನ್ನು ಅಪರಾಧಿ ಬುಡಕಟ್ಟುಗಳೆಂದು ಪರಿಗಣಿಸಿ ಸಾಮಾಜಿಕ ನಿರ್ಬಂಧಗಳನ್ನು ಹೇರಿತು. ಹೀಗೆ ಕೆಳ ಸಮುದಾಯಗಳನ್ನು ನಿಷ್ಕ್ರಿಯಗೊಳಿಸಲು ಇಂಡಿಯಾದಲ್ಲಿ ಇಲ್ಲಿಯದೇ ಆದ ರಾಜಕೀಯ ಹುನ್ನಾರಗಳು ಅಂದಿನಿಂದಲೂ ರೂಪುಗೊಳ್ಳುತ್ತಲೇ ಬಂದಿವೆ. ಇಂದಿಗೂ ಅದು ಮುಂದುವರೆಯುತ್ತದೆ.

ನಮ್ಮ ಶ್ರೇಣೀಕೃತ ವ್ಯವಸ್ಥೆಯ ದೇಶದಲ್ಲಿ ಹಲವಾರು ಬುಡಕಟ್ಟು ಕೆಳಸಮುದಾಯಗಳಲ್ಲಿ ಲಂಬಾಣಿಗರು ಅತ್ಯಂತ ವಿಶಿಷ್ಟ ಪೂರ್ಣವಾದ ಸಂಸ್ಕೃತಿಯುಳ್ಳ ಸಮುದಾಯವಾಗಿದೆ.

ಅಲೆಮಾರಿತನ ತೊರೆದು ಊರುಗಳಿಂದ ಸ್ವಲ್ಪ ದೂರ ತಮ್ಮ ತಾಂಡಾಗನ್ನು ಕಟ್ಟಿಕೊಂಡು ನಿರ್ದಿಷ್ಟ ಆರ್ಥಿಕ ಮೂಲಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ರಾಜಸ್ಥಾನದಿಂದ ವಲಸೆ ಬಂದು ಕರ್ನಾಟಕದ ಬಹುತೇಕ ಎಲ್ಲಾ ಕಡೆ ಲಂಬಾಣಿ ಜನಾಂಗವು ನೆಲೆನಿಂತು ಕನ್ನಡದ ಸಮುದಾಯವಾಗಿ ಬೆರತು ಹೋಗಿದೆ. ಗೋರಬೋಲಿ ಭಾಷೆಯನ್ನಾಡುವ ಇವರು ಸಾಮಾನ್ಯವಾಗಿ ಆಯಾ ಪ್ರಾದೇಶಿಕತೆಗಳಿಗನುಗುಣವಾಗಿ ವ್ಯಾವಹಾರಿಕವಾಗಿ ಕನ್ನಡವನ್ನು ಇತರ ಭಾಷೆಯನ್ನು ಮಾತನಾಡುತ್ತಾರೆ. ಎಲ್ಲಾ ಬುಡಕಟ್ಟು ಭಾಷೆಗಳಂತೆಯೇ ಈ ಗೋರಿಬೋಲಿ ಭಾಷೆಗೂ ಸಹ ಸ್ವಂತ ಲಿಪಿಯಿಲ್ಲ.

ಲಂಬಾಣಿಗರು ಮೊದಲಿನಿಂದಲೂ ತಮ್ಮ ಸಂಸ್ಕೃತಿಯನ್ನು ಬಳಸಿ ಬೆಳೆಸಿಕೊಂಡು ಬಂದಿದ್ದಾರೆಂಬುದು ನನ್ನ ಅಧ್ಯಯನದಿಂದ ತಿಳಿದುಬಂದಿದೆ. ಇಂಡಿಯಾದ ಶ್ರೇಣಿಕರಣದ ಫಲವಾಗಿ ಇವರು ಅತ್ಯಂತ ಕೆಳಜಾತಿಯ ಸ್ಥಾನಮಾನಗಳನ್ನು ಪಡೆದಿದ್ದು, ಇಂದಿಗೂ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಅತ್ಯಂತ ಹಿಂದುಳಿದ ಸಮುದಾಯವಾಗಿದೆ. ಬಯಲುಸೀಮೆಯಲ್ಲಿ ಕುರುಚಲು ಕಾಡುಗಳನ್ನು ಕಡಿದುಕೃಷಿ ಭೂಮಿಯನ್ನ ಹೊಂದಲೆತ್ನಿಸಿರುವುದು ನನ್ನ ಸಂಶೋಧನೆಯಿಂದ ಕಂಡುಬರುತ್ತದೆ ಮತ್ತು ಇವರು ತಮ್ಮ ಸಂಪ್ರದಾಯಿಕ ವೃತ್ತಿಗಳನ್ನು ಬಿಟ್ಟು ಕೃಷಿಕರಾಗಿ ನೆಲೆನಿಂತಿದ್ದಾರೆ. ಇಲ್ಲಿ ಇವರ ಜೀವನ ವಿಧಾನಗಳನ್ನು ಮತ್ತು ಇವರ ಆರ್ಥಿಕ ಬದುಕು ಹೇಗೆ ಸಾಮಾಜಿಕ ಸ್ಥಾನಮಾನಗಳನ್ನು ಬದಲಾಯಿಸಿದೆ ಎಂಬುದನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಹಾಗೂ ಈ ಸಮುದಾಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ಸ್ಥಿತ್ಯಂತರಗಳ ಚಿತ್ರಣವನ್ನು ನೀಡಲು ಪ್ರಯತ್ನಿಸಲಾಗಿದೆ.

ಇವರ ಕಸುಬು, ಉಪಕಸುಬು ಮುಂತಾದ ಆರ್ಥಿಕ ಚಟುವಟಿಕೆಯ ಬಗ್ಗೆ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಸಮಾಜದಲ್ಲಿ ಬದಲಾವಣೆಗಳಾದರೂ ಇಂದಿಗೂ ಒಂದು ವಿಶೇಷವಾದ ಸಾಂಸ್ಕೃತಿಕ ಏಕತೆಯನ್ನು ಇಲ್ಲಿ ಕಾಣುತ್ತೇವೆ. ಮೂಲತಃ ಅಲೆಮಾರಿಗಳಾಗಿದ್ದ ಇವರು ದೇಶದ್ಯಾದಂತ ವಿವಿಧೆಡೆಗಳಲ್ಲಿ ಚಲಿಸಿದರೂ, ತಮ್ಮ ಮೂಲ ಸ್ವರೂಪವನ್ನು ಕಾಯ್ದುಕೊಳ್ಳಲು ಪ್ರಯತ್ನಿಸಿದ್ದಾರೆ. ಹೀಗೆ ಅಲೆಮಾರಿಗಳಾಗಿದ್ದ ಸಂದರ್ಭದಲ್ಲಿ ಅಲೆಮಾರಿತನವನ್ನು ಬಿಟ್ಟು ಒಂದೆಡೆ ನೆಲೆಸಿ ಅಲೆಮಾರಿತನಕ್ಕೆ ತಿಲಾಂಜಲಿಯನ್ನಿಟ್ಟು ಈಗ ಎಲ್ಲಾ ಸಮುದಾಯಗಳಂತೆಯೇ ಇವರೂ ಸಹ ಒಂದೆಡೆ ವಾಸಿಸುತ್ತಿದ್ದಾರೆ. ಹೀಗೆ ಒಂದೆಡೆಯಲ್ಲಿಯೇ ನೆಲೆ ನಿಂತು ಬಾಳುವೆ ಮಾಡುವಾಗ ಅನೇಕ ಸಂಘರ್ಷಗಳಿಗೆ ಮುಖಾಮುಖಿಯಾಗಿದ್ದಾರೆ. ಏಕೆಂದರೆ ವರ್ಷಪೂರ್ತಿ ಅಲೆಮಾರಿಗಳಿಂದಲೇ ಜೀವಿಸುತ್ತಿದ್ದ ಇವರು ಒಂದೆಡೆ ನೆಲೆ ನಿಲ್ಲುವಾಗ ಪರಿಸರಕ್ಕೆ ತಮ್ಮ ಜೀವನದ ಒಂದೇ ಮುಖಗಳನ್ನು ಬದಲಿಸಿಕೊಳ್ಳಬೇಕಾಗಿತ್ತು. ನೆಲೆ ನಿಂತ ಪ್ರದೇಶಗಳಲ್ಲಿ ಬದಲಾದ ಅನೇಕ ವೃತ್ತಿಯಿಂದುಂಟಾದ ಸಮಸ್ಯೆ ಆಹಾರ, ನೀರಿನ ಸಮಸ್ಯೆ, ಶಿಕ್ಷಣದ ಸಮಸ್ಯೆ, ಆರೋಗ್ಯದ ಸಮಸ್ಯೆ, ಇತರ ಸಮುದಾಯಗಳೊಂದಿಗೆ ಹೊಂದಾಣಿಕೆ ಹಾಗೂ ವ್ಯವಸಾಯಕ್ಕೆ ಅಂಟಿಕೊಳ್ಳಲು ಆಗದಿರುವಿಕೆ ಮುಂತಾದ ಸಮಸ್ಯೆಗಳಿಗೆ ಇವರು ಮುಖಾಮುಖಿಯಾಗಿದ್ದಾರೆ.

ಲಂಬಾಣಿ ಸಮುದಾಯವು ತನ್ನ ಮೂಲ ಪಾರಂಪರಿಕ ಕಸುಬಿನಿಂದ ಮತ್ತೊಂದು ಕಸುಬಿಗೆ ಬದಲಾಗಬೇಕಾದ ಸಂದರ್ಭದಲ್ಲಿ ಒಂದು ಸಂಘರ್ಷವೇರ್ಪಡುತ್ತದೆ. ಅದೇ ರೀತಿ ಈ ಸಮುದಾಯಕ್ಕೆ ವ್ಯವಸಾಯ ತಿಳಿಯದ ವೃತ್ತಿಯಾಗಿತ್ತು. ಆದರೆ ಕೃಷಿ ಇವರಿಗೆ ಅನಿವಾರ್ಯದ ಆರ್ಥಿಕ ಮೂಲವಾಗಿ ಪರಿಣಮಿಸಿತು. ಅಲ್ಲದೆ ಸ್ವಾತಂತ್ರ್ಯ ಸಿಕ್ಕು ಹಲವು ದಶಕಗಳ ನಂತರ ಇವರಿಗೆ ಲಭಿಸಿದ ಸಂವಿಧಾನಬದ್ಧ ಅನುಕೂಲಗಳು ಸಹ ಇವರ ಬದುಕಿನಲ್ಲಿ ತೀವ್ರ ಬದಲಾವಣೆಯಾಗಲು ಕಾರಣವಾಗಿದೆ. ಆದರೆ ಕೆಳ ಸಮುದಾಯಗಳಿಗೆ ಈ ರೀತಿಯ ಸಂವಿಧಾನದ ಮೂಲಕ ಮೀಸಲಾತಿಯನ್ನು ನೀಡಿದಾಕ್ಷಣ ಈ ಸಮಾಜದಲ್ಲಿ ಫಲಾನುಭವಿ ಕೆಳ ಸಮುದಾಯಗಳು ಅಭಿವೃದ್ಧಿಯಾಗಿ ಬಿಟ್ಟಿವೆ. ಅವರಿಗಾಗಿ ಮೀಸಲಿಟ್ಟ ಹಣ ಯೋಜನೆಗಳಿಂದ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಮುಂತಾದ ರಂಗದಲ್ಲಿ ಈ ಸಮುದಾಯಗಳು ಸಬಲೀಕರಣಗೊಂಡಿವೆ ಎಂಬುದು ಕೇವಲ ಸಾಂದರ್ಭಿಕವಾದ, ಸತ್ಯಕ್ಕೆ ದೂರವಾದ ಮಾತಾಗುತ್ತದೆ. ಸಂವಿದಾನ ಬದ್ಧ ಅನುಕೂಲಗಳನ್ನು ಮತ್ತು ಸರಕಾರದ ಹಲವು ಕಲ್ಯಾಣ ಯೋಜನೆಗಳು ಲಾಭವನ್ನು ಈ ಸಮುದಾಯಗಳ ಎಲೈಟ್ ಜನರು ಮಾತ್ರ ಪಡೆಯುವಂತಾಗಿದೆ. ಈ ಅನುಕೂಲಗಳನ್ನು ಬಳಸಿಕೊಂಡ ಈ ಎಲೈಟ್ ಗುಂಪುಗಳ ಬದುಕಲ್ಲಿ ಹಲವು ತೀವ್ರ ಬದಲಾವಣೆಗಳು ಸಂಭವಿಸಿದ್ದರೂ, ಬಹುಸಂಖ್ಯಾತ ಶೋಷಿತರು ಈ ಅನುಕೂಲಗಳನ್ನು ಪಡೆದುಕೊಳ್ಳುವ ಪ್ರಾಥಮಿಕ ಹಂತಕ್ಕೂ ಬಂದು ನಿಂತಿಲ್ಲ. ಈ ಹಿನ್ನಲೆಯಲ್ಲಿ ಇಂದಿಗೂ ಲಂಬಾಣಿಗರು ವಾಸಿಸುತ್ತಿರುವ ಕ್ಷೇತ್ರ ಕಾರ್ಯ ಮಾಡಿದ ತಾಂಡಗಳಲ್ಲಿ ಕೃಷಿಯನ್ನೇ ಪ್ರಧಾನವಾಗಿ ಅವಲಂಬಿಸಿದ್ದಾರೆ. ಇಂದಿಗೂ ಕೆಳಸ್ತರದಲ್ಲಿರುವ ಅನೇಕ ಲಂಬಾಣಿಗಳು ಉದ್ಯೋಗ ಶ್ರೇಣಿಯಲ್ಲಿ ಕೆಳಸ್ತರದಲ್ಲಿರುವ ಉದ್ಯೋಗಗಳನ್ನೇ ಅನುಸರಿಸುತ್ತಿದ್ದಾರೆ. ಸಮಾಜದಲ್ಲಿ ಅತ್ಯಂತ ಹೆಚ್ಚಿನ

ಸಂಖ್ಯೆಯಲ್ಲಿ ಕಂಡುಬರುವ ಕೃಷಿ ಕಾರ್ಮಿಕರಲ್ಲಿ ಬಹುತೇಕ ಮಂದಿ ಲಂಬಾಣಿ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ಇಂದಿಗೂ ನಾನು ಕ್ಷೇತ್ರಕಾರ್ಯ ಮಾಡಿದ ಬಹುಪಾಲು ಲಂಬಾಣಿ ಜನಾಂಗದವರು ಕೂಲಿ, ಕೃಷಿಯನ್ನು ತಮ್ಮ ಆರ್ಥಿಕ ಮೂಲವನ್ನಾಗಿ ಕಂಡುಕೊಂಡಿದ್ದಾರೆಂಬುದನ್ನು ಅಧ್ಯಯನದಿಂದ ತಿಳಿದುಬಂದಿದೆ. ಆದರೆ ಜಾತಿ ಹಾಗೂ ಆರ್ಥಿಕ ಪರಾವಲಂಬನೆ ಒಂದು ರೀತಿಯ ವಿಷವರ್ತುಲವಾಗಿರುವುದರಿಂದ ಲಂಬಾಣಿಗರು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಶ್ರೇಣಿಯಲ್ಲಿ ಮೇಲೆ ಚಲಿಸಲು ಸಾಧ್ಯವಾಗುತ್ತಿಲ್ಲ.

ಆದರೆ ತಾಂಡಗಳಲ್ಲಿ ಸರಕಾರದ ಯಾವುದೇ ಸೌಲಭ್ಯ, ಸವಲತ್ತುಗಳು ನೀಡಿದರು ಅದು ಸಮುದಾಯದ ತನಕ ಬರುವಷ್ಟರಲ್ಲಿ ನಿಸ್ತೇಜಗೊಂಡಿರುತ್ತದೆ. ಇದರಿಂದಾಗಿ ಯೋಜನೆಗಳ ಪೂರ್ಣ ಲಾಭವನ್ನು ಸಮುದಾಯಗಳು ಪಡೆಯಲಾಗುವುದಿಲ್ಲ. ಇದರಿಂದ ಸಮಾಜದಲ್ಲಿ ಅಸಮಾನತೆಯೂ ಸಮುದಾಯದ ಸಮುದಾಯ ನಡುವೆ ಹೆಚ್ಚಾಗಿ ಅಂತರವನ್ನು ಸೃಷ್ಟಿಸುತ್ತಾ ಇದೆ.

ಲಂಬಾಣಿಗರ ಜೀವನ ವಿಧಾನದಲ್ಲಿ ಆರ್ಥಿಕ ಅಂಶವು ಪ್ರಗತಿ ಹೊಂದಿದಂತೆ ತನ್ನ ಬಾಹ್ಯ ರೂಪಗಳನ್ನು ಬದಲಿಸಿದೆ. ಇವರು ಬದಲಾದ ಸಮಾಜದೊಂದಿಗೆ ತಮ್ಮ ಜೀವನವನ್ನು ಅದಕ್ಕೆ ತಕ್ಕ ಹಾಗೆ ಹೊಂದಿಸಿಕೊಂಡು ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿಕೊಂಡಿದ್ದಾರೆ.

ಶತಮಾನಗಳಿಂದ ಕಾಲಚಕ್ರಕ್ಕೆ ಸಿಲುಕಿ ದಿನವು ಈ ಸಮುದಾಯದ ಸ್ವರೂಪ ಬದಲಾಗುತ್ತಲೇ ಇದೆ. ಆದರೆ ಕ್ರಾಂತಿಕಾರಿ ಬದಲಾವಣೆಗಳಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ನಾನು ಕ್ಷೇತ್ರಕಾರ್ಯ ಮಾಡಿದ ತಾಂಡಗಳಲ್ಲಿನ ಜನರು ಸ್ವಪ್ರಯತ್ನಗಳಿಂದ, ಸರಕಾರದ ಕೆಲವು ಸೌಲಭ್ಯಗಳನ್ನು ಬಳಸಿಕೊಂಡು ಬಳ್ಳಾರಿ ಜಿಲ್ಲೆಯ ಕೆಲವು ತಾಂಡಗಳು ತೆರಿಗೆ ತಾಂಡಗಳಾಗಿ ಇತ್ತೀಚಿನ ದಿನಗಳಲ್ಲಿ ರೂಪುಗೊಂಡು, ಕೆಲವೊಂದು ಮೂಲ ಸೌಲಭ್ಯಗಳನ್ನು ಹೊಂದಿ ಸ್ವಲ್ಪಮಟ್ಟಿನ ಆರ್ಥಿ ಸ್ವಾವಲಂಬನೆಯನ್ನು ಸಾಧಿಸುತ್ತಾ ಇವೆ. ಆದರೆ ಬಳ್ಳಾರಿ ಜಿಲ್ಲೆಯ ಕೆಲವು ತಾಂಡಗಳು ಅಭಿವೃದ್ದಿ ಹೊಂದದೇ ಇರುವುದು ತುಂಬಾ ಶೋಚನೀಯ ವಿಷಯವಾಗಿದೆ. ಈ ತಾಂಡಗಳ ಜನರು ಪಟ್ಟಣಗಳ ಜೊತೆ ಅತ್ಯಂತ ಕಡಿಮೆ ಮಟ್ಟದ ಸಂಪರ್ಕವನ್ನು ಹೊಂದಿದ್ದಾರೆ. ಇದಕ್ಕೆ ವಿರುದ್ಧವಾಗಿ ಆರ್ಥಿಕ, ಸಾಂಸ್ಕತಿಕ ಮತ್ತು ಸಾಮಾಜಿಕವಾದ ಸನ್ನಿವೇಶವನ್ನು ಹಗರಿಬೊಮ್ಮನ ಹಳ್ಳಿಯ ರಾಯರಾಳು ತಾಂಡ, ಹಡಗಲಿಯ ಬಸರಳ್ಳ ತಾಂಡವನ್ನು ನಾವು ಗುರುತಿಸಬಹುದು. ಪಟ್ಟಣದ ಜೊತೆ, ಸಂಪರ್ಕ ಹೊಂದಿ ಒಂದಕ್ಕಿಂತ ಹೆಚ್ಚಿನ ಆರ್ಥಿಕ ಚಟುವಟಿಕೆಗಳನ್ನು ಅವಲಂಬಿಸಿರುವ ಕುಟುಂಬಗಳು ಸ್ವಲ್ಪ ಹೆಚ್ಚಿನ ಸಾಮಾಜಿಕ, ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಿವೆ. ಅಲ್ಲದೆ ರಾಯರಾಳು ತಾಂಡ ಮತ್ತು ಬಸರಳಿ ತಾಂಡಗಳಲ್ಲಿ ವಿವಿಧ ಆರ್ಥಿಕ ಚಟುವಟಿಕೆಗಳಿಗೆ ಅವಕಾಸವಿದ್ದು, ಇಲ್ಲಿನ ಲಂಬಾಣಿಗರು ಬಹುಬಗೆಯ ವ್ಯಾಪಾರಗಳಲ್ಲಿ ತೊಡಗಿಕೊಂಡಿದ್ದಾರೆ. ಅಲ್ಲದೆ ತಕ್ಕಮಟ್ಟಿಗೆ ಕೃಷಿಭೂಮಿ ಲಭ್ಯವಾಗಿರುವುದರಿಂದ ಇವರು ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಾರೆ. ಆದರೆ ಬಳ್ಳಾರಿ ತಾಲೂಕಿನ ಜಾನೆ ಕುಂಠಿತಾಂಡ ಮತ್ತು ಕೂಡ್ಲಿಗಿಯ ನಿಂಗನಹಳ್ಳಿ ತಾಂಡಗಳು ಇದಕ್ಕೆ ತದ್ವಿರುದ್ಧ ಸ್ಥಿತಿಯಲ್ಲಿವೆ. ನಿಶ್ಚಿತ ಆರ್ಥಿಕ ಮೂಲ ಮತ್ತು ಹೊರ ಜಗತ್ತಿನ ಮುಕ್ತ ಆರ್ಥಿಕ ಚಟುವಟಿಕೆಗಳ ಬೆಂಬಲವಿಲ್ಲದೆ ಈ ತಾಂಡಗಳು

ಆರ್ಥಿಕವಾಗಿ ಸೊರಗಿ ಹೋಗಿವೆ. ಸರ್ಕಾರಿ ವೃತ್ತಿಗಳಲ್ಲಿ ಹಾಗೂ ಆ ವೃತ್ತಿಗಳಲ್ಲಿ ತೊಡಗಿರುವವರ ಹಿನ್ನಲೆ ಕೂಲಿ ದುಡಿಮೆಯವರಿಂದ ಬೆಂಬಲಯುತವಾಗಿದೆ. ಉತ್ತಮ ಸರಕಾರಿ ವೃತ್ತಿ ಮತ್ತು ಆಧುನಿಕ ವೃತ್ತಿಗಳಲ್ಲಿ ಇರುವವರು ಆದಾಯ, ಜೀವನ ಶೈಲಿಯನ್ನು ಗುರುತಿಸಿ ಕೆಲವು ಲಂಬಾಣಿಗರಲ್ಲಿ ಉನ್ನತ ಶಿಕ್ಷಣದ ಬಗ್ಗೆ ಆಸಕ್ತಿ ಹೆಚ್ಚಾಗಿದೆ. ಇತ್ತೀಚಿನ ಸರಕಾರಿ ನೀತಿಗಳು ಬಂದು ಇವರನ್ನ ಕೆಳ ಸಮುದಾಯವೆಂದು ಗುರುತಿಸಿರುವುದರಿಂದ ಸ್ವಲ್ಪಮಟ್ಟಿಗೆ ಸರಕಾರಿ ಸೌಲಭ್ಯಗಳು, ಸರಕಾರಿ ನೌಕರಿಗಳು, ಶೈಕ್ಷಣಿಕ ಸವಲತ್ತುಗಳು, ಅಭಿವೃದ್ಧಿ ಕಾರ್ಯಕ್ರಮಗಳು ಸೌಲಭ್ಯಗಳು ಇವರಿಗೆ ದೊರಕುತ್ತಿವೆ.

ಇತರ ಮುಂದುವರೆದ ಸಮುದಾಯಗಳ ಜೊತೆ ಅವಶ್ಯಕವಾಗಿ ಸಂಪರ್ಕವನ್ನು ಇಟ್ಟುಕೊಳ್ಳಬೇಕಾಗಿರು ವುದರಿಂದ ಸಾಮಾಜಿಕ ಪ್ರಕ್ರಿಯೆಯ ಹಿಂದೆ ನಿಧಾನವಾಗಿತ್ತು ಆದರೆ ಇಂದು ಇವರ ತೀವ್ರತೆ ಹೆಚ್ಚುತ್ತಿರುವುದನ್ನು ಕಾಣಬಹುದಾಗಿದೆ. ಅನೇಕ ಲಕ್ಷಣಗಳನ್ನು ಸ್ಥಳೀಯ ಪ್ರಬಲ ಜಾಡಿ ಸಮಾಜದಿಂದ ಎರವಲಾಗಿ ಪಡೆದುಕೊಂಡು ಪ್ರಾದೇಶಿಕ ಐಕ್ಯತೆಯನ್ನು ಹೊಂದುತ್ತಿದ್ದಾರೆ. ಇದು ಏಕೆಂದರೆ ಆರ್ಥಿಕ, ಸಾಮಾಜಿಕ, ರಾಜಕೀಯ, ಅಂತರ ಸಂಪರ್ಕ ಮತ್ತು ಅವಲಂಬನೆಯು ಇಂದು ಅವಶ್ಯಕವಾಗಿದೆ.

ಇಂದು ಮುಖ್ಯ ಧಾರೆಗಳಿಗೆ ಸೇರಿರುವ ಸುಶಿಕ್ಷಿತ ಲಂಬಾಣಿ ಕುಟುಂಬಗಲು ಕಣ್ಣಿಗೆ ಕಾಣುವ ಹಾಗೆ ಮುಂದುವರೆದು ಇತರ ಮುಖ್ಯದಾರೆಗೆ ಒಳಪಟ್ಟು ಸಮುದಾಯದ ಜೊತೆ ಬೆರೆತಿದ್ದಾರೆ. ಹಾಗೆಯೇ ಗ್ರಾಮೀಣ ಸಮುದಾಯಗಳ ಒಳಗೆ ಕೂಡ ಸಾಂಪ್ರದಾಯಿಕ, ಸಾಮಾಜಿಕ ನಿಯಂತ್ರಣಗಳ ಮಹತ್ವಕಡಿಮೆಯಾಗುತ್ತಿದೆ. ಅನೇಕ ಬಗೆಯ ಸ್ವಾತಂತ್ರ್ಯದಿಂದ ಜೀವನಾನುಭವ ಮಾರ್ಗಗಳು ಮಾರ್ಪಾಡುತ್ತಿವೆ. ತಾಂಡಗಳಲ್ಲಿ ಮಹಿಳೆಯರು ಆಧುನಿಕ ಮಾದರಿಯ ಉಡುಗೆಗಳನ್ನು ಅಳವಡಿಸಿಕೊಂಡಿದ್ದಾರೆ. ಪಟ್ಟಣ ಮತ್ತು ನಗರ ಸಂಪರ್ಕ ಹೊಂದಿದ್ದರಿಂದ ತಮ್ಮಲ್ಲಿ ದೊರಕುವ ಆರ್ಥಿಕ ಅಂಶಗಳಿಂದ ಬದಲಾವಣೆಯ ಮಹತ್ವಕಾಂಕ್ಷೆಯನ್ನು ಹೊಂದಿದ್ದಾರೆ ಎಂಬುದು ಸ್ಪಷ್ಟವಾಗಿ ನನ್ನ ಸಂಶೋಧನೆಯಿಂದ ತಿಳಿದುಬರುತ್ತದೆ.

ಜೀವನಕ್ಕಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿದ್ದರು ಬಡತನದಲ್ಲಿ ಬಹುಪಾಲು ಜನರು ಇದ್ದಾರೆ. ಸಾಕ್ಷರತೆ ಪ್ರಮಾಣವು ಸಹ ಗಣನೀಯವಾದ ಇಳಿಮುಖವಾಗುತ್ತಿದೆ. ಗಳಿಸುವ ಆದಾಯವು ಕುಟುಂಬದ ನಿರ್ವಹಣೆಗೆ ಸಾಕಾಗದೆ ಶಿಕ್ಷಣ ಪಡೆಯಲು ಸಹ ಆಗುತ್ತಿಲ್ಲ. ಶಿಕ್ಷಣ ಪಡೆದ ಕೆಲವೊಬ್ಬರು ಸರಕಾರಿ ನೌಕರಿಯಲ್ಲಿದ್ದು, ಮುಖ್ಯಧಾರೆಗೆ ಸೇರಿ ತಮ್ಮ ಸ್ಥಾನಮಾನವನ್ನು ಉತ್ತಮಪಡಿಸಿಕೊಂಡಿದ್ದಾರೆ. ಆದರೆ ಉಳಿದಂತೆ ತಾಂಡಗಳಲ್ಲಿ ಲಂಬಾಣಿಗರು ಜಮೀನು ಹೊಂದಿದ್ದರೂ ಬರಗಾಲದಿಂದ ಸಕಾಲಕ್ಕೆ ಮಳೆಯಾಗಿದೆ ಬೆಳೆ ಹಾನಿಯಾಗಿ ಇವರ ಆರ್ಥಿಕ ಸ್ಥಿತಿಯು ಕುಸಿದಿದೆ. ಬಹಳಷ್ಟು ಲಂಬಾಣಿಗರು ಹಿಂದುಳಿದಿದ್ದಾರೆ. ಒಣ ಭೂಮಿಯಿಂದ ಲಾಭವೆನ್ನುವುದು ಹೊಗಲಿ ಒಂದು ಹೊತ್ತಿನ ಗಂಜಿಗೆ ಸಾಕಾಗದ ಪರಿಸ್ಥಿತಿ ಉಂಟಾಗಿದೆ. ಇಂದು ಈ ಪರಿಸ್ಥಿತಿಯಿಂದ ಹೊರಬರುವ ಅನಿವಾರ್ಯದಿಂದ ದುಡಿಯಲು ಕೂಲಿ ದೊರೆಯುವ ಕಡೆ ತಾತ್ಕಾಲಿಕ ವಲಸೆ ಹೋಗಿ ಕಡಿಮೆ ಕೂಲಿ ಪಡೆದು ವಿಧಿ ಇಲ್ಲದೆ ಕೆಲಸ ಮಾಡುತ್ತಿದ್ದಾರೆ. ಸಾಲವೆಂಬುದು

ದುಡಿಮೆಯ ಸಿಂಹಪಾಲನ್ನು ನುಂಗಿ ಹಾಕುತ್ತಿದೆ. ಇನ್ನು ಉಳಿತಾಯವೆನ್ನುವುದು ಇವರಿಂದ ಸಾಧ್ಯವಾಗದೆ ಆರ್ಥಿಕ ಹಿನ್ನಡೆಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ತೀರಾ ಹಿಂದುಳಿಯುತ್ತಿದ್ದಾರೆ.

ಕಾಲ ಬದಲಾದಂತೆ ಇವರ ಹಲವಾರು ಆಚರಣೆಗಳು, ರೂಢಿ ಸಂಪ್ರದಾಯಗಳು ಬದಲಾಗುತ್ತಾ ಹೊಸರೂಪವನ್ನು ಪಡೆದರೆ ಮತ್ತೆ ಕೆಲವು ಮಾಯವಾಗುತ್ತಿದೆ. ಆಧುನಿಕ ಜೀವನ ಕ್ರಮವನ್ನು ಅಳವಡಿಸಿಕೊಂಡು ಶಿಕ್ಷಣ, ಉದ್ಯೋಗ ಪಡೆಯಲು ಹೆಚ್ಚು ಆಸಕ್ತರಾಗಿ ತಮ್ಮ ಸ್ಥಾನವನ್ನು ಉತ್ತಮಪಡಿಸಿಕೊಳ್ಳಬೇಕು, ತಾವು ಕೂಡ ಆಸ್ತಿ, ಅಂತಸ್ತು, ಉದ್ಯೋಗ ಪಡೆಯಬೇಕೆಂಬ ಮನೋಭಾವನೆ ತಾಳುತ್ತಿದ್ದಾರೆ. ಬಹುಪಾಲು ಲಂಬಾಣಿಗರ ಆರ್ಥಿಕ ಮೂಲ ಕೃಷಿ ಮತ್ತು ಕೃಷಿ ಕೂಲಿಯಾಗಿದೆ. ಇತ್ತೀಚೆಗೆ ಸಣ್ಣಪುಟ್ಟ ಅಂಗಡಿ ಇಟ್ಟುಕೊಂಡು ಕೆಲವರು ಜೀವನ ಸಾಗಿಸುತ್ತಾ ಇದ್ದಾರೆ. ಆದರೆ ಭೂರಹಿತರು ೨೫ ತಾಂಡಗಳಲ್ಲಿ ಹೆಚ್ಚಾಗಿದ್ದು, ಇದುವರೆಗೆ ಇವರಿಗೆ ಜಮೀನು ದೊರೆಯದಿರುವುದು, ಸರಕಾರದ ಯೋಜನೆಗಳು ಬಂದರೂ ಕಾರ್ಯರೂಪಕ್ಕೆ ಬರುವುದು ಅಷ್ಟಕಷ್ಟೇ. ಪ್ರಾಥಮಿಕ ಶಾಲೆಯೊಂದೇ ತಾಂಡಗಳಲ್ಲಿ ಇರುವುದರಿಂದ ಪ್ರಾಥಮಿಕ ಶಿಕ್ಷಣವನ್ನು ಹೆಚ್ಚು ಪಡೆಯುತ್ತಾರೆ. ಮುಂದಿನ ಶಿಕ್ಷಣವನ್ನು ಬಹುಪಾಲು ವಿದ್ಯಾರ್ಥಿಗಳು ಶಾಲೆ ದೂರವಿರುವ, ಸಾರಿಗೆ ವ್ಯವಸ್ಥೆ ಸರಿ ಇಲ್ಲದೆ, ಬಸ್ಸಿನ ಸೌಕರ್ಯವಿಲ್ಲದೆ, ಬಡತನ ಆರ್ಥಿಕ ಸಂಕಷ್ಟವಿರುವುದರಿಂದ ಅರ್ಧದಲ್ಲಿಯೇ ಶಾಲೆಬಿಟ್ಟು ಕೂಲಿ ಇಲ್ಲವೆ ಜೀತ ಮಾಡಲು ತೊಡಗಿಕೊಳ್ಳುತ್ತಾರೆ. ಈ ಜಿಲ್ಲೆಯ ಲಂಬಾಣಿಗರು ತಾಂಡಗಳಲ್ಲಿ ಇತ್ತೀಚಿನ ದಿನಗಳಲ್ಲಿ ತಾಂಡಕ್ಕೆ ಒಬ್ಬಿಬ್ಬರು ಮಾತ್ರ ಉನ್ನತ ತಾಂತ್ರಿಕ, ವೈದ್ಯಕೀಯ ಶಿಕ್ಷಣವನ್ನು ಹೊಂದಿರುವವರನ್ನು ಬಿಟ್ಟರೆ ಯಾರು ಸ್ನಾತಕೋತ್ತರ ಪದವೀಧರರು ಕಂಡುಬರಲಿಲ್ಲ. ಹೊಸ ಹೊಸ ಬದಲಾವಣೆಗಳು ಸಮಾಜದಲ್ಲಿ ಆಗುತ್ತಿದ್ದರು. ತಾಂಡಗಳಲ್ಲಿ ಇದುವರೆಗೂ ಸಾರಿಗೆ ಸಂಪರ್ಕ, ಮೂಲ ಸೌಕರ್ಯಗಳು, ತೆರಿಗೆ ರಹಿತ ಗ್ರಾಮಗಳಾಗಿರುವ ಒಂದೇ ಕಾರಣಕ್ಕೆ ದೊರೆಯದೆ ಇರುವುದು ಹೆಚ್ಚು ವಿಷಾಧನೀಯ ಸಂಗತಿಯಾಗಿದೆ.

ಎಲ್ಲಿಯವರೆಗೂ ಈ ಸಮುದಾಯಕ್ಕೆ ಸರಕಾರದ ಯೋಜನೆಗಳು ಸರಿಯಾದ ರೀತಿಯಲ್ಲಿ ತಾಂಡಗಳಿಗೆ ದೊರೆಯುವುದಿಲ್ಲವೋ ಅಲ್ಲಿಯವರೆಗೆ ಮೂಲ ಸೌಲಭ್ಯಗಳಿಂದ ವಂಚಿತವಾಗಿವೆ ಎಂಬ ಕಾರಣ, ಸಮಾಜದಲ್ಲಿ ಕೆಳ ಹಾಗೂ ಅನಭಿವೃದ್ಧಿ ಹೊಂದಿದ ಸಮುದಾಯವೆಂದು ಶೋಷಣೆಗೆ ಗುರಿಯಾಗಿ ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಹಿಂದುಳಿಯುತ್ತಲೇ ಇರುತ್ತದೆ. ಆದ್ದರಿಂದ ಸರಕಾರವಷ್ಟೇ ಇದರ ಬಗ್ಗೆ ಕಾಳಜಿ ವಹಿಸಿದರೆ ಸಾಲದು. ಜೊತೆಗೆ ಸಮುದಾಯದಲ್ಲಿನ ಜನರಿಗೂ ಜವಾಬ್ದಾರಿಗಳಿದ್ದು ತಾಂಡಗಳ ಅಭಿವೃದ್ಧಿಗೆ ಹೆಚ್ಚು ಶ್ರಮಿಸಬೇಕು.

ಕೆಳಸಮುದಾಯಗಳಿಗೆ ಶತಮಾನಗಳಿಂದ ಇಂಡಿಯಾದ ಸಾಮಾಜಿಕ ವ್ಯವಸ್ಥೆಯು ಜೀವನದ ವಿವಿಧ ರಂಗಗಳಲ್ಲಿ ಸಮಾನ ಅವಕಾಶಗಳನ್ನು ನಿರಾಕರಿಸುತ್ತಲೇ ಬಂದಿದೆ. ಸಂವಿಧಾನತ್ಮಕವಾಗಿರುವ ಹಕ್ಕುಗಳಿದ್ದರೂ ಬಹುತೇಕ ಲಂಬಾಣಿಗರ ಪರಿಸ್ಥಿತಿಯಲ್ಲಿ ಯಾವ ಗಮನಾರ್ಹವಾದ ಬದಲಾವಣೆಯಾಗಿಲ್ಲ. ಶತಮಾನಗಳ ಇತಿಹಾಸವನ್ನು ಹೊಂದಿರುವ ಅಸಮಾನತೆಯನ್ನು, ದಶಕಗಳ ಇತಿಹಾಸವನ್ನು ಮಾತ್ರ ಹೊಂದಿರುವ ಸಮನತಾ

ಪ್ರಯತ್ನಗಳಿಂದ ನಿರ್ಮೂಲನೆ ಮಾಡಲು ಸಾಧ್ಯವಿಲ್ಲ. ಅನೇಕ ಶತಮಾನಗಳಿಂದ ತುಳಿತಕ್ಕೆ ಒಳಗಾಗುತ್ತಿದ್ದ ಸಾಮಾಜಿಕ ವ್ಯವಸ್ಥೆಯಿಂದಲೇ ಹೊರಗೆ ಇಡಲ್ಪಟ್ಟು ಒಮ್ಮಿಂದೊಮ್ಮಲೇ ಸಮಾನತೆಯನ್ನು ನೀಡಿದ ಮಾತ್ರಕ್ಕೆ ಎಲ್ಲರಿಗೂ ಈ ಸಮಾನತೆಯ ಪ್ರಯೋಜನವನ್ನು ಪಡೆಯಲು ನಡೆಯುವ ಸ್ಪರ್ಧೆಯಲ್ಲಿ ಭಾಗವಹಿಸುವವರೆಲ್ಲರಿಗೂ ಸಮುದಾಯಗಳಿಗೆ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಹಿನ್ನಲೆಯ ಸೌಲಭ್ಯವಿಲ್ಲದಂತಾಗಿದೆ. ವಾಸ್ತವ್ಯದಲ್ಲಿ ಸಮಾನತೆಗಾಗಿ ಹೋರಾಟ ಅಸಮಾನರ ನಡುವೆ ನಡೆಯುತ್ತಲೇ ಇದೆ. ಇದರಿಂದ ಹೊರತಾಗಿ ಬಂದು ಕೆಳಸಮುದಾಯವಾದ ಲಂಬಾಣಿಗರು ತಮ್ಮ ಸ್ವಪ್ರಯತ್ನದಿಂದ, ತಮ್ಮ ಹಕ್ಕು ಬಾದ್ಯತೆಗಳನ್ನು ತಾವು ಸ್ವಂತ ಅರಿತು ಹೋರಾಡಬೇಕು. ಹೀಗೆ ಹೋರಾಡಲು ಸಂಘಟಿತರಾಗಬೇಕು. ಈ ನಿಟ್ಟಿನಲ್ಲಿ ಶಿಕ್ಷಣ ಒಂದು ಸಾಧನವಾಗಿ ಮಾರ್ಪಡುತ್ತದೆ ಎಂಬುದು ನನ್ನ ಭಾವನೆ.

**೭.೧. ಸಲಹೆ ಸೂಚನೆಗಳು**

೧. ಲಂಬಾಣಿ ತಾಂಡಗಳು ಇನ್ನು ಕಂದಾಯ ತಾಂಡಗಳಾಗಿ ಪರಿವರ್ತನೆಯಾಗಿರುವುದಿಲ್ಲ. ಮುಂದಿನ ದಿನಗಳಲ್ಲಿ ಎಲ್ಲಾ ತಾಂಡಗಳು ಕಂದಾಯ ಗ್ರಾಮಗಳಾಗಿ ಪರಿವರ್ತನೆಯಾಗಬೇಕಾಗಿದೆ.

೨. ಅಲೆಮಾರಿ ಬದುಕು ಸಂಪೂರ್ಣ ನಿಂತಿರುವುದಿಲ್ಲ. ಅದರೂ ಸ್ವಲ್ಪ ಮಟ್ಟಿಗೆ ಸ್ಥಿರ ಜೀವನ ಮಾಡುವವರಾಗಿದ್ದಾರೆ. ವ್ಯಾಪಾರದ ಉದ್ದೇಶದಿಂದ ಹಲವು ಕುಟುಂಬಗಳು ಸುಮಾರು ೬ ತಿಂಗಳು ಒಂದು ವರ್ಷ ತಾಂಡಗಳನ್ನು ತ್ಯಜಿಸಿರುತ್ತಾರೆ. ಇದರಿಂದ ಅವರ ವಾಸದ ಮನೆಗಳು ನಾಶವಾಗುವ ಹಂತದಲ್ಲಿವೆ.

೩. ಕೆಲವು ತಾಂಡಗಳು ಅರಣ್ಯಕ್ಕೆ ಹೊಂದಿಕೊಂಡು ಇಳಿಜಾರಿನಿಂದ ಕೂಡಿರುತ್ತವೆ. ಇದರಿಂದ ವನ್ಯ ಮೃಗಗಳ ಭಯ. ಅವುಗಳಿಂದ ವ್ಯವಸಾಯದಲ್ಲಿ ಅಪಾರ ಹಾನಿಯಾದ ಸನ್ನಿವೇಶಗಳು ಕಂಡುಬರುತ್ತವೆ. ಹಲವು ಬಾರಿ ಪ್ರಾಣಕ್ಕೆ ಹಾನಿ ಆಗಿರುವುದು ಕಂಡುಬರುತ್ತದೆ.

೪. ಇತ್ತೀಚಿನ ದಿನಗಳಲ್ಲಿ ಮಹಿಳೆಯರು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಮಹಿಳೆಯರ ಪಾತ್ರ ಅಷ್ಟೇ ಮುಖ್ಯವಾಗಿದೆ. ಮಹಿಳೆಯರು ಬಂಡವಾಳದ ಮೂಲಕ್ಕೆ ಸಾಕಷ್ಟು ಅಲೆದಾಟದಲ್ಲಿ ತೊಡಗಿ, ಗಳಿಸುವ ಆದಾಯದಲ್ಲಿ ಶೇ.೪೦ರಷ್ಟು ಆದಾಯ ಬಂಡವಾಳ ಮತ್ತು ಬಡ್ಡಿಯ ರೂಪದಲ್ಲಿ ಪರಭಾರೆ ಮಾಡುತ್ತಿದ್ದಾರೆ.

೫. ಜನರ ಆದಾಯ ಮತ್ತು ಉಳಿತಾಯ ಸಾಕಷ್ಟು ಇಲ್ಲದಿರುವುದರಿಂದ ಬಂಡವಾಳ ಕೊರತೆ ಹೆಚ್ಚಲು ಕಾರಣವಾಗಿದೆ.

೬. ಸಾರಿಗೆ ವ್ಯವಸ್ಥೆಯಿಂದಾಗಿ ವಿಭಿನ್ನ ಅಭಿರುಚಿ, ಭಾಷೆ, ಸಂಸ್ಕೃತಿ ಮತ್ತು ಜಾತಿಗಳ ಜನರ ಮಿಲನ ಸಾಧ್ಯವಾಗಿ ಈ ಜನರಲ್ಲಿ ಬದಲಾವಣೆಗಳಾಗುತ್ತಿವೆ. ಈ ವ್ಯವಸ್ಥೆಯಿಂದ ಮೂಢನಂಬಿಕೆ ಸಂಪ್ರದಾಯಗಳು ಮಾಯವಾಗಿ ಸಾಮಾಜಿಕ ಸಮಾನತೆಯ ಕಡೆಗೆ ನಡೆಯುತ್ತಿದ್ದಾರೆ.

೭. ಗುಡಿ ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ತೊಡಗಿಸಿಕೊಂಡ ಮಹಿಳೆಯರಲ್ಲಿ ಅನಕ್ಷರಸ್ಥರು ಹೆಚ್ಚಾಗಿದ್ದಾರೆ. ಅವರುಗಳಲ್ಲಿ ಸ್ವಂತಿಕೆ ಇಲ್ಲದಾಗಿದೆ. ಬೇರೆಯವರ ಮಾತು ಕೇಳಿಕೊಂಡು ತಮ್ಮ ತಮ್ಮಲ್ಲಿಯೇ ಒಳ ಜಗಳಗಳನ್ನು ಮಾಡಿಕೊಳ್ಳುವವರಾಗಿದ್ದಾರೆ.

೮. ತಾಂಡಗಳಲ್ಲಿ ಯಾವುದೇ ಅಂಗಡಿ ಮುಗ್ಗಟ್ಟು ಕಂಡುಬರುವುದಿಲ್ಲ. ಆದರೆ ಸರಾಯಿ ಅಂಗಡಿ ದಿನವೊಂದಕ್ಕೆ ೮೦೦೦ ಸಾವಿರದಿಂದ ೧೦,೦೦೦ ಸಾವಿರದವರೆಗೆ ಲಾಭವನ್ನು ಗಳಿಸುತ್ತಾರೆ.

೯. ನಗರಿಕರಣದಿಂದ ಲಂಬಾಣಿಯವರ ಭೂಮಿಯ ಪಕ್ಕದ ಭೂ ಪ್ರದೇಶವು ಔದ್ಯಮಿಕ ಮಯವಾಗಿ ರೂಪುಗೊಳ್ಳುತ್ತಿದೆ. ಇದರಿಂದ ಲಂಬಾಣಿಗರ ಭೂಮಿಯ ಮೇಲೆ ಅನೇಕರ ಕಣ್ಣು.

೧೦. ಶ್ರೀಮಂತ ಭೂ ಮಾಲೀಕರು ಲಂಬಾಣಿಗರ ಭೂಮಿಯನ್ನು ಒತ್ತುವರಿ ಮಾಡಿಕೊಂಡು ಬೇಲಿ ಹಾಕಿಕೊಂಡು ೩೦ ರಿಂದ ೬೦ ಎಕರೆ ಭೂಮಿಯನ್ನು ಒಬ್ಬೊಬ್ಬ ರೈತರು ತಮ್ಮ ಆಸ್ತಿಯಾಗಿ ಪರಿವರ್ತಿಸಿ ಕೊಂಡಿದ್ದಾರೆ.

೧೧. ಅರಣ್ಯ ಇಲಾಖೆಯವರು ಲಂಬಾಣಿಗರ ಭೂಮಿಯನ್ನು ಒತ್ತುವರಿ ಮಾಡಿಕೊಂಡು, ಅರಣ್ಯಕ್ಕೆ ಸೇರಿಸಿಕೊಂಡು ಕಲ್ಲಿನ ಕಟ್ಟಡ ಮತ್ತು ವಿದ್ಯುತ್ ಬೇಲಿಯನ್ನು ಹಾಕಿಕೊಂಡಿದ್ದಾರೆ.

೧೨. ಲಂಬಾಣಿ ತಾಂಡಗಳಲ್ಲಿ ಆಶ್ರಮ ಶಾಲೆಯನ್ನು ಮತ್ತು ವಿದ್ಯಾರ್ಥಿ ನಿಲಯಗಳನ್ನು ತಾಂಡಗಳಲ್ಲಿ ವ್ಯವಸ್ಥೆ ಮಾಡಬೇಕು. ಆದ್ದರಿಂದ ತಾಂಡದ ಮಕ್ಕಳು ಹೆಚ್ಚು ಹೆಚ್ಚಾಗಿ ವಿದ್ಯಾವಂತರಾಗಿ ಮಾಡಲು ಅನುಕೂಲವಾಗುತ್ತದೆ.

೧೩. ಅಂಗವಾಡಿ ಕೇಂದ್ರಗಳನ್ನು ಮತ್ತಷ್ಟು ತಾಂಡಗಳಲ್ಲಿ ಹೆಚ್ಚಿಸಬೇಕು. ಜೊತೆಗೆ ಬಳ್ಳಾರಿಯ ಆರೋಗ್ಯಕರ ಊಟದ ವ್ಯವಸ್ಥೆಯನ್ನು ಮಾಡಬೇಕು ಅಂತಹ ಕೇಂದ್ರಗಳು ತುಂಬಾ ವಿರಳವಾಗಿದೆ. ಆದುದರಿಂದ ಇತ್ತ ಕಡೆ ಸರ್ಕಾರ ಗಮನಹರಿಸಬೇಕು.

೧೪. ತಾಂಡಗಳ ಮನೆಗಳಲ್ಲಿಯ ವಿದ್ಯುತ್ ಸಂಪರ್ಕವನ್ನು ಒದಗಿಸಿಲ್ಲವಾದರೂ ತಾಂಡಗಳ್ಲಿ ರೇಡಿಯೋ, ಟಿ.ವಿ.ಗಳು ಕಂಡುಬರುತ್ತದೆ. ಇಂತಹ ಮನೆಗಳಲ್ಲಿ ಬ್ಯಾಟರಿ ಚಾಲಿತ ವಿದ್ಯುತ್ ಸಂಪರ್ಕ ಹೊಂದಿರುವುದು ಕಂಡುಬರುತ್ತದೆ.

೧೫. ಈವರೆಗೂ ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಲಂಬಾಣಿ ಜನರು ಅನೇಕ ಮಹಾ ಅಧಿವೇಶನಗಳನ್ನು, ಸಮ್ಮೇಳನಗಳನ್ನು ಸಂಘಟಿಸಿ, ತಮ್ಮ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಮಟ್ಟವನ್ನು ಎತ್ತರಿಸುವಲ್ಲಿ ಸಾಕಷ್ಟು ಪ್ರಯತ್ನಿಸಿದ್ದಾರೆ. ಆದರೂ ಕೆಲವು ಸಮಸ್ಯೆಗಳು ಇನ್ನು ಪರಿಹಾರ ಕಾಣದೆ ಹಾಗೆಯೇ ಉಳಿದಿವೆ. ಈ ಸಮಸ್ಯೆಗಳನ್ನು ಲೋಕ ತಾಂತ್ರಿಕ ವಿಧಾನಗಳಿಂದ ಬಗೆ ಹರಿಸುವಂತಾಗಬೇಕು.

೧೬. ಪ್ರಜಾ ತಂತ್ರ ಭಾರತದ ೬೩ ವರ್ಷಗಳು ಗತಿಸಿದರೂ ಬಳ್ಳಾರಿ ಜಿಲ್ಲೆಯ ಲಂಬಾಣಿಗರು ಇನ್ನು ಗುಡ್ಡ ಗಾಡು ಪ್ರದೇಶಗಳಲ್ಲಿಯೇ ನೆಲೆಸಿದ್ದಾರೆ. ಅವರಿನ್ನೂ ಗುಡಿಸಲು ವಾಸಿಗಳಾಗಿಯೇ ಹರಕು-ಮುರುಕಾದ ಜೋಪಡಿಗಳಲ್ಲಿ ವಾಸಿಸುತ್ತಿದ್ದಾರೆ. ಸದಾ ಮೈ ಮುರಿದು ದುಡಿಯುತ್ತಿದ್ದರೂ ಎಷ್ಟೋ ಜನ ಅರೆಹೊಟ್ಟೆಯ ಭಿಕಾರಿಗಳಾಗಿದ್ದಾರೆ. ಹರಕು ಬಟ್ಟೆಗಳಲ್ಲಿಯೇ ಕಾಣಿಸುತ್ತಾರೆ.

೧೭. ಸಾಮಾನ್ಯವಾಗಿ ಊರುಗಳಿಂದ, ನಾಗರಿಕತೆಯಿಂದ ದೂರದಲ್ಲಿ ತಮ್ಮದೇ ಆದ ತಾಂಡಗಳನ್ನು ನಿರ್ಮಿಸಿಕೊಂಡು ಪರಂಪರಾಗತ ಅಂಧ ವಿಶ್ವಾಸ ಮತ್ತು ರೂಢಿಗಳ ಸಂಸ್ಕಾರಗಳಲ್ಲಿ ಬಂಧಿತರಾಗಿರುವ ಇವರ ತಾಂಡಗಳಲ್ಲಿ ಮೂಲಭುತ ಸೌಕರ್ಯಗಳಾದ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ವಿದ್ಯುತ್ ದ್ವೀಪ, ಮಕ್ಕಳ ಶಿಕ್ಷಣಕ್ಕಾಗಿ ಶಾಲೆ ಮತ್ತು ಸಂಪರ್ಕ ಸಾಧನಗಳ ಅಭಾವ ಎದ್ದು ಕಾಣುತ್ತದೆ.

೧೮. ಲಂಬಾಣಿಗರ ಜನಸಂಖ್ಯೆಯು ನಿಖರವಾಗಿ ತಿಳಿದುಬರುವುದಿಲ್ಲ. ಜನಗಣತಿ ಮಾಡುವಾಗ ಲಂಬಾಣಿ ತಾಂಡಗಳನ್ನು ಪ್ರತ್ಯೇಕವಾಗಿ ಗ್ರಾಮಗಳೆಂದು ಪರಿಗಣಿಸಬೇಕು. ಅವರ ತಾಂಡಗಳು ಸ್ವತಂತ್ರ ಊರುಗಳೆಂದು ಕರೆಯಿಸಿಕೊಳ್ಳುವ ಎಲ್ಲಾ ಅರ್ಹತೆಗಳನ್ನು ಪಡೆದಿರುವುದರಿಂದ ಅವುಗಳನ್ನು ಪ್ರತ್ಯೇಕವಾದ ಹೆಸರಿನಿಂದ ಕರೆಯಬೇಕು. ಅವರ ತಾಂಡಗಳು ಕಂದಾಯ ತಾಂಡಗಳಾದಲ್ ಅವರಿಗೆ ನಾಗರಿಕ ಸೌಲಭ್ಯ ದೊರೆಯುತ್ತದೆ.

೧೯. ಲಂಬಾಣಿಗರು ಎಲ್ಲಾ ಕ್ಷೇತ್ರದಲ್ಲಿಯೂ ಸಾಕಷ್ಟು ಅರ್ಹರಾಗಿದ್ದರೂ ರಾಜ್ಯ ಮಟ್ಟದ ಯಾವುದೇ ಸರಕಾರಿ, ಅರೆ ಸರಕಾರಿ ಮಂಡಳಿಗಳಲ್ಲಿ ಹಾಗೂ ಅಕಾಡೆಮಿಗಳಲ್ಲಿ ಈವರೆಗೂ ಅವರಿಗೆ ಪ್ರಾತಿನಿಧ್ಯ ದೊರೆತಿಲ್ಲ. ರಾಜಕೀಯ ಕ್ಷೇತ್ರದಲ್ಲಂತೂ ಜನಸಂಖ್ಯಾ ಪ್ರಮಾಣದಲ್ಲಿ ದೊರೆಯಬೇಕಾದ ಸ್ಥಾನಮಾನಗಳೂ ದೊರೆತಿಲ್ಲ.

೨೦. ಪರಂಪರೆಯಿಂದ ಉಳಿಸಿಕೊಂಡು ಬಂದಿರುವ ಲಂಬಾಣಿ ಜನಪದ ಕಲೆಗಳನ್ನು ಬದುಕಿಸಿ ಕೊಳ್ಳುವುದು ಇಂದು ಅತ್ಯವಶ್ಯವಾಗಿದೆ. ಏಕೆಂದರೆ ನಾಗರಿಕತೆಯ ಬಿರುಗಾಳಿಗೆ ಸಿಕ್ಕು ಇಂದು ಅವರು ತಮ್ಮ ಕಲೆ-ಸಂಸ್ಕೃತಿ ಇತ್ಯಾದಿಗಳಿಂದ ದೂರವಾಗುತ್ತಿದ್ದಾರೆ. ಜನಪದರ ಕಣಜವೇ ಈ ಜನರ ಆಚಾರ-ವಿಚಾರಗಳಲ್ಲಿ ಹುದುಗಿದೆ. ಇದನ್ನು ಹೆಕ್ಕಿ ತೆಗೆಯುವ ಕೆಲಸವಾಗಬೇಕು.

೨೧. ಲಂಬಾಣಿಗರು ಶ್ರಮ ಜೀವಿಗಳು. ಕಾಡುಗಳಲ್ಲಿ ಕಟ್ಟಿಗೆ ಕಡಿದು ಹೊತ್ತು ಮಾರುವುದು, ಹೊಲ ಗದ್ದೆಗಳಲ್ಲಿ ಕೃಷಿ ಆಳಾಗಿ ದುಡಿಯುವುದು, ರಸ್ತೆ ಪಕ್ಕದಲ್ಲಿ ಕಲ್ಲು ಒಡೆಯುವುದು, ಕಾಡಿನಲ್ಲಿ ಸಿಕ್ಕುವ ವಿವಿಧ ಬಗೆಯ ಹಣ್ಣು-ಹಂಪಲುಗಳನ್ನು ಪೇಟೆಗೆ ತಂದು ಮಾರುವುದು ಅವರ ಉಪಜೀವನದ ಮಾರ್ಗಗಳಾಗಿವೆ. ಸ್ವಂತ ಬೇಸಾಯ ಮಾಡುವವರು ತುಂಬಾ ವಿರಳ. ಕಷ್ಟ ಜೀವಿಗಳಾದ ಲಂಬಾಣಿಗರಿಗೆ ಯಾವ ಕೆಲಸವನ್ನು ಕೊಟ್ಟರೂ ಅದನ್ನು ಪ್ರಮಾಣಿಕವಾಗಿ ಪೂರೈಸಿಕೊಡುತ್ತಾರೆ. ಸರ್ಕಾರ ಈ ದೆಸೆಯಲ್ಲಿ ಅವರಿಗೆ ಉದ್ಯೋಗ ಅವಕಾಶಗಳನ್ನು ದೊರಕಿಸಿಕೊಡುವಂತಾಗಬೇಕು. ಒಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯ

ಲಂಬಾಣಿಗರು ನಾಗರಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಕಾರಣ ಈ ಜನಾಂಗಕ್ಕೆ ನಾಗರಿಕ ಸೌಲಭ್ಯಗಲನ್ನು ದೊರಕಿಸಿಕೊಟ್ಟು, ಪರಂಪರೆಯಿಂದ ಬಂದ ಅವರ ಕಲೆ, ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಅವಕಾಶ ಮಾಡಿಕೊಡುವುದು ಅಗತ್ಯವಾಗಿದೆ.

೨೨. ಲಂಬಾಣಿ ಮಹಿಳೆಯರಿಗೆ ಕಸೂತಿ ಕೆಲಸಗಳಲ್ಲಿ ತೊಡಗಿಸಿ ಸ್ವ-ಉದ್ಯೋಗಕ್ಕೆ ಪ್ರೋತ್ಸಾಹಿಸಬೇಕು.

೨೩. ಭೂ ರಹಿತ ಲಂಬಾಣಿ ಜನಾಂಗ ಉಳುಮೆ ಮಾಡುತ್ತಿರುವ ಅರಣ್ಯ ಮತ್ತು ಬಗರ್ ಹುಕಂ ಜಮೀನುಗಳನ್ನು ಸಕ್ರಮಗೊಳಿಸಬೇಕು.

೨೪. ಲಂಬಾಣಿ ಜನಾಂಗದ ಮೇಲೆ ನಡೆಯುತ್ತಿರುವ ದೌರ್ಜನ್ಯ ದಬ್ಬಾಳಿಕೆಯನ್ನು ತಡೆಗಟ್ಟಬೇಕು.

೨೫. ಈಗ ನೇಮಿಸುತ್ತಿರುವ ನಿಗಮ, ಮಂಡಳಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಜನಸಂಖ್ಯೆಯ ಆಧಾರದ ಮೇಲೆ ಲಂಬಾಣಿಗರಿಗೂ ಸೂಕ್ತ ಸ್ಥಾನಮಾನ ನೀಡಬೇಕು.

**ಪರಿಹಾರ**

ಬಳ್ಳಾರಿ ಜಿಲ್ಲೆಯಲ್ಲಿರುವ ಲಂಬಾಣಿ ತಾಂಡಗಳ ಜನಾಂಗವು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ತಾಂತ್ರಿಕ ಹಾಗೂ ಸಂಘಟನಾತ್ಮಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಸಮಸ್ಯೆಗಳ ಪರಿಹಾರಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೈಗಾರಿಕಾ ನೀತಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ. ಗುಡಿಕೈಗಾರಿಕೆಗಳ ಸಮಸ್ಯೆಗಳ ಪರಿಹಾರಕ್ಕಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ.

**ಸಂಘಟನಾ ಸಹಾಯ :** ಸಣ್ಣ ಗುಡಿಕೈಗಾರಿಕೆಗಳನ್ನು ನಿರ್ವಹಿಸುವಲ್ಲಿ ಸಂಘಟನಾ ಕೊರತೆ ಇದೆ. ಈ ಸಂಘಟನಾ ವ್ಯವಸ್ಥೆಯನ್ನು ಸುಧಾರಿಸಲು ಸರ್ಕಾರ ಅನೇಕ ಕ್ರಮಗಳನ್ನು ಕೈಗೊಂಡಿದೆ. ಮುಖ್ಯವಾಗಿ ಅನೇಕ ಸಂಘ-ಸಂಸ್ಥೆಗಳನ್ನು ಅದು ಸ್ಥಾಪಿಸಿದೆ. ತಾಂತ್ರಿಕ ಮತ್ತು ಮಾರಾಟದ ವಿಷಯದಲ್ಲಿ ಸಲಹೆ ನೀಡಲು 'ಕೇಂದ್ರೀಯ ಸಣ್ಣ ಕೈಗಾರಿಕೆಗಳ ಸಂಘ', ಕೈಗಾರಿಕೆ ಎಸ್ಟೇಟುಗಳನ್ನು ಸಂಘಟಿಸಲು ಮತ್ತು ಕಚ್ಚಾ ಸಾಮಗ್ರಿಗಳು ಹಾಗೂ ಬಿಡಿ ಭಾಗಗಳನ್ನು ಪೂರೈಸಲು ರಾಷ್ಟ್ರೀಯ ಸಣ್ಣ ಕೈಗಾರಿಕೆಗಳ ನಿಗಮವನ್ನು ಸ್ಥಾಪಿಸಿದೆ. ಇದಲ್ಲದೆ ವಿವಿಧ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ರಾಷ್ಟ್ರಮಟ್ಟದ ಮಂಡಳಿಗಳನ್ನು ಸ್ಥಾಪಿಸಿದೆ. ಅವುಗಳಲ್ಲಿ ಮುಖ್ಯವಾದವುಗಳು ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಗೃಹ ಕೈಗಾರಿಕಾ ಮಂಡಳಿ, ಅಖಿಲ ಭಾರತ ಕುಶಲ ಕೈಗಾರಿಕಾ ಮಂಡಳಿ, ಮುಂತಾದವುಗಳು ಗುಡಿಕೈಗಾರಿಗಳ ಅಭಿವೃದ್ಧಿಗೆ ಶ್ರಮಿಸುತ್ತಿವೆ.

**ತಾಂತ್ರಿಕ ಸಹಾಯ :** ಲಂಬಾಣಿಗಳ ಕಸುಬುಗಳು ವಂಶಪಾರಂಪರ್ಯವಾಗಿ ಯಂತ್ರ, ಸಾಧನ ಸಲಕರಣೆಗಳನ್ನು ಬಳಸಿಕೊಂಡು ಬರುತ್ತಿವೆ. ಇದರಿಂದಾಗಿ ಅವು ತಯಾರಿಸುವ ವಸ್ತುಗಳ ಗುಣಮಟ್ಟ ಮತ್ತು ಗಾತ್ರಗಳು ಉತ್ತಮವಾಗಿಲ್ಲ. ಆದ್ದರಿಂದ ಸರಕಾರಗಳು ಇವುಗಳಿಗೆ ತಾಂತ್ರಿಕ ಸಹಾಯ ನೀಡುವ ಕ್ರಮ ಕೈಗೊಂಡಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹೊಸ ಉತ್ಪಾದನಾ ಕ್ಷೇತ್ರದ ಶೋಧನೆ, ಉತ್ಪಾದನಾ ತಂತ್ರದ

ಸಂಶೋಧನೆ, ಸಲಕರಣೆಗಳ ಪೂರೈಕೆ, ಸ್ಥಾವರ ಮತ್ತು ಯಂತ್ರೋಪಕರಣಗಳ ಸ್ಥಾಪನೆಗೆ ನೆರವು ಇತ್ಯಾದಿ. ಈ ಕಸುಬುಗಳಿಗೆ ತಾಂತ್ರಿಕ ನೆರವನ್ನು ನೀಡು ಸರ್ಕಾರ 'ಕೇಂದ್ರೀಯ ಸಣ್ಣ ಕೈಗಾರಿಕಾ ಸಂಸ್ಥೆಯನ್ನು ಸ್ಥಾಪಿಸಿದ್ದು ಇದು ೧೬ ಸಣ್ಣ ಕೈಗಾರಿಕಾ ಕೇಂದ್ರಗಳು ಮತ್ತು ೬೫ ವಿಸ್ತರಣಾ ಕೇಂದ್ರಗಳನ್ನು ಹೊಂದಿದೆ. ಇವುಗಳು ತಾಂತ್ರಿಕ ಸಹಾಯ, ಉದ್ಯಮ ಸ್ಥಾಪನೆ, ಮಾದರಿ ಯೋಜನೆ ತಯಾರಿ, ವಸ್ತುಗಳ ಮಾರಾಟಕ್ಕೆ ಪ್ರಚಾರ ಮುಂತಾದ ವಿಷಯಗಳಲ್ಲಿ ನೆರವು ಮತ್ತು ಸಲಹೆ ನೀಡುತ್ತದೆ. ಗುಡಿಕೈಗಾರಿಕೆಗಳಿಗೆ ಅಗತ್ಯವಿರುವ ಯಂತ್ರೋಪಕರಣಗಳನ್ನು ದೇಶಿಯವಾಗಿ ತಯಾರಿಸಲು ಎರಡು ಮಾದರಿ ಉತ್ಪಾದನಾ ಕೇಂದ್ರಗಳನ್ನು ಸ್ಥಾಪಿಸಿದೆ.

ಪ್ರತಿಯಂದು ರಾಜ್ಯದಲ್ಲೂ ಇಂತಹ ಕೇಂದ್ರ ಸ್ಥಾಪನೆಗೊಳ್ಳಬೇಕೆಂದು ಸರ್ಕಾರ ಸೂಚಿಸಿದೆ. ಯಂತ್ರಗಳು ಮತ್ತು ಸರಕುಗಳ ಮಾದರಿಯನ್ನು ಭಾರತೀಯ ಪರಿಸ್ಥಿತಿಗೆ ಹೊಂದುವಂತೆ ತಯಾರಿಸಲು 'ಸೆಂಟ್ರಲ್ ಇನ್ಸ್ ಟಿಟ್ಯೂಟ್ ಫಾರ್ ಇಂಡಿಸ್ಟ್ರಿಯಲ್ ಡಿಸೈನ್ ' ಎಂಬ ಸಂಸ್ತೆಯನ್ನು ಸ್ಥಾಪಿಸಿದೆ. ಗುಡಿಕೈಗಾರಿಕೆಗಳಲ್ಲಿ ಸಂಶೋಧನೆಗೆ ನೆರವಾಗಲು ಸಣ್ಣ ಕೈಗಾರಿಕೆಗಳ ಸಂಶೋಧನಾಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿದೆ. ಈ ಮಂಡಳಿಗಳಿಗೆ ನೆರವನ್ನು ವಿವಿಧ ಲಂಬಾಣಿಗರು ಪಡೆದುಕೊಂಡು ತಮ್ಮ ಉದ್ಯೋಗಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು.

**ಹಣಕಾಸಿನ ಸಹಾಯ :** ಮೂಲಭೂತವಾಗಿ ಸಣ್ಣ ಮತ್ತು ಗುಡಿ ಕೈಗಾರಿಕೆಗಳು ಹಣಕಾಸಿನ ಕೊರತೆಯಿಂದಾಗಿ ಮೂಲೆ ಗುಂಪಾಗಿವೆ. ಹಣಕಾಸಿನ ಕೊರತೆಯನ್ನು ನಿವಾರಿಸಲು ಸರ್ಕಾರ ಅವುಗಳನ್ನು ಆದ್ಯತಾ ವಲಯ ಎಂದು ಪರಿಗಣಿಸಿದೆ. ರಾಜ್ಯ ಹಣಕಾಸಿನ ಸಂಸ್ಥೆಗಳು ಅಲ್ಪಾವಧಿ, ಮಾಧ್ಯಮಾವಧಿ ಹಾಗು ದೀರ್ಘವಧಿ ಸಾಲವನ್ನು ನೀಡುತ್ತಿವೆ. ಸಣ್ಣ ಮತ್ತು ಗುಡಿ ಕೈಗಾರಿಕೆಗಳಿಗೆ ಹಣಕಾಸು ಪೂರೈಸಲು 'ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಧಿ, ರಾಷ್ಟ್ರೀಯ ಈಕ್ವಿಟಿ ನಿಧಿ, ಏಕ ಕಿಂಡಿ ಸೌಲಭ್ಯ, ಭಾರತದ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಿದೆ. ಇವಲ್ಲದೆ ವಾಣಿಜ್ಯ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಸಂಘಗಳು, ಭಾರತೀಯ ಸ್ಟೇಟ್ ಬ್ಯಾಂಕುಗಳು ಸಹ ಈ ಘಟಕಗಳಿಗೆ ಹಣಕಾಸಿನ ನೆರವನ್ನು ನೀಡುತ್ತವೆ. ಆದ್ದರಿಂದ ಲಂಬಾಣಿಗರು ಈ ಹಣಕಾಸಿನ ಸಂಸ್ಥೆಗಳು ನೀಡುವ ಧನಸಹಾಯ ಪಡೆದು ತಮ್ಮ ವೃತ್ತಿಗಳನ್ನು ಅಭಿವೃದ್ಧಿಪಡಿಸಿಕೊಳ್ಳಬಹುದು.

**ಕಚ್ಚಾ ಸರಕುಗಳ ಪೂರೈಕೆ :** ಸಾಮಾನ್ಯವಾಗಿ ಎಲ್ಲಾ ಲಂಬಾಣಿಗರು ಎದುರಿಸುವ ಮೂಲ ಸಮಸ್ಯೆ ಕಚ್ಚಾ ವಸ್ತುಗಳ ಪೂರೈಕೆಯಲ್ಲಿನ ಕೊರತೆ ಈ ಸಮಸ್ಯೆಯನ್ನು ನಿವಾರಿಸಲು ಪ್ರಮುಖ ಕಚ್ಚಾ ಸಾಮಾಗ್ರಿಗಳನ್ನು ರಾಜ್ಯ ಸಣ್ಣ ಕೈಗಾರಿಕಾ ನಿಗಮಗಳ ಮೂಲಕ ವಿತರಿಸಲು ಕ್ರಮ ಕೈಗೊಂಡಿದೆ. ಸರ್ಕಾರ ಕಚ್ಚಾ ವಸ್ತುಗಳ ಪೂರೈಕೆಯಲ್ಲಿ ತೊಂದರೆಯಾಗದಂತೆ ನೋಡಿಕೊಳ್ಳಲು ಕಚ್ಚಾ ಸರಕುಗಳ ಕಾಪು ದಾಸ್ತಾನು ಸೌಲಭ್ಯವನ್ನು ಜಾರಿಗೆ ತಂದಿದೆ. ಸರ್ಕಾರಿ ವ್ಯಾಪಾರಿ ನಿಗಮವು ಕೆಲವು ಕಚ್ಚಾ ಸರಕುಗಳನ್ನು ಆಮದು ಮಾಡಿಕೊಂಡು

ವಿತರಿಸಲು ವ್ಯವಸ್ಥೆ ಮಾಡಿದೆ. ಲಂಬಾಣಿಗರು ಸರ್ಕಾರದ ಸೌಲಭ್ಯಗಳನ್ನು ಬಳಸಿಕೊಂಡು ಕಚ್ಚಾ ವಸ್ತುಗಳ ಕೊರತೆಯನ್ನು ನಿವಾರಿಸಿಕೊಳ್ಳಬಹುದು.

**ಮಾರುಕಟ್ಟೆಯ ಸಹಾಯ :** ಲಂಬಾಣಿಗಳು ತಯಾರಿಸುವ ಸರಕುಗಳನ್ನು ಮಾರಾಟ ಮಾಡುವುದು ಬಹುದೊಡ್ಡ ಸಮಸ್ಯೆ. ಇವರಿಗೆ ಬೃಹತ್ ಕೈಗಾರಿಕಾ ವಸ್ತುಗಳ ಪೈಪೋಟಿ ಇದೆ. ಈ ಸಮಸ್ಯೆಯನ್ನು ನಿವಾರಿಸಲು ಸರ್ಕಾರ ಅನೇಕ ಕ್ರಮಗಳನ್ನು ಕೈಗೊಂಡಿದೆ. ಲಂಬಾಣಿಗರು ಕೆಲವು ನಿರ್ದಿಷ್ಟ ಸರಕುಗಳನ್ನು ಸರ್ಕಾರವೇ ಕೊಳ್ಳುವುದು. ಪೈಪೋಟಿ ಸಾಮರ್ಥ್ಯ ಹೆಚ್ಚಿಸುವ ಸಲುವಾಗಿ ಗುಣಮಟ್ಟ ಮಾರಾಟಕ್ಕಾಗಿ ಸಹಕಾರಿ ಸಂಘಗಳ ಸ್ಥಾಪನೆ ಮುಂತಾದವು. ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮ ಮಾರುಕಟ್ಟೆ ಸೌಲಭ್ಯ ಒದಿಗಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ. ಸಣ್ಣ ಗುಡಿ ಕೈಗಾರಿಕೆಗಳ ಸರಕುಗಳ ಪ್ರಚಾರ ಮತ್ತು ಅವುಗಳ ಪ್ರದರ್ಶನ ಕಾರ್ಯಕ್ರಮಗಳನ್ನು ಸರ್ಕಾರ ತಾಲೂಕು, ಜಿಲ್ಲೆ, ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಏರ್ಪಡಿಸುತ್ತಿದೆ. ಅಲ್ಲದೆ ಸರಕುಗಳು ಮಾರಾಟಕ್ಕಾಗಿ ಸಗಟು ಮಾರಾಟ ಕೇಂದ್ರಗಳನ್ನು ಸ್ಥಾಪಿಸಿದೆ. ಜೊತೆಗೆ ಈ ಸರಕುಗಳನ್ನು ಧನಸಹಾಯದೊಂದಿಗೆ ಮಾರಾಟ ಮಾಡುವ ವ್ಯವಸ್ಥೆ ಮಾಡಿದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಣ್ಣ ಮತ್ತು ಗುಡಿ ಕೈಗಾರಿಕೆಗಳ ಸ್ಥಾಪನೆ ಮತ್ತು ಅಭಿವೃದ್ಧಿಯನ್ನು ಪ್ರೋತ್ಸಾಹಿಸಲು ಅನೇಕ ಉತ್ತೇಜನಗಳನ್ನು ನೀಡುತ್ತಿದೆ. ಅವುಗಳ್ಲಲಿ ಬಂಡವಾಳ ಸಹಾಯಧನ, ಸುಂಕದ ವಿನಾಯಿತಿ, ಕುಶಲಕರ್ಮಿಗಳ ನೈಪುಣ್ಯತೆ ಹೆಚ್ಚಿಸಲು ಹಾಗೂ ತಾಂಡಗಳಲ್ಲಿ ಗುಡಿಕೈಗಾರಿಕೆಗಳ ಅಭಿವೃದ್ಧಿಗೆ ಉತ್ತೇಜನ ನೀಡಲು ಗ್ರಾಮೀಣ ಕೈಗಾರಿಕಾ ಯೋಜನೆ, ಗ್ರಾಮೀಣ ಕುಶಲಕರ್ಮಿ ಯೋಜನೆ ಜಾರಿಗೆ ತಂದಿದೆ. ಇವುಗಳ ಅಭಿವೃದ್ಧಿಗಾಗಿ ರಾಷ್ಟ್ರದಾದ್ಯಂತ ಕೈಗಾರಿಕಾ ಎಸ್ಟೇಟ್ ಗಳು ಹಾಗೂ ಜಿಲ್ಲಾ ಕೈಗಾರಿಕಾ ಕೇಂದ್ರಗಳನ್ನು ಸರ್ಕಾರ ಸ್ಥಾಪಿಸಿದೆ. ನಿರಂತರವಾಗಿ ಇಂಧನ ಮತ್ತು ವಿದ್ಯುತ್ ಪೂರೈಸುವ ಯೋಜನೆಗಳನ್ನು ಜಾರಿಗೆ ತಂದಿದೆ. ಇವುಗಳ ಸಹಾಯ, ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಲಂಬಾಣಿಗರು ತಮ್ಮ ವೃತ್ತಿಗಳನ್ನು ಅಭಿವೃದ್ಧಿಪಡಿಸಿಕೊಳ್ಳಬಹುದು.

ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿರುವ ವಿವಿಧ ವೃತ್ತಿದಾರರ ಅಭಿವೃದ್ಧಿಗೆ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿದೆ. ಗ್ರಾಮೀಣ ವೃತ್ತಿದಾರರಲ್ಲಿ ಉದ್ಯಮಶೀಲತೆಯನ್ನು ಗುರುತಿಸಿ, ಅವಶ್ಯಕ ಮಾಹಿತಿ ಪೂರೈಸಿ, ತರಬೇತಿ ನೀಡಿ, ನಂತರ ಸಹಾಯ ಮಾಡಿ ಹೆಚ್ಚು ಹೆಚ್ಚು ಉದ್ಯೋಗಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಸೃಷ್ಟಿಸುವುದು ಸರ್ಕಾರದ ಆದ್ಯ ಕರ್ತವ್ಯವಾಗಿದೆ.

ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ವೃತ್ತಿದಾರರು ಸ್ವಾವಲಂಬಿಗಳಾಗಲು ಸರ್ಕಾರ ಪ್ರತಿ ಜಿಲ್ಲೆಗೊಂದರಂತೆ ಜಿಲ್ಲಾ ಕೈಗಾರಿಕಾ ಕೇಂದ್ರಗಳನ್ನು ಸ್ಥಾಪಿಸಿದೆ. ಇವುಗಳು ಚಿಕ್ಕ ಗುಡಿಕೈಗಾರಿಕೆಗಳು ಹಾಗೂ ವಂಶ ಪಾರಂಪರ್ಯವಾಗಿ ಬೆಳೆದು ಬಂದ ವೃತ್ತಿಗಳ ಅಭಿವೃದ್ಧಿಗೆ ಅವಶ್ಯವಿರುವ ಎಲ್ಲಾ ಸೇವೆಗಳನ್ನು ನೀಡುತ್ತಿವೆ. ವಿವಿಧ ವೃತ್ತಿದಾರರು ಈ ಸಂಸ್ಥೆಗಳಲ್ಲಿ ಹೆಸರನ್ನು ನೊಂದಾಯಿಸಿಕೊಳ್ಳಬೇಕು. ನಂತರ ಈ

ಸಂಸ್ಥೆ ಅವರಿಗೆ ಬೇಕಾದ ಉದ್ದಿಮೆಯ ಜಾಗ, ವಿದ್ಯುತ್, ಹಣಕಾಸು, ತೆರಿಗೆ ರಿಯಾಯಿತಿ, ಕಚ್ಚಾ ಸಾಮಗ್ರಿ ಪೂರೈಕೆ ಮತ್ತು ಸರ್ಕಾರಿ ಸಂಸ್ಥೆಗಳ ಮೂಲಕ ಉತ್ಪಾದಿತ ಸರಕುಗಳನ್ನು ಮಾರುವ ಸೌಲಭ್ಯವನ್ನು ಒದಗಿಸುತ್ತಿದೆ. ಈ ಸಂಸ್ಥೆಗಳೂ ವೃತ್ತಿದಾರರ ಅಭಿವೃದ್ಧಿಗಾಗಿ ವಿವಿಧ ಕಾರ್ಯಕ್ರಮ ಹಾಗೂ ವಿಚಾರ ಸಂಕಿರಣವನ್ನು ಏರ್ಪಡಿಸುತ್ತದೆ.

ರಾಜ್ಯದ ಲಂಬಾಣಿ ಅಂದರೆ ತಾಂಡದ ಅಭಿವೃದ್ಧಿ ನಿಗಮವು ಲಂಬಾಣಿಗರಿಗೆ ಬೇಕಾಗುವ ಕೃಷಿ ಅಭಿವೃದ್ಧಿಗಾಗಿ, ಧಾರ್ಮಿಕವಾಗಿ, ತಾಂಡದ ಅಭಿವೃದ್ಧಿಗಾಗಿ, ತಾಂಡದ ಮೂಲ ಸೌಕರ್ಯಕ್ಕಾಗಿ ತಾಂಡ ಅಭಿವೃದ್ಧಿ ನಿಗಮ ವತಿಯಿಂದ ಹಣಕಾಸಿನ ನೆರವು ರಾಜ್ಯ ಸರ್ಕಾರದಿಂದ ಹಣಕಾಸಿನ ನೆರವು ನೀಡುತ್ತದೆ.

ತಾಂತ್ರಿಕ ಸಲಹಾ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿರುವ ವಿವಿಧ ವೃತ್ತಿದಾರರಿಗೆ ತಾಂತ್ರಿಕ ಮತ್ತು ನಿರ್ವಹಣಾ ವಿಷಯಗಳ ಕುರಿತು ಸಲಹೆ ಸೂಚನೆಗಳನ್ನು ನೀಡುವುದು. ಗ್ರಾಮೀಣ ಜನರಲ್ಲಿ ಉದ್ಯಮ ಶೀಲತೆ ಬೆಳೆಯಲು ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ವೃತ್ತಿದಾರರಿಗೆ ಒಂದೇ ಸೂರಿನಡಿ ಸೇವೆ, ತಾಂತ್ರಿಕ, ನಿರ್ವಹಣೆಯ ಹಾಗೂ ಮಾರುಕಟ್ಟೆಯ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಒದಗಿ ಸುವುದು.

ರಾಜ್ಯ ಕೈಗಾರಿಕಾ ಅಭಿವೃದ್ಧಿ ನಿಗಮ ಚಿಕ್ಕ ಮತ್ತು ಗುಡಿಕೈಗಾರಿಕೆಗಳ ಬೆಳವಣಿಗೆ ಪ್ರೋತ್ಸಾಹ ನೀಡುವುದು. ಚಿಕ್ಕ ಕೈಗಾರಿಕಾ ಸೇವಾ ಸಂಸ್ಥೆಗಳು ತಾಂತ್ರಿಕ ಸಮಾಲೋಚನೆ, ಸಲಹಾ ಸೇವೆಗಳು, ವಿನ್ಯಾಸಗಳ ಪೂರೈಕೆ, ತರಬೇತಿ ಕಾರ್ಯಗಾರ ಸೌಲಭ್ಯ, ಗುಣಮಟ್ಟದ ಪರೀಕ್ಷೆಯ ಸೌಲಭ್ಯ ಮತ್ತು ಮಾರುಕಟ್ಟೆಯ ಸಹಾಯ ನೀಡುವುದು. ಸೀಡಾಬ್ ಕರ್ನಾಟಕ ಉದ್ಯಮಶೀಲತೆ ಅಭಿವೃದ್ಧಿ ಕೇಂದ್ರ ಯುವಕರಲ್ಲಿ ತಂತ್ರಜ್ಞಾನ, ಕೌಶಲ್ಯ ಅಭಿವೃದ್ಧಿಗಾಗಿ ಸಂಶೋಧನೆ ಹಾಗೂ ತರಬೇತಿ ಕಾರ್ಯಗಾರ ನಡೆಸುತ್ತದೆ. ರಾಷ್ಟ್ರೀಯ ಚಿಕ್ಕ ಕೈಗಾರಿಕಾ ನಿಗಮ ದೇಶದಾದ್ಯಂತ ಪ್ರಾದೇಶಿಕ ಶಾಖೆಗಳನ್ನು ಹೊಂದಿದೆ. ಚಿಕ್ಕ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳ ಪೂರೈಕೆ ಹಾಗೂ ಮಾರುಕಟ್ಟೆ ಚಟುವಟಿಕೆಗಳಿಗೆ ಸಹಕರಿಸುವುದು.

ಗ್ರಾಮೀಣ ಭಾಗದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗಕ್ಕೆ ಉತ್ತೇಜನ ನೀಡುವುದಕ್ಕಾಗಿ ಖಾದಿ ಮತ್ತು ಗ್ರಾಮೋದ್ಯೋಗಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಅವು ಸ್ಥಳೀಯ ಗ್ರಾಹಕರ ಬೇಡಿಕೆಯ ವಸ್ತುಗಳನ್ನು ಉತ್ಪಾದಿಸಿ ಮಾರಾಟ ಮಾಡುತ್ತವೆ. ಈ ಘಟಕಗಳಿಗೆ ಅವಶ್ಯಕ ಸೌಕರ್ಯ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು. ಚಿಕ್ಕ ಕೈಗಾರಿಕಾ ಅಭಿವೃದ್ಧಿ ಸಂಸ್ಥೆ. ಹಣಕಾಸು ಸಂಸ್ಥೆಗಳು ಹಾಗೂ ಸೇವಾ ಸಂಸ್ಥೆಗಳ ಮಧ್ಯ ಸಂಪರ್ಕ ಏರ್ಪಡಿಸುವ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ. ಈ ಸಂಸ್ಥೆ ಚಿಕ್ಕ ಹಾಗೂ ಗುಡಿ ಕೈಗಾರಿಕೆಗಳಿಗೆ ಬೇಕಾಗಿರುವ ಕಚ್ಚಾವಸ್ತುಗಳನ್ನು ಅಂದಾಜು ಮಾಡುವುದು. ರಾಷ್ಟ್ರೀಯ ಉದ್ಯಮಶೀಲತೆ ಮತ್ತು ಚಿಕ್ಕ ಉದ್ದಿಮೆ ಅಭಿವೃದ್ಧಿ ಸಂಸ್ಥೆ ದೇಶದಾದ್ಯಂತ ವೃತ್ತಿಗಾರರ ಆಯ್ಕೆ. ತರಬೇತಿ ಹಾಗೂ ಸಂಶೋಧನಾ ಕಾರ್ಯಗಾರಗಳನ್ನು ಏರ್ಪಡಿಸುತ್ತದೆ. ಭಾರತೀಯ ಚಿಕ್ಕ ಅಭಿವೃದ್ಧಿ ಬ್ಯಾಂಕ್ ಸಣ್ಣ ಮತ್ತು

ಗುಡಿಕೈಗಾರಿಕೆಗಳ ಸ್ಥಾಪನೆ ಮತ್ತು ತರಬೇತಿಯನ್ನು ವೃದ್ಧಿಸುವ ಈ ಬ್ಯಾಂಕು ಉನ್ನತ ಮಟ್ಟದ ಸಂಸ್ಥೆಯಾಗಿದೆ. ಚಿಕ್ಕ ಚಿಕ್ಕ ಕೈಗಾರಿಕಾ ರಂಗದಲ್ಲಿ ತೊಡಗಿರುವ ಎಲ್ಲಾ ಸಂಸ್ಥೆಗಳ ನಡುವೆ ಸಮನ್ವಯ ಸಾಧಿಸುವ ಕಾರ್ಯ ಮಾಡುತ್ತದೆ. ಈ ಬ್ಯಾಂಕು ಸಣ್ಣ ಪ್ರಮಾಣದ ಘಟಕಗಳ ಆಧುನೀಕರಣ ವಿಸ್ತರಣಾ ಕಾರ್ಯ ಕೈಗೊಳ್ಳುವುದು. ಗ್ರಾಮೀಣ ಗುಡಿ ಮತ್ತು ಅತೀ ಚಿಕ್ಕ ಉದ್ದಿಮೆಗಳಿಗೆ ವಿವಿಧ ಯೋಜನೆಗಳನ್ನು ರೂಪಿಸುವುದು.

ಪ್ರಧಾನ ಮಂತ್ರಿ ರೋಜಗಾರ ಯೋಜನೆ ಗ್ರಾಮೀಣ ಯುವಕರಿಗೆ ಉದ್ಯೋಗ ನೀಡುವುದು ಕೇಂದ್ರ ಸರ್ಕಾರದ ಯೋಜನೆಯಾಗಿದೆ. ಸ್ವಯಂ ಉದ್ಯೋಗದಲ್ಲಿ ತೊಡಗುವುದೇ ನಿರುದ್ಯೋಗಿ ನಿವಾರಿಸುವ ದಾರಿಯೆಂಬುದು ಈ ಯೋಜನೆಯ ಘೋಷಣೆ. ೧೮ ರಿಂದ ೨೫ ವರ್ಷದೊಳಗಿನ ಯುವಕರು ಸ್ವಂತ ಉದ್ಯೋಗ ಕೈಗೊಳ್ಳಲು ಹಣಕಾಸಿನ ನೆರವು, ತರಬೇತಿ ಸೌಲಭ್ಯಗಳನ್ನು ಒದಗಿಸುತ್ತದೆ.

ಗ್ರಾಮೀಣ ಪ್ರದೇಶದಲ್ಲಿರುವ ವಿವಿಧ ಕಸುಬುದಾರರಿಗೆ ಉತ್ತೇಜನ ನೀಡುವಂತಹ ಹಲವಾರು ತರಬೇತಿ ಯೋಜನೆಗಳನ್ನು ರಾಷ್ಟ್ರೀಯ ಚಿಕ್ಕ ಉದ್ದಿಮೆಗಳ ವಿಸ್ತರಣಾ ಸಂಸ್ಥೆ ನಿರ್ವಹಿಸುತ್ತದೆ.

ಪ್ರಧಾನಿ ಪಂಡಿತ ನೆಹರು ಅವರು ಒಂದು ಸಂದರ್ಭದಲ್ಲಿ ''ಮಹಿಳೆಯರು ಮುಂದುವರೆದರೆ ಕುಟುಂಬ, ಗ್ರಾಮ ಮತ್ತು ದೇಶ ಮುಂದುವರಿಯುತ್ತದೆ'' ಎಂದು ಹೇಳಿದ್ದರು. ದೇಶದ ಆರ್ಥಿಕ ಪ್ರಗತಿಯಲ್ಲಿ ಮಹಿಳೆಯರ ಪಾತ್ರವನ್ನು ಈ ಹೇಳಿಕೆ ವಿಷಾದಪಡಿಸುತ್ತದೆ.

ಗ್ರಾಮೀಣ ಮಹಿಳೆಯರು ಕೃಷಿಯಲ್ಲಿ, ಸುಣ್ಣ ಸುಡುವುದರಲ್ಲಿ, ಸೌದೆಯನ್ನು ತರುವುದರಲ್ಲಿ ಕಸೂತಿ ಕಲೆಯಲ್ಲಿ ಮುಂತಾದ ವೃತ್ತಿಗಳಲ್ಲಿ ಗಮನಾರ್ಹ ಸಾಧನೆ ಗೈಯುತ್ತಿದ್ದಾರೆ. ಇಂದಿನ ದಿನಗಳಲ್ಲಿ ಲಂಬಾಣಿ ಮಹಿಳೆಯರು ಉನ್ನತ ಶಿಕ್ಷಣ, ಆರ್ಥಿಕ ಚಟುವಟಿಕೆಗಳು, ರಾಜಕೀಯ ಚಟುವಟಿಕೆ ಮತ್ತು ಸಾಮಾಜಿಕವಾಗಿ ಗುರುತಿಸುವಿಕೆಯಲ್ಲಿ ಸಾಕಷ್ಟು ಅತ್ಯುತ್ತಮ ಅವಕಾಶಗಳನ್ನು ಪಡೆಯುತ್ತಿದ್ದಾರೆ. ಕೆಲವು ಕ್ಷೇತ್ರಗಳಲ್ಲಿ ಪುರುಷರಿಗೆ ಸಮನಾಗಿ ನಿಲ್ಲುವ ಆತ್ಮ ಸ್ಥೈರ್ಯ ಹೊಂದಿದ್ದು, ಸಾಧ್ಯವಾದರೆ ಪುರುಷರನ್ನು ಮೀರಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಲಂಬಾಣಿ ಮಹಿಳೆಯರು ಪ್ರತಿಯೊಂದು ರಂಗದಲ್ಲಿ ಪ್ರವೇಶಿಸುತ್ತಿರುವುದು ಸಾಮಾನ್ಯವಾಗಿದೆ. ಮಹಿಳೆಯರು ವಿವಿಧ ಕಾರ್ಯ ಕ್ಷೇತ್ರಗಳಲ್ಲಿ ಪ್ರವೇಶಿಸಿ ಯಶಸ್ಸನ್ನು ಗಳಿಸುತ್ತಿದ್ದಾರೆ. ಲಂಬಾಣಿ ಮಹಿಳೆಯರು ತಮ್ಮ ಉಡುಪುಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಲಂಬಾಣಿ ಮಹಿಳೆಯರು ನಗರಗಳಲ್ಲಿ ಹೋಗಿ ಊದುಬತ್ತಿ, ಬೆಲ್ಲ ತಯಾರಿಕೆ, ಉಪ್ಪಿನ ಕಾಯಿ ತಯಾರಿಕೆ, ಹಪ್ಪಳ, ಚಟ್ನಿ ಪುಡಿ ರೊಟ್ಟಿ ಇತ್ಯಾದಿ ಪದಾರ್ಥಗಳನ್ನು ತಯಾರಿಸುವ ಕ್ಷೇತ್ರಗಳಲ್ಲಿ ಯಶಸ್ಸನ್ನು ಕಾಣುತ್ತಿದ್ದಾರೆ.

ನಮ್ಮ ದೇಶದ ಮಹಿಳಾ ವೃತ್ತಿದಾರರನ್ನು ಅಭಿವೃದ್ಧಿ ಹೊಂದಿದ ದೇಶಗಳೊಡನೆ ಹೋಲಿಸಿದರೆ ಪ್ರಗತಿಯು ಸಮಾಧಾನಕರ ಎನಿಸುವುದಿಲ್ಲ. ಕಾರಣ ಲಂಬಾಣಿ ಮಹಿಳೆಯರು ತುಂಬಾ ಅನಕ್ಷರಸ್ಥರು

ಇರುವುದರಿಂದ ಇವರನ್ನು ಬೇರೆಯವರ ಜೊತೆಯಲ್ಲಿ ಹೋಲಿಸಿದರೆ ಸರಿಯಾಗುವುದಿಲ್ಲ. ಹಾಗೂ ಪ್ರಗತಿಗೆ ಹಲವು ಕಾರಣಗಳಿವೆ. ಮುಖ್ಯವಾಗಿ ಭಾರತೀಯ ಸಮಾಜ ಪುರುಷ ಪ್ರಧಾನ ಸಮಾಜ. ಅಂದರೆ ಪುರುಷರು ಕೆಲಸಕ್ಕಾಗಿ ಮನೆಯ ಹೊರಗೆ ಹೋಗಬೇಕು. ಮಹಿಳೆಯರು ಮನೆಯ ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕು. ಲಂಬಾಣಿ ಮಹಿಳೆಯರಿಗೆ ಶಿಕ್ಷಣದ ಮಟ್ಟ ಹಾಗೂ ಪ್ರತ್ಯೇಕ ತರಬೇತಿ ವ್ಯವಸ್ಥೆ ಇಲ್ಲದಿರುವುದರಿಂದ ಇವರಲ್ಲಿ ಉದ್ಯಮ ಶೀಲತೆ ಯೋಗ್ಯತೆಯ ಕೊರತೆ ಕಂಡುಬರುತ್ತದೆ. ಇವರಿಗೆ ಯಾವುದೇ ಹಣಕಾಸಿನ ಸಂಸ್ಥೆಗಳು ಹಣಕಾಸು ಒದಗಿಸುವುದಿಲ್ಲ. ಕಾರಣ ಹೆಚ್ಚಾಗಿ ಲಂಬಾಣಿ ಮಹಿಳೆಯರ ಹೆಸರಿನಲ್ಲಿ ಯಾವುದೇ ಆಸ್ತಿ ಇರುವುದಿಲ್ಲ. ಇವರು ವಿವಿಧ ವೃತ್ತಿಗಳನ್ನು ನಡೆಸುತ್ತಿದ್ದರೂ ಕಚ್ಚಾ ಸಾಮಗ್ರಿಗಳ ಕೊರತೆ, ವಸ್ತುಗಳ ಮಾರಾಟದ ಸಮಸ್ಯೆ, ಸಾರಿಗೆ ಸಂಪರ್ಕದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅದರೆ ಸರಕಾರಗಳು ಮಹಿಳಾ ಉದ್ಯಮಶೀಲತೆಯನ್ನು ಹೆಚ್ಚಿಸುವ ಪ್ರಯತ್ನ ಮಾಡುತ್ತಿರುವುದು ಆಶಾದಾಯಕವೆನಿಸುತ್ತದೆ.

ಲಂಬಾಣಿಯು ಸ್ತ್ರೀ ಪುರುಷರಲ್ಲಿರುವ ಅನಕ್ಷರತೆ, ಅಂಧಕಾರ, ಮೂಢನಂಬಿಕೆ ಇತ್ಯಾದಿ ಅಂಶಗಳು ಲಂಬಾಣಿಗರ ಕರಕುಶಲಕಲೆಗಳು, ತಾಂಡಗಳ ವೃತ್ತಿಗಳು ಹಾಗೂ ವಿವಿಧ ರೀತಿಯ ಕೆಲಸಗಳು ಸರಿಯಾದ ಬೆಳವಣಿಗೆಯನ್ನು ಕಾಣದೇ ಇರಲು ಕಾರಣವಾಗಿದೆ.

ಸಮಕಾಲೀನತೆಯ ಸಂದರ್ಭದಲ್ಲಿ ಲಂಬಾಣಿ ಜನಾಂಗದವರಿಗೆ ಹೆಚ್ಚಿನ ಸದಾವಕಾಶಗಳಿರುವುದು ಕಂಡುಬರುತ್ತದೆ. ಅಂತಹವುಗಳನ್ನು ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ.

* ಲಂಬಾಣಿಗರು ವೃತ್ತಿ ಸಂಘಗಳನ್ನು ರಚಿಸಿಕೊಳ್ಳಬೇಕು.
* ಲಂಬಾಣಿಗರೆಲ್ಲರು ತಮ್ಮ ವೃತ್ತಿ ಸಂಘಗಳಲ್ಲಿ ಕಡ್ಡಾಯವಾಗಿ ಸದಸ್ಯತ್ವವನ್ನು ಪಡೆದು ಕ್ರಿಯಾಶೀಲರಾಗಿ ಕಾಯನಿರ್ವಹಿಸಬೇಕು.
* ಲಂಬಾಣಿಗರೆಲ್ಲರು ಒಟ್ಟಾಗಿ ಕೂಡಿಕೊಂಡು ಪ್ರಮುಖ ವಿಷಯಗಳ ಕುರಿತು ಚರ್ಚಿಸಿ ತೀರ್ಮಾನಗಳನ್ನು ತೆಗೆದುಕೊಳ್ಳಬೇಕು.
* ಲಂಬಾಣಿಗಳಲ್ಲಿರುವ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರಗಳನ್ನು ಕಂಡು ಕೊಳ್ಳಬೇಕು.
* ವೃತ್ತಿ ಸಂಘಗಳು ವೃತ್ತಿ ತರಬೇತಿ ಕಾರ್ಯಕ್ರಮಗಳನ್ನು ಆಗಾಗ್ಗೆ ಏರ್ಪಡಿಸಬೇಕು.
* ವೃತ್ತಿ ಕುರಿತು ಸರ್ಕಾರದ ಧೋರಣೆಗಳನ್ನು ಸಂಘದ ಸದಸ್ಯರೆಲ್ಲರೂ ಕೂಡಿ ಚರ್ಚಿಸಿ ಅದರ ಅನುಕೂಲ ಹಾಗೂ ಅನಾನುಕೂಲಗಳನ್ನು ತಿಳಿದುಕೊಳ್ಳಬೇಕು.
* ಸರ್ಕಾರದ ಸೌಲಭ್ಯಗಳು ಎಲ್ಲಾ ಲಂಬಾಣಿಗರಿಗೆ ಲಭ್ಯವಾಗುವಂತೆ ನೋಡಿಕೊಳ್ಳಬೇಕು.
* ಸಂಘ ಸಂಸ್ಥೆಗಳು ಲಂಬಾಣಿಗರಿಗೆ ಆಧುನಿಕ ಯಂತ್ರೋಪಕರಣಗಳ ಮಾಹಿತಿ ನೀಡಿ ಅವುಗಳನ್ನು ಬಳಸಿಕೊಳ್ಳಲು ನೆರವಾಗಬೇಕು.

* ಲಂಬಾಣಿ ಸಮುದಾಯದ ಮಕ್ಕಳು ಕಡ್ಡಾಯವಾಗಿ ಶಿಕ್ಷಣ ಪಡೆಯುವಂತಾಗಬೇಕು.

* ಹಣಕಾಸಿನ ಸಂಸ್ಥೆಗಳಿಂದ ಸಕಾಲಕ್ಕೆ ಸರಿಯಾಗಿ ಕಡಿಮೆ ಬಡ್ಡಿದರದಲ್ಲಿ ಸಾಲ ದೊರೆಯುವಂತೆ ಮಾಡಬೇಕು.

* ಹಣಕಾಸಿನ ಸಂಸ್ಥೆಗಳು ನೀಡುವ ಹಣವನ್ನು ಲಂಬಾಣಿಗರು ಕೃಷಿಗಾಗಿ ಮತ್ತು ಉತ್ಪಾದನೆ ಚಟುವಟಿಕೆಗಳಲ್ಲಿ ಮಾತ್ರ ಬಳಸಿಕೊಳ್ಳಬೇಕು.

* ಲಂಬಾಣಿಗರು ತಮ್ಮ ಕೆಲಸದ ಕುಶಲತೆಯನ್ನು ಉತ್ತಮಪಡಿಸಿಕೊಳ್ಳಬೇಕು.

* ಲಂಬಾಣಿಗರು ಈಗಲಾದರೂ ಕುಡಿತದಿಂದ ದೂರವಿರಬೇಕು.

* ಕೃಷಿ ಉತ್ಪನ್ನ ಹಾಗೂ ವೃತ್ತಿ ಉತ್ಪನ್ನಗಳ ಪ್ರತ್ಯೇಕ ಮಾರಾಟ ಮಳಿಗೆಗಳನ್ನು ಸ್ಥಾಪಿಸಿಕೊಳ್ಳಬೇಕು.

* ತಮ್ಮ ಹತ್ತಿರ ಮಧ್ಯವರ್ತಿಗಳು ಬರದ ಹಾಗೆ ನಿಯಂತ್ರಿಸಬೇಕು.

* ಸರಕುಗಳ ಪ್ರದರ್ಶನ ಮತ್ತು ಮಾರಾಟಕ್ಕಾಗಿ ತಾಲೂಕು, ಜಿಲ್ಲಾ, ರಾಜ್ಯ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಮೇಳಗಳನ್ನು ಏರ್ಪಡಿಸಬೇಕು.

* ಸರಕಾರದ ಅಧಿಕಾರಿವರ್ಗ ಲಂಬಾಣಿಗಳಿಗೆ ಸರಕಾರ ನೀಡುವ ಸೌಲಭ್ಯಗಳನ್ನು ಫಲಾನುಭವಿಗಳಿಗೆ ನೇರವಾಗಿ ತಲುಪಿಸುವ ವ್ಯವಸ್ಥೆ ಮಾಡಬೇಕು.

* ಸರಕಾರವು ಸರಕುಗಳಿಗೆ ವೈಜ್ಞಾನಿಕ ರೀತಿಯಲ್ಲಿ ಬೆಲೆಯನ್ನು ನಿಗದಿ ಮಾಡಿ ಬೆಂಬಲ ಬೆಲೆಗಳನ್ನು ನೀಡಬೇಕು.

* ಸರಕಾರವು ವೃತ್ತಿ ತರಬೇತಿ ಸಂಸ್ಥೆಗಳನ್ನು ತಾಲೂಕು, ಜಿಲ್ಲೆ, ರಾಜ್ಯ ಮಟ್ಟದಲ್ಲಿ ಸ್ಥಾಪಿಸಿ ಲಂಬಾಣಿಗರಿಗೆ ಉಚಿತ ತರಬೇತಿ ನೀಡಬೇಕು.

* ಸರಕಾರದ ಸೌಲಭ್ಯಗಳು ಮಧ್ಯವರ್ತಿಗಳ ಪಾಲಾಗದಂತೆ ನೋಡಿಕೊಳ್ಳಬೇಕು.

* ಕೇಂದ್ರ ಮತ್ತು ರಾಜ್ಯ ಸರಕಾರಗಳು ಲಂಬಾಣಿಗರ ಅಭಿವೃದ್ಧಿಗೆ ವಿಶೇಷ ಧನಸಹಾಯ ಹಾಗು ಕಾರ್ಯಕ್ರಮಗಳನ್ನು ನೀಡಬೇಕು.

* ಲಂಬಾಣಿಗರಿಗೆ ಆರೋಗ್ಯ ಕವಚದ ಸೌಲಭ್ಯ ಹಾಗೂ ಉಚಿತ ವಿಮಾ ಸೌಲಭ್ಯ ಒದಗಿಸಬೇಕು.

* ಲಂಬಾಣಿಗರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಕಡ್ಡಾಯವಾಗಿ ಒದಗಿಸಬೇಕು.

* ಲಂಬಾಣಿಗರು ಆಧುನಿಕತೆಗೆ ತಕ್ಕಂತೆ ಬದಲಾವಣೆ ಹೊಂದಬೇಕು.

* ಲಂಬಾಣಿಗರು ಅನುಭೋಗಿಗಳ ಅಭಿರುಚಿಗೆ ತಕ್ಕಂತೆ ಸರಕುಗಳನ್ನು ತಯಾರಿಸಬೇಕು.

* ಲಂಬಾಣಿಗರು ವಲಸೆ ಹೋಗದ ಹಾಗೆ ವಿವಿಧ ಮೂಲದ ಸೌಲಭ್ಯಗಳನ್ನು ಪೂರೈಸಬೇಕು.

* ಲಂಬಾಣಿಗರ ಮಕ್ಕಳು ತಮ್ಮ ವೃತ್ತಿಯನ್ನು ಮುಂದುವರಿಸಲು ಇಚ್ಛಿಸಿದರೆ ಅವರಿಗೆ ತರಬೇತಿ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸಿಕೊಡಬೇಕು.

## ೭.೨. ಅಧ್ಯಯನದ ಫಲಿತಗಳು

ಮಹಾಪ್ರಬಂಧದ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿವಿಧ ಆಯಾಮಗಳನ್ನು ಪರಿಶೀಲಿಸಿದಾಗ ಕಂಡುಬಂದ ಫಲಿತಗಳ ವಿವರಣೆ ಈ ಕೆಳಕಂಡಂತಿವೆ.

* ಬಳ್ಳಾರಿ ಜಿಲ್ಲೆಯ ವಿವಿಧ ತಾಲೂಕುಗಳ ತಾಂಡಗಳಲ್ಲಿ ಕಂಡುಬರುವ ಲಂಬಾಣಿಗರ ಚಾರಿತ್ರಿಕ ಹಿನ್ನಲೆ ಇರುವ ಅಂಶಗಳು ಕಂಡುಬರುತ್ತವೆ.

* ಲಂಬಾಣಿಗರನ್ನು ಭೂರಹಿತ ಹಾಗೂ ಪರಿಶಿಷ್ಟ ಜಾತಿಗಳು ಉಪಜೀವನಕ್ಕಾಗಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಅವರ ಕುಟುಂಬಗಳ ಸದಸ್ಯರ ಪ್ರಮಾಣ ಅಧಿಕವಾಗಿರುವುದರಿಂದ ಅವರ ಕುಟುಂಬವನ್ನು ಬಡತನ, ಅನಾರೋಗ್ಯ, ಅನಕ್ಷರತೆ ಮತ್ತು ನಿರುದ್ಯೋಗಿಗಳೂ ಸಹಜವಾಗಿ ಕಾಣುತ್ತಾರೆ.

* ಕುಟುಂಬದ ನಿರ್ವಹಣೆಗೆ ದುಡಿಮೆಯು ಗಂಡಿನಷ್ಟೇ ಹೆಣ್ಣನ್ನು ಸಮಾನವಾಗಿ ಅವಲಂಬಿಸಿದೆ.

* ಲಂಬಾಣಿಗರ ಕುಟುಂಬಗಳಲ್ಲಿ ಕಡಿಮೆ ಪ್ರಮಾಣದ ಕುಟುಂಬ ಯೋಜನೆಯ ಫಲಾನುಭವಿಗಳಿದ್ದಾರೆ.

* ಲಂಬಾಣಿಗರ ಕುಲಕಸುಬು, ಕಸೂತಿ ಮೇಲೆ ಆಧುನೀಕರಣದ ಪ್ರಭಾವ ಬಿದ್ದಿರುವುದು ಕಂಡುಬರುತ್ತದೆ.

* ಲಂಬಾಣಿಗರ ಕಸೂತಿಯನ್ನು ನಿರ್ವಹಿಸುವ ಪರಿಸರ ಉತ್ತಮವಾಗಿಲ್ಲ.

* ಬಹಳಷ್ಟು ಲಂಬಾಣಿಗರು ಹಳೆಯ ಉತ್ಪಾದನಾ ವಿಧಾನಗಳನ್ನು ಅಳವಡಿಸಿಕೊಂಡಿರುವುದು.

* ಸರಕುಗಳ ಸಂಗ್ರಹಣೆ ಸಮರ್ಪಕವಾಗಿಲ್ಲ. ಕಚ್ಚಾವಸ್ತುಗಳ ಸಮಸ್ಯೆ ನಿರಂತರವಾಗಿರುವುದು.

* ಲಂಬಾಣಿಗರು ತಯಾರಿಸುವ ಸರಕುಗಳೀಗೆ ಯಾವುದೇ ಬ್ರಾಂಡನೆಮ್ ಇಲ್ಲದಿರುವುದು ಕಂಡುಬರುತ್ತದೆ.

* ಸಿದ್ಧವಸ್ತುಗಳ ಮಾರಾಟದ ಸಮಸ್ಯೆ ಕಂಡುಬರುತ್ತದೆ. ಯಾಕೆಂದರೆ ಅವರ ಮಾರಾಟ ಸ್ಥಳಗಳು ಯಾತ್ರಸ್ಥಳ, ಸಂತೆ ಇನ್ನೂ ಅನೇಖ ಪ್ರದೇಶಗಳೇ ಮಾರಾಟದ ಸ್ಥಳವಾಗಿದೆ.

* ಲಂಬಾಣಿಗರಲ್ಲಿ ಆಧುನಿಕತೆಯ ಬಗ್ಗೆ ಪ್ರಶಂಸೆ ಹಾಗೂ ಫ್ಯಾಶನ್ ಲೋಕದಲ್ಲಿ ಮೆಚ್ಚುಗೆ ವ್ಯಕ್ತವಾದರೂ ತಮ್ಮ ವೃತ್ತಿಯಲ್ಲಿನ ಅಸ್ಥಿರತೆಯಿಂದ ಅದರ ಅಂತರಾಳದಲ್ಲಿ ಆಧುನಿಕತೆಯ ಬಗ್ಗೆ ಆತಂಕ, ಭಯ ಆವರಿಸಿದೆ.

* ಲಂಬಾಣಿಗರಲ್ಲಿ ಹೆಚ್ಚಾಗಿ ಅನಕ್ಷರಸ್ಥರು ಕಂಡುಬರುತ್ತಾರೆ.

* ಲಂಬಾಣಿಗರು ತಮ್ಮ ಮಕ್ಕಳನ್ನು ಶಾಲಾ-ಕಾಲೇಜುಗಳಿಗೆ ಕಳಿಸುವ ಪ್ರಮಾಣ ಕಡಿಮೆ ಇದೆ. ಪ್ರಾಥಮಿಕ ಶಾಲೆಗಳಿಗೆ ಮಕ್ಕಳನ್ನು ಕಳಿಹಿಸಿದರೂ ನಂತರದ ಶಿಕ್ಷಣಕ್ಕೆ ಕಳುಹಿಸುವ ಪ್ರಮಾಣ ಕಡಿಮೆ. ಯಾಕೆಂದರೆ,

ವರ್ಷದ ೬ ತಿಂಗಳುಗಳ ಕಾಲ ಹೊರ ರಾಜ್ಯಗಳಿಗೆ ಮತ್ತು ಇತರ ಜಿಲ್ಲೆಗಳಿಗೆ ಕೂಲಿಗಾಗಿ ವಲಸೆ ಹೋಗುವುದರಿಂದ ಮಕ್ಕಳ ಮೇಲಿನ ಶಿಕ್ಷಣದ ಪ್ರಮಾಣ ಕಡಿಮೆಯಾಗುತ್ತದೆ.

* ಲಂಬಾಣಿ ಸಮುದಾಯಗಳಿಗೆ ಸರ್ಕಾರ ಜಾರಿಗೊಳಿಸಿರುವ ಶಿಕ್ಷಣ ಹಾಗೂ ಇತರೆ ಸೌಲಭ್ಯಗಳ ಬಗ್ಗೆ ಸರಿಯಾದ ಮಾಹಿತಿ ಇರುವುದಿಲ್ಲ. ಕಾರಣ ಹೆಚ್ಚಾಗಿ ಅವರು ಅನಕ್ಷರಸ್ಥರಾಗಿರುವುದರಿಂದ ಅವರಿಗೆ ಸರಿಯಾದ ಮಾಹಿತಿ ಇರುವುದಿಲ್ಲ.

* ಲಂಬಾಣಿಗರಲ್ಲಿ ಅದು ಹೆಚ್ಚಾಗಿ ಹೆಣ್ಣುಮಕ್ಕಳು ಕುಲಕಸುಬುಗಳನ್ನು ಅನುಸರಿಸಲು ಇಷ್ಟಪಡುತ್ತಿಲ್ಲ.

* ಲಂಬಾಣಿಗ ಕುಟುಂಬಗಳಲ್ಲಿ ಜನನ ಮತ್ತು ಮರಣ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ.

* ಹಿರಿಯ ತಲೆಮಾರಿನ ಲಂಬಾಣಿಗರು ದೇವರ, ದೆವ್ವ, ಮಾಟ ಮಂತ್ರ, ಮೂಢನಂಬಿಕೆಗಳ ಬಗ್ಗೆ ಹೆಚ್ಚಾಗಿ ಈಗಲೂ ನಂಬಿಕೆ ಹೊಂದಿದ್ದಾರೆ.

* ಲಂಬಾಣಿಗಳು ವರ್ಷಕ್ಕೊಮ್ಮೆ ತಮ್ಮ ಹಿರಿಯರ ಮತ್ತು ತಮ್ಮ ಕುಲದೇವರ ಹಬ್ಬ-ಹರಿದಿನ ಉತ್ಸವಗಳನ್ನು ಆಚರಿಸುವ ಸಂಸ್ಕೃತಿಯನ್ನು ಹೊಂದಿದ್ದಾರೆ.

* ಲಂಬಾಣಿಗಳ ದುಡಿಮೆಗೆ ಅವಶ್ಯಕವಾದ ಸಾಮಾಜಿಕ ಭದ್ರತೆಯ ಸೌಕರ್ಯಗಳಿಲ್ಲ.

* ಇತ್ತೀಚಿನ ದಿನಗಳಲ್ಲಿ ಲಂಬಾಣಿಗರು ಅಲ್ಪಸ್ವಲ್ಪ ವಿದ್ಯಾಭ್ಯಾಸ ಮಾಡಿ, ITI, D.D ಅಥವಾ ಸಾಮಾನ್ಯ ಪದವಿಯನ್ನು ತೆಗೆದುಕೊಂಡು ಗಣಿಗಳಲ್ಲಿ ಅಥವಾ ಕೈಗಾರಿಕೆಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ.

* ಲಂಬಾಣಿಗರ ಆದಾಯವು ನಿಶ್ಚಿತ ಹಾಗೂ ನಿರಂತರವಾಗಿರುವುದಿಲ್ಲ.

* ಲಂಬಾಣಿಗರಲ್ಲಿ ಹೆಚ್ಚಾಗಿ ಸ್ಥಿರ ಹಾಗೂ ಚರ ಸ್ವರೂಪಗಳಲ್ಲಿ ಯಾವುದೇ ನಿಶ್ಚಿತವಾದ ಆದಾಯದ ಮೂಲಗಳು ವಿರಳವಾಗಿವೆ.

* ಲಂಬಾಣಿಗರು ಇತ್ತೀಚಿನ ವರ್ಷಗಳಲ್ಲಿ ಕೂಲಿಗಾಗಿ, ಕಬ್ಬು ಕಟಾವುಗಾಗಿ ಇತರ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದು ಕಂಡುಬರುತ್ತದೆ. ಕಾರಣ ಬರಗಾಲ ಪೀಡಿತ ತಾಲೂಕುಗಳ ತಾಂಡಗಳ ಜನರು, ತಮ್ಮ ಜೀವನ ರಕ್ಷಿಸಿಕೊಳ್ಳಲು ವಲಸೆ ಹೋಗುವ ಅನಿವಾರ್ಯತೆ ಕಂಡುಬರುತ್ತದೆ.

* ಹೆಚ್ಚಿನ ಲಂಬಾಣಿಗಳಿಗೆ ಉತ್ತಮ ರೀತಿಯ ವ್ಯವಸ್ಥಿತವಾದ ವಸತಿ ಸೌಕರ್ಯಗಳಿಲ್ಲ.

* ಲಂಬಾಣಿಗಳ ಮನೆಗಳಿಗೆ ಶೌಚಾಲಯ ಮತ್ತು ಕುಡಿಯುವ ನೀರಿನ ವ್ಯವಸ್ಥೆ ಸರಿಯಾಗಿ ಇಲ್ಲದಿರುವುದು ಕಂಡುಬರುತ್ತದೆ.

* ಲಂಬಾಣಿಗರ ಸಂಘಟನೆ ಸದೃಢವಾಗಿಲ್ಲ.

* ಲಂಬಾಣಿಗರ ಕಸೂತಿಗೆ, ಕಲೆಗೆ ಸಂಬಂಧಿಸಿದಂತೆ ಸರ್ಕಾರದ ನಿರ್ದಿಷ್ಟವಾದ ಯೋಜನೆಗಳಿಲ್ಲ.

* ಲಂಬಾಣಿಗರ ಕುಡಿತದ ಚಟದಿಂದ ಕ್ಷಯ, ಅಸ್ತಮ, ಹೃದಯ ಸಂಬಂಧಿ ಕಾಯಿಲೆಗಳು ಸಹಜವೆಂಬಂತಿವೆ.

* ಲಂಬಾಣಿ ತಾಂಡಗಳಲ್ಲಿ ಯಾವುದೇ ಪ್ರತ್ಯೇಕ ಪ್ರಾಥಮಿಕ ಆರೋಗ್ಯ ಕೇಂದ್ರಗಳಿರುವುದಿಲ್ಲ.

* ನಾನು ಕ್ಷೇತ್ರಕಾರ್ಯ ಮಾಡಿದ ತಾಂಡಗಳಲ್ಲಿ ಆರ್ಥಿಕವಾಗಿ ಲಂಬಾಣಿಗರು ಹಿಂದುಳಿದದ್ದು, ಅತ್ಯಂತ ಕಡು ಬಡತನದಿಂದ ನರಳುತ್ತಿರುವವರ ಸಂಖ್ಯೆ ಬಹಳವಾಗಿದೆ. ಇದರಿಂದಾಗಿ ಇವರು ಕೂಲಿ, ಗಾರೆ ಕೆಲಸ, ಜೀತ, ಹಮಾಲಿ ಕೆಲಸ ಹೀಗ ಬದುಕಿಗಾಗಿ ಇತರೆ ಕೆಲಸಗಳಲ್ಲಿ ತೊಡಗಿ ವಲಸೆ ಹೋಗಬೇಕಾದ ಅನಿವಾರ್ಯ ಪರಿಸ್ಥಿತಿ ಇದೆ. ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ತಾಂಡಗಳ್ಲಿ ನೆಲೆಸಿರುವ ಲಂಬಾಣಿಗರು ಜನಸಂಖ್ಯೆಯಲ್ಲಿ ಶೇಕಡ ೭೫ರಷ್ಟು ಜನರು ನಂಬಿಕೊಂಡಿರುವುದು ಕೂಲಿಯನ್ನೇ. ಇದರೊಂದಿಗೆ ಇವರು ಜೀತಕ್ಕೂ ಒಳಗಾಗಿರುವುದು ವ್ಯಾಪಕವಾಗಿ ಕಂಡುಬರುತ್ತದೆ. ಈ ಪದ್ಧತಿಯನ್ನು ನಿಷೇಧಿಸಿದ್ದರೂ ಸಹ ಬಳ್ಳಾರಿ ಜಿಲ್ಲೆಯ ಕೆಲವು ತಾಂಡಗಳಲ್ಲಿ ಇನ್ನೂ ಜಾರಿಯಲ್ಲಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಎಲ್ಲ ತಾಲೂಕುಗಳ ಅಪ್ರಾಪ್ತ ವಯಸ್ಸಿನ ಹೆಣ್ಣು ಮತ್ತು ಗಂಡು ಮಕ್ಕಳು ನಗರದ ಅಂಗಡಿಗಳಲ್ಲಿ, ಜಿಲ್ಲಾ ಮತ್ತು ತಾಲೂಕುಗಳ ಹತ್ತಿರವಿರುವ N.H.3 ಪಕ್ಕದಲ್ಲಿರುವ ಡಾಬಾಗಳಿಗೆ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಮತ್ತು ಗಾರೆ ಕೆಲಸಕ್ಕೆ ನಗರ ಪಟ್ಟಣಗಳಿಗೆ ಹೋಗುವುದು ನನ್ನ ಅಧ್ಯಯನದಿಂದ ಕಂಡುಕೊಂಡಿರುತ್ತೇನೆ.

* ತಾಂಡದ ಹಿರಿಯರು ಹೇಳಿದಂತೆ ಇತ್ತೀಚಿನ ಸಂಪ್ರದಾಯ, ಆಚರಣೆಗಳು ಹಿಂದಿನಷ್ಟು ಕ್ರಮಬದ್ಧವಾಗೇನು ನಡೆಯುವುದಿಲ್ಲ. ಬಡವರು ವಿವಾಹವನ್ನ ತಾಂಡದಲ್ಲಿಯೇ ಮಾಡಿದರೆ, ಶ್ರೀಮಂತರು ಪುರೋಹಿತರನ್ನ ಕರೆಸಿ ಛತ್ರಗಳಲ್ಲಿ ವಿವಾಹ ನಡೆಸುತ್ತಾರೆ. ಇದಕ್ಕೆಲ್ಲ ಜಾಗತೀಕರಣದ ಪ್ರಭಾವವೆ ಲಂಬಾಣಿಗರನ್ನು ಆವರಿಸಿದೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

* ಮುಖ್ಯವಾಗಿ ವರದಕ್ಷಿಣೆ ಪದ್ಧತಿ ವ್ಯಾಪಕವಾಗಿ ತಾಂಡಗಳಲ್ಲಿ ವ್ಯಾಪಿಸಿದ್ದು, ಸಾಮಾನ್ಯ ಕಸುಬುದಾರನಿಗೂ ೨೦,೦೦೦ ರೂ. ವರದಕ್ಷಿಣೆ ಕೊಡಬೇಕಾಗುತ್ತದೆ. ಮದುವೆಯಾದ ನಂತರ ವರದಕ್ಷಿಣೆ ಕೊಡಲಿಲ್ಲ ಎಂಬ ಕಾರಣಕ್ಕೆ ವಿವಾಹ ಮುರಿದು ಬಿದ್ದಿರುವ ಹಲವಾರು ನಿದರ್ಶನಗಳು ನಮ್ಮ ಮುಂದಿದೆ.

* ಹೆಣ್ಣು ಮಕ್ಕಳಿಗೆ ಸಣ್ಣ ವಯಸ್ಸಿನಲ್ಲಿಯೇ ಅಂದರೆ, ೧೩, ೧೪ ವರ್ಷಕ್ಕೆ ಮದುವೆ ಮಾಡಿಸುತ್ತಿರುವ ಹಲವಾರು ಘಟನೆಗಳು ನಡೆಯುತ್ತವೆ.

* ಗೋರ್ ನ್ಯಾಯ ಪಂಚಾಯ್ತಿಗಳಿದ್ದರೂ ತಾಂಡಗಳಲ್ಲಿ ಅಷ್ಟಾಗಿ ಪಾಲಿಸುತ್ತಿಲ್ಲ. ಆದರೆ ಗೋರ್ ನ್ಯಾಯ ಪಂಚಾಯ್ತಿ ಮಾತ್ರ ಇಂದಿಗೂ ಅಸ್ತಿತ್ವದಲ್ಲಿದೆ.

* ಲಂಬಾಣಿ ಮಹಿಳೆಯರ ಸಾಂಪ್ರದಾಯಿಕ ಉಡುಪಾದಕಾಚಳೀ ಮತ್ತು ಪೇಟಿಯಾ ಮತ್ತು ಚಾಟಿಯಾ ಹಾಕಿಕೊಳ್ಳುವರ ಸಂಖ್ಯೆ ದಿನೆ ದಿನೆ ಕಡಿಮೆಯಾಗುತ್ತಿದೆ. ಇದಕ್ಕೆ ಆಧುನಿಕತೆಯ ಕಾರಣ ಮತ್ತು ಇಂದಿನ

ನವ ಪೀಳಿಗೆಯ ಮಹಿಳೆಯರಿಗೆ ಅವರು ಉಡುವ ವೇಷ ಭೂಷಣಗಳ ಕಸೂತಿ ಕುಶಲತೆ ಬರುವುದಿಲ್ಲ. ಆದ್ದರಿಂದ ಔಪಚಾರಿಕವಾಗಿ ಹಬ್ಬ ಹರಿದಿನಗಳಲ್ಲಿ ಮಾತ್ರ ಸಾಂಪ್ರದಾಯಿಕ ಉಡುಪುಗಳನ್ನು ಧರಿಸುತ್ತಾರೆ. ಆದರೂ ಸಹ ಆಧುನಿಕ ಉಡುಪುಗಳಾದ ಸೀರೆ, ಕುಪ್ಪಸ, ಚೂಡಿದಾರ, ಲಂಗ ದಾವಣಿ ಧರಿಸುವುದು ಹೆಚ್ಚಾಗಿ ಕಂಡುಬರುತ್ತದೆ.

* ಮಾತೃ ದೇವತೆಯಾದ ಮರಿಯಮ್ಮ, ತುಳಜಾ ಭವಾನಿ, ಹುಲಿಗೆಮ್ಮ, ಗಾಳೆಮ್ಮ ಮೂಕಾಂಬಿಕೆಯ, ಸಾತಿಯಾಡಿ ಆರಾಧನೆಯ ಜೊತೆಗೆ ಪುರುಷ ದೇವತೆಗಳಾದ ಸೇವಾಭಾಯಾ, ಪಾಂಡುರಂಗ ಸ್ವಾಮಿ ಮಿಟುಭೂಕ್ಯಾ, ತಿರುಪತಿ ವೆಂಕಟೇಶ್ವರ, ಮಂಜುನಾಥ ದೇವರನ್ನು ಆರಾಧಿಸುವುದು ಕಂಡುಬರುತ್ತದೆ.

* ಲಂಬಾಣಿ ಜನಾಂಗವು ಆಧ್ಯಾತ್ಮಿಕ ಕಾಳಜಿ ಬಹಳ. ಆಚರಣೆಗಳಲ್ಲಿನ ಪಾವಿತ್ರತೆಯನ್ನು ಇಂದೂ ಸಹ ಕಾಪಾಡಿಕೊಂಡು ಬಂದಿದ್ದಾರೆ. ದೇವರು ಒಂದೇನಮ್ಮ ಎಲ್ಲಾ ಕಷ್ಟಗಳನ್ನು ದೂರ ಮಾಡುವ ಶಕ್ತಿ ಎಂದು ನಂಬಿದ್ದಾರೆ. ಇವರು ದೇವರು ನಮ್ಮ ಜೀವನದ ಅವಿಭಾಜ್ಯ ಅಂಗವೆಂದೇ ಪರಿಗಣಿಸುತ್ತಾರೆ. ಇವರ ಕುಲದೇವರುಗಳಾದ ಸೇವಾಭಾವ ಮತ್ತು ಮರಿಯಮ್ಮ ದೇವತೆಯ ದೇವಾಲಯಗಳನ್ನು ಪ್ರತಿಯೊಂದು ತಾಂಡದಲ್ಲಿ ಕಂಡುಬರುತ್ತದೆ.

* ಕಲೆ ಸಂಸ್ಕೃತಿಯ ಬಗ್ಗೆ ಅಪಾರ ಕಾಳಜಿಯಿದೆ. ಕಲೆ ಮತ್ತು ಸಂಸ್ಕೃತಿಯನ್ನು ಸ್ವಲ್ಪ ಹೆಚ್ಚಿನ ಸಂಖ್ಯೆಯಲ್ಲಿ ನಾಗರೀಕತೆ ಮೈಗೂಡಿಸಿಕೊಂಡು ನವೀನ ಪ್ರಪಂಚಕ್ಕೆ ಒಗ್ಗಿಕೊಂಡಿದ್ದಾರೆ.

* ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಲಂಬಾಣಿಗರ ಜೀವನ ಶೈಲಿಯ ಬದಲಾವಣೆಗಳು ಕಾಣಿಸುತ್ತಿವೆ. ತಮ್ಮ ಭಾಷೆ, ವೇಷಭೂಷಣ, ಧರ್ಮ, ಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿ, ಪ್ರಭಾವವವಾಗಿರುವುದರಿಂದ, ಮೇಲ್ನೋಟಕ್ಕೆ ಲಂಬಾಣಿಗರೆಂದು ಗುರುತಿಸುವುದು ಸ್ವಲ್ಪ ಕಷ್ಟವಾಗುತ್ತದೆ.

* ಕೆಲವು ತಾಂಡಗಳಲ್ಲಿ ಹಬ್ಬ ಹರಿದಿನ, ಧರ್ಮಾಚರಣೆಯಲ್ಲಿ ಸ್ವಲ್ಪ ಬದಲಾವಣೆಯಾಗಿರುವುದು ಅಲ್ಲಲ್ಲಿ ಕಾಣಿಸುತ್ತದೆ. ಇವರ ಜೀವನ ಶೈಲಿ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ವಲ್ಪಮಟ್ಟಿನ ಬದಲಾವಣೆಗಳು ಕಾಣುತ್ತವೆ.

* ನಾಗರೀಕ ಪ್ರಪಂಚದಿಂದ ದೂರವಿದ್ದು, ತಮ್ಮದೇ ಆದ ಜೀವನ ಕ್ರಮ ಅನುಸರಿಸಿಕೊಂಡು ವಿಶಿಷ್ಟವಾದ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಈ ಸಮುದಾಯವು ಹಂತ ಹಂತವಾಗಿ ಬದಲಾಗುತ್ತಿದೆ. ಅವರ ಜೀವನದಲ್ಲಿ ಜಾಗತೀಕರಣ ಮತ್ತು ಆಧುನಿಕರಣದ ಗಾಳಿ ಬೀಸಿ ನೂರಾರು ವರ್ಷಗಳಿಂದ ಬೇರು ಬಿಟ್ಟುಕೊಂಡಿದ್ದ, ಇವರ ಸಾಂಸ್ಕೃತಿಕ ವಿಚಾರಗಳು ಸಡಿಲಗೊಳ್ಳುತ್ತಿದೆ. ಆಚಾರ, ವಿಚಾರ, ಸಂಸ್ಕಾರ, ನಡೆನುಡಿಗಳಲ್ಲಿ ಅನೇಕ ಬದಲಾವಣೆಗಳಾಗಿವೆ.

* ಲಂಬಾಣಿ ಸಮುದಾಯಗಳು ವಾಸಿಸುವ ಪರಿಸರದಲ್ಲಿಯೂ ಬದಲಾವಣೆಗಳಾಗುತ್ತವೆ ಮತ್ತು ಸುತ್ತಲಿನ ಅಂದರೆ ಜಾಗತೀಕರಣದ ಪ್ರಭಾವದಿಂದಾಗಿ ತಮ್ಮ ಸಂಪ್ರದಾಯ ಸಂಸ್ಕೃತಿಯನ್ನು ಪರೀಕ್ಷಿಸಿಕೊಳ್ಳಲು ಪ್ರಯತ್ನಿಸುತ್ತಿದೆ.

* ಲಂಬಾಣಿ ತಾಂಡಗಳಲ್ಲಿ ಆರ್ಥಿಕ ಪರಿಸ್ಥಿತಿಯ ಬಗ್ಗೆ ದಶಕಗಳಿಂದ ಯೋಜನಾಧಾರಿತ ಅಭಿವೃದ್ಧಿ ಪ್ರಕ್ರಿಯೆಗಳನ್ನು ಕೈಗೊಂಡಿದಾಗ್ಯೂ ಮಧ್ಯವರ್ತಿಗಳ ಪ್ರವೇಶದಿಂದ ಅವು ಜನರನ್ನು ತಲುಪಲು ವಿಳಂಬವಾಗುತ್ತಿವೆ.

* ನನ್ನ ಅಧ್ಯಯನಕ್ಕೆ ಒಳಪಟ್ಟ ಬಳ್ಳಾರಿ ಜಿಲ್ಲೆಯ ಎಲ್ಲ ತಾಲೂಕುಗಳ ತಾಂಡಗಳಲ್ಲಿ ಬಹುತೇಕ ಜನವರು ತಮಗೆ ಬರುವ ಕೂಲಿಯಿಂದ ತಮ್ಮ ಕನಿಷ್ಟ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿದರು. ಇದಕ್ಕೆ ಪ್ರಮುಖ ಕಾರಣ ಅಸಂಘಟಿತ ಕಾರ್ಮಿಕರಿಗೆ ಕನಿಷ್ಠ ಕೂಲಿ ಕಾನೂನಿನ ಪ್ರಕಾರ ಸಿಗದೆ ಇರುವುದು.

* ಮಹಿಳಾ ಮತ್ತು ಪುರುಷ ಕಾರ್ಮಿಕರು ದಿನಕ್ಕೆ ೭-೧೦ ಗಂಟೆಗಳಿಗೂ ಮೀರಿ ದುಡಿಯುತ್ತಿದ್ದಾರೆ. ಹಾಗೆ ದುಡಿಯುವ ಕಾರ್ಮಿಕರಿಗೆ ಕೂಲಿಯಲ್ಲಿ ತಾರತಮ್ಯವಿರುವುದು ಕಂಡುಬರುತ್ತದೆ. ಪುರುಷರಿಗೆ ೨೫೦ ರೂ. ಸ್ತ್ರೀಯರಿಗೆ ೨೦೦ ರೂ. ನೀಡುತ್ತಿರುವುದು ತಿಳಿದುಬರುತ್ತದೆ.

* ಬಳ್ಳಾರಿ ಜಿಲ್ಲೆಯ ಬಳ್ಳಾರಿಯ ತಾಲೂಕುಗಳಿಗೆ ಸಂಬಂಧಿಸಿದ ಲಂಬಾಣಿಗರು ನಗರ ಪಟ್ಟಣದಲ್ಲಿ ಹತ್ತಿರವಿರುವ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇನ್ನೂ ಕೆಲವರು ಸರ್ಕಾರಿ ನೌಕರರಾಗಿ ಕೆಲಸ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಕೆಲ ಲಂಬಾಣಿಗರು ಸರ್ಕಾರಿ ನೌಕರಿಯಲ್ಲಿದ್ದು, ಆರ್ಥಿಕವಾಗಿ ಉತ್ತಮವಾಗಿರುವುದು ಕಂಡುಬರುತ್ತದೆ.

* ಕೇವಲ ಕೂಲಿ ಮಾಡಿ ಹೊಟ್ಟೆ ಹೊರೆಯಬಲ್ಲವು ಎಂಬ ಮನೋಭಾವನೆ ಹೊಂದಿರುವ ಇವರು ತಾವು ದುಡಿದು ದುಡಿಮೆಯಲ್ಲಿ ಸ್ವಲ್ಪಭಾಗವನ್ನು ಭವಿಷ್ಯತ್ತಿಗಾಗಿ ಉಳಿಸಿಕೊಳ್ಳಬೇಕೆಂಬ ಚಿಂತೆ ಇವರಲ್ಲಿಲ್ಲ.

* ಕೃಷಿ ಕಾರ್ಮಿಕರಲ್ಲಿ ಲಿಂಗಬೇಧವಿಲ್ಲದೆ ವಲಸೆ ಹೋಗುವ ಪ್ರವೃತ್ತಿ ಕಂಡುಬರುವುದು ಸಾಮಾನ್ಯ ವಿಷಯವಾಗಿದೆ. ಎಲ್ಲಾ ತಾಂಡಗಳಲ್ಲಿ ಕೂಲಿಗಾಗಿ ವಲಸೆ ಹೋಗುವುದು ಕಂಡುಬರುತ್ತದೆ.

* ತಮ್ಮ ವಾಸಿಸುವ ಪ್ರದೇಶದಲ್ಲಿ ದುಡಿಯುವ ಅವಕಾಶಗಳು ಕಡಿಮೆ ಇರುವುದರಿಂದ ಮಹಿಳಾ ಮತ್ತು ಪುರುಷ ಕೃಷಿ ಕಾರ್ಮಿಕರು ವಲಸೆ ಹೋಗುವ ಪ್ರವೃತ್ತಿ ಉಂಟಾಗುವುದೆಂದು ಅಧ್ಯಯನದಿಂದ ತಿಳಿದುಬಂದಿದೆ. ಸ್ಥಳೀಯವಾಗಿ ದುಡಿಯುವ ಅವಕಾಶಗಳ ಅಭಾವದಿಂದ ವಲಸೆ ಅನಿವಾರ್ಯವೆಂದು ಕಂಡುಕೊಳ್ಳಲಾಗಿದೆ. ಅಂದರೆ ತಾಂಡಗಳಲ್ಲಿ ಪ್ರಸ್ತುತ ಜಾರಿಯಲ್ಲಿರುವ ಉದ್ಯೋಗ ಸೃಷ್ಟಿಸುವ ರಾಜ್ಯ ಮತ್ತು ಕೇಂದ್ರ ಸರಕಾರದ ಕಾರ್ಯಕ್ರಮಗಳಾಗಲಿ, ಉದ್ಯೋಗ ಅವಕಾಶಗಳನ್ನು ನೀಗಿಸುವಲ್ಲಿ ವಿಫಲವಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

* ಲಂಬಾಣಿಗರು ವಾಸವಾಗಿರುವ ತಾಂಡಗಳಲ್ಲಿ ಶಾಲೆಗಳು ಪ್ರಾಥಮಿಕ ಹಂತದವರೆಗೆ ಇದ್ದು, ಮುಂದಿನ ಶಿಕ್ಷಣಕ್ಕೆ ಬೇರೆ ಊರಿಗೆ ಹೋಗಬೇಕು. ಹೋಗಲು ರಸ್ತೆಗಳಾಗಲಿ, ವಾಹನಗಳಾಗಲಿ ಮತ್ತು ನಾಗರೀಕ ಸವಲತ್ತುಗಳು ಕೂಡ ಇಲ್ಲ. ಆದ್ದರಿಂದ ಲಂಬಾಣಿಗರು ಶಿಕ್ಷಣದಿಂದ ವಂಚಿತರಾಗಿದ್ದಾರೆ.

* ಮೇಲಾಗಿ ಲಂಬಾಣಿಗರಿಗೆ ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ತಾಂಡಗಳಲ್ಲಿ ಹೆಚ್ಚಿನ ಜನರಿಗೆ ಪಿತ್ರಾರ್ಜಿತ ಆಸ್ತಿಗಳಿಲ್ಲ. ವ್ಯವಹಾರ ಮಾಡಲು ಬೇಕಾದ ಬಂಡವಾಳದ ಕೊರತೆಯಿದೆ. ಅದಕ್ಕೆ ತಕ್ಕಂತೆ ಜ್ಞಾನದ ಕೊರತೆಯಿದೆ ಎಂಬುದು ತಿಳಿದುಬರುತ್ತದೆ.

* ಗುಲ್ಬರ್ಗಾ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಬರುವ ಸಂಡೂರಿನ ಸ್ನಾತಕೋತ್ತರ ಕೇಂದ್ರವು ನಂದಿಹಳ್ಳಿಯಲ್ಲಿರುವುದರಿಂದ ಬಳ್ಳಾರಿ ಜಿಲ್ಲೆಯಲ್ಲಿರುವ ಎಲ್ಲಾ ತಾಂಡಗಳಿಗೂ ಹತ್ತಿರವಿದ್ದರೂ, ತಾಂಡಗಳ ಹೆಣ್ಣು ಮತ್ತು ಗಂಡು ಮಕ್ಕಳು ಉನ್ನತ ಪದವಿಧರರಾಗಿರುವುದು ತುಂಬಾ ಕಡಿಮೆ. ಅದರಲ್ಲಿ ಸ್ತ್ರೀಯರು ಪದವಿ ಶಿಕ್ಷಣ, ಉನ್ನತ ಶಿಕ್ಷಣ, ವೈಜ್ಞಾನಿಕ, ತಾಂತ್ರಿಕ ಮುಂತಾದ ಶಿಕ್ಷಣ ಹೊಂದಿದವರು ಅತಿ ಕಡಿಮೆ ಇರುವುದು ಕಂಡುಬರುತ್ತದೆ.

* ಇತ್ತೀಚಿನ ಗ್ರಾಮ ಪಂಚಾಯ್ತಿಯಲ್ಲಿ ಅಧ್ಯಕ್ಷ, ಉಪಾಧ್ಯಕ್ಷರಂತಹ ಸ್ಥಾನಗಳಿಗೂ ಮೀಸಲಾತಿ ನಿಯಮವನ್ನು ಅಳವಡಿಸಿದ್ದರಿಂದ ತಾಂಡಗಳಲ್ಲಿನ ಪುರುಷ ಮತ್ತು ಮಹಿಳೆಯರು ಕೂಡ ಅಂತಹ ಸ್ಥಾನಗಳನ್ನು ಪಡೆದರು. ಬಹುಪಾಲು ಲಂಬಾಣಿಗರು ರಾಜಕೀಯವಾಗಿ ಬಹಳ ಹಿಂದೆ ಬಿದ್ದಿದ್ದಾರೆ.

* ರಾಜಕೀಯ ಪ್ರವೇಶಿಸಲು ಆರ್ಥಿಕವಾಗಿ ಪ್ರಬಲವಾಗಿರಬೇಕು. ಲಂಬಾಣಿಗರ ಆರ್ಥಿಕ ಸ್ಥಿತಿಗತಿ ಉತ್ತಮ ವಾಗೇನು ಇಲ್ಲ. ಆರ್ಥಿಕವಾಗಿ ಪ್ರಬಲವಾಗಿದ್ದ ಕೆಲವೊಬ್ಬರು ಮಾತ್ರ ರಾಜಕೀಯವಾಗಿ ಮುಂದೆ ಬರುತ್ತಿದ್ದಾರೆ.

* ನಾನು ಕ್ಷೇತ್ರಕಾರ್ಯದಲ್ಲಿ ತಾಂಡಗಳಿಗೆ ಬೇಟಿ ಕೊಟ್ಟಾಗ ತಾಂಡಗಳ ಪ್ರಮುಖರು ತಮ್ಮ ತಾಂಡಗಳಿಗೆ ಯಾವುದೇ ತರಹದ ಪ್ರಾಥಮಿಕ ಆರೋಗ್ಯ ಕೇಂದ್ರವಿರುವುದಿಲ್ಲ. ಸುಮಾರು ೪-೫ ಕಿ.ಮೀ. ದೂರ ಬೇರೆ ಊರುಗಳಿಗೆ ಹೋಗಬೇಕು ಎಂಬುದು ತಿಳಿದುಬರುತ್ತದೆ. ಹಾಗೂ ಸರ್ಕಾರಿ ಆಸ್ಪತ್ರೆಗಳು ತಾಂಡಗಳಿಂದ ಬಹಳ ದೂರವಿದ್ದುದರಿಂದ ಖಾಸಗಿ ಆಸ್ಪತ್ರೆಗಳಿಗೆ ತೋರಿಸಲು ಹಣದ ಮುಗ್ಗಟ್ಟು ಹೊಂದಿ ಕಷ್ಟವನ್ನು ಅನುಭವಿಸುತ್ತಿದ್ದಾರೆ.

* ಲಂಬಾಣಿಗರ ಆರ್ಥಿಕ ಸ್ಥಿತಿಯನ್ನು ಸುಧಾರಿಸಬೇಕಾದರೆ ಉದ್ಯೋಗ ಸೃಷ್ಟಿಸುವ ಕಾರ್ಯಕ್ರಮಗಳ ಬಗ್ಗೆ ಔದಾಸೀನ್ಯವನ್ನು ತಳಯದೆ ಸರಕಾರ ಇವರ ಬಗ್ಗೆ ಬರೀ ಗಮನ ಹರಿಸಿದರೆ ಸಾಲದು ಕಡ್ಡಾಯವಾದ ಕಾರ್ಯ ಸೂಚಿಯನ್ನು ಅನುಸರಿಸುವಂತೆ ಮಾಡಬೇಕು.

* ಕೆಲವು ಲಂಬಾಣಿ ತಾಂಡಗಳು ಗುಡ್ಡಗಾಡು ಮಗ್ಗಲಿನ ಪ್ರದೇಶದಲ್ಲಿವೆ. ಇವು ಅಭಿವೃದ್ಧಿಯಾಗಿರುವುದಿಲ್ಲ. ಇವರು ತಮ್ಮ ಜೀವನೋಪಾಯಕ್ಕೆ ಕೂಲಿ, ಜೀತ ಹಾಗೂ ಸೌದೆಯನ್ನು ಮಾರಾಟ ಮಾಡುತ್ತಾರೆ. ಇದನ್ನು ಹೆಚ್ಚಾಗಿ ಕೂಡ್ಲಿಗಿ ಮತ್ತು ಹಡಗಲಿ ತಾಲೂಕಿನಲ್ಲಿ ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿರುತ್ತದೆ.

* ಬಡತನದಿಂದ ನರಳುತ್ತಿರುವ ಲಂಬಾಣಿಗರ ಸಬಲೀಕರಣಕ್ಕೆ ಸರ್ಕಾರವು ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲಿ ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ. ಅವುಗಳಲ್ಲಿ ಭೂಹಂಚಿಕೆ, ನೀರಾವರಿ ಸೌಲಭ್ಯ, ವಸತಿ ವ್ಯವಸ್ಥೆ ಮತ್ತು ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿ ಮತ್ತು ಸಾಲಸೌಲಭ್ಯ ಮುಖ್ಯವಾದವು. ಈ ಪ್ರಯೋಜ ಪಡೆದವರು ಈ ಸಮುದಾಯದಲ್ಲಿದ್ದಾರೆ. ಕೃಷಿಗೆ ಅನುಕೂಲವಾಗಲೆಂದು ಭೂರಹಿತ ಜನರಿಗೆ ಹಂಚಿಕೆ ಮಾಡಿರುವ ಸರ್ಕಾರದ ಜಮೀನುಗಳು ತಾಂಡಗಳ ಹತ್ತಿರ ಕೆಲವಿದ್ದರೆ ಇನ್ನೂ ಕೆಲವು ೩.೪. ಕಿ.ಮೀ ದೂರದಲ್ಲಿವೆ.

* ಭೂ ಹಂಚಿಕೆಯ ಪರಿಣಾಮವಾಗಿ ಇಂದು ಈ ಜನಾಂಗದ ಅನೇಕರು ಸಣ್ಣ ಪುಟ್ಟ ಜಮೀನು ಒಡೆಯರಾದರೂ ಅದನ್ನು ಬಳಸುವಲ್ಲಿ ಬಹಳಷ್ಟು ಜನ ವಿಫಲರಾಗಿರುವುದು ಕಂಡುಬರುತ್ತದೆ. ನೀರಾವರಿ ಜಮೀನಂತೂ ಅತಿ ಕಡಿಮೆಯೇ. ಹೊಸಪೇಟೆ ತಾಲೂಕಿನ ಸೀತಾರಾಂ ತಾಂಡ, ಕಡ್ಡಿರಾಂಪುರ ಮತ್ತು ಕೆರೆ ತಾಂಡಗಳು ತುಂಗಭದ್ರ ಅಣೆಕಟ್ಟಿನ ನೀರು ಹರಿದು ಬರುವುದರಿಂದ ಈ ಭಾಗದ ತಾಂಡದ ಜನರು ಅಲ್ಪಸ್ವಲ್ಪ ನೀರಾವರಿ ಭೂಮಿಯನ್ನು ಹೊಂದಿ, ತಮ್ಮ ಆರ್ಥಿಕ ಸಬಲೀಕರಣವಾಗಿದ್ದಾರೆ. ಇನ್ನು ಉಳಿದ ತಾಲೂಕುಗಳ ತಾಂಡಗಳು ಸಣ್ಣ ಪುಟ್ಟ ನೀರಾವರಿ ಹೊಂದಿರುತ್ತಾರೆ. ಸರಕಾರದ ಯೋಜನೆಗಳಾದ ಗಂಗಾ ಕಲ್ಯಾಣ, ಯೋಜನೆಯಿಂದ ಅಲ್ಪಸ್ವಲ್ಪ ನೀರಾವರಿ ಮಾಡಿಕೊಂಡಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿರುತ್ತದೆ.

* ವಸತಿ ಯೋಜನೆಯಡಿಯಲ್ಲಿ ನಿವೇಶನ ಮತ್ತು ಮನೆಗಳ ನಿರ್ಮಾಣದ ಸಹಾಯ ಸಾಲ ಸೌಲಭ್ಯಗಳಿಂದಾಗಿ ಅನೇಕರು ತಾಂಡಗಳಲ್ಲಿ ಈ ಸೌಲಭ್ಯ ಪಡೆದಿದ್ದಾರೆ. ಈ ಹಿಂದೆ ಕೇವಲ ಗುಡಿಸಲುಗಳಿಂದಲೇ ತುಂಬಿಕೊಂಡಿರುತ್ತಿದ್ದ ಲಂಬಾಣಿಗರ ತಾಂಡಗಳು ಇಂದು ಸುಧಾರಿತ ಹಂಚಿನ ಮನೆಗಳಿಂದ ಆರ್ .ಸಿಸಿ ಮನೆಗಳಿಂದ ಕೂಡಿವೆ. ಆದರೆ ಗುಡಿಸಲುಗಳಿಂದ ರಾಜ್ಯದಲ್ಲಿನ ಲಂಬಾಣಿಗರು ಮುಕ್ತರಾಗಿಲ್ಲವೆನ್ನುವುದು ವಿಪರ್ಯಾಸದ ಸಂಗತಿ.

* ಶತಮಾನಗಳಿಂದಲೂ ಶಿಕ್ಷಣದಿಂದ ವಂಚಿತರಾದ ಲಂಬಾಣಿಗರು ಇತ್ತೀಚೆಗೆ ಶೈಕ್ಷಣಿಕ ಅವಕಾಶಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಇವರ ಸಂಖ್ಯೆ ಶೈಕ್ಷಣಿಕ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಹೆಚ್ಚಾಗಿತ್ತು. ನಂತರದ ದಿನಗಳಲ್ಲಿ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಪೋಷಕರು ಆಸಕ್ತಿ ತೋರುತ್ತಿದ್ದು, ನಿರುದ್ಯೋಗ, ಬಡತನ ಮುಂತಾದ ಅಂಶಗಳು ಇವರ ಉತ್ಸಾಹವನ್ನು ಕುಗ್ಗಿಸುತ್ತಿದೆ.

* ಶಿಕ್ಷಣ ಪ್ರಸಾರದಲ್ಲಿ ಹಾಸ್ಟೆಲ್‌ಗಳ ಪಾತ್ರವು ಮುಖ್ಯವಾಗಿದ್ದು, ಸ್ವಾತಂತ್ರ್ಯ ನಂತರ ಸ್ಥಾಪನೆಗೊಂಡ ಕೆಳ ಸಮುದಾಯದ ಹಾಸ್ಟೆಲ್‌ಗಳು ಲಂಬಾಣಿಗರ ಶೈಕ್ಷಣಿಕ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಸಾರ್ವಜನಿಕ ಹಾಸ್ಟೆಲ್‌ಗಳಲ್ಲಿ ಕೆಳಸಮುದಾಯದ ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಹೂವಿನ ಹಡಗಲಿ, ಹಗರಿಬೊಮ್ಮನ ಹಳ್ಳಿ, ಕೂಡ್ಲಿಗಿ, ಸಂಡೂರು, ಹೊಸಪೇಟೆ, ಬಳ್ಳಾರಿ ಮತ್ತು

ಸಿರುಗುಪ್ಪ ಮುಂತಾದ ತಾಲೂಕು ಹೋಬಳಿ ಕೇಂದ್ರಗಳಲ್ಲಿಯೂ ಸಮಾಜಕಲ್ಯಾಣ ಇಲಾಖೆ ವತಿಯಿಂದ ವಿವಿಧ ಶೈಕ್ಷಣಿಕ ಹಂತಕ್ಕೆ ಸಂಬಂಧಿಸಿದ ಹಾಸ್ಟೆಲ್ ಗಳಿದ್ದು ಈ ಸಮುದಾಯವು ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸಲು ಸಹಕಾರಿಯಾಗಿವೆ.

* ಹೀಗಿದ್ದರೂ ಕೆಲವು ಪ್ರದೇಶಗಳಲ್ಲಿ ಅಂದರೆ ಹೂವಿನ ಹಡಗಲಿ, ಹಗರಿಬೊಮ್ಮನ ಹಳ್ಳಿ, ಕೂಡ್ಲಿಗಿ, ಬಳ್ಳಾರಿ ತಾಲೂಕುಗಳಲ್ಲಿ ಶೈಕ್ಷಣಿಕ ಮಟ್ಟ ಈ ಸಮುದಾಯಗಳಲ್ಲಿ ಅಷ್ಟಾಗಿ ಸುಧಾರಣೆಯಾಗಿಲ್ಲ. ಪ್ರೈಮರಿ ಶಿಕ್ಷಣವನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆಯುವ, ಅನಂತರ ಪ್ರೌಢಶಿಕ್ಷಣವನ್ನು ಮುಂದುವರೆಸುವ ಅವಕಾಶಗಳು ಕಡಿಮೆ ಎನ್ನಬಹುದು. ಅದರಲ್ಲೂ ಕಾಲೇಜು ಮತ್ತು ಉನ್ನತ ಶಿಕ್ಷಣ ಕಲಿಯುವ ಹೆಣ್ಣು ಮಕ್ಕಳ ಪ್ರಮಾಣ ಅತ್ಯಂತ ಕಡಿಮೆ ಎಂದೇ ಹೇಳಬಹುದು.
* ಶಿಕ್ಷಣ ಹೊಂದಿದ ಪದವೀಧರರು ವ್ಯವಸಾಯವನ್ನು ಅಷ್ಟಾಗಿ ಅವಲಂಬಿಸಿಲ್ಲದಿರುವುದು ಕಂಡುಬಂದಿತು.
* ಕೈಗಾರೀಕರಣ ಮತ್ತು ಗಣಿಗಾರಿಕೆಯ ಲಂಬಾಣಿಗರ ಮೇಲೆ ಕೆಟ್ಟ ಪ್ರಭಾವ ಬೀರಿದೆ.

### ೭.೩. ಉಪಯುಕ್ತ ಅಂಶಗಳ

ಬಳ್ಳಾರಿ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯದ ಮೂಲಕ ಕಂಡು ಕೊಂಡು ಫಲಿತಗಳ ಆಧಾರದ ಮೇಲೆ, ಲಂಬಾಣಿಗರ ಕುಲಕಸಬುಗಳು ಕೃಷಿ, ಕೂಲಿ, ವ್ಯಾಪಾರ ಬೆಳವಣಿಗೆ ಹಾಗೂ ಅಭಿವೃದ್ಧಿಗಾಗಿ ಮತ್ತು ಅವುಗಳು ಎದುರಿಸುತ್ತಿರುವ ಸಮಸ್ಯೆಗಳ ನಿವಾರಣೆಗಾಗಿ ಈ ಕೆಳಗಿನ ಕೆಲವು ಪ್ರಮುಖವಾದ ಉಪಯುಕ್ತ ಅಂಶಗಳನ್ನು ನೀಡಾಗಿದೆ.

* ಜಿಲ್ಲೆಯಲ್ಲಿರುವ ಎಲ್ಲಾ ತಾಂಡಗಳ ಕುಲಕಸುಬುಗಳ ಸಂಖ್ಯೆ ಮತ್ತು ಅವುಗಳಲ್ಲಿ ತೊಡಗಿಕೊಂಡಿರುವವರ ಸಂಪೂರ್ಣ ಮಾಹಿತಿಗಳನ್ನು ಸಂಗ್ರಹಿಸುವುದು.
* ಲಂಬಾಣಿಗಳಿಗೆ ಮೂಲ ಸೌಕರ್ಯಗಳಾದ ವಾಸಿಸುವ ಮನೆ, ಅವರ ಕಸೂತಿ ಕಾರ್ಯ ನಿರ್ವಹಿಸಲು ಅಗತ್ಯವಾದ ಶೆಡ್ ಗಳನ್ನು ನಿರ್ಮಿಸಿಕೊಡುವುದು.
* ವೃತ್ತಿಗೆ ಸೂಕ್ತವಾದ ಆಧುನಿಕ ಯಂತ್ರೋಪಕರಣಗಳನ್ನು ಪೂರೈಸುವುದು.
* ವೃತ್ತಿ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿ ಲಂಬಾಣಿಗಳಿಗೆ ತಮ್ಮ ವೃತ್ತಿಗೆ ಸಂಬಂಧಿಸಿದಂತೆ ತರಬೇತಿ ನೀಡುವುದು.
* ತರಬೇತಿಯಲ್ಲಿ ಉಚಿತ ಊಟ, ವಸತಿ ಹಾಗೂ ವೃತ್ತಿಗೆ ಸಂಬಂಧಿಸಿದ ಉಪಕರಣಗಳನ್ನು ನೀಡುವುದು.
* ವೃತ್ತಿ ತರಬೇತಿ ಪಡೆದುಕೊಂಡವರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯಗಳನ್ನು ಒದಗಿಸುವುದು.
* ಲಂಬಾಣಿಗಳಿಗೆ ಅವಶ್ಯಕತೆಗೆ ತಕ್ಕಂತೆ ಕಡಿಮೆ ಬಡ್ಡಿದರದಲ್ಲಿ ಅಲ್ಪಾವಧಿ, ಮಾಧ್ಯಾಮಾವಧಿ ಹಾಗೂ ದೀರ್ಘಾವಧಿ ಸಾಲಗಳನ್ನು ನೀಡುವುದು.

* ಕೈಗಾರೀಕರಣ ಹಾಗೂ ಜಾಗತೀಕರಣದ ಈ ಸಂದರ್ಭದಲ್ಲಿ ಸರ್ಕಾರಿ ಮತ್ತು ಅರೆಸರ್ಕಾರಿ ಹುದ್ದೆಗಳು ಕಡಿಮೆಯಾಗುತ್ತಿರುವುದರಿಂದ ಗುಣಾತ್ಮಕ ಶಿಕ್ಷಣದ ಮೂಲಕ ವಿಶೇಷ ಕೌಶಲ್ಯ ಪಡೆದುಕೊಂಡು ಯಾವುದೇ ತರಹದ ಕೌಶಲ್ಯಧಾರಿತ ವೃತ್ತಿಗಳನ್ನು ಮಾಡುವಂತೆ ಯುವಕರು ತಯಾರಾಗುವಂತೆ ನೋಡಿಕೊಳ್ಳುವುದು

* ಲಂಬಾಣಿಗಳ ವೃತ್ತಿದಾರರಿಗೆ ಅಗತ್ಯವಾದ ಕಚ್ಚಾವಸ್ತುಗಳು ಹಾಗೂ ವಿದ್ಯುತ್ ನ್ನು ಕಡಿಮೆ ಬೆಲೆಯಲ್ಲಿ ನಿರಂತರವಾಗಿ ಪೂರೈಸುವುದು.

* ಲಂಬಾಣಿಗರ ಮಕ್ಕಳಿಗೆ ಉನ್ನತ ಶಿಕ್ಷಣದಲ್ಲಿ ಇನ್ನೂ ಹೆಚ್ಚು ಪ್ರಮಾಣದಲ್ಲಿ ಪ್ರೋತ್ಸಾಹ ನೀಡಬೇಕು.

* ಆರ್ಥಿಕವಾಗಿ ಹಿಂದುಳಿದಿರುವ ಲಂಬಾಣಿಗರನ್ನು ಗುರುತಿಸಿ ವಿಶೇಷ ಸೌಲಭ್ಯಗಳನ್ನು ನೀಡುವುದು.

* ಲಂಬಾಣಿಗರು ತಯಾರಿಸುವ ಕಸೂತಿ ವಸ್ತುಗಳಿಗೆ ಮತ್ತು ಸೇವೆಗಳಿಗೆ ವೈಜ್ಞಾನಿಕ ಬೆಲೆಯನ್ನ ನಿರ್ಧರಿಸುವುದು.

* ಲಂಬಾಣಿಗರಿಗೆ ಪ್ರತ್ಯೇಕ ಮಾರುಕಟ್ಟೆ ಮಳಿಗೆ ಹಾಗೂ ಉಗ್ರಾಣಗಳ ವ್ಯವಸ್ಥೆ ಮಾಡುವುದು.

* ತಾಲೂಕು, ಜಿಲ್ಲೆ ಮತ್ತು ರಾಜ್ಯ ಮಟ್ಟದಲ್ಲಿ ಲಂಬಾಣಿಗಳು ತಯಾರಿಸಿದ ಸಿದ್ಧವಸ್ತುಗಳನ್ನು ಮಾರಾಟದ ವ್ಯವಸ್ಥೆಯನ್ನು ಕಲ್ಪಿಸುವುದು.

* ಲಂಬಾಣಿಗರು ತಮ್ಮ ಮೂಲವೃತ್ತಿಯನ್ನು ಮುಂದುವರಿಸಿಕೊಂಡು ಬರುವವರಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸುವುದು.

* ಲಂಬಾಣಿ ಮಹಿಳೆಯರಿಗೆ ಶಿಕ್ಷಣ ಕಡ್ಡಾಯಗೊಳಿಸುವುದು.

* ಲಂಬಾಣಿಗಳಿಗೆ ಪ್ರತ್ಯೇಕ ಕೈಗಾರಿಕಾ ವಸಾಹತು ಸ್ಥಾಪಿಸುವುದು.

* ಲಂಬಾಣಿ ಸಮುದಾಯದ ಜನರಲ್ಲಿ ಜಾಗೃತಿಯುಂಟು ಮಾಡುವುದು. ನೈರ್ಮಲ್ಯ, ಕುಟುಂಬ ಯೋಜನೆ, ಆರೋಗ್ಯ, ಶಿಕ್ಷಣ ವಿಷಯಗಳ ಕುರಿತು ಜಾಗೃತಿ ಶಿಬಿರಗಳನ್ನು ಏರ್ಪಡಿಸುವುದು.

* ಲಂಬಾಣಿಗಳ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಆಗಿಂದಾಗ್ಗೆ ಸಮೀಕ್ಷೆಗಳನ್ನು ಕೈಗೊಳ್ಳುವುದು.

* ಸಂಘಟನೆಗಳಿಗೆ ಸಂಘಗಳ ಸ್ಥಾಪನೆಗೆ ಪ್ರೋತ್ಸಾಹ ನೀಡಿ, ವೃತ್ತಿದಾರರೆಲ್ಲರೂ ಕಡ್ಡಾಯವಾಗಿ ಸಂಘಗಳ ಸದಸತ್ವನ್ನು ಪಡೆದುಕೊಳ್ಳಲು ಪ್ರೇರೇಪಿಸುವುದು.

* ಕುಲಕಸುಬುಗಳನ್ನು ಮಾಡುತ್ತಿರುವ ಮಹಿಳೆಯರಿಗೆ ನೈತಿಕ ಬೆಂಬಲ ನೀಡುವುದು.

* ತಾಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದಲ್ಲಿ ಲಂಬಾಣಿ ತಾಂಡಗಳ ನಿಗಮಗಳನ್ನು ಸ್ಥಾಪಿಸಿ, ಅವುಗಳ ಮೂಲಕ ಲಂಬಾಣಿ ಕುಲಕಸುಬುಗಳ ಅಭಿವೃದ್ಧಿಗೆ ಬೇಕಾದ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರುವುದು.

* ಸರ್ಕಾರದ ಸೌಲಭ್ಯಗಳು ಲಂಬಾಣಿಗಳಿಗೆ ನೇರವಾಗಿ ಲಭ್ಯವಾಗುವಂತೆ ನೋಡಿಕೊಳ್ಳುವುದು.

* ಆಕಸ್ಮಿಕವಾಗಿ ಸಂಭವಿಸುವ ಅನಾಹುತಗಳಿಗೆ ಸೂಕ್ತ ಪರಿಹಾರ ಹಾಗೂ ಕುಟುಂಬದ ಭದ್ರತೆಗಾಗಿ ಸರಕಾರ ನೆರವಿನ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು.

ಈ ಪ್ರಬಂಧದ ಅಧ್ಯಯನದ ದೃಷ್ಟಿಯಿಂದ ಕೈಗೊಂಡ ಸಂಶೋಧನಾ ಸಂದರ್ಭದಲ್ಲಿ ಈ ಮೇಲ್ಕಾಣಿಸಿದ ವಿಷಯಗಳ ಅವಶ್ಯಕತೆಯು ಲಂಬಾಣಿಗರಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

ಪ್ರಸ್ತುತ ಲಂಬಾಣಿ ಜನಾಂಗದ ಆಧುನಿಕತೆ ಮತ್ತು ಜಾಗತೀಕರಣದ ಸನ್ನಿವೇಶವು ಹಲವಾರು ವೈಪರಿತ್ಯಗಳನ್ನು ಹುಟ್ಟು ಹಾಕುವುದರಿಂದ ಈಗಾಗಲೇನೇಕ ಕುಲಕಸುಬುಗಳು ನಾಶಗೊಂಡಿವೆ. ದೈಹಿಕ ಸಾಮರ್ಥ್ಯವನ್ನು ನಂಬಿ ತಮ್ಮ ಬದುಕನ್ನು ಕಟ್ಟಿಕೊಂಡು ನೂರಾರು ಲಂಬಾಣಿಗರು ನಿರುದೋಗಿಗಳಾಗಿ, ನಿರ್ಗತಿಕರಾಗಿ ತಮ್ಮ ಜೀವನ ಕಳೆಯುವಂತಾಗಿದೆ. ಇಂತಹ ಭಯಾನಕ ವ್ಯವಸ್ಥೆಯಲ್ಲಿ ಲಂಬಾಣಿಗರು ಬದುಕುತ್ತಿರುವುದರಿಂದ ಅವರ ದೈನಂದಿನ ಜೀವನ ಕಷ್ಟಕರವಾಗಿದೆ. ಅವರ ವೃತ್ತಿ ಜೀವನದ ಬದಲಾವಣೆಗೆ ಪೂರಕವಾದ ಸಂಕ್ರಮಣ ಕಾಲ ಘಟ್ಟದಲ್ಲಿದ್ದಾರೆಂಬುದು ಕ್ಷೇತ್ರ ಕಾರ್ಯದಿಂದ ಸ್ಪಷ್ಟವಾಗಿದೆ. ಈ ಹಿನ್ನಲೆಯಲ್ಲಿ ನಮ್ಮ ಘನ ಸರ್ಕಾರಗಳು, ಅಧಿಕಾರಿಗಳು, ಚುನಾಯಿತ ಪ್ರತಿನಿಧಿಗಳು, ರಾಜಕೀಯ ಮುಖಂಡರು, ಸಂಘ, ಸಂಸ್ಥೆಗಳು, ಒಗ್ಗೂಡಿ ಲಂಬಾಣಿಗಳ ಕೂಲಕಸುಬುಗಳ ರಕ್ಷಣೆಗೆ ಅಗತ್ಯ ಕಾರ್ಯಕ್ರಮಗಳನ್ನು ಕೈಗೊಳ್ಳಲು ಮುಂದಾಗಬೇಕಾಗದೆ. ಇಂದು ನಾವು ಆಧುನಕರಣ ಹಾಗೂ ಜಾಗತೀಕರಣದ ಸಂದರ್ಭದಲ್ಲಿ ಕೇವಲ ಲಾಭದ ಬೆನ್ನು ಹತ್ತಿ, ಆಧುನಿಕ ತಂತ್ರಜ್ಞಾನಕ್ಕೆ ಮನ ಸೋಲುವುದು ಸರ್ವತಾ ಸಲ್ಲದು. ಏಕೆಂದರೆ ಸಮಾಜದ ಬಹುಮುಖ್ಯವಾದ ಕುಲಕಸುಬುಗಳು ಅವನತಿ ಹೊಂದಿ ಲಂಬಾಣಿಗರು ನಿರುದ್ಯೋಗಿಗಳಾಗುವ ಸಂಭವವಿದೆ. ಕೇವಲ ದೈಹಿಕ ಶ್ರಮವನ್ನು ನೆಚ್ಚಿಕೊಂಡ ಅನೇಕ ಕುಲಕಸುಬು ಸಮುದಾಯಗಳಿಗೆ ಬದುಕಲು ಅವಕಾಶ ಮಾಡಿಕೊಡಬೇಕಾಗಿದೆ. ಶಿಕ್ಷಣ, ತಂತ್ರಜ್ಞಾನ ಹಾಗೂ ಆಧುನೀಕರಣದ ಜ್ಞಾನವನ್ನು ಅವರಿಗೆ ಒದಗಿಸಲು ವ್ಯವಸ್ಥಿತವಾದ ಕಾರ್ಯ ಯೋಜನೆಗಳನ್ನು ಕೈಗೊಳ್ಳುವುದು ಸೂಕ್ತ. ಇಲ್ಲವಾದರೆ ನಿರುದ್ಯೋಗಿಗಳ ಹೆಚ್ಚಳದಿಂದಾಗಿ ಬಡತನ, ಅನಾರೋಗ್ಯ, ಅಶಾಂತಿ ಹೆಚ್ಚಾವುದರಲ್ಲಿ ಎರಡು ಮಾತೇ ಇಲ್ಲ.

ಇಂತಹ ಅಸಂಬದ್ಧ ಬೆಳವಣಿಗೆಯು ನಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಸರಕಾರ ಲಂಬಾಣಿಗಳ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಬೆಳವಣಿಗೆಗೆ ಪೂರಕ ಕಾರ್ಯಯೋಜನೆಗಳನ್ನು ಕೈಗೊಳ್ಳಲು ಮುಂದಾಗಬೇಕಾಗಿದೆ. ಅಂದಾಗ ಮಾತ್ರ ಸಮಾಜದ ಸರ್ವತೋಮುಖ ಬೆಳವಣಿಗೆಗೆ ಅಗತ್ಯವಾದ ಸೇವೆ, ಸಹಕಾರ, ಭದ್ರತೆ ಒದಗಿ

ಒಂದು ಶಾಂತಿ ಸರ್ವರ ಪಾಲಿಗೆ ಸೇರುತ್ತದೆ. ಇದಕ್ಕಾಗಿ ಕುಲಕಸುಬುಗಳು ಮತ್ತು ಅವನ್ನು ಅವಲಂಬಿಸಿ ಜೀವನ ಮಾಡುವವರ ಬಗ್ಗೆ ಸಹಾಯ ಸಮಾಜ, ಸಹಾಯ, ಸಹಕಾರಗಳನ್ನು ನೀಡುವುದು ಅಗತ್ಯ.

## ೭.೪. ಮುಂದಿನ ಅಧ್ಯಯನದ ಸಾಧ್ಯತೆಗಳು

ಜಿಲ್ಲೆಯ ಸಮುದಾಯದ ಅಧ್ಯಯನದ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಸಂಶೋಧಕರು, ಅಧ್ಯಯನಕಾರರು ಇಂತಹ ಸಮುದಾಯದ ಬಗ್ಗೆ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ಹಾಗೂ ಮಾನವ ಶಾಸ್ತ್ರೀಯ ದೃಷ್ಟಿಕೋನಗಳಲ್ಲಿ ಅಧ್ಯಯನ ಮಾಡುವ ಸಾಧ್ಯತೆಗಳಿವೆ.

ಕರ್ನಾಟಕದ ಉದ್ದಗಲಕ್ಕೂ ಕಂಡುಬರುವ ಲಂಬಾಣಿ ಸಮುದಾಯವನ್ನು ಕುರಿತು ಅಧ್ಯಯನ ಮಾಡುವವರಿಗೆ ಪ್ರಸ್ತುತ ಮಹಾಪ್ರಬಂಧ ಮಾರ್ಗಸೂಚಿಯಾಗಬಹುದು. ಒಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿ ಜನಂಗಾದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು ಎಂಬ ವಿಷಯದ ಪ್ರಬಂಧ ಕುರಿತು ಮಾಹಿತಿ ದೊರಕಿಸಿಕೊಡಬಲ್ಲ ಒಂದು ಪ್ರಮಾಣಿಕ ಪ್ರಯತ್ನವಾಗಿದೆ. ಆದಾಗ್ಯೂ ನನ್ನ ಗಮನಕ್ಕೆ ಬರದೆ ಇರುವ ಸಂಶೋಧನಾಂಶಗಳು ಉಳಿದಿರುವ ಸಾಧ್ಯತೆಗಳಿವೆ. ಆಸಕ್ತ ಸಂಶೋಧಕರು ಹಾಗೂ ಅಧ್ಯಯನಕಾರರು ಈ ಬಗೆಗೆ ಹೆಚ್ಚಿನ ಅಧ್ಯಯನ ಕೈಗೊಳ್ಳಲು ವಿಪುಲವಾದ ಅವಕಾಶಗಳಿವೆ.

# ಬಳ್ಳಾರಿ ಜಿಲ್ಲೆ


ರಾಯಚೂರು
ಸಿರುಗುಪ್ಪ
ಆಂಧ್ರಪ್ರದೇಶ
ಕೊಪ್ಪಳ
ಹೊಸಪೇಟೆ
ಬಳ್ಳಾರಿ
ಗದಗ
ಹ.ಬೊ.ಹಳ್ಳಿ
ಸಂಡೂರು
ಹೂ.ಹಡಗಲಿ
ಕೂಡ್ಲಿಗಿ
ಹಾವೇರಿ
ಚಿತ್ರದುರ್ಗ
ದಾವಣಗೆರೆ

# ಅನುಬಂಧಗಳು

೧. ಬಳ್ಳಾರಿ ಜಿಲ್ಲೆಯ ನಕ್ಷೆ

೨. ಕೋಷ್ಟಕಗಳು

೩. ವಕ್ತೃಗಳ ವಿವರ

೪. ಪರಾಮರ್ಶನ ಗ್ರಂಥಗಳು

೫. ಸಾಂಸ್ಕೃತಿಕ ಪದಕೋಶ

೬. ಪ್ರಶ್ನಾವಳಿಗಳು

೭. ಛಾಯಾಚಿತ್ರಗಳು

# ಬಳ್ಳಾರಿ ಜಿಲ್ಲೆಯ ಅಂಕಿ ಅಂಶಗಳ ಸ್ಥೂಲ ನೋಟ ೨೦೦೯-೧೦

| ಕ್ರ.ಸಂ. | ವಿವರ | ಸಂಬಂಧಿಸಿದ ಅವಧಿ | ಘಟಕ | ಜಿಲ್ಲೆ |
|---|---|---|---|---|
| ೦೧ | ಒಟ್ಟು ಗ್ರಾಮಗಳು | | | |
| | ಜನವಸತಿ ಇರುವ ಗ್ರಾಮಗಳು | ೨೦೦೧ರ ಜನಗಣತಿ | ಸಂಖ್ಯೆ | ೫೫೪ |
| | ಜನವಸತಿ ಇಲ್ಲದೆ ಇರುವ ಗ್ರಾಮಗಳು | ೨೦೦೧ರ ಜನಗಣತಿ | ಸಂಖ್ಯೆ | ೫೫೪ |
| ೦೨ | ಒಟ್ಟು ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೩೦ |
| | ಗ್ರಾಮೀಣ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೨೦,೨೭,೧೪೦ |
| | ನಗರ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೧೩,೨೦,೨೯೦ |
| | ಪರಿಶಿಷ್ಟ ಜಾತಿ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೭,೦೬೮.೫೦ |
| | ಪರಿಶಿಷ್ಟ ಪಂಗಡ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೩,೭೪,೨೧೮ |
| | ಲಂಬಾಣಿ ಬಂಜಾರ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೩,೬೪,೬೩೮ |
| | ಒಟ್ಟು ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೬೫,೮೦೫ |
| | ಗ್ರಾಮೀಣ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೫೮,೮೬೦ |
| | ನಗರ ಜನಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೬,೯೪೫ |
| ೦೩ | ಜನ ಸಾಂದ್ರತೆ ಚ.ಕೀ. | ೨೦೦೧ರ ಜನಗಣತಿ | ಚ.ಕೀ. | ೨೪೦ |
| | | ೨೦೧೧ರ ಜನಗಣತಿ | ಚ.ಕೀ. | ೩೦೦ |
| ೦೪ | ಕೆಲಸಗಾರರ ಸಂಖ್ಯೆ | ೨೦೦೧ರ ಜನಗಣತಿ | ಸಂಖ್ಯೆ | ೯೨೦೮೨೧ |
| ೦೫ | ಕೆಲಸಗಾರರಲ್ಲದವರು | ೨೦೦೧ರ ಜನಗಣತಿ | ಸಂಖ್ಯೆ | ೧೧೦೬೩೧೯ |
| ೦೬ | ವ್ಯವಸಾಯಗಾರರ ಸಂಖ್ಯೆ | ೨೦೧೧ರ ಜನಗಣತಿ | ಸಂಖ್ಯೆ | ೨೫೧೨೦೭ |
| ೦೭ | ಕೃಷಿ ಕಾರ್ಮಿಕರ ಸಂಖ್ಯೆ | ೨೦೧೧ರ ಜನಗಣತಿ | ಸಂಖ್ಯೆ | ೩೬೧೪೩೩ |
| ೦೮ | ಒಟ್ಟು ಭೌಗೋಳಿಕ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೮೧೩೧೯೬ |
| ೦೯ | ಅರಣ್ಯ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೯೭೦೧೭ |

| ಕ್ರ.ಸಂ. | ವಿವರ | ಸಂಬಂಧಿಸಿದ ಅವಧಿ | ಘಟಕ | ಜಿಲ್ಲೆ |
|---|---|---|---|---|
| ೧೦ | ಒಟ್ಟು ಬಿತ್ತನೆಯಾದ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೫೬೯೬೬೨ |
| ೧೧ | ನಿವ್ವಳ ಬಿತ್ತನೆಯಾದ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೪೩೬೦೭೭ |
| ೧೨ | ಒಂದಕ್ಕಿಂತ ಹೆಚ್ಚು ಭಾರಿ ಬಿತ್ತನೆಯಾದ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೧೩೩೫೮೫ |
| ೧೩ | ನೀರಾವರಿಯಾದ ಒಟ್ಟು ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೨೭೩೨೯೮ |
| ೧೪ | ನೀರಾವರಿಯಾದ ನಿವ್ವಳ ಪ್ರದೇಶ | ೨೦೦೯-೧೦ರ ಬೆಳೆ ವರದಿ | ಹೆಕ್ಟೇರ್ | ೧೮೮೩೫೯ |
| ೧೫ | ಪಂಪ್‌ಸೆಟ್‌ಗಳ ವಿದ್ಯುತೀಕರಣ | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೫೮೯೨೭ |
| ೧೬ | ಒಟ್ಟು ಬ್ಯಾಂಕುಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೨೯೫ |
| ೧೭ | ಸಹಕಾರ ಸಂಘಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೧೧೩೮ |
| ೧೮ | ಸಹಕಾರ ಸಂಘಗಳ ಸದಸ್ಯರುಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೫೬೬೪೦೦ |
| ೧೯ | ಒಟ್ಟು ಮೋಟಾರು ವಾಹನಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೨೭೦೮೨೩ |
| ೨೦ | ರಸ್ತೆಯ ಉದ್ದಳತೆ | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | ಕಿ.ಮೀ | ೯೧೪೪ |
| ೨೧ | ಅಂಚೆ ಕಚೇರಿಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೩೯೨ |
| ೨೨ | ದೂರವಾಣಿಗಳ ಸಂಖ್ಯೆ | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೫೬೫೦೫ |
| ೨೩ | ತಲಾ ಆದಾಯ ಚಾಲ್ತಿ ಬೆಲೆಗಳಲ್ಲಿ | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೫೮ |
| ೨೪ | ಪ್ರಾಥಮಿಕ ಶಾಲೆಗಳು | ೨೦೦೮ ೦೮ | ಲಕ್ಷಗಳಲ್ಲಿ | ೪೧೮೫೭ |
| ೨೫ | ಪ್ರೌಢಶಾಲೆಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೧೮೩೨ |

| ಕ್ರ.ಸಂ. | ವಿವರ | ಸಂಬಂಧಿಸಿದ ಅವಧಿ | ಘಟಕ | ಜಿಲ್ಲೆ |
|---|---|---|---|---|
| ೨೬ | ಪದವಿ ಪೂರ್ವ ಕಾಲೇಜುಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೩೯೧ |
| ೨೭ | ನ್ಯಾಯ ಬೆಲೆ ಅಂಗಡಿಗಳು | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೧೦೩ |
| ೨೮ | ಪದವಿ ಕಾಲೇಜುಗಳು ಸಾಮಾನ್ಯ | ೩೧.೩.೨೦೧೦ರ ಅಂತ್ಯಕ್ಕೆ | | |
| | | ೩೧.೦೩.೨೦೧೦ | | ೫೯೯ |
| ೨೯ | ವೈದಕೀಯ ಮತ್ತು ತಾಂತ್ರಿಕ ಮಹಾ | ೩೧.೩.೨೦೧೦ರ ಅಂತ್ಯಕ್ಕೆ | | |
| | ವಿದ್ಯಾಲಯಗಳು | ೩೧.೦೩.೨೦೧೦ | | ೨೧ |
| ೩೦ | ಪ್ರಾಥಮಿಕ ಆರೋಗ್ಯ ಕೇಂದ್ರಗಳು | | | ೦೭ |
| ೩೧ | ೨೦೦೧ರ ಅನಕ್ಷರಸ್ಥ ವಯಸ್ಕರು | ೨೦೦೧ರ ಜನಗಣತಿ | ಶೇಕಡವಾರು | ೩೦.೮೦ |
| ೩೨ | ೨೦೦೧ರ ಅನಕ್ಷರಸ್ಥ ವಯಸ್ಕ ಮಹಿಳೆಯರು | ೨೦೦೧ರ ಜನಗಣತಿ | ಶೇಕಡವಾರು | ೬೭.೭೬ |
| ೩೩ | ಮಹಿಳಾ ಸಾಕ್ಷರತಾ ದರ | ೨೦೦೧ರ ಜನಗಣತಿ | ಶೇಕಡವಾರು | ೩೨.೨೪ |
| ೩೪ | ಪುರುಷ ಸಾಕ್ಷರತಾ ದರ | ೨೦೦೧ರ ಜನಗಣತಿ | ಶೇಕಡವಾರು | ೬೯.೫೯ |
| ೩೪ | ಒಟ್ಟಾರೆ ಸಾಕ್ಷರತೆ ದರ | ೨೦೦೧ರ ಜನಗಣತಿ | ಶೇಕಡವಾರು | ೫೭.೪೦ |

ಮೂಲ: ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೦೯-೧೦, ಪು.೧ ೫

## ಲಂಬಾಣಿ/ಬಂಜಾರಾ ಜನಸಂಖ್ಯೆ ೨೦೦೧ರ ಜನಗಣತಿಯ ಪ್ರಕಾರ

| ಕ್ರ.ಸಂ. | ರಾಜ್ಯ ಜಿಲ್ಲೆ | ಲಂಬಾಣಿ/ಬಂಜಾರಾ ಜನಸಂಖ್ಯೆ | | | |
|---|---|---|---|---|---|
| | | ಜನಸಂಖ್ಯೆ | | ಪುರುಷರು | ಮಹಿಳೆಯರು |
| ೦೧ | ಕರ್ನಾಟಕ | ಒಟ್ಟು | ೯೯೭೩೩೮ | ೫೧೪೪೯೧ | ೪೮೨೮೪೭ |
| | | ಗ್ರಾಮೀಣ | ೮೮೬೭೩೦ | ೪೫೫೩೩೦ | ೪೩೧೪೦೦ |
| | | ನಗರ | ೧೧೦೬೦೮ | ೫೯೧೬೧ | ೫೧೪೪೭ |
| ೦೨ | ಬಳ್ಳಾರಿ | ಒಟ್ಟು | ೬೫೮೦೫ | ೩೩೯೨೦ | ೨೮೬೭೩೨ |
| | | ಗ್ರಾಮೀಣ | ೫೮೮೬೦ | ೩೦೨೨೦ | ೨೮೬೪೦ |
| | | ನಗರ | ೬೯೪೫ | ೩೬೯೨ | ೩೨೫೩ |

ಮೂಲ: ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ತಾಂಡಗಳ ಜನಸಂಖ್ಯಾ ವಿವರ ಈ ಮೇಲಿನ ಕೋಷ್ಟಕದ ಪ್ರಕಾರ ತಿಳಿಯಬಹುದು.

## ೪. ಕೋಷ್ಟಕಗಳು

### ಕರ್ನಾಟಕ ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕುಗಳ ಅಂಕಿ ಅಂಶಗಳ ಸ್ಥೂಲನೋಟ

| ಕ್ರ.ಸಂ. | ವಿವರಗಳು | | ಕರ್ನಾಟಕ | ಬಳ್ಳಾರಿ ಜಿಲ್ಲೆ | ಹಡಗಲಿ | ಹ.ಬೊ.ಹಳ್ಳಿ | ಹೊಸಪೇಟೆ | ಸಿರುಗುಪ್ಪ | ಬಳ್ಳಾರಿ | ಸಂಡೂರು | ಕೂಡ್ಲಿಗಿ |
|---|---|---|---|---|---|---|---|---|---|---|---|
| ೦೧ | ಜನಸಂಖ್ಯೆ(೨೦೦೧) | ಒಟ್ಟು | ೫೨,೮೫೦,೫೬೨ | ೨,೦೨೭,೧೪೦ | ೧೬೮,೧೧೮ | ೧೫೯,೮೮೬ | ೩೭೪,೯೪೯ | ೨೩೫,೩೪೪ | ೬೨೫,೪೯೪ | ೧೯೧,೧೬೬ | ೨೭೨,೧೮೩ |
| | | ಗಂಡು | ೨೬,೮೯೮,೯೧೮ | ೧,೦೨೯,೭೧೪ | ೮೫,೦೫೧ | ೮೦,೭೭೦ | ೧,೮೯,೬೭೪ | ೧೧೭,೭೩೧ | ೩೧೯,೦೦೮ | ೯೮,೨೭೮ | ೧೩೯,೨೦೨ |
| | | ಹೆಣ್ಣು | ೨೫,೯೫೧,೬೪೪ | ೯೯೭,೪೨೬ | ೮೩,೦೬೭ | ೭೯,೧೧೬ | ೧೮೫,೨೭೫ | ೧೧೭,೬೧೩ | ೩೦೬,೪೮೬ | ೯೨,೮೮೮ | ೧೩೩,೯೮೧ |
| | ಗ್ರಾಮೀಣ | ಒಟ್ಟು | ೩೪,೮೮೯,೦೩೩ | ೧,೩೨೦,೨೯೦ | ೧೪೪,೭೦೪ | ೧೫೯,೮೮೬ | ೧೫೩,೪೯೯ | ೧೬೮,೮೪೨ | ೩೦೮,೭೨೮ | ೧೫೬,೯೯೮ | ೨೨೭,೬೩೩ |
| | | ಗಂಡು | ೧೭,೬೪೮,೯೫೮ | ೬೬೮,೫೩೪ | ೭೩,೧೭೭ | ೮೦.೭೭೦ | ೭೭,೧೭೭ | ೮೪,೩೨೨ | ೧೫೬,೩೦೯ | ೮೦,೪೬೪ | ೧೧೬,೩೧೮ |
| | | ಹೆಣ್ಣು | ೧೭,೨೪೦,೦೭೫ | ೬೫೧,೭೫೬ | ೭೧,೫೨೭ | ೭೯,೧೧೬ | ೭೬೩೨೨ | ೮೪೫೨೦ | ೧೫೨೪೧೯ | ೭೬೫೩೪ | ೧೧೧೩೧೮ |
| | ನಗರ | ಒಟ್ಟು | ೧೭,೯೬೧,೫೨೯ | ೭೦೬೮೫೦ | ೨೩೪೧೪ | | ೨೨೧೪೫೦ | ೬೬೫೦೨ | ೩೧೬೭೬೬ | ೩೪೧೬೮ | ೪೪೫೫೦ |
| | | ಗಂಡು | ೯,೨೪೯,೯೬೦ | ೩೬೬,೧೮೦ | ೧೧,೮೭೪ | | ೧೧೨,೪೯೭ | ೩೩,೪೦೯ | ೧೬೨,೬೯೯ | ೧೭,೮೧೪ | ೨೨,೮೮೭ |
| | | ಹೆಣ್ಣು | ೮,೭೧೧,೫೬೯ | ೩೪೫೬೭೦ | ೧೧೫೪೦ | | ೧೦೮೯೫೩ | ೩೩೦೯೩ | ೧೫೪೦೬೭ | ೧೬೩೫೪ | ೨೧೬೬೩ |
| ೦೨ | ಜನಸಂಖ್ಯೆ ಬೆಳವಣಿಗೆದರ | | | | | | | | | | |
| | (೧೯೯೧-೨೦೦೧) | | ೧೭.೫ | ೨೨.೪ | ೧೪.೧ | ೧೮.೪ | ೧೯.೮ | ೨೪.೨ | ೨೬.೩ | ೨೨.೨ | ೨೪.೦ |

| ಕ್ರ.ಸಂ. | ವಿವರಗಳು | | ಕರ್ನಾಟಕ | ಬಳ್ಳಾರಿ ಜಿಲ್ಲೆ | ಹಡಗಲಿ | ಹ.ಬೊ.ಹಳ್ಳಿ | ಹೊಸಪೇಟೆ | ಸಿರುಗುಪ್ಪ | ಬಳ್ಳಾರಿ | ಸಂಡೂರು | ಕೂಡ್ಲಿಗಿ |
|---|---|---|---|---|---|---|---|---|---|---|---|
| ೦೩ | ವಿಸ್ತೀರ್ಣ ಚ.ಕಿ.ಮೀ. | | ೧೯೧೭೯೧.೦೦ | ೮೪೫೦.೦೦ | ೯೪೭.೮೨ | ೯೭೩.೯೫ | ೯೦೪.೧೭ | ೧೦೩೬.೧೭ | ೧೬೮೮.೫೯ | ೧೧೫೨.೪೨ | ೧೬೧೮.೮೭ |
| ೦೪ | ಜನಸಾಂದ್ರತೆ(ಪ್ರತಿ ಚ.ಕಿ.ಮೀ) | | ೨೭೬ | ೨೪೦ | ೧೭೭ | ೧೬೪ | ೪೧೫ | ೨೨೭ | ೩೭೦ | ೧೬೬ | ೧೬೮ |
| ೦೫ | ಲಿಂಗಪ್ರಮಾಣ ಪ್ರತಿ ಸಾವಿರಕ್ಕೆ | ಗಂಡಸರು | ೯೬೫ | ೯೬೯ | ೯೭೭ | ೯೮೦ | ೯೭೭ | ೯೯೯ | ೯೬೧ | ೯೪೫ | ೯೫೫ |
| ೦೬ | ಸಾಕ್ಷರತೆ ೭ವರ್ಷ ಮತ್ತು ಮೇಲ್ಪಟ್ಟು | ಒಟ್ಟು | ೬೬.೬ | ೫೭.೪ | ೬೦.೩ | ೫೮.೧ | ೬೦.೯ | ೪೩.೬ | ೫೯.೭ | ೫೩.೩ | ೫೯.೫ |
| | | ಗಂಡು | ೭೬.೧ | ೬೯.೨ | ೭೨.೧ | ೭೦.೮ | ೭೧.೬ | ೫೬.೯ | ೭೦.೮ | ೬೫.೨ | ೭೧.೧ |
| | | ಹೆಣ್ಣು | ೫೬.೯ | ೪೫.೩ | ೪೮.೨ | ೪೫.೨ | ೫೦.೦ | ೩೦.೩ | ೪೮.೨ | ೪೦.೪ | ೪೬.೪ |
| ೦೭ | ನಗರ ಜನಸಂಖ್ಯೆ | ಶೇಕಡವಾರು | ೩೪.೦ | ೩೪.೯ | ೧೩.೯ | ೦೦.೦ | ೫೯.೧ | ೨೮.೩ | ೫೦.೬ | ೧೭.೯ | ೧೬.೪ |
| ೦೮ | ಒಟ್ಟು ಜನಸಂಖ್ಯೆಯಲ್ಲಿ ಮುಖ್ಯ ಕೆಲಸಗಾರರು | ಒಟ್ಟು | ೩೬.೬ | ೩೯.೫ | ೩೯.೭ | ೩೬.೬ | ೩೮.೪ | ೪೭.೮ | ೩೮.೩ | ೩೫.೫ | ೪೧.೨ |
| | | ಗಂಡು | ೫೧.೭ | ೫೧.೨ | ೫೦.೩ | ೪೯.೦ | ೫೧.೭ | ೫೫.೨ | ೫೧.೩ | ೫೦.೪ | ೪೯.೦ |
| | | ಹೆಣ್ಣು | ೨೧.೧ | ೨೭.೫ | ೨೮.೮ | ೨೪.೦ | ೨೪.೮ | ೪೦.೩ | ೨೪.೮ | ೧೯.೮ | ೩೩.೦ |

| ಕ್ರ.ಸಂ. | ವಿವರಗಳು | | ಕರ್ನಾಟಕ | ಬಳ್ಳಾರಿ ಜಿಲ್ಲೆ | ಹಡಗಲಿ | ಹ.ಬೊ.ಹಳ್ಳಿ | ಹೊಸಪೇಟೆ | ಸಿರುಗುಪ್ಪ | ಬಳ್ಳಾರಿ | ಸಂಡೂರು | ಕೂಡ್ಲಿಗಿ |
|---|---|---|---|---|---|---|---|---|---|---|---|
| ೦೯ | ಒಟ್ಟು ಕೆಲಸಗಾರರು | ಶೇಕಡವಾರು | ೨೯.೨ | ೨೭.೩ | ೨೮.೩ | ೩೦.೫ | ೧೬.೭ | ೨೫.೭ | ೨೩.೭ | ೩೦.೬ | ೪೩.೯ |
| | ಕೃಷಿ ಕಾರ್ಮಿಕರು | | ೨೬.೫ | ೩೯.೩ | ೫೨.೩ | ೪೯.೩ | ೩೬.೧ | ೫೬.೧ | ೩೦.೩ | ೩೨.೮ | ೩೬.೨ |
| | ಗುಡಿ ಕೈಗಾರಿಕೆ ಕೆಲಸಗಾರರು | | ೪.೧ | ೨.೮ | ೩.೦ | ೩.೦ | ೨.೯ | ೧.೯ | ೩.೦ | ೧.೭ | ೩.೭ |
| | ಇತರೆ ಕೆಲಸಗಾರರು | | ೪೦.೨ | ೩೦.೭ | ೧೬.೪ | ೧೭.೨ | ೪೪.೩ | ೧೬.೪ | ೪೩.೦ | ೩೪.೯ | ೧೬.೩ |
| ೧೦. | ಪರಿಶಿಷ್ಟ ಜಾತಿ | ಶೇಕಡವಾರು | ೧೬.೨ | ೧೮.೫ | ೨೨.೪ | ೧೮.೭ | ೨೦.೨ | ೧೯.೩ | ೧೬.೨ | ೧೬.೦ | ೧೯.೨ |
| ೧೧. | ಪರಿಶಿಷ್ಟ ಪಂಗಡ | ಶೇಕಡವಾರು | ೬.೬ | ೧೮.೦ | ೭,೮ | ೧೩.೬ | ೧೬.೧ | ೧೭.೯ | ೧೬.೩ | ೨೮.೧ | ೨೭.೧ |
| ೧೨ | ಗ್ರಾಮಗಳ ಸಂಖ್ಯೆ | | ೨೯.೪೦೬ | ೫೫೪ | ೫೭ | ೫೬ | ೭೪ | ೮೪ | ೧೦೩ | ೮೯ | ೯೧ |
| | ನಗರಗಳ ಸಂಖ್ಯೆ | | ೨೭೦ | ೧೧ | ೦೧ | ೦೦ | ೦೩ | ೦೨ | ೦೧ | ೦೨ | ೦೨ |

ಮೂಲ ಬಳ್ಳಾರಿ ಅಂಕಿ ಅಂಶಗಳ ನೋಟ

## ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಲಂಬಾಣಿ ಜನಾಂಗದವರ ಒಟ್ಟು ಅಂಕಿ ಅಂಶಗಳು ೨೦೧೧-೨೦೧೨

| ತಾಲ್ಲೂಕುಗಳ ಹೆಸರು | ಉದ್ಯೋಗಗಳು | ನಿರುದ್ಯೋಗಿಗಳು | ಅಕ್ಷರಸ್ಥರು | ಅನಕ್ಷರಸ್ಥರು | ಪದವೀಧರರು | ಒಟ್ಟು ಗಂಡು | ಒಟ್ಟು ಹೆಣ್ಣು | ಒಟ್ಟು ಜನಸಂಖ್ಯೆ |
|---|---|---|---|---|---|---|---|---|
| ಬಳ್ಳಾರಿ | ೨೫ | ೯೦ | ೭೪೦ | ೪೮೪೩ | ೧೨ | ೨೮೦೦ | ೨೭೯೨ | ೫೫೯೨ |
| ಸಿರುಗುಪ್ಪ | ೫ | ೮ | ೨೨೫ | ೧೬೩೦ | ೬ | ೯೪೨ | ೯೦೨ | ೧೮೪೪ |
| ಸಂಡೂರು | ೨೦ | ೪೦ | ೪೪೦ | ೩೯೮೦ | ೨೦ | ೨೩೫೦ | ೨೨೪೦ | ೪೫೯೦ |
| ಹೊಸಪೇಟೆ | ೭೫ | ೯೦ | ೧೫೦೦ | ೧೦೦೦೦ | ೮೦ | ೫೫೦೦ | ೪೮೦೦ | ೧೦೩೦೦ |
| ಕೂಡ್ಲಿಗಿ | ೩೧೦ | ೨೬೦ | ೨೬೦೦ | ೧೨೫೦೦ | ೨೫೦ | ೭೫೮೦ | ೭೪೧೫ | ೧೪೯೯೫ |
| ಹಗರಿಬೊಮ್ಮನಹಳ್ಳಿ | ೭೦ | ೨೧೫ | ೧೫೦೫ | ೮೭೮೮ | ೮೦ | ೪೯೫೦ | ೪೯೪೩ | ೯೮೯೩ |
| ಹೂವಿನ ಹಡಗಲಿ | ೨೬೮ | ೪೮೫ | ೪೪೦೬ | ೩೨೧೬೮ | ೩೫೦ | ೧೫೭೫೦ | ೧೫೨೨೪ | ೩೦೯೭೪ |
| ಒಟ್ಟು | ೭೭೩ | ೧೧೮೦ | ೧೧೪೧೬ | ೫೩೮೦೮ | ೭೬೮ | ೩೯೮೭೨ | ೩೮೩೧೬ | ೭೮೧೮೮ |

# ವಿಸ್ತೀರ್ಣ ಮತ್ತು ಜನಸಂಖ್ಯೆ

| ಕ್ರ.ಸಂ. | ತಾಲ್ಲೂಕು | ವಿಸ್ತೀರ್ಣ ಚ.ಕಿ.ಮೀ ಗಳಲ್ಲಿ | ಜನಸಂಖ್ಯೆ ೨೦೦೧ | | | | | | | ಪ್ರತಿ ಹತ್ತು ಸಾವಿರ ಜನ ಸಂಖ್ಯೆಗೆ ಅನುಗುಣವಾಗಿ |
|---|---|---|---|---|---|---|---|---|---|---|
| | | | ಒಟ್ಟು | ಗಂಡಸರು | ಹೆಂಗಸರು | ಗ್ರಾಮೀಣ | ನಗರ | ಜನಸಾಂದ್ರತೆ ಪ್ರತಿ ಚ.ಕಿ. | ಲೈಂಗಿಕ ಪ್ರಮಾಣ | |
| ೧ | ಬಳ್ಳಾರಿ | ೧೬೬೮೮.೫೯ | ೬೨೫೪೯೪ | ೩೧೯೦೦೮ | ೩೦೬೪೮೬ | ೩೦೮೭೨೮ | ೩೧೬೭೬೬ | ೩೭೦ | ೯೬೧ | ೪ |
| ೨ | ಹಡಗಲಿ | ೯೪೭.೮೨ | ೧೬೮೧೧೮ | ೮೫೦೫೧ | ೮೩೦೬೭ | ೧೪೪೭೦೪ | ೨೩೪೧೪ | ೧೭೭ | ೯೭೭ | ೨ |
| ೩ | ಹಗರಿಬೊಮ್ಮನಹಳ್ಳಿ | ೯೭೩.೯೫ | ೧೫೯೮೮೬ | ೮೦೭೭೦ | ೭೯೧೧೬ | ೧೫೯೮೮೬ | | ೧೬೪ | ೯೭೯ | ೩ |
| ೪ | ಹೊಸಪೇಟೆ | ೯೦೪.೧೭ | ೩೭೪೯೪೯ | ೧೮೯೬೭೪ | ೧೮೫೨೭೫ | ೧೫೩೪೯೯ | ೨೨೧೪೫೦ | ೪೧೫ | ೯೭೭ | ೪ |
| ೫ | ಕೂಡ್ಲಿಗಿ | ೧೫೧೮.೮೭ | ೨೭೨೧೮೩ | ೧೩೯೨೦೨ | ೧೩೨೯೮೧ | ೨೨೭೬೩೩ | ೪೪೫೫೦ | ೧೬೮ | ೯೫೫ | ೧ |
| ೬ | ಸಂಡೂರು | ೧೧೫೨.೪೨ | ೧೯೧೧೬೬ | ೯೮೨೭೮ | ೯೨೮೮೮ | ೧೫೬೯೯೮ | ೩೪೧೬೮ | ೧೬೬ | ೯೪೫ | ೧ |
| ೭ | ಸಿರುಗುಪ್ಪ | ೧೦೩೬.೧೭ | ೨೩೫೩೪೪ | ೧೧೭೭೩೧ | ೧೧೭೬೧೩ | ೧೬೮೮೪೨ | ೬೬೫೦೨ | ೨೨೭ | ೯೯೯ | ೨ |
| ೮ | ಜಿಲ್ಲಾ ಮೊತ್ತ | ೮೪೫೦.೦೦ | ೨೦೨೭೧೪೦ | ೧೦೨೯೭೧೪ | ೯೯೭೪೨೬ | ೧೩೨೦೨೯೦ | ೭೦೬೮೫೦ | ೨೪೦ | ೯೭೦ | ೩ |
| ೯ | ೨೦೦೮-೦೯ | ೮೪೫೦.೦೦ | ೨೦೨೭೧೪೦ | ೧೦೨೯೭೧೪ | ೯೯೭೪೨೬ | ೧೩೨೦೨೯೦ | ೭೦೬೮೫೦ | ೨೩೮ | ೯೭೦ | |

ಮೂಲ: ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೯-೧೦

## ತಾಲ್ಲೂಕುವಾರು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡ ಜನಸಂಖ್ಯೆ ವಿವರ ೨೦೦೯- ೧೦ರ ಪ್ರಕಾರ

| ಕ್ರ.ಸಂ | ತಾಲ್ಲೂಕು | ಪರಿಶಿಷ್ಟಜಾತಿ | | | | | | ಪರಿಶಿಷ್ಟ ಪಂಗಡ | | | | | |
|---|---|---|---|---|---|---|---|---|---|---|---|---|---|
| | | ಗ್ರಾಮೀಣ | | | ಪಟ್ಟಣ | | | ಗ್ರಾಮೀಣ | | | ಪಟ್ಟಣ | | |
| | | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ೧ | ಬಳ್ಳಾರಿ | ೫೭೨೮೯ | ೨೮೭೪೬ | ೨೮೫೪೩ | ೪೩೭೬೨ | ೨೨೩೯೫ | ೨೧೩೬೭ | ೭೩೮೦೨ | ೩೭೨೯೦ | ೩೬೫೧೨ | ೨೮೧೫೯ | ೧೪೩೨೯ | ೧೩೮೩೦ |
| ೨ | ಹಡಗಲಿ | ೩೫೨೮೫ | ೧೭೭೬೦ | ೧೭೫೨೫ | ೨೩೩೩ | ೧೧೬೬ | ೧೧೬೭ | ೧೧೪೩೪ | ೫೭೭೫ | ೫೬೫೯ | ೧೬೪೦ | ೮೩೦ | ೮೧೦ |
| ೩ | ಹಗರಿಬೊಮ್ಮನಹಳ್ಳಿ | ೨೯೯೪೧ | ೧೫೦೬೮ | ೧೪೮೭೩ | -- | -- | -- | ೨೧೭೧೬ | ೧೦೮೨೪ | ೧೦೭೯೨ | — | — | — |
| ೪ | ಹೊಸಪೇಟೆ | ೪೦೩೬೦ | ೨೦೨೭೬ | ೨೦೦೮೪ | ೩೪೫೨೦ | ೧೭೭೬೭ | ೧೭೬೫೩ | ೩೦೨೪೨ | ೧೫೦೯೨ | ೧೫೧೫೦ | ೩೦೨೪೯ | ೧೪೮೬೦ | ೧೫೩೮೯ |
| ೫ | ಕೂಡ್ಲಿಗಿ | ೪೬೧೮೨ | ೨೩೪೨೮ | ೨೨೭೫೪ | ೬೦೩೦ | ೩೧೧೨ | ೨೯೧೮ | ೬೫೦೦೫ | ೩೩೦೫೫ | ೩೧೯೫೦ | ೮೬೪೫ | ೪೨೪೩ | ೪೪೦೨ |
| ೬ | ಸಂಡೂರು | ೨೭೬೧೬ | ೧೩೯೨೭ | ೧೩೬೮೯ | ೪೪೮೯ | ೨೨೮೬ | ೨೨೦೩ | ೪೬೬೯೩ | ೨೩೭೨೨ | ೨೨೯೭೧ | ೫೦೪೪ | ೨೫೯೨ | ೨೪೫೨ |
| ೭ | ಸಿರುಗುಪ್ಪ | ೩೩೯೭೦ | ೧೬೮೬೧ | ೧೭೧೦೯ | ೧೧೫೪೧ | ೫೭೪೪ | ೫೭೯೭ | ೩೨೪೩೫ | ೧೬೧೫೫ | ೧೬೨೮೦ | ೯೫೭೪ | ೪೭೯೫ | ೪೭೭೯ |
| ೮ | ಜಿಲ್ಲಾ ಮೊತ್ತ | ೨೭೦೬೪೩ | ೧೩೬೦೬೬ | ೧೩೪೫೭೭ | ೧೦೩೫೭೫ | ೫೨೪೭೦ | ೫೧೧೦೫ | ೨೮೧೩೨೭ | ೧೪೨೦೧೩ | ೧೩೯೩೧೪ | ೮೩೩೧೧ | ೪೧೬೪೯ | ೪೧೬೬೨ |
| ೯ | ೨೦೦೮-೦೯ | ೨೭೦೬೪೩ | ೧೩೬೦೬೬ | ೧೩೪೫೭೭ | ೧೦೩೫೭೫ | ೫೨೪೭೦ | ೫೧೧೦೫ | ೨೮೧೩೨೭ | ೧೪೨೦೧೩ | ೧೩೯೩೧೪ | ೮೩೩೧೧ | ೪೧೬೪೯ | ೪೧೬೬೨ |

ಮೂಲ: ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೯-೧೦

# ಶಿಕ್ಷಣ ೩೧.೩.೨೦೧೦

| ಕ್ರ.ಸಂ. | ತಾಲ್ಲೂಕು | ಪ್ರಾಥಮಿಕ ಶಾಲೆಗಳು | | | ಪ್ರೌಢಶಾಲೆಗಳು | | | ಪದವಿಪೂರ್ವ | | |
|---|---|---|---|---|---|---|---|---|---|---|
| | | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ೧ | ಬಳ್ಳಾರಿ | ೧೧೫೭೭೦ | ೭೬೩೦೦ | ೩೯೪೭೦ | ೨೦೨೨೧೫ | ೧೧೫೬೬೮ | ೮೬೫೪೭ | ೩೧೭೯೮೫ | ೧೯೧೬೮ | ೧೨೬೦೧೭ |
| ೨ | ಹಡಗಲಿ | ೭೨೪೩೦ | ೪೪೩೪೪ | ೨೮೦೮೬ | ೧೩೭೩೮ | ೭೭೮೮ | ೫೯೫೦ | ೮೬೧೬೮ | ೫೨೧೩೨ | ೩೪೦೩೬ |
| ೩ | ಹಗರಿಬೊಮ್ಮನಹಳ್ಳಿ | ೭೭೩೫೩ | ೪೭೩೭೯ | ೨೯೯೭೪ | --- | --- | --- | ೭೭೩೫೩ | ೪೭೩೭೯ | ೨೯೯೭೪ |
| ೪ | ಹೊಸಪೇಟೆ | ೫೯೮೭೧ | ೩೮೦೧೩ | ೨೧೮೫೮ | ೧೩೪೩೫೮ | ೭೭೩೧೯ | ೫೭೦೭೦ | ೧೯೪೨೬೦ | ೧೧೫೩೩೨ | ೭೮೯೨೮ |
| ೫ | ಕೂಡ್ಲಿಗಿ | ೧೦೮೬೪೭ | ೬೮೩೬೮ | ೪೦೨೭೯ | ೨೭೦೧೨ | ೧೫೬೦೫ | ೧೧೪೦೭ | ೧೩೫೬೫೯ | ೮೩೯೭೩ | ೫೧೬೮೬ |
| ೬ | ಸಂಡೂರು | ೬೨೬೯೮ | ೪೦೬೧೭ | ೨೨೦೮೧ | ೨೧೮೮೦ | ೧೨೮೨೩ | ೯೦೫೭ | ೮೪೫೭೮ | ೫೩೪೪೦ | ೩೧೧೩೮ |
| ೭ | ಸಿರುಗುಪ್ಪ | ೫೫೯೮೭ | ೩೭೪೮೭ | ೧೮೫೦೦ | ೨೮೪೯೩ | ೧೭೪೨೬ | ೧೧೦೬೭ | ೮೪೪೮೦ | ೫೪೯೧೩ | ೨೯೫೬೭ |
| ೮ | ಜಿಲ್ಲಾ ಮೊತ್ತ | ೫೫೨೭೫೬ | ೩೫೨೫೦೮ | ೨೦೦೨೪೮ | ೪೨೭೭೨೭ | ೨೪೬೬೨೯ | ೧೮೧೦೯೮ | ೯೮೦೪೮೩ | ೫೯೯೧೩೭ | ೩೮೧೩೪೬ |
| ೯ | ೨೦೦೮-೦೯ | ೫೫೨೭೫೬ | ೩೫೨೫೦೮ | ೨೦೦೨೪೮ | ೪೨೭೭೨೭ | ೨೪೬೬೨೯ | ೧೮೧೦೯೮ | ೯೮೦೪೮೩ | ೫೯೯೧೩೭ | ೩೮೧೩೪೬ |

ಮೂಲ: ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೯-೧೦

